ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ

# ಸ್ವಾಧೀನ ಜೀವನ.

( ಐತಿಹಾಸಿಕ ಕಾದಂಬರಿ )

ಲೇಖಕ:—

ಭಾರತೀಸುತ

—

ಮುದ್ರಕ: ಮತ್ತು ಪ್ರಕಾಶಕ:

ಭಿ. ಪ. ಕಾಳೆ,

ಶ್ರೀ ಶೇಷಾಚಲ ಪ್ರೆಸ್ಸ, ಆನಂದವನ (ಅಗಡಿ)

——



ಜನೆವರಿ ೧೯೪೩

೩-೮-೦ ರೂ

# ಪ್ರಕಾಶಕನ ಬಿನ್ನಹ

ಇದೊಂದು ಸದ್ಯದ ಪರಿಸ್ಥಿತಿಯನ್ನು ಹೋಲುವ ಐತಿಹಾಸಿಕ ಕಾದಂಬರಿ. ಲೇಖಕರು ಇದನ್ನು ಬರೆದು ಎರಡು-ಮೂರು ವರ್ಷಗಳಾದವು; ಹಾಗು ಇದರ ಮುದ್ರಣಕ್ಕೆ ಪ್ರಾರಂಭಿಸಿ ೬-೭ ತಿಂಗಳುಗಳಾದವು. ಕಾಗದದ-ಅಭಾವದ ಮೂಲಕ ನಡುನಡುವೆ ಮುದ್ರಣವನ್ನು ಸ್ಥಗಿತಗೊಳಿಸಿ ಕೊನೆಗೆ ಈಗ ಇದನ್ನು ಮುಗಿಸಿ ಹೊರಹೊರಡಿಸಿರುವೆವು. ಇತಿಹಾಸವು ಪುನರಾವೃತ್ತಿಗೊಳ್ಳುತ್ತದೆಂಬ ಮಾತು ಸುಳ್ಳಲ್ಲವೆಂಬ ಸಂಗತಿಯನ್ನು ಈ ಪುಸ್ತಕವಾಚನದಿಂದ ಮನಗಾಣಬಹುದು.

ನಮ್ಮ ಮಿತ್ರ ಭಾರತೀಸುತರು ಇದನ್ನು ಅತ್ಯಂತ ಪರಿಶ್ರಮದಿಂದ ಬರೆದು ಕೊಟ್ಟದ್ದಕ್ಕಾಗಿ ನಾವು ಅವರಿಗೆ ತುಂಬಾ ಉಪಕೃತರಾಗಿರುತ್ತೇವೆ. ನಮ್ಮ ಶ್ರೀ ಶೇ. ಗ್ರಂಥಮಾಲೆಯ ವಾಚಕರು ನಮ್ಮ ಬೇರೆ ಪುಸ್ತಕಗಳಂತೆ ಇದಕ್ಕೂ ಆಶ್ರಯಕೊಟ್ಟು ಪ್ರೋತ್ಸಾಹಿಸುವರೆಂದು ನಂಬಿರುವೆವು.

—ಪ್ರಕಾಶಕ

# ಅನುಕ್ರಮಣಿಕೆ



——



# ಸ್ವಾಧೀನ ಜೀವನ.

## ೧ ಎಳೆ.

ಈ ಕತೆಯನ್ನು ಪ್ರಾರಂಭಿಸುವುದಕ್ಕೆ ಇಪ್ಪತ್ತೆರಡು ವರುಷಗಳಿಗೆ ಮುನ್ನ ಚಂಬಲ್ ನದೀತೀರದಲ್ಲಿ ರೂಪನಗರವೆಂಬ ಒಂದು ಸ್ವತಂತ್ರ ಸಂಸ್ಥಾನವಿದ್ದಿತು. ಆ ಸಂಸ್ಥಾನವನ್ನು ವಿಜಯಸಿಂಹನೆಂಬ ಹಿಂದೂ ಅರಸನು ಆಳುತ್ತಿದ್ದನು. ಸತ್ಯ ಮತ್ತು ನ್ಯಾಯಾವಲಂಬಿಯಾದ ಆ ಅರಸನ ಶಾಸನದಿಂದ ಜನರು ಸಂತೃಪ್ತರಾಗಿದ್ದರು. ಶಾಂತಿಯ ವಾತಾವರಣವು ನಾಡಿನಲ್ಲಿ ಹರಡಿದ್ದಿತು; ಜನರು ಪರಸ್ಪರ ಸೌಹಾರ್ದದಿಂದ ಜೀವಿಸುತ್ತಿದ್ದರು. ನಾಡಿನಲ್ಲಿ ಸಂಪತ್ತಿನ ನದಿಯು ಹರಿಯುತ್ತಿದ್ದಿತು. ವಿಜಯಸಿಂಹನು ಪುರಾತನ ಹಿಂದೂ ಸಂಸ್ಕಾರದ ಅಸ್ತಂಗತ ತಾರೆಗಳಲ್ಲಿ ಒಬ್ಬನಾಗಿದ್ದನು ಎಂದು ಹೇಳಬಹುದು; ಅದರಂತೆಯೇ ಅಸ್ತಮಾನವನ್ನು ಹೊಂದುತ್ತಲಿರುವ ಹಿಂದೂ ರಾಜ್ಯಗಳಲ್ಲಿ ರೂಪನಗರವು ಒಂದಾಗಿದ್ದಿತು ಎಂದು ಮಾತ್ರವಲ್ಲ, ಶಹಬುದ್ದೀನ ಘೋರಿಯು ಠಾಣೇಶ್ವರದವಿಜಯದಿಂದ ಉತ್ತರಭಾರತದ ಹಿಂದೂ ಸಾಮ್ರಾಜ್ಯವು ನಾಶವಾಗಲು, ಮುಸ್ಲೀಂ ಧರ್ಮವು ಮೆಲ್ಲನೆ ಭಾರತವರ್ಷದಲ್ಲಿ ಹರಡುತ್ತಿರಲು, ವಿಧರ್ಮೀಯರ ಆಕ್ರಮಣಗಳ ದಾವಾಗ್ನಿಗೆ ಆಹುತಿಯಾಗದೆ ಉತ್ತರ ಭಾರತದಲ್ಲಿ ಉಸಿರಾಡುತಿದ್ದ ಕೆಲವು ಚಿಕ್ಕಪುಟ್ಟ ಹಿಂದೂ ಸಂಸ್ಥಾನಗಳಲ್ಲಿ ರೂಪನಗರವು ಒಂದಾಗಿತ್ತು. ಅದು ಮುಸ್ಲೀಮರ ರಾಜಧಾನಿಯಾದ ದಿಲ್ಲಿಯಿಂದ ಸ್ವಲ್ಪ ಹೆಚ್ಚು ದೂರದಲ್ಲಿ ಇದ್ದುದರಿಂದ, ಈ ವರೆಗೆ ಅದು ಸ್ವಾತಂತ್ರ್ಯದಿಂದ ಉಳಿದಿತ್ತು; ಆದರೆ ಪರಧರ್ಮೀಯರು ಯಾವಾಗ ತಮ್ಮ ಸ್ವಾತಂತ್ರ್ಯವನ್ನು ಅಪಹರಿಸುವರೋ ಎಂಬ ಭಯವು ರೂಪನಗರದ ನಿವಾಸಿಗಳಿಗೆ ಇಲ್ಲದಿರಲಿಲ್ಲ. ಅರಸನಾದರೋ, ತನ್ನ ಆಳ್ವಿಕೆಯನ್ನು ಸಂರಕ್ಷಿಸುವದಕ್ಕಾಗಿ ಬೇಕಾಗುವ ಸೈನಿಕರ ಸಮಾರಂಭಗಳನ್ನು

ಪ್ರಾರಂಭಿಸಿದ್ದನು. ಅಂತೂ ರೂಪನಗರದ ಬಾಹ್ಯಸ್ವರೂಪವು ಶಾಂತಿ-ಸಂಪತ್ತುಗಳನ್ನೊಳಗೊಂಡಿದ್ದರೂ, ಅಂತರಂಗದಲ್ಲಿ ರೂಪನಗರವು ಪರಧರ್ಮಿಗರ ದಾಳಿಯನ್ನು ನೆನಸಿ ಕುದಿಯುತ್ತಲಿದ್ದಿತು. ಏಕೆಂದರೆ ಮುಸ್ಲೀಮರ ಪ್ರಚಂಡ ಬಲದೊಡನೆ ಸಂಘರ್ಷಿಸಲು ಆ ಪುಟ್ಟ ಸಂಸ್ಥಾನಕ್ಕೆ ಶಕ್ತಿಯಿರಲಿಲ್ಲ.

ಬಹುದಿನಗಳಿಂದ ರೂಪನಗರದ ನಿವಾಸಿಗಳನ್ನು ಬೆದರಿಸುತ್ತಲಿದ್ದ ಆ ದಾರುಣ ವಿಪತ್ತು ಕೊನೆಗೆ ರೂಪನಗರಕ್ಕೆ ಬಂದೊದಗಿತು. ಪ್ರಚಂಡವಾದ ಮುಸ್ಲೀಮ ಸೇನಾಬಲವನ್ನು ಅದು ಇದಿರಿಸಬೇಕಾಗಿ ಬಂದಿತು. ಉತ್ತರ ಭಾರತದಲ್ಲಿ ಸ್ವತಂತ್ರವಾಗಿದ್ದ ಹಲವು ಚಿಕ್ಕಪುಟ್ಟ ಹಿಂದೂ ಸಂಸ್ಥಾನಗಳನ್ನು ಅಲ್ಲಾವುದ್ದೀನ ಖಿಲ್ಜಿಯು ವಶಪಡಿಸಿಕೊಂಡನು. ಉತ್ತರದಲ್ಲಿ ಇಸ್ಲಾಂ ಧ್ವಜವು ಹಾರಲಾರಂಭಿಸಿತು. ರಾಜ್ಯವನ್ನು ವಶಪಡಿಸಿಕೊಂಡ ಸ್ಥಳಗಳಲ್ಲೆಲ್ಲಾ ಶಕ್ತಿ ಪ್ರಯೋಗದಿಂದ ಇಸ್ಲಾಂ ಧರ್ಮವನ್ನು ಪ್ರಚರಿಸಲೆತ್ನಿಸದೆ ಇರಲಿಲ್ಲ. ಅಸಂಸ್ಕೃತರೂ, ವಿಕಾರಪರಿಪೂರ್ಣರೂ ಆದ ಸೈನಿಕರು ಹಲವೆಡೆಗಳಲ್ಲಿ ಹೆಣ್ಣುಮಕ್ಕಳ ಶೀಲವನ್ನು ಭಂಜಿಸುವುದರಲ್ಲುದ್ಯುಕ್ತರಾದರು. ಪರಾಜಿತರ ಸಂಪತ್ತುಗಳನ್ನು ಸುಲಿಯಲು ಅವರು ಹಿಂಜರಿಯಲಿಲ್ಲ; ತಮ್ಮ ಸ್ವಾರ್ಥವನ್ನು ಸಾಧಿಸುವದಕ್ಕಾಗಿ ಪರಾಜಿತರನ್ನು ಕ್ರೂರ ರೀತಿಯಲ್ಲಿ ಹಿಂಸಿಸಲೂ ಹಿಂದೆಗೆಯಲಿಲ್ಲ. ಭೂಮಿತಾಯಿಯು ಹೆಣ್ಣುಮಕ್ಕಳ ಅಶ್ರುಪ್ರವಾಹದಿಂದ ತೊಯ್ದಳು; ನೆತ್ತರಿನ ನದಿಗಳು ಹರಿಯುತ್ತಿದ್ದವು; ಈ ದುರಂತ ಚಿತ್ರಗಳು ಚರಿತ್ರೆಯಲ್ಲಿ ನೋಡಲು ಬೇಕಷ್ಟು ದೊರಕುತ್ತಿವೆ. ಈ ಭೀಷಣ ಸಂಭವಗಳ ನೆನಪುಗಳು ಈಗಲೂ ನಮ್ಮ ಜನರ ಮನಸ್ಸಿನಿಂದ ಅಳಿಸಿಲ್ಲ. ಆದುದರಿಂದಲೇ ನಮ್ಮವರು ಇಸ್ಲಾಂ ಧರ್ಮವನ್ನೂ, ಸಂಸ್ಕೃತಿಯನ್ನೂ ಸಂಶಯಾತ್ಮಕ ದೃಷ್ಟಿಯಲ್ಲಿ ನೋಡುತ್ತಿದ್ದಾರೆ.

ಒಂದು ಮಾತನ್ನು ಇಲ್ಲಿ ಹೇಳಬೇಕೆಂದಿದ್ದೇನೆ. ಕಳೆದ ಚಾರಿತ್ರಿಕ ಸಂಭವಗಳು ಭಯಂಕರವಾದವುಗಳೆಂಬುದು ನಿಜ; ಆದರೆ ಆ ದುರಂತ ಪ್ರಸಂಗಗಳನ್ನು ಆಧಾರವಾಗಿಟ್ಟುಕೊಂಡು ಇಸ್ಲಾಂ ಧರ್ಮವನ್ನೂ, ಸಂಸ್ಕೃತಿಯನ್ನೂ ಅಳೆಯ ಹೊರಡುವದು ಸಮಂಜಸವಾಗದು. ಹಿಂದೂ ದೇಶವನ್ನು ಆಕ್ರಮಿಸಿ, ನೆತ್ತರಿನ ಹೊಳೆಗಳನ್ನು ಹರಿಸಿದ ಪಠಾಣ ದಂಡಾಳುಗಳು ಇಸ್ಲಾಂ ಧರ್ಮತತ್ವಗಳನ್ನು ಬಲ್ಲವರಾಗಿರಲಿಲ್ಲ. ಇಸ್ಲಾಂ ಸಂಸ್ಕೃತಿಯ ಬೆಳಕು ಅವರನ್ನು ಸ್ಪರ್ಶಿಸಿಯೂ ಇರಲಿಲ್ಲ. ತಾವು ಇಸ್ಲಾಂ ಧರ್ಮದ ಮುಸುಕು ಹಾಕಿ, ಆ ಧರ್ಮದ

ಹೆಸರಿನಿಂದ ನಮ್ಮ ನಾಡನ್ನು ಗೆದ್ದು ವಶಪಡಿಸಿಕೊಂಡರಲ್ಲದೆ, ಅದಕ್ಕಿಂತ ಹೆಚ್ಚಿನ ಸಂಬಂಧವು ಅವರಿಗೆ ಇಸ್ಲಾಂ ಸಂಸ್ಕೃತಿಯೊಡನೆ ಇರಲಿಲ್ಲ. ಈ ಸುಲಿಗೆಗಾರರನ್ನು ಇಸ್ಲಾಂ ಧರ್ಮದ ಮಾತೃಕಾಪುರುಷರೆಂದು ಗಣಿಸಿ, ಇಸ್ಲಾಂ ಸಂಸ್ಕೃತಿಯನ್ನು ಅಳೆಯ ಹೊರಟರೆ ಅದೊಂದು ದೊಡ್ಡ ಅನ್ಯಾಯವಾದೀತು! ಇಸ್ಲಾಂ ಸಂಸ್ಕೃತಿಯು ಆರ್ಯ ಸಂಸ್ಕೃತಿಯಂತೆ ಉತ್ಕೃಷ್ಟವಾದುದಾಗಿದೆ. ಪರಿಶುದ್ಧ ಕುರಾಣವು ಉಪನಿಷತ್ತುಗಳಂತೆ ಉದಾತ್ತವಿಚಾರಗಳಿಂದ ಕೂಡಿದುದಾಗಿದೆ. ಇಸ್ಲಾಂ ಧರ್ಮ ಮತ್ತು ಸಂಸ್ಕೃತಿ ಇವುಗಳೆಷ್ಟು ಮಹತ್ತರವಾದವುಗಳೆಂಬುದನ್ನು ಗ್ರಹಿಸಬೇಕಾದರೆ, ನಾವು ಪ್ರಾಚೀನ ಅರಬಿ ಮತ್ತು ಪರ್ಶಿಯನ್ ತತ್ವಚಿಂತಕರ ಮತ್ತು ಕವಿಗಳ ಉತ್ಕೃಷ್ಟ ಕೃತಿಗಳ ಕಡೆಗೆ ದೃಷ್ಟಿಯನ್ನು ಹೊರಳಿಸಬೇಕಾಗಿದೆ. ಆದುದರಿಂದ ಇಸ್ಲಾಂ ಧರ್ಮದ ಬಗ್ಗೆ ನಾವು ಪೂಜ್ಯ ಭಾವನೆಯನ್ನು ಕೈಕೊಳ್ಳಬೇಕಾಗಿದೆ. ಇಷ್ಟೆಲ್ಲ ಹೇಳಬೇಕಾಗಿ ಬಂದುದು ಇಸ್ಲಾಂ ಧರ್ಮಾವಲಂಬಿಗಳೆನಿಸಿದ ಹಿಂದಿನ ನಿರಂಕುಶಾಧಿಕಾರಿಗಳನ್ನು ಟೀಕಿಸಬೇಕಾಗುವ ಪ್ರಸಂಗಗಳೊದಗುವಾಗ, ನಾನು ಖಂಡಿಸುತ್ತಿರುವದು ಆ ಶಾಸಕರ ಅಧಿಕಾರ--ದುಷ್ಟಮತ್ತತೆಗಳನ್ನು ಮಾತ್ರವಾಗಿದೆಯೆಂದೂ ಇಸ್ಲಾಂ ಧರ್ಮವನ್ನೋ ಸಂಸ್ಕೃತಿಯನ್ನೋ ನಿಂದಿಸಲು ನಾನು ಹೊರಟಿಲ್ಲವೆಂದೂ, ಆ ಸಂಸ್ಕೃತಿಯ ಬಗ್ಗೆ ನನಗೆ ಪೂಜ್ಯ ಭಾವನೆಯಿದೆಯೆಂದೂ, ಈ ಸಂಗತಿಗಳನ್ನು ವ್ಯಕ್ತಗೊಳಿಸುವದಕ್ಕೆ ಮಾತ್ರವಾಗಿರುತ್ತದೆ.

ಮೊದಲು ಹೇಳಿದ ಅಲ್ಲಾವುದ್ದೀನನು ಅತಿ ಕಾಂಕ್ಷಿಯಾದ ಒಬ್ಬ ದಂಡನಾಯಕನಾಗಿದ್ದನು. ತನ್ನ ಬಾಪುಟವನ್ನು ಉತ್ತರ ಭಾರತದಲ್ಲೆಲ್ಲಾ ಮೆರಸಬೇಕೆಂಬ ಹಂಬಲವು ಅವನಿಗಿದ್ದಿತು. ಆದುದರಿಂದ ಅವನು ದಂಡಿನೊಡನೆ ಪೂರ್ವಭಾಗಗಳಲ್ಲಿ ಹರಡಿದ್ದ ಚಿಕ್ಕ ಪುಟ್ಟ ಹಿಂದೂ ಸಂಸ್ಥಾನಗಳನ್ನು ಗೆಲ್ಲಲು ಹೊರಟನು. ತಮ್ಮ ಸ್ವಾತಂತ್ರ್ಯವನ್ನು ಸಂರಕ್ಷಿಸಿಕೊಳ್ಳಲು ಶಕ್ತಿಯಿಲ್ಲದ ಈ ಪುಟ್ಟರಾಜ್ಯಗಳು ಅಲ್ಲಾವುದ್ದೀನನ ದಾಳಿಗೆ ಬಲಿಯಾದವು. ಒಂದೊಂದು ಪ್ರಾಂತವನ್ನು ಜೈಸಿದ ಮೇಲೆ ಅಲ್ಲಿ ಖಿಲ್ಜಿ ವಂಶದ ಆಳ್ವಿಕೆಯನ್ನು ಸ್ಥಾಪಿಸಿ ಅವನು ಮುಂದಕ್ಕೆ ಹೊರಟನು. ಪರಿಸ್ಥಿತಿಯು ಅವನಿಗೆ ಅನುಕೂಲವಾಗಿದ್ದಿತು. ಐಕ್ಯಮತ್ಯವಿಲ್ಲದ ಹಿಂದೂ ಅರಸರು ಪರಸ್ಪರ ಕಚ್ಚಾಡುತ್ತಿದ್ದರು. ತಾನೇಶ್ವರದ ಯುದ್ಧದಲ್ಲಿ ಐಕ್ಯಮತ್ಯದ ಮೊದಲನೆಯ ಪಾಠವು ಲಭಿಸಿದ್ದರೂ ಹಿಂದೂ ಅರಸರು ತಮ್ಮ ತಪ್ಪುಗಳನ್ನು ತಿದ್ದಿಕೊಳ್ಳಲಿಲ್ಲ. ತಮಗೆಲ್ಲರಿಗೂ

ಶತ್ರುವಾದ ಅಲ್ಲಾವುದ್ದೀನನನ್ನು ಎದುರಿಸಲು ಅವರು ಒಂದುಗೂಡಲಿಲ್ಲ. ಹೀಗೆ ಹಿಂದೂ ಅರಸರಲ್ಲಿ ಐಕ್ಯಮತ್ಯವಿಲ್ಲದಿರುವದು ಅಲ್ಲಾವುದ್ದೀನನಿಗೆ ಒಂದು ಒಳ್ಳೇ ಸಂದರ್ಭವನ್ನು ದೊರಕಿಸಿ ಕೊಟ್ಟಿತು. ಅವನು ಯಾವ ಪ್ರಯಾಸವೂ ಇಲ್ಲದೆ ಚಿಕ್ಕ ಪುಟ್ಟ ಸಂಸ್ಥಾನಗಳನ್ನು ವಶಪಡಿಸಿಕೊಂಡನು. ಶತ್ರುವಿನ ಸಂಗಡ ಈ ಸಂಸ್ಥಾನಗಳು ಕಾದಲಿಲ್ಲವೆಂದರೆ ಅದು ತಪ್ಪಾಗುವದು. ಜನರು ಧೈರ್ಯದಿಂದ ಕಾದಿದರು. ತಮ್ಮ ಸ್ವಾತಂತ್ರ್ಯವನ್ನು ಸಂರಕ್ಷಿಸಿಕೊಳ್ಳಲು ಅವರು ಪ್ರಾಣದಾನ ಮಾಡಲೂ ಹಿಂಜರಿಯಲಿಲ್ಲ; ಆದರೆ ಐಕ್ಯಮತ್ಯವಿಲ್ಲದುದರಿಂದ ಅವರ ಸಾಹಸ ಮತ್ತು ಶೌರ್ಯಗಳಿಂದ ಯಾವ ಪ್ರಯೋಜನವೂ ಆಗಲಿಲ್ಲ.

ಕೊನೆಗೆ ರೂಪನಗರದ ಸರತಿಯು ಬಂದಿತು; ಇತರ ಸಂಸ್ಥಾನಗಳನ್ನು ಗೆದ್ದ ನಂತರ ಅಲ್ಲಾವುದ್ದೀನನು ತನ್ನ ದಂಡಿನೊಡನೆ ರೂಪನಗರಕ್ಕೆ ತೆರಳಿದನು. ರೂಪನಗರದಲ್ಲಿ ಪ್ರಬಲನಾದ ಶತ್ರುವನ್ನು ಎದುರಿಸಬೇಕಾಗಿ ಬಂದಿತು; ಆದರೆ ಜನರು ಜೀವಗಳ್ಳರಾಗಿರಲಿಲ್ಲ. ಅವರಲ್ಲಿ ಧೈರ್ಯವಿದ್ದಿತು, ಸಾಹಸವಿದ್ದಿತು, ಸ್ವಾತಂತ್ರ್ಯದ ಬೆಲೆಯನ್ನು ಅವರು ಬಲ್ಲವರಿದ್ದರು; ಆದರೆ ಮಾಡುವದೇನು? ಶತ್ರುಗಳ ಪ್ರಚಂಡ ಸೇನಾಸಾಗರವನ್ನು ಹಿಂದಕ್ಕಟ್ಟುವ ಬಲವು ರೂಪನಗರದವರಿಗಿರಲಿಲ್ಲ. ಅವರ ಬೆಂಬಲಕ್ಕೆ ಇತರ ಸಂಸ್ಥಾನಗಳು ನಿಲ್ಲಲಿಲ್ಲ. ಇಂಥ ಒಂದು ಪರಿಸ್ಥಿತಿಯಲ್ಲಿ ತಮಗೆ ಸೋಲಾಗುವದು ನಿಶ್ಚಯವೆಂದು ಅವರು ಅರಿತಿದ್ದರು; ಆದರೆ ಅವರಲ್ಲಿ ಜ್ವಲಿಸುತ್ತಿರುವ ಆತ್ಮಾಭಿಮಾನವು ಶತ್ರುಗಳಿಗೆಲ್ಲ ಶಿರಬಾಗಿಸುವ ಉದ್ಯಮದಲ್ಲಿ ತಟಸ್ಥವಾಗಿ ನಿಂತಿತು. ಎದೆಯಲ್ಲಿ ಅಡಗಿರುವ ಸ್ವಾಧೀನಜೀವನದ ಮೇಲಿನ ಆಗ್ರಹವು ಅನ್ಯರಾಳ್ವಿಕೆಯ ನೆರಳನ್ನು ಆಶ್ರಯಿಸುವದಕ್ಕೆ ಅವರನ್ನು ಬಿಡಲಿಲ್ಲ. ಆದುದರಿಂದ ಕದನದಲ್ಲಿ ತನಗೆ ಪರಾಜಯವಾಗುವದು ನಿಶ್ಚಯವೆಂಬುದನ್ನು ರೂಪನಗರವು ಅರಿತಿದ್ದರೂ, ಕೊನೆಯ ವರೆಗೆ ಶತ್ರುಗಳೊಡನೆ ಕಾದಾಡಲು ಅದು ನಿಶ್ಚಯಿಸಿತು. ಸ್ವಾಧೀನತೆಯ ದೇವಿಗೆ ಹಲವು ಜೀವ ಕುಸುಮಗಳನ್ನು ನಿವೇದಿಸಲು ನಾಡು ಸನ್ನದ್ಧವಾಯಿತು. ಅಲ್ಲಾವುದ್ದೀನನ ದಾಳಿಯನ್ನು ಕೊನೆಯತನಕ ಎದುರಿಸಲು ರೂಪನಗರದ ನಿವಾಸಿಗಳು ಸಿದ್ಧರಾದರು.

ಚರಿತ್ರೆಯ ಕಡೆಗೆ ನಮ್ಮ ನೋಟವನ್ನು ಚೆಲ್ಲುವದಾದರೆ, ರೂಪನಗರದಂಥ ಹಲವು ಸಂಸ್ಥಾನಗಳು ತಮ್ಮ ಸ್ವಾತಂತ್ರ್ಯವನ್ನು ಸಂರಕ್ಷಿಸುವದಕ್ಕಾಗಿ ಹೆಣಗಿದ ಹಲವು ಉಜ್ವಲ ಚಿತ್ರಗಳು ನಮ್ಮ ಕಣ್ಣುಗಳ ಮುಂದೆ ಬಂದು

ನಿಲ್ಲುತ್ತವೆ. ತಾಯ್ನಾಡಿನ ಮೋಚನೆಗಾಗಿ ಆತ್ಮಬಲಿಗಳನ್ನು ನಿವೇದಿಸಿದ ಧೀರಕೇಸರಿಗಳನ್ನು ಭಾರತವರ್ಷದ ಚರಿತ್ರೆಯಲ್ಲಿ ನಾವು ಧಾರಳವಾಗಿ ನೋಡಬಹುದು. ಇನ್ನು ಈ ರೀತಿಯ ಹಲವು ಉಜ್ವಲ ಚಿತ್ರಗಳು ನಮ್ಮ ವೀಕ್ಷಣಕ್ಕೆ ಪಾತ್ರೀಭವಿಸದೆ ಅಜ್ಞಾತವಾಗಿ ಉಳಿದಿರುವವು. ಆ ಕಾಲದ ಭಾರತದ ನಿವಾಸಿಗಳು ಮೌನದಿಂದ ಶತ್ರುಗಳಿಗೆ ತಲೆತಗ್ಗಿಸಲಿಲ್ಲವೆಂಬುದಕ್ಕೆ ಇವುಗಳು ಮಕುಟೋದಾಹರಣೆಗಳಾಗಿರುತ್ತವೆ. ಪತನವನ್ನು ಹೊಂದಿದ ಇಂದಿನ ಭಾರತವರ್ಷಕ್ಕೆ ಇರುವ ಒಂದು ಅಮೂಲ್ಯ ಸಂಪತ್ತು ಕಳೆದಕಾಲದ ಚರಿತ್ರೆಯಗಿದೆಯೆಂದರೆ ತಪ್ಪಾಗದು. ಇರಲಿ. ರೂಪನಗರವು ತನ್ನ ಸ್ವಾತಂತ್ರ್ಯವನ್ನು ಸಂರಕ್ಷಿಸಿಕೊಳ್ಳಲು ಹೇಗೆ ಧೀರತೆಯಿಂದ ಹೆಣಗಿತೆಂಬುದನ್ನು ಇಲ್ಲಿ ಬಣ್ಣಿಸಬೇಕಾಗಿಲ್ಲ. ಆ ಸಂಭವವು ಪ್ರಕೃತ ಕತೆಗೆ ಹಿನ್ನೆಲೆಯಾಗಿರುವದರಿಂದ ಅದನ್ನು ಇಲ್ಲಿ ಸಂಕ್ಷಿಪ್ತವಾಗಿ ಹೇಳುತ್ತೇನೆ.

ಅಲ್ಲಾವುದ್ದೀನನು ರೂಪನಗರವನ್ನು ಆಕ್ರಮಿಸಿದನು. ಅರಸನಾದ ವಿಜಯಸಿಂಹನು ತನ್ನ ದಂಡನ್ನು ಬಲಪಡಿಸಿಕೊಂಡು ಶತ್ರುವಿನೊಡನೆ ಕಾದಲು ಅನುವಾದನು. ಭಯಂಕರ ಕಾಳಗವು ಜರುಗಿತು. ಭೂಮಿಯು ಧೀರರ ರಕ್ತಸಿಂಚನದಿಂದ ಕೆಂಬಣ್ಣವನ್ನು ಹೊಂದಲಾರಂಭಿಸಿತು. ಸಮರರುದ್ರನು ನರಜೀವಗಳ ಆಹುತಿಗಳನ್ನು ತೆಗೆದುಕೊಳ್ಳಲಾರಂಭಿಸಿದನು. ಒಂದು ಪಾರ್ಶ್ವದಲ್ಲಿ ಧರ್ಮಾಂಧತೆಯಿಂದ ಕುರುಡರಾದ ಪಠಾಣರು ಕಾದುತ್ತಿದ್ದರು; ಅನ್ಯರನ್ನು ಪಾದಾಕ್ರಾಂತರನ್ನಾಗಿ ಮಾಡಿ ಅವರ ಮೇಲೆ ದಬ್ಬಾಳಿಕೆಯನ್ನು ನಡೆಸಬೇಕೆಂಬ ಆಗ್ರಹದಿಂದ ನೆತ್ತರಿನ ಕಾಲುವೆಯನ್ನು ಹರಿಸುತ್ತಿದ್ದರು. ಇನ್ನೊಂದು ಕಡೆ ಈ ಸುದಿನಗಳತನಕ ತಾವು ಅನುಭವಿಸುತ್ತಲಿದ್ದ ಸ್ವಾತಂತ್ರ್ಯವನ್ನು ಕಾಪಾಡಲು, ಅನ್ಯರ ದಾಳಿಯಿಂದ ತಮ್ಮ ನಾಡನ್ನು ಪಾಲಿಸಲು ರೂಪನಗರದ ನಿವಾಸಿಗಳು ರಣಕ್ಷೇತ್ರದಲ್ಲಿ ದೇಹವಿಸರ್ಜನೆಗಳನ್ನು ಜರುಗಿಸುತ್ತಿದ್ದರು. ಎರಡು ಪಕ್ಷದವರೂ ಅನುಪಮ ಧೈರ್ಯಶಾಲಿಗಳಿದ್ದರು; ಸಾಹಸ ತೇಜರಿದ್ದರು; ಆದರೆ ಮೊದಲನೆಯದು ಪೈಶಾಚಿಕ ಸ್ವಭಾವದಲ್ಲಿ ಗೋಚರಿಸುತ್ತಿರುವ ಎದೆಗಾರಿಕೆ; ಇನ್ನೊಂದು ಒಂದುದಿವ್ಯೋದ್ದೇಶ ಸಾಧನೆಯಲ್ಲಿ ಬೆಳಗುತ್ತಿರುವ ಧೈರ್ಯ. ಎರಡೂ ಕಾದಾಡಿದವು. ಒಂದು ಪಾರ್ಶ್ವದವರು ಬಲಿಯನ್ನು ತೆಗೆದುಕೊಂಡರು; ಇನ್ನೊಂದು ಪಕ್ಷದವರು ಬಲಿಯನ್ನು ನಿವೇದಿಸಿದರು. ಸ್ವಾಧೀನತೆಯನ್ನು ಕಾಪಾಡಿಕೊಳ್ಳಲು ರೂಪನಗರವು ತನ್ನ ಹಲವು ಅಮೂಲ್ಯ ಜೀವ

ರತ್ನಗಳನ್ನು ಬೆಲೆಯಾಗಿ ಕೊಟ್ಟಿತು. ಸೃಷ್ಟಿಯಲ್ಲಿ ಅಡಗಿರುವ ಪ್ರಲಯ ಶಕ್ತಿಯು ಅಲ್ಲಿ ತನ್ನ ರೌದ್ರರೂಪವನ್ನು ಬೀರಿತು!

ಹಲವು ಜೀವ ರತ್ನಗಳನ್ನು ಬೆಲೆಯಾಗಿ ನೀಡಿದರೂ ರೂಪನಗರಕ್ಕೆ ತನ್ನ ಸ್ವಾತಂತ್ರ್ಯವನ್ನು ಸಂರಕ್ಷಿಸಿಕೊಳ್ಳಲು ಸಾಧ್ಯವಾಗಲಿಲ್ಲ. ರಜಪೂತರ ಪ್ರತಿಕ್ರಿಯೆಗಳು ವಿಫಲವಾದವು. ದಿನಗಳು ಗತಿಸಿದಂತೆ ಅವರ ಶಕ್ತಿಯು ಕಳೆಗುಂದತೊಡಗಿತು; ಕಾಳಗದ ಗಲಭೆಗಳ ಮೂಲಕ ಜನರ ದಾರಿದ್ರ್ಯವು ವೃದ್ಧಿಸಿತು; ತರುಣಿಯರು ತಮ್ಮ ಗಂಡಂದಿರನ್ನು ಕಳೆದುಕೊಂಡು ವಿತಂತುಗಳಾದರು. ವೈಧವ್ಯಕ್ಕಂಜಿ ಎಷ್ಟೋ ಮಂದಿ ಮಹಿಳೆಯರು ಆ ಕಾಲದ ಪದ್ಧತಿಯಂತೆ ಸಹಗಮನದ ಮೂಲಕ ತಮ್ಮ ಭೌತಿಕ ದೇಹಗಳನ್ನು ಪರಿತ್ಯಜಿಸಿದರು. ಸಾವು ಬಂದು ಪ್ರತಿಯೊಬ್ಬ ತರುಣನನ್ನೂ ಆಹ್ವಾನಿಸಿ ಕರೆದೊಯ್ಯುತ್ತಿದ್ದಿತು. ಕೂಸುಗಳು ತಾಯ್ತಂದೆಗಳನ್ನು ಕಳೆದುಕೊಂಡು ತಬ್ಬಲಿಗಳಾದವು. ಅಂತು ಕೆಲವು ತಿಂಗಳ ಹಿಂದೆ ಧನಸಂಪನ್ನವಾಗಿದ್ದ ರೂಪನಗರವು ದಾರಿದ್ರ್ಯದ ತವರ್ಮನೆಯಾಯಿತು! ಭೈರವನ ನಿವಾಸ ಭೂಮಿಯಾಯಿತು!

ಈ ಭಯಾನಕ ಪರಿಸ್ಥಿತಿಗೆ ಬಂದು ತಲುಪಿದ್ದರೂ ಆ ಕಲಿಗಳು ತಮ್ಮ ದೃಢನಿಶ್ಚಯವನ್ನು ಉಪೇಕ್ಷಿಸಲಿಲ್ಲ, ಸ್ವಾತಂತ್ರ್ಯಶೂನ್ಯವಾದ ಬಾಳುವೆಯನ್ನು ಕಾಂಕ್ಷಿಸಲಿಲ್ಲ. ಮೃತ್ಯುವು ತನ್ನ ನಾಲಿಗೆಯನ್ನು ಹೊರಚಾಚಿ ಅವರನ್ನು ನುಂಗಲು ಉದ್ಯುಕ್ತವಾಗಿ ಮುಂದೆ ನಿಂತಿದ್ದರೂ ಅವರು ಬೆದರಲಿಲ್ಲ. "ವಿಜಯ, ಇಲ್ಲದಿದ್ದರೆ ಮರಣ" ಇವುಗಳೆರಡರಲ್ಲಿ ಯಾವುದಾದರೂ ಒಂದು ದೊರಕುವ ತನಕ ಕಾದಲು ಆ ವೀರರು ಸಂಕಲ್ಪಿಸಿದ್ದರು. ಅರಸನಾದ ವಿಜಯಸಿಂಹನು ತನ್ನ ಸೇನೆಯ ದಂಡಾಳುಗಳಿಗೆ ಆವಶ್ಯವಿರುವ ಪ್ರೋತ್ಸಾಹಗಳನ್ನು ನೀಡುತ್ತಿದ್ದನು; ತಾನೇ ಅಶ್ವವನ್ನೇರಿ ರಣಾಂಗಣದಲ್ಲಿ ಸಂಚರಿಸಿ ಭಟರನ್ನು ಮುಂದಕ್ಕೊಯ್ಯುತ್ತಿದ್ದನು. ತನ್ನ ನಾಡಿನ ಸ್ವಾತಂತ್ರ್ಯವನ್ನು ಸಂರಕ್ಷಿಸಲು ಅವನು ಹೇಗೆ ಹೆಣಗಿದನೆಂಬುದನ್ನು ವಿವರಿಸಲು ಹೊರಟರೆ ಅದೇ ಒಂದು ದೊಡ್ಡ ಕತೆಯಾಗಬಹುದು; ಆದರೆ ಆ ವಿವರಣೆಯು ಇಲ್ಲಿ ಆವಶ್ಯಕವಾಗಿಲ್ಲ. ಒಬ್ಬ ಧೀರನು ತನ್ನ ನಾಡಿನ ಪಾಲನೆಗಾಗಿ ಹೇಗೆ ಪ್ರಯತ್ನಿಸುವನೋ ಅದರಂತೆ ವಿಜಯಸಿಂಸಿಂಹನು ಉದ್ಯಮಿಸಿದನೆಂದು ಇಲ್ಲಿ ಹೇಳಿದರೆ ಸಾಕಾಗಬಹುದು. ಅವನ ಶೌರ್ಯ ಸಾಹಸಗಳ ಚಿತ್ರಗಳನ್ನು ವಾಚಕರು ತಮ್ಮ ಮನೋಧರ್ಮಕ್ಕನುಗುಣವಾಗಿ ತಮ್ಮ ಮನಸ್ಸುಗಳಲ್ಲಿಯೇ ಚಿತ್ರಿಸಿಕೊಳ್ಳಲಿ.

ಅರಮನೆಗೆ ವಿಜಯಸಿಂಹನು ಹಿಂದಿರುಗಿ ಬರುವಾಗ ಸಮಯವು ಬಹಳ ವಾಗಿದ್ದಿತು; ಮಹಾರಾಣಿ ಸುನಂದಾದೇವಿಯು ತನ್ನ ಇನಿಯನ ಆಗಮನ ವನ್ನು ನಿರೀಕ್ಷಿಸುತ್ತಾ ಅರಮನೆಯಲ್ಲಿ ಕಾದು ಕುಳಿತಿದ್ದಳು. ಯುದ್ಧದಲ್ಲಿ ರಜ ಪೂತರಿಗೆ ವಿಜಯ ದೊರಕುವುದು ಪ್ರಯಾಸವೆಂಬುದನ್ನು ಅವಳು ಅರಿತಿದ್ದುದ ರಿಂದ ಅವಳ ಮನಸ್ಸು ಅಪಾರ ಚಿಂತೆಗೆ ಈಡಾಗಿದ್ದಿತು. ತನ್ನ ಪತಿದೇವನಿಗೆ ರಣಾಂಗಣದಲ್ಲಿ ಯಾವ ವಿಪತ್ತು ಸಂಭವಿಸುವದೋ ಎಂಬ ಭೀತಿಯು ರಾಣಿ ಯ ಎದೆಯಲ್ಲಿ ಉರಿಯುತ್ತಿದ್ದಿತು. ಒಂಭತ್ತು ತಿಂಗಳು ಪ್ರಾಯದ ಕೂಸನ್ನು ಎದೆಗಪ್ಪಿಕೊಂಡು ಅವಳು ವಿಜಯಸಿಂಹನು ಬರುವುದನ್ನು ಇದಿರು ನೋಡು ತ್ತಿದ್ದಳು. ಬಹಳ ರಾತ್ರಿಯಾಗಲು ವಿಜಯಸಿಂಹನು ಅರಮನೆಗೆ ಬಂದನು. ಅವನ ಮೊಗದಲ್ಲಿ ಎಂದಿಗಿಂತಲೂ ಹೆಚ್ಚಾಗಿ ನಿರಾಶೆಯು ರೂಪಗೊಂಡಿದ್ದಿತು; ಉತ್ಸಾಹವು ಅವನಲ್ಲಿ ಗೋಚರಿಸುತ್ತಿರಲಿಲ್ಲ; ಮೋರೆಯು ಮ್ಲಾನಭಾವವನ್ನು ಹೊಂದಿದ್ದಿತು.

ಪತಿಯ ಪೈನ್ಯ ಚಿತ್ರವು ಸುನಂದಾದೇವಿಯ ನೇತ್ರಗಳಲ್ಲಿ ಪತಿಸಲು ಅವಳ ಎದೆಯಲ್ಲಿ ಅಡಗಿದ್ದ ಕಿಚ್ಚು ಪ್ರಜ್ವಲಿಸತೊಡಗಿತು; ಅಂತ್ಯಘಟ್ಟವು ಆಸನ್ನವಾಗಿದೆಯೆಂಬುದನ್ನು ಅವಳು ಊಹಿಸಿದಳು. ಆ ದಿನ ಎಂದಿ ಗಿಂತಲೂ ಹೆಚ್ಚಿನ ನಷ್ಟವು ರೂಪನಗರಕ್ಕೆ ಕದನದಲ್ಲಿ ಬಂದೊದಗಿವೆಯೆಂಬು ದನ್ನು ಆ ಚಾಣಾಕ್ಷಳು ಪತಿಯ ಮುಖಭಾವದಿಂದ ಗ್ರಹಿಸಿದಳು. ರೂಪನಗ ರದ ಸ್ವಾತಂತ್ರ್ಯ ಸೂರ್ಯನ ಅಸ್ತಮಾನವು ಬಹು ದೂರದಲ್ಲಿಲ್ಲವೆಂದು ಅವಳ ಅಂತರಾತ್ಮನು ನುಡಿಯುತ್ತಿದ್ದನು. ಅವಳು ಪತಿಯ ಸಂಗಡ ಮಾತಾಡಲಿಲ್ಲ; ನೊಂದು, ಬೆಂದು, ಬಂದವನ ಸಂಗಡ ಏನು ಮಾತಾಡಬೇಕೆಂಬುದು ರಾಣಿಗೆ ತೋಚಲಿಲ್ಲ. ಪತಿಯ ಕಡೆಗೆ ಒಂದು ಕರುಣಾಪರಿಪೂರ್ಣ ನೋಟವೊಂದನ್ನು ಚೆಲ್ಲಿ, ಮಗುವನ್ನು ಎದೆಗಪ್ಪಿಕೊಂಡು ಅವಳು ಅಲ್ಲಿಯೇ ನಿಂತಳು. ಅಲ್ಲಿನ ವಾತಾವರಣದಲ್ಲಿ ಮೌನವು ಹರಡಿದ್ದಿತು.

"ಸುನಂದಾ!" ಮರುಕದಿಂದ ಕೂಡಿದ ಧ್ವನಿಯಲ್ಲಿ ವಿಜಯಸಿಂಹನೇ ಅಲ್ಲಿ ಹರಡಿದ್ದ ಮೌನವನ್ನು ಭಂಜಿಸಿದ. ಸುನಂದೆಯು ಮಾತಾಡಲಿಲ್ಲ; ಅವನ ಮೊಗವನ್ನು ವೀಕ್ಷಿಸುತ್ತಾ ನಿಂತಿದ್ದಳು. "ತಾನೊಂದು ನೆನೆದರೆ, ದೈವವು ಬೇರೊಂದು ನೆನೆಯುವದು!" ಎಂದನು.

"ಮಹಾರಾಜ!"

"ರಾಣಿ, ರೂಪನಗದ ಸೂರ್ಯನು ಅಸ್ತಮಿಸುವ ವೇಳೆಯು ಸನ್ನಿಹಿತವಾಗಿದೆ; ನಮ್ಮನಾಡು ಇನ್ನು ಕೆಲವು ದಿನಗಳಲ್ಲಿಯೇ ಧ್ವಂಸವಾಗುವದು. ಆರ್ಯ ರಾಜ್ಯಗಳು ನಾಶವಾಗಬೇಕೆಂದಾಗಿರಬಹುದು ಸರ್ವಶಕ್ತನ ಸಂಕಲ್ಪ; ದೈವೇಚ್ಛೆಯೇ ಆ ರೀತಿಯಾಗಿದ್ದರೆ, ಅವನ್ನು ತಡೆಯುವವರಾರು? ಆದ್ಯಂತ್ಯ ಶೂನ್ಯವಾದ ಆ ವಿರಾಟ ಶಕ್ತಿಯ ಸಂಕಲ್ಪವು ವ್ಯತಿಚಲಿಸುವಂತೆ ಮಾಡುವದು ಪುರುಷ ಪ್ರಯತ್ನಕ್ಕೆ ಸಾಧ್ಯವೇ?"

"ನಗರವನ್ನು ಶತ್ರುಗಳಿಂದ ರಕ್ಷಿಸಲು ಯಾವ ಉಪಾಯವೂ ಇಲ್ಲವೆ?" ರಾಣಿಯು ಈ ಪ್ರಶ್ನೆಯನ್ನು ಹಾಕಿದಳು. "ಕೆಲವು ದಿನಗಳ ವರೆಗೆ ಅವರ ಮುತ್ತಿಗೆಯನ್ನು ತಡೆದು ನಿಲ್ಲಿಸಲು ಶಕ್ಯವಾಗವೇ?"

"ರಾಣಿ, ಅಶಕ್ಯ. ಈ ಒಂದು ದಿವಸದಲ್ಲಿಯೇ ಎರಡು ಸಾವಿರ ಮಂದಿ ಯೋಧರು ರಣಾಂಗಣದಲ್ಲಿ ಪವಡಿಸಿದರು. ಆಹಾರ ಸಾಮಗ್ರಿಗಳು ಕಡಿಮೆಯಾಗುತ್ತಾ ಬಂದಿವೆ. ಈಗ ಅವಶೇಷಿಸಿರುವದು ಮೂರು ಸಾವಿರ ಮಂದಿ ಇರುವ ಒಂದು ದಂಡು ಮಾತ್ರವಾಗಿದೆ. ಈ ಅಲ್ಪಬಲದಿಂದ ಶತ್ರುಗಳ ಸೇನಾ ಸಾಗರವನ್ನು ತಡೆಯುವದು ಅಸಾಧ್ಯ."

ರಾಣಿಯು ಮಾತಾಡಲಿಲ್ಲ. ಈ ಭಯಂಕರ ವಾರ್ತೆಯನ್ನು ತಿಳಿಯಲು ಅವಳ ನೇತ್ರಗಳಲ್ಲಿ ಬಾಷ್ಪ ಬಿಂದುಗಳು ತುಂಬಿದುವು. ಎದೆಗಪ್ಪಿರುವ ಕಂದನ ಮೋರೆಯನ್ನು ಒಮ್ಮೆ ನೋಡಿದಳು; ಆದರೆ ಅಲ್ಲಿ ನಿದ್ರಿಸುತ್ತಿರುವ ಕೂಸಿಗೆ ತಾಯಿಯ ಶೋಕವೇನೆಂಬುದು ತಿಳಿಯಲಿಲ್ಲ.

ರಾಣಿಯು ಮಾತಾಡದಿರುವದನ್ನು ನೋಡಿ ಅರಸನೇ ತನ್ನ ನುಡಿಗಳನ್ನು ಮುಂದುವರಿಸಿದ. ದೃಢತೆಯು ಅವನ ಸ್ವರದಲ್ಲಿತ್ತು:—"ರಾಣಿ, ಕೊನೆತನಕ ನಾವು ಯತ್ನಿಸದಿರಲಾರೆವು. ಧೀನರಂತೆ ನಮ್ಮ ದೇಶದ ಸ್ವಾತಂತ್ರ್ಯವನ್ನು ಪಾಲಿಸಲು ನಾವು ಕಾದುತ್ತಲಿರುವೆವು. ಯುದ್ಧರಂಗದಲ್ಲಿ ದೇಹವನ್ನು ವಿಸರ್ಜಿಸಲು ನಾನು ಹಿಂಜರಿಯಲಾರೆನು. ರಜಪೂತರ ಕೊನೆಯ ಕರ್ಮವನ್ನು ಸಹಾ ಜರುಗಿಸಬೇಕಾಗಿ ಬರಬಹುದು. ನಿನಗೆ ಹೇಳುವದಿಷ್ಟೆ. ನಾವು ವಿಜಯವನ್ನು ಸಂಪಾದಿಸಲಾರೆವು; ನಮ್ಮ ಅಂತಿಮೋದ್ಯಮವನ್ನು ಈಗ ನೆರವೇರಿಸ ಬೇಕಾಗಿ ಬಂದಿದೆ. ರಾಣಿ, ನೀನು ತಿಳಿದವಳಿರುತ್ತೀ. ನಿನ್ನ ಶೀಲವನ್ನು ಕಾಯ್ದುಕೊಳ್ಳಲು ಸಿದ್ಧಳಾಗಿರು; ಆರ್ಯಮಹಿಳೆಯ ಪವಿತ್ರತೆಯು ನಶಿಸಕೂಡದು."

"ಮಹಾರಾಜ, ನಾನು ನನ್ನ ಶೀಲವನ್ನು ಕಾಯ್ದುಕೊಳ್ಳಬೇಕಾದ ಬಗೆ ಯನ್ನು ಬಲ್ಲೆ; ಚಿತೆಯಲ್ಲಿ ದೇಹವನ್ನು ವಿಸರ್ಜಿಸಲು ಭಯವಿಲ್ಲ; ಆದರೆ ನಮ್ಮ ವಂಶದ ಈ ಚಿಗುರಿನ ಗತಿಯೇನು? ಹೆತ್ತ ತಾಯ್ತಂದೆಗಳಿಗೆ ತಿಲೋದಕವನ್ನು ಕೊಡಲು ಅದು ಒಂದಾದರೂ ಉಳಿಯಬೇಡವೇ?"

ರಾಣಿಯ ನುಡಿಗಳನ್ನು ಆಶ್ರಾವಿಸುತ್ತಲೆ ಅರಸನು ಆಲೋಚನಾಮಗ್ನನಾದ. ತನ್ನ ಕೂಸಿನ ಭವಿಷ್ಯವನ್ನು ಕುರಿತು ಈ ತನಕ ಅವನು ಚಿಂತಿಸಿರಲಿಲ್ಲ. ಸುನಂದೆಯ ಮಾತುಗಳು ಅವನ ಚಿತ್ತವನ್ನು ಆ ಕಡೆಗೆ ಚಲಿಸುವಂತೆ ಮಾಡಿದವು. ಸ್ವಲ್ಪ ಸಮಯದ ವರೆಗೆ ಅವನು ಚಿಂತಾಮಗ್ನನಾದ. ಆ ಮೇಲೆ ಅವನು ಹೇಳಿದ: "ನೀನು ಹೇಳುವದು ನಿಜವಿದೆ. ಕೂಸನ್ನು ರಕ್ಷಿಸುವದು ಅತ್ಯಗತ್ಯ. ನಮ್ಮ ವಂಶದ ಹೆಸರನ್ನು ನೆಲೆನಿಲ್ಲಿಸಲಿರುವ ಆ ಗಿಡವನ್ನು ಉಳಿಸಬೇಕಾಗಿದೆ. ಅದರ ಬಗ್ಗೆ ಒಂದು ಹಂಚಿಕೆಯನ್ನು ನಾವು ಮಾಡಬೇಕಾಗಿದೆ."

"ಕೂಸನ್ನು ಯಾವ ಉಪಾಯದಿಂದಲಾದರೂ ಉಳಿಸಬೇಕು."

"ರಾಣೀ, ಕೋಟೆಯೊಳಗಿರುವ ಗುಪ್ತದ್ವಾರದ ಮೂಲಕ ನೀನು ಕೂಸಿನೊಡನೆ ಪಾರಾಗು; ನಿನಗೆ ದಾರಿ ತೋರಲು, ನಿನಗೆ ಅಪಾಯ ಬಂದೊದಗದಂತೆ ನೋಡಿಕೊಳ್ಳಲು ಅಜಯಸಿಂಹನು ನಿನ್ನ ಸಂಗಡ ಬರುತ್ತಾನೆ. ನಾನು ಇಲ್ಲಿ ಶತ್ರುಗಳೊಡನೆ ಕಾದಾಡುವೆ."

"ಮಹಾರಾಜ, ದಯವಿಟ್ಟು ಆ ನುಡಿಯನ್ನು ಆಡದಿರಿ. ನಿಮ್ಮ ಸೇವೆಯಲ್ಲಿ ನನ್ನ ದಿನಗಳನ್ನು ಕಳೆಯುವೆ; ವೀರ ಮಹಿಳೆಯರಿಗುಚಿತವೆನಿಸಿದ ಸಹಗಮನಕ್ಕೂ ಅಂಜಲಾರೆ. ಮಗುವನ್ನು ಅಜಯನು ಕರೆದುಕೊಂಡು ಹೋಗಲಿ!"

"ಎಳೆಗೂಸನ್ನು ಪೋಷಿಸಬೇಕಾದವರು ತಾಯಿಯಲ್ಲದೆ ಇನ್ನಾರು? ಆ ಕೆಲಸದಲ್ಲಿ ನೀನು ಉಪೇಕ್ಷೆಯನ್ನು ತೋರಿಸಿದರೆ ಚಿಗುರಬೇಕಾದ ಆ ಎಳೆಯ ಗಿಡವು ಬಣಗದಿರದು. ಆದುದರಿಂದ ರಾಣೀ, ನನ್ನ ಮಾತನ್ನು ಕೇಳು; ಅಜಯಸಿಂಹನ ಸಂಗಡ ನೀನು ಇಲ್ಲಿಂದ ಪಾರಾಗುವದು ಒಳ್ಳೆಯದು. ಸುರಕ್ಷಿತವಾದ ಒಂದು ಪ್ರದೇಶಕ್ಕೆ ಅಜಯನು ನಿನ್ನನ್ನು ಒಯ್ಯುವನು. ಮಗುವಿನ ಅಭ್ಯುದಯವನ್ನು ಕಾಂಕ್ಷಿಸಿ ನಾನು ಇದನ್ನು ಹೇಳುತ್ತಿರುವೆನು."

"ಆರ್ಯಪುತ್ರ, ನಾನು ಮಾಡಬೇಕಾದ ಕರ್ತವ್ಯಗಳಿಂದ ನನ್ನನ್ನು ಪರಾಙ್ಮುಖಳಾಗುವಂತೆ ಮಾಡಬೇಡಿ. ಅಜಯಸಿಂಹನು ನಮಗೆ ಅನ್ಯನಲ್ಲ; ಅವನ ಪೋಷಣೆಯಲ್ಲಿ ಶಿಶುವು ಬೆಳೆಯಲಿ. ಮಗುವಿನ ಹೆಸರು ಹೇಳಿ ನಾನು

ನನ್ನ ಜೀವವನ್ನು ಸಂರಕ್ಷಿಸಿಕೊಂಡೆನೆಂಬ ಅಪವಾದವನ್ನು ಹೊರಲಾರೆನು."

"ರಾಣೀ, ನಿನ್ನ ಧೈರ್ಯ, ನಿನ್ನ ಗುಣ ಇವುಗಳಲ್ಲಿ ನನಗೆ ಪೂರ್ಣ ಸಂಬಿಗೆಯಿದೆ; ನಿನ್ನನ್ನು ಕರ್ತವ್ಯದ ದಾರಿಯಿಂದ ವ್ಯತಿಚಲಿಸುವಂತೆ ಮಾಡಲು ನಾನು ಆಗ್ರಹಿಸುವದಿಲ್ಲ. ಸುನಂದಾ, ಈ ಕೂಸನ್ನು ಪಾಲಿಸುವದು ಸಹಾ ತಾಯಿಯಾದ ನಿನ್ನ ಒಂದು ಕರ್ತವ್ಯವಾಗಿದೆಯೆಂಬುದನ್ನು ನೆನಪಿಗೆ ತಂದು ಕೋ. ನಾವಿಬ್ಬರೂ ಇಲ್ಲಿಂದ ತೆರಳಿದರೆ ಅದು ತಬ್ಬಲಿಯಾಗವೇ? ನಮ್ಮ ಕಂದನ ಬಾಳು ಕುನ್ನಿ ಬಾಳೆನಿಸದೇ? ಆದುದರಿಂದ ಅವನ ಅಭಿವೃದ್ಧಿಯನ್ನು ಚಿಂತಿಸಿ; ನಮ್ಮ ವಂಶದ ಅಭಿವೃದ್ಧಿಯ ಕಡೆಗೆ ಗಮನವನ್ನಿಟ್ಟು ನನ್ನ ಮಾತನ್ನು ನಡೆಸು. ಹೆತ್ತ ತಾಯಿಯಲ್ಲದೆ ಇನ್ನಾರು ಆ ಕೂಸಿನ ಉಡಿಯಲ್ಲಿ ಶೌರ್ಯ ಸಂಜೀವನವನ್ನು ತುಂಬತಕ್ಕವರು? ನಾನು ಈ ಲೋಕದಿಂದ ದೂರ ಹೋಗುತ್ತಿರುವೆನೆಂಬ ಚಿಂತೆಯು ನಿನ್ನ ಎದೆಯನ್ನು ದಹಿಸುತ್ತಿರಬಹುದು; ಆದರೆ ಹಲವು ಸಾರಿ ಈ ದುಃಖಗಳನ್ನೆಲ್ಲಾ ನಾವು ಅನುಭವಿಸಬೇಕಾಗಿ ಬರುತ್ತವೆ. ಸಹಗಮನವೊಂದರಿಂದ ಮಾತ್ರ ಮಹಿಳೆಯ ಕರ್ತವ್ಯವು ಪೂರ್ತಿಯಾಗುವದಿಲ್ಲ. ಕೆಲವು ಉತ್ಕೃಷ್ಟ ಕೆಲಸಗಳಿಗೆ ಬೇಕಾಗಿ ಹಲವು ಸಾರಿ ಮಹಿಳೆಯು ದೇಹವನ್ನು ವಿಸರ್ಜಿಸದೆ ಜೀವಿಸಬೇಕಾಗಿ ಬರುತ್ತದೆ. ಆದುದರಿಂದ ಸುನಂದಾ, ನನ್ನ ಮಾತನ್ನು ನಡೆಸು; ನಿನ್ನ ಪತಿಯು ಬಿನ್ನಹವಿದು."

ಸುನಂದೆಯು ಮಾತಾಡಲಿಲ್ಲ; ಪತಿಯ ವದನಮಂಡಲದಿಂದ ಅತ್ಯಂತ ಸಾವಧಾನವಾಗಿ ಹರಿದು ಬರುತ್ತಿರುವ ಈ ನುಡಿಗಳನ್ನು ಅವಳು ಆಶ್ರಾವಿಸಿದಳು. ಅವು ಮನವನ್ನು ಕರಗುವಂತೆ ಮಾಡುವ ಒಂದು ಬಿನ್ನಹವಾಗಿದ್ದುವು. ದೇಹವಿಸರ್ಜನೆಯನ್ನು ಮಾಡಿ ವೀರಮಹಿಳೆಯೆಂದೆನಿಸಿಕೊಳ್ಳಬೇಕೆಂಬ ಆಗ್ರಹವಿದ್ದಿತು ಅವಳಿಗೆ; ಆದರೆ ಪತಿಯು ಮಗುವನ್ನು ಪರಿಪೋಷಿಸುವ ಕರ್ಮವನ್ನು ಸುನಂದಾದೇವಿಯ ಮೇಲೆ ಹೊರಿಸಲು ಹೊರಟಿದ್ದ. ಸಹಜವಾದ ಪುತ್ರವಾತ್ಸಲ್ಯ, ಇನಿಯನ ವಿಯೋಗ ಇವುಗಳು ಅವಳ ಮನಸ್ಸಿನಲ್ಲಿ ಪರಸ್ಪರ ಒಂದು ಯುದ್ಧವನ್ನು ನಡೆಸಿದುವು. ಏನು ಮಾಡಬೇಕೆಂಬುದು ಅವಳಿಗೆ ತಿಳಿಯದಾಯಿತು; ಆಲೋಚಿಸುತ್ತಾ ಅವಳು ಪತಿಯ ಪಕ್ಕದಲ್ಲಿ ನಿಂತಿದ್ದಳು.

ವಿಜಯಸಿಂಹನು ತನ್ನ ಮಾತುಗಳನ್ನು ಮುಂದರಿಸಿದ: "ರಾಣೀ, ಭಯಪಡಬೇಡ; ಅಂಜಿಕೆಯಿಂದ ಎದೆಗುಂದಬೇಡ. ದೇಶವು ಅನ್ಯರ ದಾಸ್ಯದಲ್ಲಿ ಬಳಲಬೇಕೆಂದು. ವಿಧಿಯ ಸಂಕಲ್ಪವಾಗಿದ್ದರೆ ಅದನ್ನು ತಡೆಯಲು ನಮ್ಮಿಂದ

ಸಾಧ್ಯವಾಗದು. ನಾವು ನಮ್ಮ ಕರ್ತವ್ಯಗಳೇನೆಂಬುದನ್ನು ತಿಳಿದು ಅದರಂತೆ ಆಚರಿಸುವಾ. ಧೀರ ವನಿತೆಯಂತೆ ಕೂಸನ್ನು ಪೋಷಿಸಿ ಪರಿಪಾಲಿಸುವ ಕೃತ್ಯ ದಲ್ಲಿ ನೀನು ನಿರತಳಾಗು. ನಾನು ಕ್ಷಾತ್ರ ಧರ್ಮದಂತೆ ರಣಾಂಗಣದಲ್ಲಿ ಕಾದಿ ದೇಹವನ್ನು ವಿಸರ್ಜಿಸುತ್ತೇನೆ. ಚಿಂತಿಸಬೇಡ; ಅಜಯಸಿಂಹನು ಈಗಲೆ ಬರುವವನಿರುವ; ನಿನ್ನನ್ನೂ ಕೂಸನ್ನೂ ಕರೆದುಕೊಂಡು ಅವನು ಗುಪ್ತದ್ವಾ ರದ ಮೂಲಕ ತೆರಳುತ್ತಾನೆ."

"ನಿಮ್ಮ ಆಜ್ಞೆಯನ್ನು ನೆರವೇರಿಸುವದು ನನ್ನ ಧರ್ಮ; ನೀವು ಹೇಳು ವಂತೆ ಶಿಶುವನ್ನು ಕಾಯುವದು ಅಗತ್ಯವಾಗಿದೆ. ಆದುದರಿಂದ ಕುಮಾರನ ಏಳಿಗೆಯನ್ನು ಚಿಂತಿಸಿ ನೀವು ಹೇಳಿದಂತೆ ವರ್ತಿಸುವವಳಿರುತ್ತೇನೆ."

"ಅಹುದು. ನನ್ನ ಸಲಹೆಯಂತೆ ವರ್ತಿಸು; ನಾನು ಆ ಲೋಕದಲ್ಲಿ ನಿಂತು ನಿನ್ನ ಧೀರತೆಯನ್ನು ಕಂಡು ಆಹ್ಲಾದಪಡುವೆನು."

ಅನಂತರ ಮಾತಾಡಲು ವಿಜಯಸಿಂಹನಿಗೆ ಸಾಧ್ಯವಾಗಲಿಲ್ಲ. ಮೊಗ ವೆತ್ತಿ ಸುನಂದೆಯ ಕಣ್ಣುಗಳನ್ನು ಅವನು ನೋಡಿದನು. ಆಕೆ ಅವಳ ಚಕ್ಷು ಸ್ಸುಗಳಲ್ಲಿ ಬಾಷ್ಪಕಣಗಳು ತುಂಬಿರುವದು ಅವನಿಗೆ ಗೋಚರಿಸವೆ ಇರಲಿಲ್ಲ. ಅವನಿಗೂ ಸಂಕಟವಾಯಿತು. ಒಲವಿನ ಮಡದಿಯನ್ನು ಬಿಟ್ಟು ದೂರಕ್ಕೆ, ಬಹುದೂರಕ್ಕೆ ತಾನು ಮಹಾಪ್ರವಾಸವನ್ನು ಕೈಗೊಳ್ಳಬೇಕಾಗಿ ಬಂದುದು ಅವನ ಎದೆಯನ್ನು ತಿವಿಯುವೆ ಇರಲಿಲ್ಲ; ಆದರೆ ಮಾಡುವದೇನು?"

"ಅಳಬೇಡ" ಎಂದು ತನ್ನ ಮಡದಿಯ ನೇತ್ರಗಳಲ್ಲಿ ತುಂಬಿದ್ದ ಅಶ್ರು ಕಣಗಳನ್ನು ಅರಸನು ತನ್ನ ಉತ್ತರೀಯದಿಂದ ಒರೆಸಿದ. ಅವಳು ಪತಿಯ ಎದೆಯ ಮೇಲೆ ತನ್ನ ಮಸ್ತಕವನ್ನಿಟ್ಟಳು. ಅವನ ಮೈಮೇಲಿನ ವಸ್ತ್ರವು ರಾಣಿಯ ಅಶ್ರುಸಲಿಲದಿಂದ ನೆನೆದಿತು.

ಅಜಯಸಿಂಹನು ಬಂದು ರಾಜನನ್ನು ನೋಡಿದ; ಅಜಯನನ್ನು ಕಾಣು ತ್ತಲೆ ಅರಸನು ನುಡಿದ "ಅಜಯಾ, ಅವಶ್ಯವಿರುವ ಎಲ್ಲಾ ಏರ್ಪಾಡುಗಳನ್ನು ಮಾಡಿದೆಯಾ?"

"ಮಾಡಿರುವೆ. ಸಂಗಡ ಬರಲಿರುವ ದಂಡಾಳುಗಳನ್ನು ಆರಿಸಿರುವೆ. ಹೆಚ್ಚು ಮಂದಿಯನ್ನು ಸಂಗಡ ಕರೆದುಕೊಂಡು ಹೋಗುವದು ತೊಂದರೆ; ವೈರಿಗಳ ದೃಷ್ಟಿಯನ್ನು ಅದು ಸೆಳೆಯಬಹುದು.''

"ಅಹುದು. ಸ್ವಲ್ಪ ಮಂದಿ ಇದ್ದರೆ ಸಾಕು; ಸುರಕ್ಷಿತವಾದ ಸ್ಥಳಕ್ಕೆ

ಒಯ್ಯಬೇಕು. ತಿಳಿಯಿತೇ?"

"ಆ ಬಗ್ಗೆ ಮಹಾರಾಜರು ಚಿಂತಿಸಬೇಕಾದ ಅವಶ್ಯಕತೆಯಿಲ್ಲ; ನನ್ನ ದೇಹದಲ್ಲಿ ಜೀವವಿರುವತನಕ ಮಹಾರಾಣಿಯವರ ಹಾಗೂ ಕುಮಾರರ ಒಂದು ಕೂದಲು ಸಹಾ ಕೊಂಕದಂತೆ ನೋಡಿಕೊಳ್ಳುವೆನು."

"ಅಜಯ, ನಿನ್ನ ಧೈರ್ಯದಲ್ಲಿಯೂ ಕಾರ್ಯದಕ್ಷತೆಯಲ್ಲಿಯೂ ನನಗೆ ಪೂರ್ಣ ನಂಬಿಗೆಯಿದೆ. ನನ್ನ ಮಡದಿಯನ್ನೂ ನನ್ನ ವಂಶವನ್ನು ಉದ್ಧರಿಸಲಿರುವ ಕುಮಾರನನ್ನೂ ನಿನ್ನ ವಶಕ್ಕೆ ಒಪ್ಪಿಸುವೆ; ಅವರನ್ನು ಕಾಯುವ ಕೆಲಸವು ನಿನ್ನದು. ಅವಶ್ಯವಿರುವ ದ್ರವ್ಯವನ್ನು ಸೈನಿಕರ ಮೂಲಕ ಹೊರಕ್ಕೆ ಸಾಗಿಸು. ಹನುಮಂತದೇವರ ಗುಡಿಯ ಹತ್ತರ ಆ ದ್ರವ್ಯವನ್ನು ಭೂಸ್ಥಾಪನೆ ಮಾಡು. ಕಷ್ಟಕಾಲದಲ್ಲಿ ಅದನ್ನು ಉಪಯೋಗಿಸಬಹುದು."

"ಹಾಗೆಯೇ ಆಗಲಿ."

"ಸುನಂದಾ!" ರಾಣಿಯ ಕಡೆಗೆ ತಿರುಗಿ ಅರಸನು ನುಡಿದ:—"ಈ ದಿನ ರಾತ್ರಿ ಮೂರನೇ ಜಾವದಲ್ಲಿ ಮಗುವನ್ನು ಕರೆದುಕೊಂಡು ನೀನು ಅಜಯನ ಸಂಗಡ ಹೋಗಬೇಕಾಗಿದೆ." ಸುನಂದೆಯು ಅವನ ನುಡಿಗೆ ಸಮ್ಮತಿಸಿದಳೆಂಬುದನ್ನು ಸೂಚಿಸಲು ತಲೆಯಲ್ಲಾಡಿಸಿದಳು.

ಆ ರಾತ್ರಿ ಅಜಯಸಿಂಹನು ಮಹಾರಾಣಿಯನ್ನೂ, ರಾಜಕುಮಾರನನ್ನೂ ಕರೆದುಕೊಂಡು ಕೋಟೆಯಿಂದ ಪಾರಾದನು. ಮಹಾರಾಣಿಯೂ, ರಾಜಕುಮಾರನೂ ಪಾರಾದ ಸಂಗತಿಯನ್ನು ಶತ್ರುಗಳು ತಿಳಿಯಲಿಲ್ಲ.

ರೂಪನಗರ ದುರ್ಗವು ಶತ್ರುಗಳಿಗೆ ವಶವಾಯಿತು; ಮಹಾರಾಜನು ತನ್ನ ನಾಡಿನ ಸ್ವಾತಂತ್ರ್ಯವನ್ನು ಸಂರಕ್ಷಿಸುವ ಉದ್ಯಮದಲ್ಲಿ ದೇಹವನ್ನು ವಿಸರ್ಜಿಸಿದನು. ಅಲ್ಲಾವುದ್ದೀನನ ಅಧಿಕಾರವು ಆ ನಾಡಿನಲ್ಲಿ ನೆಲೆಗೊಂಡಿತು.

---

## ೨ ವೀರ ಮಹಿಳೆ.

"ನೀವು ಬರುವಿರೆಂದು ಎಷ್ಟು ದಿನಗಳಿಂದ ಇದಿರು ನೋಡುತ್ತಲಿದ್ದೆ. ಪ್ರತಿದಿನವೂ ನಿಮ್ಮ ಆಗಮನವನ್ನು ನಿರೀಕ್ಷಿಸುತ್ತಲಿರುವೆ; ಆದರೆ ಈ ವರೆಗೆ ಪ್ರತಿದಿನವೂ ನಿರಾಶೆಯನ್ನು ಹೊಂದಬೇಕಾಗಿ ಬರುತ್ತಿದ್ದಿತು ನೀವು ಬಾರ

ದಿಪ್ಪುದರಿಂದ." ಹೀಗೆ ಹೇಮಾ ಅಮರನ ಕಡೆಗೆ ತನ್ನ ದೃಷ್ಟಿಯನ್ನು ಚೆಲ್ಲಿ ಕಿರುನಗೆಯೊಡನೆ ನುಡಿದಳು.

"ಹೇಮಾ, ಈ ಸುದಿನಗಳತನಕ ನಿನ್ನನ್ನು ಒಂದು ಕಾಣದೆ ಇದ್ದ ತಪ್ಪನ್ನು ಕ್ಷಮಿಸು. ನಿನ್ನ ಕೋಮಲ ಎದೆಯನ್ನು ನೋಯಿಸಿದುದಕ್ಕೆ ಪರಿತಪಿಸುತ್ತಿರುವೆ. ಕೆಲಸಗಳು ಈ ಕಡೆಗೆ ಬರದ ಹಾಗೆ ಅಡ್ಡ ಬಂದುವು." ಈ ಮಾತುಗಳು ಅಮರಸಿಂಹನ ತುಟಿಗಳಿಂದ ಹೊರ ಬಿದ್ದುವು.

"ಈಗಲಾದರೂ ಈ ದೀನಳ ನೆನಪು ನಿಮಗೆ ಬಂದಿತಲ್ಲ!"

"ಹಾಗೆನಬೇಡ, ಹೇಮಾ, ನೀನು ದೀನಳಲ್ಲ; ನಿನ್ನ ಭೃತ್ಯಪದವನ್ನು ಸ್ವೀಕರಿಸಬೇಕಾದವನು ನಾನು. ನೀನು ನನ್ನ ಮನದ ರಾಣಿ! ನನಗೆ ಸುಖ ಸಂತೃಪ್ತಿಗಳನ್ನು ನೀಡತಕ್ಕ ದೇವಿ! ನಿನ್ನ ಕೃಪಾಕಟಾಕ್ಷವನ್ನು ಪಡೆಯಲಿಕ್ಕಾಗಿ ನಾನು ಬಂದಿರುವೆ"

"ಈ ಹೊಗಳಿಕೆಗಳಿಂದ ನೀವು ನನ್ನನ್ನು ಉಪಹಾಸ ಮಾಡ ಹೊರಟಿರುವ ಹಾಗೆ ತೋರುತ್ತದೆ. ಆ ಕೆಲಸದಲ್ಲಿ ನೀವು ದಣಿಯಬೇಕಾಗಿಲ್ಲ. ಇಗೋ, ಒಂದು ಕಿರಿಯ ಕಾಣಿಕೆಯನ್ನು ನಿವೇದಿಸುವೆನು"

"ಏನದು?" ಈ ನುಡಿಗಳನ್ನ ಚೆಲ್ಲಿದ ಅಮರ.

ಹೇಮ ಮಾತಾಡಲಿಲ್ಲ; ಇನ್ನೊಂದು ನಿಮಿಷದಲ್ಲಿಯೇ ಒಂದು ಕುಸುಮ ಹಾರವು ಅಮರನ ಕೊರಳಲ್ಲಿ ಬಿದ್ದಿತು. "ಇದೇ: ನನ್ನ ಪ್ರೀತಿಯ ಕಾಣಿಕೆ" ಎಂದುಸುರಿ ಅಮರನಕಡೆಗೆ ಒಂದು ಕಡೆಗಣ್ಣಿನ ನೋಟವನ್ನು ಬೀರಿದಳು ಹೇಮಾ. ಹತ್ತಿರದ ಮರದ ಮೇಲೆ ಕುಳಿತಿದ್ದ ಶುಕವೊಂದು ತಾನು ಅವಳ ಕೃತ್ಯವನ್ನು ನೋಡಿದೆನೆಂಬುದನ್ನು ಕುಕಿಲು ಸ್ವರದ ಮೂಲಕ ಹೊರಸೂಸಿತು. ಲಜ್ಜೆಯಿಂದ ನಸುಗೆಂಪು ಬಣ್ಣವನ್ನು ತಳೆದ ಹೇಮಳ ಮೊಗದಾವರೆಯು ನೆಲವನ್ನು ನೋಡಿತು. ಅಮರನ ನೇತ್ರಗಳು ಕಾಂತಿಯುಕ್ತವಾದುವು; ಅವನು ಮೃದುಸ್ವರದಲ್ಲಿ ನುಡಿದ. "ಹೇಮಾ?"

"ಹೂಂ" ಬೇರೆ ನಾದವು ಹೇಮಳ ಕಂಠದಿಂದ ಹೊರಬರಲಿಲ್ಲ.

ಅಮರ ಮುಂದಕ್ಕೆ ಅಡಿಗಳನ್ನಿಟ್ಟ; ಹೇಮ ಒಂದು ಹೆಜ್ಜೆ ಹಿಂದಕ್ಕೆ ಸರಿದಳು. ಅವ ಒಂದಡಿ ಪುನಃ ಮುಂದೆ ಬಂದ; ಅವಳು ಇನ್ನೊಂದು ಹೆಜ್ಜೆ ಹಿಂದೆ ಹೋದಳು. ಅಮರನ ತುಟಿಗಳಲ್ಲಿ ಮಿಂಚಿನಂತೆ ಒಂದು ತುಂಟತನದ ನಗೆಯು ಮೂಡಿ ಮತ್ತೆ ಮಾಯವಾಯಿತು. ಮೃದುಹಾಸದಿಂದ ಅರ್ಧ ಅರ

ಳಿರುವ ಮೋರೆಯೊಡನೆ ಹೇಮಾ ಅವನ ಕಣ್ಣುಗಳಲ್ಲಿ ಹೊಳೆಯುತ್ತಿರುವ ಕಾಂತಿಯಿಂದ ಅವನ ಎದೆಯಲ್ಲಿರುವ ಭಾವಗಳೇನೆಂಬುದನ್ನು ಊಹಿಸಿ ತಿಳಿದುಕೊಂಡಳು. ಅವಳು ಅವಸರದಲ್ಲಿ ಎರಡು ಮೂರು ಹೆಜ್ಜೆಗಳಷ್ಟು ದೂರ ಹಿಂದಕ್ಕೆ ಸರಿದಳು. ತರುಣನು ತನ್ನ ಸಾವಧಾನತೆಯನ್ನು ಉಪೇಕ್ಷಿಸಿದ; ಬೇಗನೆ ಎರಡು ಮೂರು ಹೆಜ್ಜೆಗಳನ್ನು ಮುಂದಿಷ್ಟು ತರುಣಿಯ ಕರಗಳನ್ನು ಪರಿಗ್ರಹಿಸಿದ. ಅಮರನ ಈ ಕೃತ್ಯದಿಂದ ಮೊದಲೆ ಬಾಗಿದ್ದ ಹೇಮಳ ಮೊಗವು ಇನ್ನಷ್ಟು ತಗ್ಗಿತು.

"ಹೇಮಾ!" ನುಡಿಯಿಲ್ಲ.

"ನನ್ನ ಹೇಮಾ" ಮೌನ.

"ನನ್ನ ಬಾಳಿನ ಬೆಳಕೇ!" ಒಂದು ನಗೆಯ ಸಪ್ಪಳ; ಹೇಮ ನಗುತ್ತಲಿದ್ದಳು.

"ರನ್ನೇ, ಈ ನಟನೆಯನ್ನೆಲ್ಲ ಎಲ್ಲಿಂದ ಕಲಿತೆ?" ಅಮರ ಈಗ ತನ್ನ ತೋಳುಗಳ ಬಂಧನದಲ್ಲಿ ಹೇಮಳನ್ನು ಕಟ್ಟಿದ.

"ಕಲಿಸಿ ಕೊಡಲು ನೀವಿರುವಾಗ ಅಭಿನಯದ ಕಲೆಯಲ್ಲಿ ನಾನು ನಿಷ್ಣಾತಳಾಗದಿರುವೆನೇ?"

"ಹೂಂ, ಗುರುವಿಗೆ ತಿರುಮಂತ್ರವನ್ನು ಕಲಿಸುವ ಜಾಣ್ಮೆಯು ನಿನ್ನಲ್ಲಿವೆ." ಹೇಮಳ ಕಪೋಲಗಳ ಸನಿಯಕ್ಕೆ ಅಮರ ತನ್ನ ಮೊಗವನ್ನು ಚಲಿಸಿದ.

"ಹೂಂ, ಸರಿ ನಿಮ್ಮ ಪರೀಕ್ಷೆಯಲ್ಲಿ ನಾನು ಉತ್ತೀರ್ಣಳಾದೆ."

ಈ ವೇಳೆಯಲ್ಲಿ ಒಂದು ಚುಂಬನ ಮುದ್ರೆಯು ಹೇಮಳ ಕಪೋಲಗಳ ಮೇಲೆ ಪತಿಸಿತು. "ಥೂ" ಎಂದು ಅಮರನಿಂದ ದೂರ ಸರಿಯಲು ಅವಳು ಪ್ರಯತ್ನಿಸದಿರಲಿಲ್ಲ; ಆದರೆ ಅಮರನ ಬಾಹುಬಂಧನದಲ್ಲಿ ಅವಳು ಸಿಕ್ಕಿದ್ದಳು.

"ನಿನ್ನ ಅಭಿನಯ ಕಲೆಗೆ ಮೆಚ್ಚಿ ನಾನು ಕೊಟ್ಟ ಬಹುಮಾನವನ್ನು ಒಲ್ಲೆನೆಂದೆನಬಹುದೇ?"

"ಈ ಹುಡುಗಾಟಿಕೆಯನ್ನು ಬಿಡಿ."

"ನನ್ನ ಕ್ರಿಯೆಗೆ ಪ್ರತಿಕ್ರಿಯೆಯನ್ನು ಹುಡುಗಾಟಿಕೆಯಲ್ಲಿಯೇ ಮಾಡಿಬಿಡು."

"ಅಂದರೆ?"

"ಅಂದರೆ ವಿಶದವಾಗಿ ಹೇಳಬೇಕೇ?"

"ಹೂಂ." ಹೇಮ ತಲೆಯನ್ನು ತಗ್ಗಿಸಿದಳು.

"ಹಾಗಾದರೆ ರಾಣಿಯವರು ಲಾಲಿಸಬೇಕು."

"ನಾನು ರಾಣಿಯೇನೂ ಅಲ್ಲ."

"ಈಗ ರಾಣಿಯಾಗದಿದ್ದರೇನು? ಮುಂದೆ ರಾಣಿಯಾಗಕೂಡದೇ? ನನ್ನ ಪಾಲಿಗಂತೂ ನೀನೇ ರಾಣಿ!"

"ತೊಡಗದಿರಿ ನನ್ನನ್ನು ಪರಿಹಾಸ ಮಾಡುವುದಕ್ಕೆ."

"ಹಾಸ್ಯವಲ್ಲ; ನಿಜ."

"ನಿಮ್ಮ ನಿಜವು ನನಗೆ ಬೇಕಿಲ್ಲ."

"ನಾನು ಬೇಡವಾದೆನೇ?"

ತನ್ನ ದೃಷ್ಟಿಯನ್ನು ಹೇಮಳ ಕಡೆಗೆ ತಿರುಗಿಸಿ ಅಮರ ಮೇಲೆ ಹೇಳಿದ ಬಾಣವನ್ನು ಪ್ರಯೋಗಿಸಿದನು. ಅವನು ವಿನೋದಕ್ಕಾಗಿ ಆ ಮಾತನ್ನು ಹೇಳಿದುದೇ ಆಗಿದ್ದಿತು. ಅದು ಹೇಮಳ ಮನಸ್ಸಿಗೆ ಸ್ವಲ್ಪ ನೋವು ಮಾಡ ದಿರಲಿಲ್ಲ. ಅಮರನ ಭುಜಗಳ ಮೇಲೆ ತನ್ನ ತೋಳನ್ನಿಟ್ಟು ಹೇಮಾ ಅವನ ಮೋರೆಯನ್ನು ನೋಡಿದಳು.

"ಏನು ಹೇಮಾ?" ಎಂದ ಅಮರ ಪ್ರೀತಿಯ ಸ್ವರದಲ್ಲಿ.

"ಕೇವಲ ವಿನೋದಕ್ಕಾಗಿಯಾದರೂ ನೀವು ಈ ನುಡಿಯನ್ನು ಆಡ ಕೂಡದು. ನನಗೆ ಲೋಕದಲ್ಲಿ ಬೇಕಾಗಿರುವವರು ನೀವು ಮಾತ್ರವಾಗಿರು ತ್ತೀರಿ. ನನ್ನ ಹೃದಯದಲ್ಲಿರುವವೇನೆಂಬದನ್ನು ನೀವು ಬಲ್ಲಿರಿ; ನನ್ನ ಹೃದಯ ದೇಗುಲದ ಆರಾಧನಮೂರ್ತಿ ನೀವೆಂಬುದು ನಿಮಗೆ ತಿಳಿದೇ ಇದೆ. ನನ್ನ ಆತ್ಮವನ್ನು ಬಲ್ಲ ನೀವು ಈ ರೀತಿಯ ನುಡಿಗಳಿಂದ ನನ್ನ ಮನವನ್ನು ನೋ ಯಿಸಬಾರದಾಗಿ ಅಪೇಕ್ಷೆ" ಕೊನೆಯ ಮಾತನ್ನಾಡುವಾಗಲಂತೂ ಅವಳ ಕಣ್ಣುಗಳಲ್ಲಿ ಬಾಷ್ಪಬಿಂದುಗಳು ತುಂಬಿದವು. ಆ ಮೇಲೆ ಮಾತಾಡಲು ಅವ ಳಿಗೆ ಸಾಧ್ಯವಾಗಲಿಲ್ಲ.

ಅಕಾರಣವಾಗಿ ಇನಿಯಳ ಮನನೋಯ್ಸಿಸಿದೆನೆಂಬುದು ಅಮರನಿಗೆ ತಿಳಿಯಲು ಅವನ ಮನನೊಯ್ಯದಿರಲಿಲ್ಲ. ಹಾಸ್ಯದಲ್ಲಾಗಿದ್ದಿತು ಅವನು ಆ ನುಡಿಗಳನ್ನಾಡಿದುದು; ಆದರೆ ಆ ನುಡಿಯ ಸೆಕೆಯನ್ನು ತಾಳಲಾರದಷ್ಟು ಮೃದುವಾಗಿದ್ದಿತು ಹೇಮಳ ಹೃದಯವು. ಅವನು ತನ್ನ ಉತ್ತರೀಯದಿಂದ ಹೇಮಳ ನೇತ್ರಗಳಲ್ಲಿ ತುಂಬಿರುವ ಅಶ್ರುಕಣಗಳನ್ನು ಒರೆಸಿದ. ಅನಂತರ

ಅವಳ ದೇಹವನ್ನು ತನ್ನ ಎದೆಗೆ ಸೇರಿಸಿಕೊಂಡು ಅವನು ಹೇಳಿದ: "ಹೇಮಾ, ನಾನು ಅಂದುದು ತಪ್ಪಾಯಿತು; ಆ ನುಡಿಯನ್ನು ಮರೆತು ಬಿಡು."

ಹೇಮಾ ಮೊಗವೆತ್ತಿ ನೋಡಿದಳು; ಕಾಂತಿಪರಿಪೂರ್ಣವಾದ ವದನವು ಗೋಚರಿಸಿತು. ಅಲ್ಲಿ ಗೋಚರಿಸುತ್ತಿರುವ ಚೆಲುವನ್ನು ಸವಿಯುವದರಲ್ಲಿ ತಲ್ಲೀನಳಾದಳು ಅವಳು. ಅಮರ ಅವಳ ಕೊರಳನ್ನು ಅಪ್ಪಿದ. ಹೇಮಾ ತನ್ನ ಎರಡು ತೋಳುಗಳನ್ನೂ ಅಮರನ ಭುಜಗಳ ಮೇಲಿಟ್ಟಳು. ಪುನಃ ಅವನು ಅವಳ ತುಟಿಗಳ ಮೇಲೆ ಒಂದು ಚುಂಬನ ಮುದ್ರೆಯನ್ನು ಒತ್ತಿದ.

ಹೇಮಾ ಅವನ ಹೆಗಲನ್ನು ಸ್ವಲ್ಪ ಒತ್ತಿ ಹಿಡಿದಳು; ಅವಳ ಹಿಡಿತ ವನ್ನು ಸಡಿಲಿಸಲು ಪ್ರಯತ್ನಿಸುತ್ತಾ ಅಮರ ಹೇಳಿದ: "ಹೇಮಾ, ನನ್ನ ಎಡದ ಹೆಗಲ ಮೇಲೆ ಹಾಗೆ ಒತ್ತದಿರು; ನೋವಾಗುತ್ತಲಿದೆ."

"ಏನಾಗಿದೆ?" ಎಂದು ಪ್ರಶ್ನಿಸಿದಳು ಹೇಮಾ ವಿಸ್ಮಯದಿಂದ.

"ಅಲ್ಲಿ ಒಂದು ಗಾಯವಿದೆ."

"ಎಲ್ಲಿ? ನೋಡುವೆ ನಾನು."

ಹೀಗೆನ್ನುತ್ತಾ ಹೇಮಾ ಅಮರನ ತೋಳಮೇಲಿನ ಅಂಗಿಯನ್ನು ದೂರ ಕ್ಕೆ ಸರಿವಂತೆ ಮಾಡಿದಳು. ಅಲ್ಲಿ ಕಟ್ಟಲ್ಪಟ್ಟಿರುವ ಒಂದು ಗಾಯವು ಗೋಚರಿ ಸಿತು. ಮೇಲಿರುವ ಕಟ್ಟನ್ನು ನೋಡಿದೊಡನೆಯೇ ಅದು ಒಂದು ಭಯಂಕರ ವಾದ ಗಾಯವೆಂಬುದು ಹೇಮಳಿಗೆ ಹೊಳೆದಿತು. ಭಯಸಂಭ್ರಾಂತಳಾಗಿ ಅವಳು ಹೇಳಿದಳು: "ಇದು ಅಪಾಯಕರವಾದ ಒಂದೆಂದು ತೋರುವದಲ್ಲ!"

"ಸಾರವಿಲ್ಲ;" ಒಂದು ಉದಾಸೀನವೃತ್ತಿಯನ್ನು ಬೀರಿ ನುಡಿದನು ಅಮ ರನು. "ಕೆಲವು ದಿನಗಳಹಿಂದೆ ಅದಾಯಿತು; ಹೇಳಹೊರಟರೆ ಅದು ಒಂದು ದೊಡ್ಡ ಕತೆಯಾದೀತು ಈ ಗಾಯವನ್ನು ನೋಡಿ ನೀನು ಅಂಜಬಹುದೆಂದು ಭಾವಿಸಿ ಇಷ್ಟು ದಿನಗಳ ತನಕ ನಾನು ಇಲ್ಲಿಗೆ ಬರಲಿಲ್ಲ."

"ಒಳ್ಳೆಯ ಮಾತು! ನಿಮ್ಮ ನೆರಳಿನಂತೆ ಸದಾ ನಿಮ್ಮ ಹಿಂದೆಯೇ ಇರುವ ನಾನು ನಿಮ್ಮನ್ನು ಶುಶ್ರೂಷಿಸಕೂಡದೇ?"

"ಹಾಗಲ್ಲ ಹೇಮಾ, ನಾನೊಂದು ಹೇಳಿದರೆ ನೀನು ಬೇರೊಂದನ್ನು ಗ್ರಹಿಸುತ್ತಿರುವೆ; ಈ ಬುದ್ಧಿಗೆ ಏನೆಂದು ಹೇಳಬೇಕು? ಈಗಿನ ಅಶಾಂತತೆಯ ವಾತಾವರಣದಲ್ಲಿ ಈ ರೀತಿಯ ಸಂಭವಗಳು ಸರ್ವಸಾಧಾರಣವಾಗಿ ನಡೆಯು ತ್ತವೆ. ಅವನ್ನು ಅಷ್ಟು ಮಹತ್ತರವಾಗಿ ವಿಚಾರಿಸಬೇಕಾಗಿಲ್ಲ."

"ಹಾಗಾದರೆ ಇನ್ನು ಮುಂದೆ ಹೀಗೆ ಅಡ್ಡಾಡಬೇಡಿ."

"ಇನ್ನು ಮುಂದೆ ಮನೆ ಬಿಟ್ಟು ಹೊರಗೆ ಹೋಗಕೂಡದೆಂದು ಹೇಳು ವೆಯಾ? ಇದೊಳ್ಳೆಯ ಆಜ್ಞೆಯೇ ಸರಿ!"

"ನೋಡಿ, ಕೆಲವು ಸಾರಿ ನೀವು ಊರಿನಿಂದ ಹೊರಗೆ ಹೋದರೆ ಹಿಂದಿ ರುಗಿ ಬರಲು ಬಹು ದಿನಗಳಾಗುತ್ತಲಿವೆ. ಹೇಳಿದ ಸಮಯಕ್ಕೆ ಹಿಂದಿರುಗಿ ಬರುವಂತಿಲ್ಲ; ಹೀಗಾಗುವದರಿಂದ, ನಮಗೆಲ್ಲ ದಿಗಿಲಾಗುತ್ತದೆ. ನಿಮ್ಮ ಜನನಿ ದೇವರಿಗೆ ಹರಕೆಗಳನ್ನೊಪ್ಪಿಸಲು ತೊಡಗುತ್ತಾರೆ. ಕಳೆದ ಸಾರಿ ನಿಮ್ಮ ಈ ಅಜ್ಞಾತ ಸಂಚಾರವನ್ನು ಮುಗಿಸಿಕೊಂಡು ಬರುವಾಗ ಕಾಲಿನಲ್ಲಿ ಒಂದು ಗಾಯವಿದ್ದಿತು; ಈಗ ಭುಜದ ಮೇಲಾಗಿದೆ. ಈ ವಿಪತ್ತುಗಳು ಬಂದೊದಗಿ ದುದು ಹೇಗೆಂಬುದು ನನಗೆ ಹೊಳೆಯುವದಿಲ್ಲ. ಯಾವುದೋ ಒಂದು ರಹಸ್ಯ ವನ್ನು ನನ್ನಿಂದ ಮುಚ್ಚಿಡಲು ನೀವು ಪ್ರಯತ್ನಿಸುತ್ತಿರುವಿರೆಂಬುದು ನಿಮ್ಮ ವರ್ತನೆಗಳಿಂದ ವ್ಯಕ್ತವಾಗುತ್ತದೆ. ನಿಮಗಾಗಿ ತಾಯಿಯವರು ಬಹಳ ಕೊರಗು ತ್ತಿದ್ದಾರೆ."

"ಹೇಮಾ, ವಿಪತ್ತುಗಳು ಮನುಷ್ಯನಿಗಲ್ಲದೆ ಇತರ ಪ್ರಾಣಿಗಳಿಗೆ ಬರ ಲಾರವಷ್ಟೆ? ನನ್ನ ಉದ್ದೇಶಗಳನ್ನು ನಿನಗುಸುರಿ ನಿನ್ನನ್ನು ಕಳವಳ ಪಡಿಸಲಾರೆ. ಒಂದು ಸದುದ್ದೇಶವನ್ನು ನೆರವೇರಿಸುವದಕ್ಕಾಗಿ ನಾನು ಪ್ರಯತ್ನ ಮಾಡುತ್ತ ಲಿರುವೆ. ಸರ್ವಶಕ್ತನು ಈ ಉದ್ಯಮಗಳಿಗೆ ವಿಜಯವನ್ನು ನೀಡಲಿ."

"ನಿಮ್ಮ ಸದುದ್ದೇಶವೇನೆಂಬುದನ್ನು ನಾನು ತಿಳಿಯಕೂಡದೇ? ನಿಮ್ಮ ದೇಹದ ಅರ್ಧಭಾಗದಂತಿರುವ ನಾನು ನಿಮ್ಮ ಉದ್ದೇಶಕ್ಕೆ ಅಡ್ಡಿ ಬರುವೆನೇ?"

"ಹೇಮಾ, ನನ್ನ ಅಂತರಂಗದ ರಹಸ್ಯವನ್ನು ತಿಳಿಯಲು ಪ್ರಯತ್ನಿಸ ಬೇಡ. ಅದರಿಂದ ಭೀತಿಯೂ ವ್ಯಥೆಯೂ ಉಂಟಾಗುವದಲ್ಲದೆ ಬೇರೆ ಯಾವ ಪ್ರಯೋಜನವೂ ನಿನಗುಂಟಾಗಲಾರದು. ಒಂದು ಮಹತ್ಕಾರ್ಯ ಸಾಧನೆ ಗಾಗಿ ನಾನು ಹೊರಟಿರುವೆನೆಂದು ತಿಳಿದುಕೋ. ಆ ಕಾರ್ಯಸಾಧನೆಯಾವು ದೆಂಬುದನ್ನು ನಿನಗುಸುರಿ ನಿನ್ನನ್ನು ಚಿಂತೆಯ ಕಡಲಿನಲ್ಲಿ ಮುಳುಗಿಸಲು ನಾನು ಬಯಸುವದಿಲ್ಲ. ಸತ್ಯ ಮತ್ತು ನ್ಯಾಯಗಳನ್ನು ನೆಲೆಗೊಳಿಸುವ ಪ್ರಯ ತ್ನವದಾಗಿದೆಯೆಂದು ಸದ್ಯಕ್ಕೆ ನೀನು ಅರಿತುಕೊಂಡರೆ ಸಾಕು."

"ನೀವು ಸತ್ಯನ್ಯಾಯಗಳಿಗೆ ವಿರುದ್ಧವಾದ ಹಾದಿಯನ್ನು ತುಳಿಯಲಾ ರಿರಿ ಎಂಬ ವಿಶ್ವಾಸವು ನನಗಿದೆ. ನೀವು ನನ್ನನ್ನು ಒಬ್ಬ ಅಂಜಿಕೆಯ ಹೆಣ್ಣೆಂದು

ತಿಳಿದುಕೊಂಡ ಹಾಗಿದೆ; ಆದರೆ ನಿಮ್ಮ ಕೊರಳಾಣೆ ನುಡಿವೆನು; ಅದೆಷ್ಟು ಭಯಾನಕವಾಗಿದ್ದರೂ, ಎಷ್ಟು ಕ್ಲೇಶ ಪರಿಪೂರ್ಣವಾಗಿದ್ದರೂ ನಿಮ್ಮ ಕಾರ್ಯ ಸಾಧನೆಗಳಲ್ಲಿ ನನ್ನ ಕೈಲಾದ ಸಹಾಯುವನ್ನು ಮಾಡಲು ನಾನು ಸಿದ್ಧಳಿರುತ್ತೇನೆ." ಪರಿತಾಪಪೂರ್ಣಸ್ವರದಲ್ಲಿ ಹೇಮಾ ತನ್ನ ಗಂಡನ ಕೊರಳ ಮೇಲೆ ತನ್ನ ಹಸ್ತಗಳನ್ನಿರಿಸಿ ನುಡಿದಳು.

ಅಮರನು ಮಾತಾಡಲಿಲ್ಲ; ಹೊಳೆಯುತ್ತಿರುವ ಸಂಜೆಯ ಬಿಸಿಲಿನಲ್ಲಿ ಕಂಗೊಳಿಸುತ್ತಿರುವ ಹೇಮಳ ಕುಂತಳವನ್ನು ತಿದ್ದುತ್ತಾ ನಿಂತನು. ಹಲವು ವಿಚಾರಗಳು ಅವನಲ್ಲಿ ಮೂಡಿದುವು. ತನ್ನ ಮಡದಿ ತನ್ನ ಮೇಲೆ ಇಟ್ಟಿರುವ ಪ್ರೀತಿ, ಅವಳ ನಂಬಿಕೆ ಇವುಗಳು ಆ ತರುಣನ ಮನವನ್ನು ಕರಗುವಂತೆ ಮಾಡಿದುವು. ವಿಚಾರಮಗ್ನನಾಗಿ ಅವನು ಮೌನವನ್ನೇ ಅವಲಂಬಿಸಿದನು.

ಮೃದುಸ್ವರದಲ್ಲಿ ಹೇಮ ನುಡಿವಳು. ಆ ನಾದದಲ್ಲಿ ಪಿಕದ ಕೊರಳಿಂಚರದ ಮಾಧುರ್ಯ ವಿದ್ದಿತು. "ಜೀವಿತೇಶ್ವರಾ!" ಎಂದು ಹೊರಟ ಆ ಮಾತಿನಲ್ಲಿ ಅವಳ ಹೃದಯದ ಭಾವಗಳೆಲ್ಲ ತೇಲುತ್ತಿದ್ದವು. ಅಮರನು ಅವಳ ಎರಡು ಪಾಣಿಗಳನ್ನೂ ಗ್ರಹಿಸಿ ಅವುಗಳನ್ನು ತನ್ನ ಎವೆಯಮೇಲಿಟ್ಟುಕೊಂಡನು. ಅನಂತರ ಅವನು ಪಿಸುಮಾತಿನಲ್ಲಿ ನುಡಿದನು:-"ಹೇಮಾ, ನನ್ನ ರಹಸ್ಯವನ್ನು ನಿನಗೆ ನುಡಿಯಲೇ ಬೇಕೇ?"

"ನಿಮ್ಮ ಕೆಲಸಗಳಲ್ಲಿ ಭಾಗ ವಹಿಸಬೇಕೆಂಬ ಆಶೆಯು ನನಗಿದೆ. ನಿಮ್ಮ ಹೊರೆಯಲ್ಲಿ ಸ್ವಲ್ಪವನ್ನಾದರೂ ಹೊತ್ತು ನಿಮ್ಮ ಮಸ್ತಕದ ಮೇಲಿನ ಭಾರವನ್ನು ಕಡಿಮೆಮಾಡಬೇಕೆಂಬ ಬಯಕೆಯಿದೆ. ನೀವು ಹೇಳಿಯೇ ತೀರಬೇಕೆಂಬ ನಿರ್ಬಂಧವಿಲ್ಲ. ಆ ಗುಟ್ಟನ್ನು ನಾನು ತಿಳಿಯುವದರಿಂದ ಯಾವ ದೋಷವೂ ಬರದು."

"ಇಲ್ಲ; ಹೇಮಾ, ಈ ಸುದಿನಗಳತನಕ ನಿನ್ನಿಂದ ಬಚ್ಚಿಟ್ಟಿದ್ದ ಆ ಸಂಗತಿಯನ್ನು ಅರುಹುತ್ತೇನೆ. ಹೌದು. ಅದನ್ನು ನನ್ನ ಮನದ ರಾಣಿಯಿಂದ ಮರೆಮಾಜಿದುದು ಒಂದು ಅಕ್ಷಮ್ಯ ಅಪರಾಧವೇ ಆಗಿದೆ; ಆದರೆ ನಾನು ನುಡಿಯುತ್ತಿರುವ ಸಂಗತಿಗಳನ್ನು ಕೇಳಲು ತುಸ ಧೈರ್ಯವು ಅಗತ್ಯ. ಆದುದರಿಂದ ಅಳುಕದೆ, ನಾನು ನುಡಿಯುತ್ತಿರುವದನ್ನು ಕೇಳು."

"ಹೂಂ, ನನ್ನ ಎವೆಯನ್ನು ಬಿಗಿ ಮಾಡಿರುವೆ; ನೀವು ನುಡಿಯುತ್ತಿರುವುದನ್ನು ಕೇಳುವ ಧೈರ್ಯವು ನನಗಿದೆ; ನಿರ್ಬಲಚಿತ್ತದ ಹೆಂಗಸು ನಾನಲ್ಲ."

"ನನ್ನ ಸುಖದುಃಖಗಳಲ್ಲಿ ಸಮಪಾಲನ್ನು ವಹಿಸುತ್ತಿರುವವಳಿಗೆ ಮನೋಧೈರ್ಯವಿದೆಯೆಂಬುದನ್ನು ಕೇಳಿ ಸಂತೋಷವಾಯಿತು. ನಿನ್ನ ಪ್ರೇಮಾದರಗಳಿಗೆ ಪಾತ್ರೀಭವಿಸಿದ ನಾನು ಒಬ್ಬ ರಾಜದ್ರೋಹಿ, ಖಿಲ್ಜಿರಾಜವಂಶವನ್ನು ಅಡಿಮೇಲು ಮಾಡಲು ಹೊರಟ ಒಬ್ಬ ಬಂಡುಗಾರನಿರುತ್ತೇನೆ. ನನ್ನ ತಲೆಯು ದೇಹದಿಂದ ಬೇರೆಯಾಗುವದು ಯಾವಾಗ ಎಂಬುದು ನಿಶ್ಚಯವಿಲ್ಲ."

"ಅಂದರೆ?" ಭಯ ಮತ್ತು ವಿಸ್ಮಯಗಳಿಂದ ಕೂಡಿದ ಒಂದು ನೋಟವನ್ನು ಬೀರಿದಳು ಹೇಮಾ.

"ಅಂದರೆ, ನಾನು ನನ್ನ ನಾಡಿನ ಮೋಚನೆಗಾಗಿ ದುಡಿಯ ನಿಶ್ಚಯಿಸಿರುವೆ. ಖಿಲ್ಜಿ ವಂಶದವರ ದಬ್ಬಾಳಿಕೆಯಿಂದ ನಮ್ಮ ಜನರ ಬಾಳು ಕುನ್ನಿ ಬದುಕಾಗಿ ಪರಿಣಮಿಸಿದೆ. ದುಡಿದು ಜೀವಿಸುತ್ತಿರುವ ರೈತರ ಗೋಳನ್ನು ಕೇಳುವವರಿಲ್ಲ. ಮಾನಿನಿಯರ ಶೀಲವು ಸುರಕ್ಷಿತವಾಗಿಲ್ಲ. ಪ್ರಜೆಗಳ ಸುಖ-ಸಂತೃಪ್ತಿಗಳು ಮಾನ-ಗೌರವಗಳು ನಶಿಸತೊಡಗಿವೆ. ಅಧಿಕಾರಿಗಳಲ್ಲಿ ಪ್ರಜೆಗಳು ಮಾನವರು; ಅವರನ್ನು ಪಾಲಿಸುವದು ತಮ್ಮ ಕರ್ತವ್ಯವೆಂಬ ವಿಚಾರವಿಲ್ಲವೆಂದು ಮಾತ್ರವಲ್ಲ; ಅವರು ತಮ್ಮ ಸುಖಭೋಗಗಳನ್ನು ಸಂತೃಪ್ತಿಗೊಳಿಸುವದಕ್ಕಾಗಿ ಪ್ರಜೆಗಳನ್ನು ಈಶ್ವರನು ಸೃಷ್ಟಿಸಿರುವನೆಂದು ಭಾವಿಸಹತ್ತಿದ್ದಾರೆ. ದಾರಿದ್ರ್ಯ, ಕ್ಷಾಮ. ಕೂಳಿಲ್ಲದೆ ಹೆಗ್ಗಣಗಳಂತೆ ಸಾಯುತೊಡಗಿದ್ದಾರೆ ನಮ್ಮನಾಡಿನ ಜನರು! ಅವರ ಶೋಕಮಯ ಕ್ರಂದನಗಳು ನಭವನ್ನು ಸೀಳುತ್ತಲಿವೆ! ನಮ್ಮ ನಾಡಿನ ಕಾಮಿನಿಯರ ಶೀಲವನ್ನು ಭಂಜಿಸಹತ್ತಿದ್ದಾರೆ ಅಧಿಕಾರಿಗಳು; ಈ ದಾರುಣ ಸಂಭವಗಳನ್ನು ನೋಡಿ ಕೈಲಾಗದವರಂತೆ ಕುಳಿತುಕೊಳ್ಳುವದು ಗಂಡಸಾದವನಿಗೆ ಸಾಧ್ಯವಿಲ್ಲ. ಆದುದರಿಂದ ಅಭಿಮಾನಶಾಲಿಗಳಾದ ಇತರ ತರುಣರಂತೆ ನಾನೂ ಈ ಅಕ್ರಮದ ಆಳ್ವಿಕೆಯನ್ನು ನಾಶ ಮಾಡಲು, ಈ ಅರಾಜಕತೆಯನ್ನು ಹೋಗಲಾಡಿಸಲು ದೃಢ ಪ್ರತಿಜ್ಞೆ ಮಾಡಿರುತ್ತೇನೆ. ಆ ಬಗ್ಗೆ ಹೆಣಗುತ್ತಿರುವೆ; ಹೇಮಾ, ಭಯಪಡಬೇಡ. ಒಂದುವೇಳೆ ಈ ಭಗೀರಥ ಪ್ರಯತ್ನದಲ್ಲಿ ದೇಹವನ್ನು ವಿಸರ್ಜಿಸಬೇಕಾಗಿ ಬರಬಹುದು; ಆದರೆ ಅದಕ್ಕೆ ನಾನು ಭಯಪಡುವದಿಲ್ಲ. ನನ್ನ ಊರವರ ಕ್ಷೇಮಕ್ಕಾಗಿ ಅಷ್ಟು ದುಡಿಯಲು ಸಾಧ್ಯವಾಯಿತಲ್ಲ, ಎಂದು ಹೆಮ್ಮೆ ಪಡುತ್ತೇನೆ."

ದೃಢಸ್ವರದಲ್ಲಿ ಮೇಲಿನ ಮಾತುಗಳನ್ನು ಅಮರನು ಆಡಿದ್ದನು. ಯಾವ ಉದ್ದೇಶ ಸಾಧನೆಗಾಗಿ ತಾನು ಹೆಣಗುತ್ತಿರುವೆನೆಂಬುದನ್ನು ಅವನು ಮೇಲಿನ

ಕೆಲವು ಮಾತುಗಳಿಂದ ಹೇಮಳಿಗೆ ತಿಳಿಸಿದನು. ಅವನ ಯೋಚನೆಯುಗ್ಮ ಗಳಿಂದ ಸ್ಫುರಿಸುತ್ತಿರುವ ಕಿಡಿಗಳು, ಅವನಾಡಿದ ಮಾತುಗಳು ಆತ್ಮಾರ್ಥವಾದವು ಗಳೆಂಬುದನ್ನು ಸೂಚಿಸುತ್ತಲಿದ್ದುವು. ಅವನ ನುಡಿಗಳನ್ನು ಆಶ್ರಾವಿಸುತ್ತಲೆ ಒಂದು ಶಿಲಾಪ್ರತಿಮೆಯಂತೆ ಸ್ವಲ್ಪ ಹೊತ್ತು ನಿಂತಳು ಹೇಮಾ. ಅವಳ ಮನೋಪಟಲದಲ್ಲಿ ಹಲವು ಭಾವನೆಗಳು ಮೂಡಿದುವು. ಭಯದ ರಂಗು ಅವಳಲ್ಲಿ ಹೊಳೆಯದಿರಲಿಲ್ಲ; ಕೊನೆಗೆ ಧೈರ್ಯ ಮತ್ತು ಅಭಿಮಾನ ಇವು ಗಳು ಅವಳಲ್ಲಿ ರೂಪಗೊಂಡವು. ಅವಳು ಶಾಂತಸ್ವರದಲ್ಲಿ ನುಡಿದಳು: "ಈ ಸಂಗತಿಗಳನ್ನು ಕೇಳಿ ನಾನು ಕ್ಲೇಶಕ್ಕೀಡಾಗುವೆನೆಂದು ಭಾವಿಸಿದಿರಾ? ಇಲ್ಲ; ಧೈರ್ಯವು ನನ್ನಲ್ಲಿದೆ. ಒಂದು ಪಾವನ ಉದ್ದೇಶಕ್ಕಾಗಿ ನೀವು ಹೆಣಗುತ್ತಿರುವಿ ರೆಂದು ತಿಳಿದು ಸಂತೋಷ ಪಡುವೆನಲ್ಲದೆ ಬೇದಿಸಲಾರೆ; ನಾಡಿನ ಅಭ್ಯುನ್ನತಿ ಗಾಗಿ ದುಡಿವ ಉದ್ಯಮಗಳಿಗೆ ವಿಘ್ನವನ್ನು ತಂದೊಡ್ಡಲಾರೆ. ನೀವು ಮಾಡು ತ್ತಿರುವ ಕೆಲಸಗಳು ಪ್ರಶಂಸನೀಯ; ನಮ್ಮ ನಾಡಿನ ಪ್ರಜೆಗಳ ದುಃಖ ಮೋ ಚನೆಗಾಗಿ, ಮಾನಿನಿಯರ ಶೀಲ ಸಂರಕ್ಷಣೆಗಾಗಿ ಹೋರಟಿರುವ ನಿಮ್ಮ ಮಡ ದಿಯು ನಾನೆಂದು ಅಭಿಮಾನಿಸುವೆ"

"ಹೇಮಾ, ನನ್ನ ತಿಳುವಳಿಕೆಯು ತಪ್ಪಾಯಿತು ನೋಡು. ನನ್ನ ಉದ್ಯಮ ಗಳನ್ನು ನೀನು ಒಪ್ಪಲಾರೆಯೆಂದು ಭಾವಿಸಿ ಈ ಸುದಿನಗಳ ತನಕ ನಿನಗೆ ಈ ಸಂಗತಿಯನ್ನು ಉಸುರಿರಲಿಲ್ಲ. ನನ್ನ ಮಡದಿಯ ಹೃದಯದಲ್ಲಿ ಸ್ವಾಧೀನ ಜೀವನದ ಬೆಳಕು ಪ್ರಜ್ವಲಿಸುತ್ತಿದೆಯೆಂಬುದನ್ನು ಅರಿತಿರಲಿಲ್ಲ. ನನ್ನ ಅಜ್ಞತೆ ಯನ್ನು ಕ್ಷಮಿಸು."

"ನಾನೇನು ಕ್ಷಮಿಸಲಿ? ಅಥವಾ ಅದಕ್ಕೆ ನಾನು ಶಕ್ತಳೇ? ಇರಲಿ. ಅಧಿ ಕಾರಿಗಳ ಸಂಗಡ ಜರುಗಿದ ಕದನದಿಂದಾಗಿರಬಹುದು ನಿಮ್ಮ ಭುಜದ ಮೇಲೆ ಈ ಗಾಯವುಂಟಾದುದು."

ತನ್ನ ಗಾಯದ ಕಡೆಗೆ ಒಮ್ಮೆ ದೃಷ್ಟಿಯನ್ನು ತಿರುಗಿಸಿ ಅನಂತರ ಅಮರಸಿಂಹನು ಹೇಳಿದನು: "ಅಹುದು ಹೇಮಾ. ಕೆಲವು ದಿನಗಳ ಹಿಂದೆ ಓರ್ವ ವನಿತೆಯ ಶೀಲವನ್ನು ಸಂರಕ್ಷಿಸುವ ಕೆಲಸದಲ್ಲಿ ಈ ಗಾಯವಾಯಿತು."

"ಯಾರಾಕೆ?"

"ಚಂಬಲ್ ನದಿಯ ತೀರದಲ್ಲಿರುವ ಒಬ್ಬ ಹಳ್ಳಿಯ ಹುಡುಗಿ; ಒಬ್ಬ ಬ್ರಾಹ್ಮಣನ ಮಗಳಂತೆ. ಅವಳ ಶೀಲವನ್ನಪಹರಿಸುವದರಲ್ಲಿ ಒಬ್ಬ ಪಠಾ

ಣನು ಉದ್ಯುಕ್ತನಾಗಿದ್ದ."

"ಆ ಬಡ ಹುಡುಗಿಯನ್ನು ರಕ್ಷಿಸಿದಿರಾ?"

"ದೇವರ ದಯದಿಂದ ನನ್ನ ಪ್ರಯತ್ನವು ಸಫಲವಾಯಿತು; ನನಗೆ ಸ್ವಲ್ಪ ಗಾಯವಾದರೂ ಅವಳನ್ನು ಬಂಧಿಸಿದ್ದ ಪಠಾಣ ಸೈನಿಕನನ್ನು ಯಮಸೂರಿಗೆ ಅಟ್ಟಲು ಶಕ್ತನಾದೆ. ನಂತರ ಆ ಬಡ ಹುಡುಗಿಯನ್ನು ಅವಳ ತಂದೆಗೆ ಒಪ್ಪಿಸಿದೆ."

"ನಿಮ್ಮ ಪ್ರಯತ್ನವು ಪ್ರಶಂಸನೀಯ!" ಅಭಿಮಾನ ಪೂರ್ಣ ಸ್ವರದಲ್ಲಿ ಹೇಮಾ ನುಡಿದಳು.

"ಸಂತೋಷ. ನಿನ್ನ ಮಾತುಗಳು ನನ್ನ ಎದೆಯನ್ನು ಅರಳುವಂತೆ ಮಾಡುತ್ತಲಿವೆ; ಆದರೆ ಹೇಮಾ, ಎಲ್ಲಿಯತನಕ ಈ ಧೈರ್ಯವನ್ನು ನೀನು ಅವಲಂಬಿಸುವೆ? ಮೃತ್ಯುವಿನ ಗವಿಗೆ ನನ್ನನ್ನು ಕಳುಹುವಷ್ಟು ಧೈರ್ಯ ನಿನ ಗಿದೆಯೇ? ಜೀವನವನ್ನು ದುಃಖದಲ್ಲಿ ಕಳೆಯುವಷ್ಟು ಎದೆಗಾರಿಕೆ ನಿನಗಿದೆಯೆ?"

ಈ ಮಾತುಗಳನ್ನು ಹೇಮಳ ಎದೆಯಲ್ಲಿ ಎಷ್ಟು ಧೈರ್ಯವಿದೆಯೆಂಬು ದನ್ನು ಅಳತೆ ಮಾಡಲು ಅಮರಸಿಂಹನು ಪ್ರಯೋಗಿಸಿದನು. ಹೇಮಾ ತುಸ ಹೊತ್ತು ಆಲೋಚಿಸಿದ ಮೇಲೆ ನುಡಿದಳು:-"ಯಾವ ಭಯಂಕರ ಪ್ರಸಂಗ ಗಳು ಬಂದೊದಗುವವಾದರೂ ಸರಿ; ನಾಡಿನ ಅಭ್ಯುದಯಕ್ಕಾಗಿ ನೀವು ಜರು ಗಿಸುವ ಉದ್ಯಮಗಳಿಗೆ ನನ್ನ ಪೂರ್ಣ ಬೆಂಬಲವಿದೆ."

"ಧನ್ಯ! ಹೇಮಾ, ನೀನು ವೀರ ಮಹಿಳೆ!" ಈ ಉದ್ಗಾರಗಳು ಅಮರ ಸಿಂಹನ ವದನದಿಂದ ಹೊರಬಿದ್ದವು. ಈ ನುಡಿಗಳೊಡನೆಯೇ ಹೇಮಳ ಕಪೋಲಗಳ ಮೇಲೆ ಅವನು ಚುಂಬನಗಳಿಂದ ಸನ್ಮಾನಿಸಿದ.

---

## ೩ ಸುಭೇದಾರ ಯಾಕೂಬಖಾನ

ತನ್ನ ಮನೆಯ ಹಜಾರದಲ್ಲಿ ಒಂದು ಗಾದಿಯ ಮೇಲೆ ಕುಳಿತು ಹುಕ್ಕ ಸೇದುವದರಲ್ಲಿ ಉದ್ಯುಕ್ತನಾಗಿದ್ದನು ಸುಭೇದಾರ ಯಾಕೂಬಖಾನನು. ಅವನ ಕಣ್ಣುಗಳು ಕೆಂಪಾಗಿದ್ದುವು. ಸ್ಥೂಲವಾದ ಅವನ ಶರೀರವನ್ನು ನೋಡಿದೊಡನೆ ಪ್ರೇಕ್ಷಕನಲ್ಲಿ ಸ್ವಲ್ಪ ಭಯವು ಹುಟ್ಟದಿರಲಾರದು. ಅವನ ವದನಮಂಡಲದಲ್ಲಿ ಕ್ರೂರತೆಯು ಮಿನುಗುತ್ತಿದ್ದಿತು. ಅವನ ಕಂಠಸ್ವರ ವಾದರೂ ಬಹು ಕರ್ಕಶವಾಗಿದ್ದು, ಎದೆಯ ಕಾಠಿಣ್ಯವನ್ನು ಸೂಚಿಸುತ್ತಿದ್ದಿತು.

ಪಾಪಸ್ಪರ್ಶನದಿಂದ ಮುಖವು ತೇಜೋಹೀನವಾಗಿದ್ದಿತು. ಆ ಮೋರೆಯನ್ನು ಒಮ್ಮೆ ನೋಡಿದವನಿಗೆ ನೈತಿಕ ದೃಷ್ಟಿಯಲ್ಲಿ ಅಧಃಪಾತವನ್ನು ಹೊಂದಿದವನೀತನೆಂಬುದು ಪ್ರತ್ಯಕ್ಷವಾಗದಿರದು. ರಕ್ತವರ್ಣವನ್ನು ತಾಳಿದ ಕಣ್ಣುಗಳು ಸುರಾಪಾನದಿಂದ ಸುಭೇದಾರನು ಉನ್ಮತ್ತನಾಗಿರುವನೆಂಬುದನ್ನು ಸೂಚಿಸುತ್ತಿದ್ದವು. ಮೇಲೆ ಹೇಳಿದಂತೆ ಅವನು ಹುಕ್ಕವನ್ನು ಸೇದುತ್ತಾ ಗಾದಿಯ ಮೇಲೆ ಒರಗಿದ್ದ.

ಒಬ್ಬ ಸೇವಕನು ಬಂದು ಯಾಕೂಬಖಾನನಿಗೆ ವಂದಿಸಿದ. ಅನಂತರ ಸೇವಕನು ಹೀಗೆ ನುಡಿದನು:-"ಉಸ್ಮಾನಖಾನರು ಖಾವಿಂದರನ್ನು ನೋಡ ಬಂದಿರುವರು."

"ಒಳಗೆ ಬರಹೇಳು." ಎಂಬ ಆಜ್ಞೆಯು ಸುಭೇದಾರನಿಂದ ಹೊರಟಿತು. ಸೇವಕನು ಹೊರಗೆ ತೆರಳಿದ.

ಎರಡು ನಿಮಿಷಗಳು ಕಳೆಯಲು ೨೮-೨೯ ವರುಷ ಪ್ರಾಯದ ತರುಣನೊಬ್ಬನು ಹಜಾರಮೊಳಗೆ ಪ್ರವೇಶಿಸಿದ. ಅವನ ಉಡಿಗೆ ತೊಡಿಗೆಗಳು ಅವನೊಬ್ಬನು ಪಠಾಣನೆಂಬುದನ್ನು ಸೂಚಿಸುತ್ತಿದ್ದುವು. ಮೋರೆಯು ಸುಂದರವಾದುದು; ಕಣ್ಣುಗಳಲ್ಲಿ ಸ್ಫುರಿಸುತ್ತಿರುವ ಕಾಂತಿಯು ಅವನೊಬ್ಬ ಧೀರಪ್ರಕೃತಿಯುವನೆಂಬುದನ್ನು ಸೂಚಿಸುತ್ತಿದ್ದಿತು. ಅವನ ಸ್ವಭಾವವು ಸೌಮ್ಯವಾದುದು; ಆದರೆ ಅದರಲ್ಲಿ ಗಂಭೀರತೆಯು ತುಂಬಿದೆ. ನುಡಿ ಕರ್ಕಶವಲ್ಲ; ಮೃದುವಾದ ಅವನ ಸ್ವರದಲ್ಲಿ ಮನೋಹಾರ್ಯವು ಹೊರಸೂಸುತ್ತಿದ್ದಿತು. ಅವನ ಸೊಂಟದಲ್ಲಿ ಒಂದು ಕತ್ತಿ ನೇತಾಡುತ್ತಿದ್ದಿತು. ಅವನು ಹಜಾರದೊಳಗೆ ಪ್ರವೇಶಿಸಿ ಯಾಕೂಬಖಾನನಿಗೆ ವಂದಿಸಿದ. ಆ ವಂದನೆಗಳನ್ನು ತಾನು ಸ್ವೀಕರಿಸಿದೆನೆಂಬುದನ್ನು ಸೂಚಿಸಲು ಯಾಕೂಬಖಾನನು ತನ್ನ ತಲೆಯನ್ನೊಮ್ಮೆ ಅಲ್ಲಾಡಿಸಿದ.

"ಬನ್ನಿ, ಉಸ್ಮಾನಖಾನ, ಕುಳಿತುಕೊಳ್ಳಿ." ಎಂದನು ಯಾಕೂಬ.

ಉಸ್ಮಾನಖಾನ, ಅದಾಗಿತ್ತು ಹಜಾರದೊಳಗೆ ಪ್ರವೇಶಿಸಿದ ಪಠಾಣ ತರುಣನ ಹೆಸರು; ಯಾಕೂಬನ ಹತ್ತಿರದಲ್ಲಿರುವ ಗಾದಿಯ ಮೇಲೆ ಆಸೀನನಾದ. ಉಸ್ಮಾನನು ಸಂಭಾಷಣೆಯಲ್ಲಿ ತೊಡಗದಿರುವದನ್ನು ಕಂಡು ಯಾಕೂಬನೇ ಮಾತಿಗೆ ಮೊದಲು ಮಾಡಿದ. 'ಇತರ ಎಲ್ಲಾ ತಾಲೂಕುಗಳಿಂದ [illegible] ವಸೂಲಿಯಾಗಿ ಖಜಾನೆಗೆ ತಲುಪಿವೆ; ಆದರೆ ನಿಮ್ಮ ತಾಲೂಕಿನಿಂದ ಕರವು

ವಸೂಲಿಯಾಗಿ ಇನ್ನೂ ಖಜಾನೆಗೆ ತಲುಪಿಲ್ಲ.

"ಬರಗಾಲದಿಂದ ಹೊಟ್ಟೆಗೆ ಕೂಳಿಲ್ಲದೆ ಜನರು ಸಾಯುತ್ತಿದ್ದಾರೆ; ಹೊಟ್ಟೆಗೆ ಅನ್ನವಿಲ್ಲದೆ ನರಳುತ್ತಿರುವ ಪ್ರಜೆಗಳು ಹೇಗೆ ಕರವನ್ನು ಸಲ್ಲಿಸುವರು? ನನ್ನ ತಾಲೂಕಿಗೆ ಬಂದೊದಗಿದ ದಾರುಣ ವಿಪತ್ತನ್ನು ನಿಮಗೆ ಅರುಹುವದ ಕ್ಕಾಗಿಯೇ ಇಲ್ಲಿಗೆ ಬಂದಿರುವೆ" ಹೀಗೆ ಹೇಳಿದ ಉಸ್ಮಾನ.

"ಹೇಗಾದರೂ ಕರ ವಸೂಲಿಯಾಗಲೇಬೇಕು. ದ್ರವ್ಯವು ಈಗ ಬಾದಶಹ ರಿಗೆ ಅತ್ಯಾವಶ್ಯಕವಾಗಿದೆ. ನಾಡಿನಲ್ಲಿ ಕ್ಷಾಮುವೆಂದು ನೀವು ಮೌನವನ್ನು ಅವ ಲಂಬಿಸಕೂಡದು. ಬಾದಶಹರು ಮೇವಾಡದ ಮೇಲೆ ದಾಳಿ ನಡೆಸುತ್ತಲಿರು ವದರಿಂದ ದ್ರವ್ಯದ ಆವಶ್ಯಕತೆಯು ಬಹಳವಾಗಿದೆ. ಆದುದರಿಂದ ಕಾಫರ ಪ್ರಜೆಗಳ ಉತ್ಪನ್ನಗಳಲ್ಲಿ ಅರ್ಧದಷ್ಟು ನೀವು ವಸೂಲಿ ಮಾಡಬೇಕು. ಕಾಫ ರರ ಮೇಲೆ ಎಳ್ಳಷ್ಟೂ ದಯೆ ತೋರಿಸಲಾಗದು." ಸುಭೇದಾರನ ಈ ಸಲಹೆ ಗಳನ್ನು ಕೇಳಿ ಉಸ್ಮಾನನು ಮಾತಾಡಲಿಲ್ಲ. ಸ್ವಲ್ಪ ಹೊತ್ತು ಆಲೋಚನಾ ಮಗ್ನನಾಗಿದ್ದ. ಸುಭೇದಾರನ ಈ ಮಾತುಗಳು ಉಸ್ಮಾನನ ಎದೆಯಲ್ಲಿ ಸಿರಾಶೆಯನ್ನು ಹುಟ್ಟಿಸಿದುವು. ಆದುದರಿಂದ ಸ್ವಲ್ಪ ಸಮಯದತನಕ ಮೌನ ದಿಂದಿದ್ದು ಆ ಮೇಲೆ ಸುಭೇದಾರನ ಉಗ್ರವದನದ ಕಡೆಗೆ ತನ್ನ ದೃಷ್ಟಿಯನ್ನು ಹೊರಳಿಸುತ್ತಾ ಉಸ್ಮಾನನು ಹೇಳಿದ:-"ಸುಬೇದಾರ ಸಾಹೇಬ, ನಾನು ನಿಮ್ಮ ಸಂಗಡ ಒಂದು ಸಂಗತಿಯನ್ನು ಪ್ರಶ್ನಿಸಬೇಕೆಂದಿದ್ದೇನೆ."

"ಅಗತ್ಯವಾಗಿ ಪ್ರಶ್ನಿಸಿರಿ ಸರದಾರರೇ!" ಉಸ್ಮಾನನ ಕಡೆಗೆ ಒಂದು ಕೌತುಕದ ನೋಟವನ್ನು ಚೆಲ್ಲಿ ಸುಭೇದಾರನು ಹೇಳಿದ. "ಯಾವ ಸಂಗತಿಯ ಬಗ್ಗೆ ನನ್ನ ಸಲಹೆಯನ್ನು ಪಡೆಯಲು ನೀವು ಬಂದಿರುವಿರಿ?"

"ಅದನ್ನೇ ಹೇಳುವೆನು. ನನ್ನ ತಾಲೂಕಿಗೆ ಬಂದೊದಗಿದ ದಾರುಣ ಸ್ಥಿತಿಯನ್ನು ನಿಮ್ಮ ದೃಷ್ಟಿಗೆ ತರಬೇಕೆಂದಿದ್ದೇನೆ. ಹೋದ ವರುಷ ಸಮಯಕ್ಕೆ ಸರಿಯಾಗಿ ಮಳೆ ಬರಲಿಲ್ಲ. ಬಿತ್ತಿದ ಪೈರುಗಳು ಒಣಗಿ ಹೋದುವು. ದನ-ಕರು ಗಳಿಗೆ ಮೇಯಲು ಹುಲ್ಲು ಇಲ್ಲದಾಗಿದೆ. ಪೈರುಗಳು ಒಣಗಿ ಹೋದುದರಿಂದ ಜನರು ಹೊಟ್ಟೆಗೆ ಹಿಟ್ಟಿಲ್ಲದೆ ಸಾಯತೊಡಗಿದ್ದಾರೆ. ಈ ದುರಂತದಿಂದ ಪ್ರಜಾ ಕೋಟಿಯನ್ನು ಸಂರಕ್ಷಿಸುವದು ಬಾದಶಹ ಸರಕಾರದ ಕರ್ತವ್ಯವಲ್ಲವೆ? ಪ್ರಜೆ ಗಳ ಗೋಳನ್ನು ಅರಸರಲ್ಲದೆ ಇನ್ನಾರು ಕೇಳುವರು? ಆದುದರಿಂದ ಸುಭೇದಾರ ಸಾಹೇಬ, ನನ್ನ ತಾಲೂಕಿನಲ್ಲಿ ಪ್ರಜೆಗಳ ಸಂಕಟ ಪರಿಹಾರದ ಕೆಲಸಗಳನ್ನು

ಪ್ರಾರಂಭಿಸಬೇಕೆಂದು ಬಿನ್ನವಿಸುವುದಕ್ಕಾಗಿ ನಾನು ಈಗ ಬಂದುದಾಗಿದೆ.”

“ಉಸ್ಮಾನಖಾನ, ಇದೇನು ಹೀಗೆ ಹೇಳುವಿರಿ? ಪ್ರಜೆಗಳ ಕುಟುಂಬ ದುಃಖಗಳನ್ನು ನಿವಾರಿಸಲು ನಾವೇನು ಅವರ ಭೃತ್ಯವರ್ಗಕ್ಕೆ ಸೇರಿದವರೇನು? ಬಾದಶಹರ ದೇಶದಲ್ಲಿ ಅವರು ವಾಸಮಾಡುತ್ತಿರುವದರಿಂದ ಅವರೆಲ್ಲರೂ ಬಾದಶಹರ ಆಳುಗಳಿರುತ್ತಾರೆ. ಆದುದರಿಂದ ಅವರೆಲ್ಲರೂ ಬಾದಶಹರ ಆಜ್ಞೆಯಂತೆ ವರ್ತಿಸಬೇಕು. ಬಾದಶಹರ ಪ್ರತಿನಿಧಿಯಾದ ನನ್ನ ನುಡಿಯನ್ನು ಮೀರಿ ನಡೆಯಕೂಡದು. ಕಾಲಕ್ಕೆ ಸರಿಯಾಗಿ ಮಳೆ ಬಾರದುದರಿಂದ ಪೈರು ಹಾಳಾದರೆ ನಾವೇನು ಮಾಡುವದು? ಪ್ರಜೆಗಳನ್ನು ಸಂರಕ್ಷಿಸಬೇಕೆಂಬ ಹೊಣೆಗಾರಿಕೆ ನಮಗಿಲ್ಲ.”

“ಸುಭೇದಾರ ಸಾಹೇಬ, ನೀವು ಹೀಗೆ ನುಡಿಯುವದು ಬಹು ಸಂಕಟಕರವು; ಪ್ರಜೆಗಳನ್ನು ಸಂರಕ್ಷಿಸುವ ಹೊಣೆಯು ಆಳುವವರದಾಗಿದೆ. ಪ್ರಜೆಗಳ ಕ್ಷೇಮಾಭಿವೃದ್ಧಿಗಳಿಗಾಗಿ ಯತ್ನಿಸುವದು ನಮ್ಮ ಕರ್ತವ್ಯವಾಗಿದೆಯೇ ಹೊರತು, ನಮಗಾಗಿಯಲ್ಲ ಜನರು ಬಾಳುತ್ತಿರುವದು. ಒಂದು ಕುಟುಂಬವನ್ನು ವಿಪತ್ತುಗಳಿಂದ ರಕ್ಷಿಸುವದು ಆ ಕುಟುಂಬದ ಯಜಮಾನನ ಕರ್ತವ್ಯವಾಗಿರುವಂತೆ ನಾಡ ಜನರ ಸಂಕಟಗಳನ್ನು ದೂರ ಮಾಡುವದು ಅರಸರ ಕರ್ತವ್ಯವು. ಅದಕ್ಕಾಗಿಯೇ ಕರುಣಾಳು ಈ ಅಧಿಕಾರಿಗಳನ್ನು ಅರಸುತನವನ್ನು ಕೊಟ್ಟಿರುತ್ತಾನೆ. ನಾನು ನಿಮ್ಮಲ್ಲಿ ಬಿನ್ನೈಸುವದು ಇದಾಗಿದೆ. ರೋಗರುಜಿನೆಗಳಿಂದ ನರಳಿ, ಇಲಿಗಳಂತೆ ಸಾಯುತ್ತಿರುವ ಪ್ರಜಾಸಂಚಯವನ್ನು ರಕ್ಷಿಸಲು ನೀವು ತಕ್ಕ ಏರ್ಪಾಡುಗಳನ್ನು ಮಾಡಬೇಕಾಗಿದೆ”

ಉಸ್ಮಾನನ ಮಾತುಗಳನ್ನು ಕೇಳುತ್ತಲೆ ಸುಭೇದಾರನ ಕೆಂಪಗಿದ್ದ ಕಣ್ಣುಗಳು ಇನ್ನಷ್ಟು ರಕ್ತವರ್ಣವನ್ನು ತಾಳಿದುವು. ಉಸ್ಮಾನನ ನುಡಿಗಳು ಸ್ವೀಕಾರ್ಹವಾದವುಗಳಲ್ಲವೆಂಬುದನ್ನು ಯಾಕೂಬನ ಆಗಲಿನ ಮುಖಮುದ್ರೆಯು ಸೂಚಿಸುತ್ತಿದ್ದಿತು. ಅವನ ಬಾಯಿಂದ ದರ್ಪೋಕ್ತಿಯು ಹೊರಟಿತು: “ಉಸ್ಮಾನಖಾನ, ನಿಮ್ಮ ದರ್ಪೋಕ್ತಿಯು ನನಗೆ ಬೇಕಾಗಿಲ್ಲ. ನಿಮ್ಮಂಥ ಅಧಿಕಾರಿಗಳು ಕರವಸೂಲಿಯ ಕೆಲಸದಲ್ಲಿ ಆಲಸತೆಯನ್ನು ಪ್ರದರ್ಶಿಸಿ ಪ್ರಜೆಗಳ ಪಕ್ಷವನ್ನು ಹಿಡಿಯುವದು ಒಂದು ದೊಡ್ಡ ಅಪರಾಧವಾಗಿದೆ. ಪ್ರಜೆಗಳ ಸುಖದುಃಖಗಳ ಗೊಡವೆ ನಿಮಗೇಕೆ? ಕರವಸೂಲಿ ನಡೆಸಿರಿ. ಆ ಕೆಲಸದಲ್ಲಿ ನೀವು ಎಷ್ಟು ಕ್ರೂರವಾಗಿ ವರ್ತಿಸಿದರೂ ನಾವು ಪ್ರಶ್ನಿಸುವಂತಿಲ್ಲ. ಸಾಲದುದಕ್ಕೆ

ನಿಮ್ಮ ತಾಲೂಕಿನ ಪ್ರಜೆಗಳಲ್ಲಿ ಬಹುಸಂಖ್ಯಾಕರು ಕಾಫರರಿರುತ್ತಾರೆ. ಆ ಜನ ರಿಗೆ ದಯತೋರಿಸಬೇಕಾದ ಆವಶ್ಯಕತೆಯೇನು? ಅವರನ್ನು ಹಿಂಸಿಸಿ ಕರ ವಸೂಲಿ ಮಾಡಲು ನಿಮಗೆ ಅಂಜಿಕೆಯೇ? ಒಂದು ವೇಳೆ ಪ್ರಜೆಗಳು ನಮ್ಮ ಧರ್ಮದವರಾಗಿದ್ದರೆ ದಯತೋರಿಸುವದು ಅಗತ್ಯವಿದೆ; ಆದರೆ ಕಾಫರರವರು! ಇವರ ಮೇಲೇಕೆ ಈ ಕನಿಕರ? ಈ ಷಂಡರಿಗೆ ದಯತೋರಿಸುವದು ಪಾಪ ವೆಂದು ನಮ್ಮ ಶಾಸ್ತ್ರಗಳು ನುಡಿಯುತ್ತಲಿವೆ." ಇಸ್ಲಾಂ ಧರ್ಮಶಾಸ್ತ್ರವನ್ನು ಪೂರ್ಣವಾಗಿ ಮನನ ಮಾಡಿದವನಂತೆ ನಟಿಸುತ್ತಾ ಯಾಕೂಬಖಾನನು ಉಸುರಿದನು.

ಸುಭೇದಾರನ ಈ ಮಾತುಗಳನ್ನು ಆಶ್ರಾವಿಸಲು ಉಸ್ಮಾನಖಾನನಿಗೆ ಬಹು ವ್ಯಸನವಾಯಿತು. ಯಾಕೂಬನ ಸಂಕುಚಿತ ಚಿತ್ತವನ್ನು ಕಂಡು ಮನ ಸ್ಸಿನಲ್ಲಿಯೇ ಸಂತಾಪಪಟ್ಟುಕೊಂಡನು ಅವನು. ಯಾಕೂಬನ ದಯಾಶೂನ್ಯ ನುಡಿಗಳು ಉಸ್ಮಾನನ ಎದೆಗೆ ನೋವನ್ನು ನೀಡಿದುವು. ಸ್ವಲ್ಪ ಪೌರುಷವಾದ ರೀತಿಯಲ್ಲಿ ಸುಭೇದಾರನಿಗೆ ನಾಲ್ಕು ಮಾತುಗಳನ್ನು ಹೇಳಬೇಕೆಂದು ಉಸ್ಮಾ ನನು ಆಲೋಚಿಸಿದ. ಸುಭೇದಾರನ ಬಗ್ಗೆ ಉಸ್ಮಾನನಲ್ಲಿ ತಿರಸ್ಕಾರವು ಉತ್ಪನ್ನವಾಯಿತು. ಆದರೂ ಉಸ್ಮಾನನು ತಾಳ್ಮೆಯ ಹಿಡಿತದಿಂದ ತಪ್ಪಿಸಿ ಕೊಳ್ಳುತ್ತಿರುವ ತನ್ನ ಚಿತ್ತವನ್ನು ಪುನಃ ಸ್ವಾಧೀನಪಡಿಸಿಕೊಂಡು ಹೇಳಿ ದನು: "ಸುಭೇದಾರ ಸಾಹೇಬ, ನನ್ನ ತಾಲೂಕಿನ ಪ್ರಜೆಗಳಲ್ಲಿ ಬಹು ಮಂದಿ ಕಾಫರರೆಂಬುದು ನಿಜ; ಆದರೆ ಅವರು ನಮ್ಮಂತೆಯೇ ನರಜೀವಿಗಳಲ್ಲವೇ? ಹೊಟ್ಟೆಗೆ ಹಿಟ್ಟಿಲ್ಲದೆ ಮಡಿಯುತ್ತಿರುವ ಅವರ ಮೇಲೆ ದಯಾಬುದ್ಧಿಯನ್ನು ತೋರಿಸುವದು ಹೇಗೆ ಧರ್ಮ ವಿರುದ್ಧವೆನಿಸುವದೆಂಬುದು ನನಗೆ ತಿಳಿಯುವ ದಿಲ್ಲ. ಇಸ್ಲಾಂ ಧರ್ಮಾವಲಂಬಿಗಳಂತೆ ಕಾಫರರೂ ಸಹಾ ಬಾದಶಹರ ಪಾಲನೆಗೆ ಒಳಗಾದವರಲ್ಲವೇ? ಅವರು ನಮ್ಮ ಧರ್ಮದವರಲ್ಲವೆಂಬ ಕಾರಣದಿಂದ ಅವ ರನ್ನು ಹಿಂಸಿಸಿ ಕರವಸೂಲಿ ಮಾಡುವದು ನ್ಯಾಯವೆನಿಸದು. ಒಂದು ಕಾಳು ಧಾನ್ಯವಾಗಲೀ, ಒಂದು ಕಾಸಾಗಲೀ ಸಹ ಇಲ್ಲದ ಆ ಬಡಪಾಯಿಗಳನ್ನು ಹಿಂಸಿಸುವದರಿಂದ ಕರವಸೂಲಿಯಾಗುವುದು ಹೇಗೆ? ಈ ದಬ್ಬಾಳಿಕೆಯಿಂದ ನಮ್ಮ ಕೈಗಳನ್ನು ನಾವೇ ಮಲಿನಪಡಿಸಿಕೊಳ್ಳುವುದಲ್ಲದೆ ಅದಕ್ಕಿಂತ ಹೆಚ್ಚಿನ ಪ್ರಯೋಗ ಜನವು ಲಭ್ಯವಾಗದು."

"ಉಸ್ಮಾನಖಾನ, ಈಗೀಗ ನಿಮ್ಮ ನಾಲಿಗೆಯು ಉದ್ದ ಬೆಳೆದ ಹಾಗೆ

ತೋರುತ್ತವೆ. ನಿಮ್ಮ ಉಪದೇಶಗಳು ನನಗೆ ಬೇಕಾಗಿಲ್ಲ. ನಿಮ್ಮ ಸ್ಥಳದಲ್ಲಿ ನೀವು ಹೀಗೆ ವರ್ತಿಸುವದನ್ನು ನಾನು ಸಹಿಸಲಾರೆ. ನಿಮ್ಮ ಮೇಲೆ ಅಧಿಕಾರ ವನ್ನು ನಡೆಸುತ್ತಿರುವ ಸುಭೇದಾರನು ನಾನೆಂಬುದನ್ನು ನೆನಪಿನಲ್ಲಿಟ್ಟುಕೊಂಡು ನೀವು ಮಾತಾಡಬೇಕು; ನಾನು ನುಡಿದಂತೆ ನೀವು ಕೆಲಸ ಮಾಡಬೇಕು" ಕ್ರುದ್ಧನಾಗಿ ಸುಭೇದಾರನು ಗರ್ಜಿಸಿದನು.

"ಸುಭೇದಾರ ಸಾಹೇಬ!" ತನ್ನ ಶಾಂತ ಸ್ವರದಲ್ಲಿ ಉಸ್ಮಾನನು ಮಾತು ಗಳನ್ನು ಮುಂದುವರಿಸಿದನು: "ನೀವು ಸಿಟ್ಟಾಗಬೇಡಿರಿ; ನನ್ನ ನಾಲಿಗೆ ಯೇನೂ ಉದ್ದ ಬೆಳೆದಿಲ್ಲ. ನನ್ನ ತಾಲೂಕಿನ ನಿಜ ಪರಿಸ್ಥಿತಿಯನ್ನು ಬಾದ ಶಹರ ಪ್ರತಿನಿಧಿಗಳಾದ ನಿಮಗೆ ಅರುಹುವದಕ್ಕಾಗಿಯೇ ಬಂದಿರುವೆ; ಪ್ರಜೆಗಳಿಗೆ ಬಂದೊದಗಿದ ವಿಪತ್ತುಗಳ ಸ್ವರೂಪವನ್ನು ನಿಮಗೆ ತಿಳಿಸಿರುವೆ. ನಾಡಿನ ಈ ಶೋಚನೀಯ ಸ್ಥಿತಿಯಲ್ಲಿ ಕರವಸೂಲಿ ಮಾಡುವದು ಅಸಾಧ್ಯದ ಮಾತಾಗಿದೆ."

"ಅಸಾಧ್ಯವೆಂಬುದು ಹುಚ್ಚು; ನಿಮ್ಮ ಈ ನುಡಿಗಳು ನೀವು ಪ್ರಜೆಗಳ ಬೆಂಬಲಕ್ಕೆ ನಿಂತಿದ್ದೀರಿ ಎಂಬುದನ್ನು ಸೂಚಿಸುತ್ತವೆ. ಅದಾಗದು; ಕರವಸೂಲಿ ಯ ಕೆಲವನ್ನು ಭರದಿಂದ ಮುಂದುವರಿಸಬೇಕು. ಇದೇ ನನ್ನ ಅಪ್ಪಣೆ."

"ಹೇಗೆ? ಪ್ರಜೆಗಳಲ್ಲಿ ಧನ-ಧಾನ್ಯಗಳಿಲ್ಲದಿರುವಾಗ ಕರವಸೂಲಿಯು ಹೇಗೆ ಸಾಧ್ಯವಾಗುವದು? ಕರವನ್ನು ಕೊಡಬೇಕಾದರೆ ಪ್ರಜೆಗಳ ಪಕ್ಕದಲ್ಲಿ ದ್ರವ್ಯವಿರಬೇಡವೆ? ಅದೇ ಅವರಲ್ಲಿ ಇಲ್ಲದಿರುವಾಗ ಅವರು ಹೇಗೆ ನಮಗೆ ಕರ ವನ್ನು ಸಲ್ಲಿಸುವರು?"

"ಹೇಗೆಯೊ? ಯಾವುದಾದರೂ ಒಂದು ರೀತಿಯಿಂದ ಕರವನ್ನು ವಸೂಲ ಮಾಡಲೇ ಬೇಕು. ಪ್ರಜೆಗಳ ದನಕರುಗಳನ್ನು ಜಪ್ತಿ ಮಾಡಿ ವಿಕ್ರಯಿಸಿರಿ."

"ಹುಲ್ಲು-ಮೇವುಗಳಿಲ್ಲದೆ ದನಕರುಗಳು ಸತ್ತುಹೋದುವು. ಉಳಿದವು ಗಳನ್ನು ತಮ್ಮ ಹೊಟ್ಟೆಪಾಡಿಗಾಗಿ ಜನರು ಈಗ್ಗಾಗಲೆ ವಿಕ್ರಯಿಸಿದ್ದಾರೆ."

"ಪ್ರಜೆಗಳ ಪಕ್ಕದಲ್ಲಿರುವ ಆಭರಣಗಳು, ಪಾತ್ರೆಗಳು ಇವುಗಳನ್ನೆಲ್ಲ ಜಪ್ತಿ ಮಾಡಿ ಮಾರಬೇಕು" ಎಂದ ಯಾಕೂಬ.

"ಅವುಗಳನ್ನೆಲ್ಲ ಜನರು ಈಗಾಗಲೆ ಮಾರಿದ್ದಾರೆ ಅವರ ಮನೆಯ ಪಾತ್ರೆಗಳು ಅಂಗಡಿಗಳ ಹಾದಿಯನ್ನು ಹಿಡಿದು ಬಹು ದಿನಗಳಾದವು."

"ಹಾಗಾದರೆ ಈಜನರಿಗೆ ಮಡದಿ-ಮಕ್ಕಳು, ಅಕ್ಕ-ತಂಗಿಯರು ಇಲ್ಲವೆ?" ಸುಭೇದಾರನು ಗರ್ಜಿಸಿದನು.

"ಇದ್ದಾರೆ."

"ತಮ್ಮ ಮಡದಿ-ಮಕ್ಕಳು, ಅಕ್ಕ-ತಂಗಿಯರು ಇವರನ್ನೆಲ್ಲ ವಿಕ್ರಯಿಸಿ ಸರಕಾರಕ್ಕೆ ಕೊಡಬೇಕಾದ ಕಂದಾಯವನ್ನು ಕೊಡಲಿ!"

"ಸುಭೇದಾರ ಸಾಹೇಬ!"

"ಕರವಸೂಲಿಯನ್ನು ಈ ದಾರಿಯಿಂದಲಾದರೂ ಮಾಡಲೇಬೇಕು! ಅವರು ಮಡದಿ-ಮಕ್ಕಳನ್ನು, ಅಕ್ಕ-ತಂಗಿಯರನ್ನು ಇತರರಿಗೆ ಮಾರಲಿ! ಚೆಲುವೆಯರಿದ್ದರೆ ಅವರನ್ನು ಕೊಂಡುಕೊಳ್ಳಲು ಪೇಟೆಯಲ್ಲಿ ಬೇಕಷ್ಟು ಮಂದಿ ಸಿಗಬಹುದು."

"ಈ ಅಮಾನುಷಿತ ಕೃತ್ಯದಿಂದ ಬಾದಶಹರಿಗೆ ಅಪಕೀರ್ತಿ ಬರಬಹುದು" ಎಂದು ಹೇಳಿದ ಉಸ್ಮಾನಖಾನ.

"ಯಾವ ಅಪಕೀರ್ತಿ? ಕರಕೊಡವೆ ಬಾದಶಹರಿಗೆ ಮೋಸ ಮಾಡಲೆತ್ನಿಸುತ್ತಿರುವ ಬದ್ಮಾಷ ಜನರ ಹೆಂಡತಿ-ಮಕ್ಕಳನ್ನು ಮಾರುವದರಲ್ಲಿ ಯಾವ ತಪ್ಪಿದೆ?"

"ಸುಭೇದಾರ ಸಾಹೇಬ, ಆಲೋಚಿಸಿರಿ. ಪ್ರಜೆಗಳ ಮೇಲೆ ಈ ದಬ್ಬಾಳಿಕೆಯನ್ನು ನಡೆಸ ಹೊರಟರೆ ಹಿಂದುಸ್ತಾನದಲ್ಲಿ ಒಂದು ವೇಳೆ ಪಠಾಣರ ಆಳ್ವಿಕೆಯೇ ಅಂತ್ಯವಾಗಬಹುದು. ನಾವು ಕಾಫರರೆಂದು ನಿಂದಿಸುತ್ತಿರುವ ಆ ಜನರಲ್ಲಿಯೂ ಧೈರ್ಯವಿದೆ; ಆತ್ಮಾಭಿಮಾನವಿದೆ. ನೀವು ಹೇಳುತ್ತಿರುವ ರೀತಿಯಿಂದ ಅಮಾನುಷಿಕ ಹಿಂಸೆಗಳನ್ನು ನಾವು ಕೊಡತೊಡಗಿದರೆ ಅವರು ಮುಳಿವೆದ್ದು ನಮಗೆ ಪ್ರತೀಕಾರ ಮಾಡಲೆತ್ನಿಸಬಹುದು."

"ಉಸ್ಮಾನಖಾನ, ಪಠಾಣರಾದ ನಿಮ್ಮಲ್ಲಿ ಈ ಅಂಜಿಕೆಯಿರುವದನ್ನು ನೋಡಿ ನನಗೆ ಆಶ್ಚರ್ಯವಾಗುತ್ತದೆ. ಆ ಕುನ್ನಿಗಳು ಏನು ಮಾಡಬಲ್ಲವು? ನಿಮ್ಮ ನುಡಿಗಳಿಂದ ನೀವು ಕಾಫರ ಮಂದಿಗಳಿಗೆ ಹೆದರಿ ಕರವಸೂಲಿಯ ಕೆಲಸದಲ್ಲಿ ಕೈ ಹಾಕಲು ಹಿಂಜರಿದಿದ್ದೀರಿ ಎಂಬುದು ಸ್ಪಷ್ಟವಾಗುತ್ತದೆ. ನೀವು ಹೀಗೆ ಅಂಜಬೇಕಾದ ಆವಶ್ಯಕತೆಯಿಲ್ಲ. ಆ ಕುನ್ನಿಗಳು ನಮಗೆ ಏನೂ ಮಾಡಲಾರವು." ಮಾತಿನಲ್ಲಿ ವಿಜಯವನ್ನು ಸಂಪಾದಿಸಿದವನಂತೆ ಯಾಕೂಬನು ಒಂದು ನಗೆಯನ್ನು ಬೀರಿದನು. ಆಗ ಅವನ ಮೋರೆಯು ಇನ್ನಿಷ್ಟು ಕರಾಳರೂಪವನ್ನು ತಳೆದಿತು.

ಯಾಕೂಬನ ಈ ನಗುವು ಉಸ್ಮಾನನಿಗೆ ಅಸಹನೀಯವಾಗಿ ತೋರಿತು.

ಇದಲ್ಲದೆ ತಾನು ಒಬ್ಬ ಹೇಡಿಯಿರುವೆನೆಂಬ ಯಾಕೂಬನ ಮಾತು ಉಸ್ಮಾನನಿಗೆ ಅಪಮಾನಕರವಾಗಿ ಎನಿಸಿತು. ಅವನ ಮೋರೆಯು ತುಸ ಕೆಂಪಾಯಿತು. ಆತನು ಆತ್ಮಸಂಯಮಿಯಾಗಿದ್ದುದರಿಂದ ಮನಸ್ಸಿನಲ್ಲಿ ಉಕ್ಕಿಬರುತ್ತಿರುವ ಸಿಟ್ಟನ್ನು ತಡೆದುಕೊಂಡನು. ಉಸ್ಮಾನನವಲಂಬಿಸಿದ ಮೌನತೆಯು ಯಾಕೂಬನ ಮದವು ಇನ್ನಷ್ಟು ಹೆಚ್ಚುವಂತೆ ಮಾಡಿತು. ಮಾತಿನಲ್ಲಿ ಪರಾಜಯ ಹೊಂದಿದುದರ ಸೂಚನೆಯಾಗಿದೆ ಉಸ್ಮಾನನ ಈ ಮೌನವೆಂದು ಸುಭೇದಾರನು ಊಹಿಸಿದನು. ಸುಭೇದಾರನು ದ್ವಿಗುಣಿತವಾದ ಉತ್ಸಾಹದಿಂದ ತನ್ನ ಮಾತುಗಳನ್ನು ಮುಂದುವರಿಸಿದನು:—"ಉಸ್ಮಾನಖಾನ, ನೀವು ಪರಿಭ್ರಮಿಸಬೇಕಾಗಿಲ್ಲ; ಈ ಕೆಲಸಗಳಿಗೆ ನೀವು ಹೊಸಬರಾಗಿರುವದರಿಂದ ಈ ಅಂಜಿಕೆಯು ನಿಮಗೆ ಸ್ವಾಭಾವಿಕವಾಗಿದೆ. ನಾನು ಕೆಲಸಕ್ಕೆ ಸೇರಿದ ಪ್ರಾರಂಭದಲ್ಲಿ ಜನರ ಮೇಲೆ ಅತ್ಯಾಚಾರಗಳನ್ನು ನಡೆಸಲ ನಾನೂ ಅಂಜುತ್ತಿದ್ದೆ. ಆದರೆ ಈಗ ಯಾವ ಭಯವೂ ಇಲ್ಲ. ನಾನು ಹೇಳುವಂತೆ ನೀವು ಮಾಡಿರಿ. ಇಂಥ ವಿಷಮ ಪರಿಸ್ಥಿತಿಯ ಸಮಯದಲ್ಲಿ ನಿಮ್ಮ ಕಾರ್ಯದಕ್ಷತೆಯು ಬೆಳಕಿಗೆ ಬರಬೇಕಾಗಿವೆ. ಕರವಸೂಲಿಯಲ್ಲಿ ಯಾವ ಭಯಂಕರ ಕೆಲಸವನ್ನು ಆಚರಿಸಿದರೂ ಅದು ತಪ್ಪೆನಿಸದು. ಇತರ ಎಲ್ಲ ತಾಲೂಕುಗಳಿಗಿಂತ ಹೆಚ್ಚು ಕಂದಾಯವನ್ನು ವಸೂಲ ಮಾಡಿ ನೀವು ಖಜಾನೆಗೆ ಕಳುಹಿಸಬೇಕು. ಹಾಗಾದರೆ ನಿಮ್ಮನ್ನು ದೊಡ್ಡ ಹುದ್ದೆಗೇರಿಸಲು ಬಾದಶಹರಿಗೆ ಹೇಳುವೆನು ನಾನು." ಉಸ್ಮಾನನ ಶ್ರೇಯಸ್ಸನ್ನೇ ಕೋರುತ್ತಿರುವ ಒಬ್ಬ ಹಿತಚಿಂತಕನಂತೆ ಉಪದೇಶಿಸುತ್ತಿದ್ದನು ಸುಭೇದಾರನು.

ಯಾಕೂಬನ ಈ ಉಪದೇಶಗಳು ಉಸ್ಮಾನನಿಗೆ ರುಚಿಸಲಿಲ್ಲ. ಯಾವ ಉದ್ದೇಶದಿಂದ ಅವನು ಯಾಕೂಬನನ್ನು ಕಾಣಲು ಬಂದಿದ್ದನೋ ಅದು ಸಫಲವಾಗಲಿಲ್ಲ. ಹೃದಯವಿಲ್ಲದ ಈ ಪಶುವಿನೊಡನೆ ತರ್ಕಿಸುವದರಿಂದ ಯಾವ ಪ್ರಯೋಜನವೂ ಇಲ್ಲವೆಂದು ಉಸ್ಮಾನನು ತಿಳಿದನು. ಅವನು ಸುಭೇದಾರನನ್ನು ಕಾಣಲಿಕ್ಕೆ ಬಂದುದು ಯಾವ ಉದ್ದೇಶದಿಂದಲೆಂಬುದು ಮೇಲಿನ ಸಂಭಾಷಣೆಯಿಂದ ಓದುಗರಿಗೆ ಹೊಳೆದಿರಬಹುದು. ಅಂತು ಉಸ್ಮಾನನು ನಿರಾಶೆಯಿಂದ ಹಿಂದಿರುಗಬೇಕಾಗಿ ಬಂದಿತು. ಅವನು ಯಾಕೂಬನ ಸಂಗಡ ಹೆಚ್ಚು ಮಾತುಗಳನ್ನಾಡಲಿಚ್ಛಿಸದುದರಿಂದ ಹೀಗೆ ಹೇಳಿದನು:—"ಸುಭೇದಾರ ಸಾಹೇಬ, ನನ್ನ ತಾಲೂಕಿನ ಸದ್ಯದ ಪರಿಸ್ಥಿತಿಯನ್ನು ನಿಮಗರು

ಹಿದೆನು. ಮುಂದೇನು ಮಾಡಬೇಕೆಂಬುದನ್ನು ದಯವಿಟ್ಟು ತಿಳಿಸಿ."

"ಈ ಮೊದಲೆ ಹೇಳಿದ್ದೇನಷ್ಟೆ; ಪ್ರಜೆಗಳಿಂದ ಕರವಸೂಲಿ ಮಾಡಬೇಕು. ಆ ಬಗ್ಗೆ ಎಂಥ ಭಯಂಕರ ಅಕ್ರಮವನ್ನು ಜರುಗಿಸಲೂ ನೀವು ಹಿಂಜರಿಯ ಬೇಕಾಗಿಲ್ಲ. ಆ ಬಗ್ಗೆ ಯಾವ ಅಕ್ರಮಗಳನ್ನು ಜರುಗಿಸಿದರೂ ನಾವು ನಿಮ್ಮ ನ್ನು ಪ್ರಶ್ನಿಸುವಂತಿಲ್ಲ. ಇತರ ಎಲ್ಲ ಉಪಾಯಗಳು ಪರಾಜಯವಾದಲ್ಲಿ ಕೊನೆಯ ತಂತ್ರವನ್ನು ಸ್ವೀಕರಿಸಬೇಕು; ಅಂದರೆ ಪ್ರಜೆಗಳ ಹೆಂಡಿರು-ಮಕ್ಕ ಳನ್ನೂ ಅಕ್ಕ-ತಂಗಿಯರನ್ನೂ ಹಿಡಿತಂದು ವಿಕ್ರಯಿಸತಕ್ಕದ್ದು."

ಈ ಮಾತುಗಳನ್ನು ಕೇಳುವಾಗ ಉಸ್ಮಾನನ ಮೈ ಮೇಲಿನ ರೋಮ ಗಳು ಎದ್ದು ನಿಂತವು ಸುಭೇದಾರನ ಕೊನೆಯ ಮಾತು ಉಸ್ಮಾನನ ಎಲೆ ಯನ್ನು ನಡುಗುವಂತೆ ಮಾಡಿತು. ಈ ಕಠೋರ ಹೃದಯದ ನರಜೀವಿ ಯೊಡನೆ ತನ್ನ ಮಾತುಗಳನ್ನು ಬೆಳಸುವದರಿಂದ ಯಾವ ಪ್ರಯೋಜನವೂ ಇಲ್ಲವೆಂಬುದನ್ನು ಉಸ್ಮಾನನು ತಿಳಿದುಕೊಂಡನು. ಅವನಿಗೆ ಸುಭೇದಾರನ ೦ಗಡ ಮಾತುಗಳನ್ನು ಬೆಳಿಸುವ ಇಚ್ಛೆಯೂ ಇರಲಿಲ್ಲ. ಸುಭೇದಾರನು ಕೆಲವು ನಿಮಿಷಗಳ ವರೆಗೆ ತನ್ನ ಉಪದೇಶಗಳನ್ನು ಮುಂದುವರಿಸಿದನು ಅವು ಕರವಸೂಲಿಗೆ ಸಂಬಂಧಿಸಿದ ಮಾತುಗಳೇ ಆಗಿದ್ದುವು. ಪ್ರಜೆಗಳನ್ನು ಹಿಂಸಿಸಿ ಅವರ ನೆತ್ತರನ್ನು ಹಿರಿಯಾದರೂ ಕರವಸೂಲಿ ಮಾಡಬೇಕೆಂಬುದಾಗಿದ್ದಿತು ಆ ನುಡಿಗಳಲ್ಲಿ ಪ್ರತಿಪಾದಿತವಾದ ವಿಷಯವು. ಸುಭೇದಾರನ ಮಾತುಗಳು ಸಮಾಪ್ತಿಯನ್ನು ಹೊಂದಲು ಉಸ್ಮಾನನು ತಾನು ಕುಳಿತ ಗಾದಿಯಿಂದ ಎದ್ದು ನಿಂತನು; ರೂಢಿಯಂತೆ ಸುಭೇದಾರನಿಗೆ ವಂದಿಸಿ ಹೇಳಿದನು: "ಸುಭೇ ದಾರ ಸಾಹೇಬ, ಅಪ್ಪಣೆಯಾಗಬೇಕು; ನಾನು ಹೋಗುವೆನು."

"ಆಗಲಿ; ಆದರೆ ಕರವಸೂಲಿಯ ಕೆಲಸದಲ್ಲಿ ಶ್ರದ್ಧೆಯನ್ನಿಡಬೇಕು."

"ಹೂಂ" ಎಂದ ಒಂದು ನುಡಿಯಲ್ಲದೆ ಇತರ ಶಬ್ದಗಳು ಉಸ್ಮಾನನ ನಾಲಿಗೆಯಿಂದ ಹೊರಬರಲಿಲ್ಲ. ಪುನಃ ಒಂದು ಸಲ ವಂದಿಸಿ ಅವನು ಹೊರಗೆ ಹೋದನು.

ಯಾಕೂಬಖಾನನು ರೂಪನಗರ ಪ್ರಾಂತದ ಸುಭೇದಾರನಾಗಿದ್ದನು. ರೂಪನಗರದ ಅರಸನಾದ ವಿಜಯಸಿಂಹನನ್ನು ಯುದ್ಧದಲ್ಲಿ ಸಂಹರಿಸಿ, ಅಲ್ಲಾ ವುದ್ದೀನನು ಆ ಸಂಸ್ಥಾನವನ್ನು ಅಧೀನಪಡಿಸಿಕೊಳ್ಳಲು, ದಿಲ್ಲಿಯ ಪಠಾಣ ಚಕ್ರವರ್ತಿಯ ಪ್ರತಿನಿಧಿಯಂತೆ ರೂಪನಗರವನ್ನು ಆಳಲು ಒಬ್ಬ ಅಧಿಕಾರಿ

ದಣಿವುಗಳು ಮಗನ ದೇಹದಲ್ಲಿ ಮೂರ್ತಿಮತ್ತಾಗಿ ನಿಂತಿದ್ದುವು. ಅವನನ್ನು ನೋಡಿದೊಡನೆಯೇ ಮಗನು ಹೋದ ಕಾರ್ಯವು ವಿಫಲವಾಯಿತೆಂದು ವೃದ್ಧನು ಊಹಿಸಿದ. ಉಸ್ಮಾನ-ಇದಾಗಿತ್ತು ಮಗನ ಹೆಸರು; ಒಂದು ದೀರ್ಘ ನಿಶ್ವಾಸವನ್ನು ಬಿಟ್ಟು ತಂದೆಯ ಕಡೆಗೆ ಒಂದು ಶೂನ್ಯ ದೃಷ್ಟಿಯನ್ನು ಬೀರಿದನು. ಮುದುಕನು ತನ್ನ ತೇಜಃಪುಂಜವಾದ ನೇತ್ರಗಳನ್ನು ಮಗನ ಕಡೆಗೆ ಹೊರಳಿಸಿ:—"ಉಸ್ಮಾನ!"

"ಅಪ್ಪಾ!"

"ಸುಭೇದಾರನು ಏನೆಂದು ಹೇಳಿದನು?"

"ಹೋದ ಕೆಲಸವು ವಿಫಲವಾಯಿತು; ನಮ್ಮ ತಾಲೂಕನ್ನು ಬಾಧಿಸಿದ ಕ್ಷಾಮಕಾಲದ ದುರಂತ ಚಿತ್ರವನ್ನು ಅವನ ಕಣ್ಣುಗಳ ಮುಂದಿಟ್ಟೆ; ಆದರೆ ಜನರ ಸಂಕಟಗಳಿಗಾಗಿ ಅವನ ಮನವು ಕರಗಲಿಲ್ಲ ಎಂದು ಮಾತ್ರವಲ್ಲ, ಯಾವ ದಾರಿಯಿಂದಲಾದರೂ ಕರವಸೂಲಿ ಮಾಡಲೇಬೇಕೆಂದ ಸುಭೇದಾರ."

"ಭೀಕರದ ದಾರಿದ್ರ್ಯವು ನಗ್ನರೂಪದಿಂದ ಜನರ ಮಧ್ಯದಲ್ಲಿ ನರ್ತಿಸುತ್ತಿರುವಾಗ, ಹೊಟ್ಟೆಗೆ ಅನ್ನ ವಿಲ್ಲದೆ ಜನರು ಸಾಯುತ್ತಿರುವಾಗ ಅವರು ಹೇಗೆ ಈ ಕಂದಾಯವನ್ನು ಕೊಡಲು ಶಕ್ತರಾಗುವರು? ಕರವಸೂಲಿಯ ಮಾತು ಹಾಗಿರಲಿ. ಮೃತ್ಯುವಿನ ಗವಿಯನ್ನು ಸೇರಲುದ್ಯುಕ್ತರಾದ ಪ್ರಜೆಗಳ ಜೀವಗಳನ್ನು ಕಾಪಾಡುವುದು ಸರಕಾರದ ಮೊದಲನೆಯ ಕರ್ತವ್ಯವಾಗಿರುತ್ತದೆ!"

"ಆದರೆ ಅಪ್ಪಾ, ಸುಭೇದಾರನು ಪ್ರಜೆಗಳ ಜೀವಗಳನ್ನು ಕಾಪಾಡುವ ಯಾವ ಹೊಣೆಯನ್ನೂ ಹೊತ್ತಿಲ್ಲವಂತೆ. ಕರವಸೂಲಿ ಮಾಡಲು ಯಾವ ಅತ್ಯಾಚಾರ ಜರುಗಿಸಿದರೂ ವಿರೋಧವಿಲ್ಲವೆಂದು ಹೇಳಿದ್ದಾನೆ ಆತ. ಪ್ರಜೆಗಳ ಹೆಂಡಿರು-ಮಕ್ಕಳನ್ನು ಮಾರಿಯಾದರೂ ಕರವಸೂಲಿ ಮಾಡಬೇಕಂತೆ!"

"ಜನರ ಹೆಂಡಿರು-ಮಕ್ಕಳನ್ನು ಮಾರುವುದೇ?"

"ಹೌದು." ಉಸ್ಮಾನನು ಒಂದು ನಿಟ್ಟುಸಿರನ್ನು ಹೊರಚೆಲ್ಲಿದ.

"ಇದಾವ ಧರ್ಮ! ಇಸ್ಲಾಂ ಧರ್ಮಕ್ಕೆ ಅಪಕೀರ್ತಿಯನ್ನು ತರತಕ್ಕ ಕೆಲವಾಗಿದೆ ಇದು. ಪ್ರಜೆಗಳು ನಮ್ಮ ಧರ್ಮದವರಲ್ಲವೆಂಬ ಕಾರಣದಿಂದ, ಅವರೊಡನೆ ಮೃಗೀಯ ರೀತಿಯಲ್ಲಿ ವರ್ತಿಸುವದು ಪರಿಶುದ್ಧ ಪೈಗಂಬರರ ಅನುಯಾಯಿಗಳಿಗೆ ಉಚಿತವಾದುದಲ್ಲ. ಈ ಕೆಲಸವು ಇಸ್ಲಾಂ ಧರ್ಮದ ಧವಳ ವರ್ಣಕ್ಕೆ ಕಲಂಕ ಹಚ್ಚದಿರಲಾರದು."

"ಆದರೆ ಅಪ್ಪಾ, ಆಳತಕ್ಕವರಿಗೆ ವಿವೇಕವಾಗಲೀ, ವಿಶಾಲಹೃದಯವಾಗಲೀ ಇಲ್ಲದೆ ಹೋದರೆ ಮಾಡುವವೇನು? ತಮ್ಮ ಆಧೀನದಲ್ಲಿ ಬದುಕುತ್ತಿರುವವರು ಸಹ ನರಜೀವಿಗಳು, ಅವರನ್ನು ಸಲಹುವದು ತಮ್ಮ ಕರ್ತವ್ಯವಾಗಿದೆಯೆಂಬ ವಿಚಾರವು ಅಧಿಕಾರಿಗಳ ಮೆದುಳುಗಳಲ್ಲಿ ಹುಟ್ಟದಿದ್ದರೆ, ಪ್ರಜೆಗಳು ಕುನ್ನಿಬಾಳನ್ನು ಅನುಭವಿಸುವದಲ್ಲದೆ ಬೇರೆ ದಾರಿಯಿಲ್ಲ. ಆ ಯಾಕೂಬಖಾನನು ಆಡಿದ ಮಾತುಗಳನ್ನು ನೆನೆಯುವಾಗ ನನ್ನ ಎದೆಯು ಕಂಪಿಸುತ್ತಲಿದೆ. ಹೃದಯಶೂನ್ಯತೆ! ಪ್ರಜಗಳ ಮೇಲೆ ಯಾವ ಅತ್ಯಾಚಾರಗಳನ್ನೆಸಗಿದರೂ ಚಿಂತೆಯಿಲ್ಲ ಕರವಸೂಲಿ ಮಾತ್ರ ಸಾಗಬೇಕೆಂಬ ಆತನ ಆಜ್ಞೆ! ಇವುಗಳನ್ನು ನೆನೆವಾಗ ನನ್ನ ಬುದ್ಧಿಗೆ ಮಂಕು ಕವಿದಂತಾಗುತ್ತಲಿದೆ. ಇದುವರೆಗೆ ಅರಸರಲ್ಲಿ ಅಭಿಮಾನ ತಾಳಿದ್ದೆ; ಇಸ್ಲಾಂ ಧರ್ಮದ ಏಳಿಗೆಯನ್ನು ಕಾಂಕ್ಷಿಸಿದ್ದೆ; ಆದರೆ ಈಗ ಅರಸರ ವರ್ತನೆಗಳು ವಿಪರೀತವಾಗಿವೆ; ಸತ್ಯ-ನೀತಿಗಳು ಅವರನ್ನು ಬಿಟ್ಟು ತೊಲಗಿವೆ. ಧರ್ಮದ ಹೆಸರಿನಲ್ಲಿ ಸುಲಿಗೆಗಳೂ, ಅತ್ಯಾಚಾರಗಳೂ ಜರುಗುತ್ತಲಿವೆ. ಈ ಅನ್ಯಾಯದ ಕೆಲಸಗಳಲ್ಲಿ ಪಾಲುಗಾರನಾಗಲು ನನ್ನ ಮನವು ಒಪ್ಪುವುದಿಲ್ಲ. ಏನು ಮಾಡಬೇಕೆಂಬುದು ನನಗೆ ತಿಳಿಯದಾಗಿದೆ. ಮೃಗೀಯವಾದ ಈ ಅಕ್ರಮದ ಕೆಲಸಗಳನ್ನು ಜರುಗಿಸಿ ನನ್ನ ಆತ್ಮವನ್ನು ಮಲಿನಪಡಿಸಿಕೊಳ್ಳಲು ನಾನು ಇಚ್ಛಿಸುವದಿಲ್ಲ. ಆದುದರಿಂದ ಅಪ್ಪಾ, ಈ ಬಿಕ್ಕಟ್ಟಿನಲ್ಲಿ ಏನು ಮಾಡಬೇಕೆಂದು ನನಗೆ ಹಾದಿಯನ್ನು ತೋರಿಸಿರಿ. ಇದುವರೆಗೆ ನೀವು ನನ್ನ ದಾರಿಯಲ್ಲಿ ಬೆಳಕನ್ನು ತೋರಿಸಿರುತ್ತೀರಿ; ಅದರಂತೆಯೇ ಈ ಪ್ರಸಂಗದಲ್ಲಿಯೂ ನನ್ನ ಕೈಹಿಡಿದು ಮುಂದಕ್ಕೊಯ್ಯಿರಿ. ನನ್ನ ಬುದ್ಧಿಗೆ ಕತ್ತಲೆ ಕವಿದಂತಾಗಿದೆ."

ಒಂದು ದಯಾಪೂರ್ಣ ದೃಷ್ಟಿಯನ್ನು ಮಗನ ಕಡೆಗೆ ಬೀರಿ ತಂದೆಯು ಹೇಳಿದನು: "ಮಗೂ,ಉಸ್ಮಾನ, ನಿನ್ನ ಅಭಿಪ್ರಾಯವು ನಿಜವಿದೆ. ಧರ್ಮದ ದುರಾಭಿಮಾನದ ಮೂಲಕ ಅಂಧರಾಗಿ ನಾವು ಮೃಗಗಳ ಮೆಟ್ಟಲಿಗಿಳಿಯುವದು ಸರಿಯಲ್ಲ. ಅದರಿಂದ ಹಾನಿಯಲ್ಲದೆ ಶ್ರೇಯಸ್ಸುಂಟಾಗಲಾರದು. ಈ ಸತ್ಯವನ್ನು ಅಧಿಕಾರಿಗಳು ತಿಳಿಯದಿರುವದು ಅತ್ಯಂತ ಪರಿತಾಪಕರವಾಗಿದೆ. ಕೇವಲ ಕರವಸೂಲಿಯನ್ನು ನಡೆಸುವದು ಮಾತ್ರ ಅಧಿಕಾರಿಗಳ ಕೆಲಸವಲ್ಲ. ಯಾರಿಂದ ಕರವಸೂಲಿ ಮಾಡುತ್ತಿರುವರೋ ಆ ಪ್ರಜೆಗಳ ಪೋಷಣೆಯನ್ನು ಸಹಾ ತಾವು ಮಾಡಬೇಕಾಗಿದೆಯೆಂಬುದನ್ನು ಅಧಿಕಾರಿಗಳು ತಿಳಿಯುವಂತಿಲ್ಲ.

ಅವರ ಅವಿವರ್ತನೆಗಳ ಪರಿಣಾಮವಾಗಿ ಹಿಂದುಸ್ತಾನದಲ್ಲಿ ಪಠಾಣರ ಆಳ್ವಿಕೆಯು ಶಿಥಿಲವಾಗಬಹುದು. ಅದರೊಡನೆಯೇ ಪಠಾಣರಿಗೆ ನೀಗಲಾರದ ಒಂದು ಕಲಂಕದ ಹೊರೆಯನ್ನು ಹೊರಬೇಕಾಗಿ ಬರುವದು. ಮಗೂ, ನಾನು ಹೇಳುವದಿಷ್ಟೆ, ಅಧಿಕಾರಿಗಳ ಅವಿವರ್ತನೆಗಳಲ್ಲಿ ನಾವು ಪಾಲುಗಾರರಾಗುವದು ಸರಿಯಲ್ಲ. ಅವುಗಳಿಂದ ನಮ್ಮ ಆತ್ಮಗಳು ಮಲಿನತೆಯನ್ನು ಹೊಂದುವವು. ನಿನ್ನ ಅಧಿಕಾರವನ್ನು ಪ್ರಜೆಗಳ ಕ್ಷೇಮಕ್ಕಾಗಿ ಉಪಯೋಗಿಸಲು ಸಾಧ್ಯವಾಗುವದಾದರೆ, ನೀನು ನಿನ್ನ ಉದ್ಯೋಗದಲ್ಲಿರು."

"ಆದರೆ ಈ ಪರಿಸ್ಥಿತಿಯಲ್ಲಿ ಪ್ರಜೆಗಳಿಗೆ ಕ್ಷೇಮವಾಗುವಂತೆ ಉದ್ಯಮಿಸುವದು ಹೇಗೆ? ಪ್ರಜೆಗಳ ಹೆಂಡಿರು-ಮಕ್ಕಳನ್ನು ವಿಕ್ರಯಿಸಿಯಾದರೂ ಕರ ವಸೂಲಿ ಮಾಡಬೇಕೆಂದು ಸುಭೇದಾರನ ಆಜ್ಞೆಯಾಗಿದೆ. ಈ ಆಜ್ಞೆಯಂತೆ ವರ್ತಿಸುವದಾದರೆ ಅದಕ್ಕಿಂತ ಮಹತ್ತರವಾದ ಜನದ್ರೋಹವು ಬೇರೊಂದಿಲ್ಲ."

"ಹಾಗಾದರೆ ನೀನು ನಿನ್ನ ಪದವಿಯನ್ನು ತ್ಯಜಿಸು ಉಸ್ಮಾನ. ಜನಹಿತವನ್ನು ಸಾಧಿಸಲಾಗದಿದ್ದರೆ ಬೇಡ, ಜನದ್ರೋಹಕ್ಕೆ ನಾವು ಕಾರಣಭೂತರಾಗಕೂಡದು. ನಮ್ಮಿಂದ ಪ್ರಜಾದ್ರೋಹವು ಘಟಿಸಬಹುದಾದ ಸಂದರ್ಭಗಳು ಬಂದೊದಗುವದಾದರೆ. ಅವುಗಳಿಂದ ಆದಷ್ಟು ದೂರ ನಿಲ್ಲಲು ಪ್ರಯತ್ನಿಸಬೇಕು." ಹೀಗೆ ತಂದೆಯು ಮಗನಿಗೆ ಉಪದೇಶವನ್ನು ನೀಡಿದ.

ಉಸ್ಮಾನನು ಆಲೋಚನಾಪರವಶನಾದ. ತಂದೆಯ ಉಪದೇಶವು ಈ ಬಿಕ್ಕಟ್ಟಿನಲ್ಲಿ ತಾನು ಏನು ಮಾಡಬೇಕೆಂಬ ದಾರಿಯನ್ನು ತೋರಿಸಿತೆಂಬುದೇನೋ ನಿಜ; ಆದರೆ ಅದರಿಂದ ಅವನ ಎದೆಯ ಭಾರವು ಕಡಿಮೆಯಾಗುವಂತಿರಲಿಲ್ಲ. ಏಕೆಂದರೆ, ತಾನು ಉದ್ಯೋಗವನ್ನು ತ್ಯಜಿಸಿದರೂ, ಸುಭೇದಾರನು ತನ್ನ ಸ್ಥಳದಲ್ಲಿ ಬೇರೊಬ್ಬ ಅಧಿಕಾರಿಯನ್ನು ನಿಯಮಿಸಿ ತನ್ನ ದಬ್ಬಾಳಿಕೆಯನ್ನು ಮುಂದುವರಿಸುವನೆಂಬುದನ್ನು ಉಸ್ಮಾನನು ತಿಳಿದಿದ್ದನು.

"ಅಪ್ಪಾ, ನಾನು ಉದ್ಯೋಗವನ್ನು ಪರಿತ್ಯಜಿಸಿದರೆ. ಅರಸರು ಆ ಸ್ಥಳದಲ್ಲಿ ಬೇರೊಬ್ಬ ಅಧಿಕಾರಿಯನ್ನು ನೇಮಿಸದೆ ಇರಲಾರರು. ಆ ಅಧಿಕಾರಿಯ ಮೂಲಕ ಸುಭೇದಾರನು ತನ್ನ ದಬ್ಬಾಳಿಕೆಯನ್ನು ಮುಂದುವರಿಸುವನು. ಪ್ರಜೆಗಳ ಗೋಳು ಉಪಶಮನವನ್ನು ಹೊಂದುವಂತಿಲ್ಲ."

"ಮಗೂ, ನೀನು ಹೇಳುತ್ತಿರುವದು ನಿಜ; ಅಧಿಕಾರಿಗಳು ತಮ್ಮ ಅತ್ಯಾಚಾರದ ಕೆಲಸಗಳನ್ನು ನಿಲ್ಲಿಸುವಂತಿಲ್ಲ. ಈ ಹೀನ ಕೆಲಸಗಳಲ್ಲಿ ಭಾಗ ವಹಿ

ಸದೆ ದೂರ ನಿಲ್ಲಲು ಮಾತ್ರ ನಮಗೆ ಸಾಧ್ಯವಾಗಬಹುದಲ್ಲದೆ, ಜನರಿಗೆ ಬಂದೊದಗುವ ವಿಪತ್ತುಗಳನ್ನು ನಿವಾರಿಸುವದು ನಮಗೆ ಸಾಧ್ಯವಾಗದು. ಇದಲ್ಲದೆ ರಾಜದ್ರೋಹದ ಹಾದಿಯನ್ನು ಹಿಡಿಯುವದು ಹಿತವಲ್ಲ."

ಈ ಕೊನೆಯನುಡಿಯು ಮುದುಕನು ಪಠಾಣರ ದಬ್ಬಾಳಿಕೆಯನ್ನು ಪ್ರತಿಷೇಧಿಸುತ್ತಿದ್ದರೂ ಪ್ರಭುತ್ವಕ್ಕೆ ವಿರುದ್ಧವಾಗಿ ಬಂಡು ಮಾಡಲು ಅವನಿಗಿರುವ ವೈಮನಸ್ಯವನ್ನು ಸೂಚಿಸುತ್ತಿದ್ದಿತು.

ಉಸ್ಮಾನನು ರೂಪನಗರ ಪ್ರಾಂತ್ಯದಲ್ಲಿರುವ ಮಣಿನಗರವೆಂಬ ತಾಲೂಕಿನ ಸರದಾರನಾಗಿದ್ದನು. ಆ ತಾಲೂಕಿನ ಆಡಳಿತದ ಭಾರವು ಉಸ್ಮಾನನ ತಲೆಯ ಮೇಲಿದ್ದಿತು. ಅಲ್ಲಾವುದ್ದೀನನು ರೂಪನರವನ್ನು ವಶಪಡಿಸಿಕೊಳ್ಳುವ ಮುನ್ನ ಅಂದರೆ, ಉಸ್ಮಾನನ ತಾತಂದಿರ ಕಾಲದಿಂದಲೇ ಪಠಾಣರು ರೂಪನಗರಕ್ಕೆ ಬಂದು ಅಲ್ಲಿ ಸ್ಥಿರವಾಸಮಾಡತೊಡಗಿದ್ದರು. ಹೀಗೆ ಬಂದು ನೆಲಸಿದವರಲ್ಲಿ ಉಸ್ಮಾನನ ತಾತಂದಿರೂ ಒಬ್ಬರಾಗಿದ್ದರು. ಅವರು ಒಬ್ಬ ವ್ಯಾಪಾರಿಗಳಾಗಿದ್ದುದರಿಂದ ಮಣಿನಗರಕ್ಕೆ ಬಂದು ಅಲ್ಲಿ ತಮ್ಮ ವಾಣಿಜ್ಯವನ್ನು ಪ್ರಾರಂಭಿಸಿದರು. ಆಗಲಿನ ಹಿಂದೂ ಅರಸನು ಅವರನ್ನು ಆತಂಕಪಡಿಸಲಿಲ್ಲ. ತನ್ನ ಇತರ ಪ್ರಜೆಗಳಂತೆ ಪಠಾಣರನ್ನು ಸಹಾ ಅವನು ಪರಿಪಾಲಿಸುತ್ತಿದ್ದನು. ಹಿಂದೂ ಪ್ರಜೆಗಳೊಡನೆ ಯಾವಾಗಲೂ ಸಹಕರಿಸಬೇಕಾಗಿರುತ್ತಿದ್ದುದರಿಂದ ಮತವಿದ್ವೇಷವು ಈ ಪಠಾಣರಲ್ಲಿ ಇರಲಿಲ್ಲ. ಅವರು ತಮ್ಮ ನೆರೆಹೊರೆಯ ಹಿಂದುಗಳೊಡನೆ ಗೆಳೆತನದಿಂದಿರುತ್ತಿದ್ದರು.

ಅಲ್ಲಾವುದ್ದೀನನು ರೂಪನಗರವನ್ನು ಆಕ್ರಮಿಸಿ ವಶಪಡಿಸಿಕೊಂಡನು ಪಠಾಣರ ಆಳ್ವಿಕೆಯು ಅಲ್ಲಿ ಪ್ರಾರಂಭವಾಯಿತು. ಹೊರಗಿನಿಂದ ಬಂದ ಪಠಾಣರ ಮೇಲೆ ವಿವಿಧ ಅತ್ಯಾಚಾರಗಳನ್ನು ಜರಗಿಸತೊಡಗಿದರು. ಇದಲ್ಲದೆ ಆಳುವವರು ಅವರಾಗಿದ್ದುದರಿಂದ ಅವರು ಯಾವ ಹೀನ ಕೃತ್ಯಗಳನ್ನೆಸಗಿದರೂ ಕೇಳತಕ್ಕವರಿರಲಿಲ್ಲವಾದರು. ಹೊಸದಾಗಿ ರೂಪನಗರಕ್ಕೆ ಬಂದ ಪಠಾಣರು ಮೇಲೆ ಹೇಳಿದಂತೆ ಅವಿವರ್ತನೆಯಲ್ಲಿ ಉದ್ಯುಕ್ತರಾಗಿದ್ದರೂ ಪಠಾಣರ ಆಕ್ರಮಣಕ್ಕೆ ಮುನ್ನ ರೂಪನಗರದಲ್ಲಿ ನೆಲೆಸಿದ್ದ ಪಠಾಣರು ಹೊಸದಾಗಿ ಬಂದ ಸ್ವಧರ್ಮೀಯರಂತೆ ಹಿಂದೂ ಪ್ರಜೆಗಳನ್ನು ಸುಲಿಗೆ ಮಾಡಲು ಹೊರಡಲಿಲ್ಲ. ಇದಕ್ಕೆ ಕಾರಣವು ಎರಡು ವಿಧರ್ಮಿಯರಲ್ಲಿಯೂ ಹರಡಿದ್ದ ಮೈತ್ರಿಯಾಗಿದ್ದಿತು. ಈ ಜನರು ಸ್ವಧರ್ಮೀಯರು ಹಿಂದೂ

ಪ್ರಜೆಗಳ ಮೇಲೆ ನಡೆಸುತ್ತಿದ್ದ ಅತ್ಯಾಚಾರಗಳಿಂದ ಶಕ್ಯವಾದಷ್ಟು ದೂರ ವಿರಲು ಪ್ರಯತ್ನಿಸುತ್ತಿದ್ದರು. ಹೀಗೆ ರೂಪನಗರದ ಪಠಾಣರಲ್ಲಿ ಎರಡು ವರ್ಗಗಳಾದವು. ಉಸ್ಮಾನನೂ ಅವನ ತಂದೆಯೂ ಹಿಂದುಗಳೊಡನೆ ಮೈತ್ರಿ ಯಿಂದ ವರ್ತಿಸತಕ್ಕವರ ಪಕ್ಷಕ್ಕೆ ಸೇರಿದವರಾಗಿದ್ದರು; ಮತ್ತು ಈ ತಂದೆ-ಮಕ್ಕಳು ಪಠಾಣರು ಹಿಂದುಗಳೊಡನೆ ಮೈತ್ರಿಯಿಂದ ವರ್ತಿಸಿ ಸಹಕರಿಸು ವಂತೆ ಮಾಡಲುದ್ಯಮಿಸುತ್ತಿದ್ದರು.

ಉಸ್ಮಾನನಿಗೆ ೨೮ ವರ್ಷ ಪ್ರಾಯವಿರಬಹುದು. ಅವನ ತಂದೆ ಮಹ ಮ್ಮದನು ಮಣಿನಗರದಲ್ಲಿ ಒಬ್ಬ ಸುಪ್ರಸಿದ್ಧ ವ್ಯಾಪಾರಿಯಾಗಿದ್ದ. ಈ ತಂದೆ ಗೆ ಉಸ್ಮಾನನು ಒಬ್ಬನೇ ಒಬ್ಬ ಮಗನಾಗಿದ್ದ. ಉಸ್ಮಾನನು ಧೀರ ಪ್ರಕೃತಿ ಯವನು; ರಣಶಾಸ್ತ್ರದ ಪರಿಚಯವು ಅವನಿಗಿತ್ತು. ಅವನು ಶಾಂತ ಸ್ವಭಾ ವಿಯೂ ಸರಳ ಮನಸ್ಕನೂ ಆಗಿದ್ದನು. ಅನ್ಯರನ್ನು ಹಿಂಸಿಸುವ ಕೆಲಸವು ಅವನಿಗೆ ಸೇರುತ್ತಿರಲಿಲ್ಲ. ಅನ್ಯರ ಕಷ್ಟಗಳನ್ನು ನೋಡಿ ಮರಗುವ ಸ್ವಭಾ ವವು ಅವನದು, ಎಂದು ಮಾತ್ರವಲ್ಲ, ಅವರಿಗೆ ತನ್ನ ಕೈಲಾದ ಸಹಾಯ ವನ್ನು ಮಾಡಲು ಅವರು ಹಿಂಜರಿಯುತ್ತಿರಲಿಲ್ಲ. ಅನೀತಿಯ ಕೆಲಸಗಳನ್ನು ಅವನು ಎಂದಿಗೂ ಮೆಚ್ಚುತ್ತಿರಲಿಲ್ಲ; ಅವುಗಳನ್ನು ನಿವಾರಿಸಲು ಅವನು ಹೆಣಗುತ್ತಿದ್ದ. ಉಸ್ಮಾನನ ಈ ಸತ್ಸ್ವಭಾವಗಳಿಗೆ ಕಾರಣಭೂತನು ಅವನ ತಂದೆಯಾದ ಮಹಮ್ಮದನಾಗಿದ್ದನೆಂದು ಹೇಳಬಹುದು. ಮಗನ ಸದ್ಗುಣ ಗಳಿಗೆ ಕಾರಣಭೂತನಾದ ತಂದೆಯ ಸ್ವಭಾವವನ್ನು ಇಲ್ಲಿ ವಿವರಿಸಬೇಕಾಗಿಲ್ಲ. ಏಕೆಂದರೆ ಮಗನಲ್ಲಿ ಈ ಸದ್ಗುಣಗಳನ್ನು ಬೆಳಿಸಿದ ತಂದೆಯ ಸ್ವಭಾವಗುಣ ಗಳನ್ನು ಊಹಿಸಿಕೊಳ್ಳಲು ವಾಚಕರಿಗೆ ಶಕ್ಯವಿದೆ.

ಉಸ್ಮಾನನ ಧೈರ್ಯ-ಸಾಹಸಗಳು ಅಲ್ಲಾವುದ್ದೀನನ ಕಿವಿಗಳಿಗೆ ತಲುಪಿ ದವು. ಅವನಿಗೆ ಈ ತರುಣನ ಮೇಲೆ ಅಭಿಮಾನ ಹುಟ್ಟಿತು. ಇಂಥ ಧೀರ ಪ್ರಕೃತಿಯವನು ತನ್ನ ಕೈಕೆಳಗಿದ್ದರೆ ಅದು ದೊಡ್ಡದಾದ ಒಂದು ಲಾಭವೆಂದೂ ಅವನು ತನ್ನ ಸಾಮ್ರಾಜ್ಯ ರಕ್ಷಣೆಗೆ ಅವಶ್ಯವೆಂದೂ ತಂತ್ರಜ್ಞನಾದ ಆ ಸುಲ್ತಾ ನನು ತಿಳಿದ. ಅದರಂತೆಯೇ ಅಲ್ಲಾಉದ್ದೀನನು ಉಸ್ಮಾನನನ್ನು ಮಣಿನಗರದ ಸರದಾರನನ್ನಾಗಿ ಮಾಡಿದನು. ಬಾದಶಹನಿಂದ ಲಭ್ಯವಾದ ಈ ಪದವಿ ಯನ್ನು ಉಸ್ಮಾನನು ತಿರಸ್ಕರಿಸಲಿಲ್ಲ. ತಂದೆಯ ಸಲಹೆಯಂತೆ ಅವನು ಮಣಿನಗರ ತಾಲೂಕಿನ ಆಡಳಿತವನ್ನು ನಡೆಸತೊಡಗಿದ.

ಇತರ ಪಠಾಣ ಸರದಾರರ ಆಡಳಿತದಂತೆ ಉಸ್ಮಾನನ ಪ್ರಭುತ್ವವು ಅನ್ಯಾಯ ಮತ್ತು ಅತ್ಯಾಚಾರಗಳಿಂದ ಕೂಡಿದುದಾಗಿರಲಿಲ್ಲ. ಅವನು ವಿದ್ಯಾವಂತನಿದ್ದುದರಿಂದ, ಅವನ ಸ್ವಭಾವವು ಸುಸಂಸ್ಕೃತವಾಗಿದ್ದುದರಿಂದ ಪ್ರಜೆಗಳನ್ನು ಹಿಂಸಿಸಲು ಅವನ ಮನವು ಒಪ್ಪಲಿಲ್ಲ. ಸಾಲದುದಕ್ಕೆ ಪಾರ‍್ಯಪರ‍್ಯವಾಗಿ ನಡೆದು ಬಂದ ಹಿಂದುಗಳ ಗೆಳೆತನವು ಎಲ್ಲ ಸಮುದಾಯಗಳನ್ನೂ ಸಮದೃಷ್ಟಿಯಲ್ಲಿ ನೋಡಲು ಅವನನ್ನು ಪ್ರೇರಿಸಿತು. ಆದುದರಿಂದ ಉಸ್ಮಾನನ ಆಡಳಿತವು ಇತರ ಪಠಾಣ ಸರದಾರರ ಆಡಳಿತದಂತೆ ಶಾಪವಾಗುವದರ ಬದಲು ಪ್ರಜೆಗಳಿಗೆ ಒಂದು ಅನುಗ್ರಹವಾಗಿ ಪರಿಣಮಿಸಿತು. ಅವನು ಪ್ರಜೆಗಳ ಮತಸ್ವಾತಂತ್ರ್ಯವನ್ನು ತಡೆಗಟ್ಟಲಿಲ್ಲ. ಅವನ ತಂದೆ ಮಹಮ್ಮದನು ಇಸ್ಲಾಂ ಧರ್ಮದಲ್ಲಿ ಅಪಾರ ಭಕ್ತಿನಿಷ್ಠೆಗಳುಳ್ಳವನಾಗಿದ್ದರೂ ಅನ್ಯ ಧರ್ಮೀಯರಿಗೆ ಕೇಡನ್ನು ಬಗೆಯುವ ಸ್ವಭಾವದವನಾಗಿರಲಿಲ್ಲ; ಇತರ ಮತದವರಿಗೆ ಕೇಡು ಬಗೆಯುವವೇ ಸ್ವಧರ್ಮದ ಮೇಲಿನ ನಿಷ್ಠೆಯನ್ನು ತೋರಿಸಲಿರುವ ಏಕಮಾರ್ಗವೆಂಬ ವಿಚಾರದವನಾಗಿರಲಿಲ್ಲ. ಅನ್ಯ ಧರ್ಮಾವಲಂಬಿಗಳಿಗೆ ಹಾನಿಯನ್ನುಂಟು ಮಾಡದೆ ಸ್ವಧರ್ಮ ನಿಷ್ಠೆಯನ್ನು ಆ ಮುದುಕನು ತೋರಿಸುತ್ತಿದ್ದನು. ಅನ್ಯ ಧರ್ಮದ ಮಹಿಳೆಯರ ಮೇಲೆ ಪಠಾಣರು ತೋರಿಸುತ್ತಿದ್ದ ಅನೀತಿಗಳನ್ನು ಮಹಮ್ಮದನು ಒಪ್ಪುತ್ತಿರಲಿಲ್ಲ ಹೆಂಗಸು ಯಾವ ಧರ್ಮಕ್ಕೆ ಸೇರಿದಾಕೆಯೇ ಇರಲಿ, ಅವಳನ್ನು ಗೌರವಿಸಬೇಕಾದುದು ಇಸ್ಲಾಂ ಧರ್ಮಾವಲಂಬಿಯ ಕರ್ತವ್ಯವೆಂದು ಆತನು ತಿಳಿದಿದ್ದನು. ಆದುದರಿಂದ ಅನ್ಯ ಧರ್ಮಕ್ಕೆ ಸೇರಿದ ಮಹಿಳೆಯ ಮೇಲೆ ಅಕ್ರಮವು ಜರಗದಂತೆ ಅವನು ಜಾಗರೂಕನಾಗಿದ್ದನು ಈ ಮಹಮ್ಮದನ ಮನಸ್ಥಿತಿಯು ಇತರ ಪಠಾಣರಿಗೂ ಇದ್ದಿದ್ದರೆ ಆ ಕಾಲದ ನಮ್ಮ ನಾಡಿನ ಚರಿತ್ರೆಯು ಇಷ್ಟು ಭಯಾನಕವಾಗುತ್ತಿರಲಿಲ್ಲ. ಪಠಾಣರು ಆ ಕಾಲದಲ್ಲಿ ಉದಾರ ಬುದ್ಧಿಯನ್ನು ತೋರಿಸಲಿಲ್ಲ; ಹಿಂದುಗಳು ತಮ್ಮ ಸೇಡನ್ನು ತೀರಿಸಿಕೊಳ್ಳಲು ಮರೆಯಲಿಲ್ಲ. ಆಗಲಿನ ಈ ಅಂತರವು ಈ ಎರಡು ವರ್ಗಗಳ ಮಧ್ಯದಲ್ಲಿ ಈಗಲೂ ನೆಲೆನಿಂತು ಬಂದಿದೆ. ಆಧುನಿಕ ಭಾರತದ ಮುಂದಾಳುಗಳು ಈ ಎರಡು ಪಕ್ಷಗಳ ಐಕ್ಯವನ್ನು ಸಾಧಿಸಲು ಹೆಣಗುತ್ತಿದ್ದರೂ ನಮ್ಮ ದುರ್ದೈವದಿಂದ ಆ ಅಂತರವು ಇನ್ನೂ ಇಲ್ಲದಾಗಿಲ್ಲ. ಈ ಅಂತರವು ಇಲ್ಲದಾಗುವನತಕ ನಮ್ಮ ದೇಶಕ್ಕೆ ಅಭ್ಯುನ್ನತಿಯ ಮಾರ್ಗವಿಲ್ಲದಾಗಿದೆ.

ಮುಹಮ್ಮದನಂಥ ಸುಸಂಸ್ಕೃತ ಪಠಾಣ ಗೃಹಸ್ಥನ ಪುತ್ರನು ಉಸ್ಮಾನ ನಾಗಿದ್ದುದರಿಂದ ತಂದೆಯ ಉದಾರ ಮನಸ್ಥಿತಿಯು ಮಗನಿಗೂ ಇದ್ದಿತು. ಆದುದರಿಂದ ಉಸ್ಮಾನನ ಆಡಳಿತವು ಪ್ರಜೆಗಳಿಗೆ ಒಂದು ಶಾಪವಾಗಿ ಪರಿಣ ಮಿಸಲಿಲ್ಲ. ಅವನು ನ್ಯಾಯುವ ಎಲ್ಲೆಯನ್ನು ಮೀರಿ ಪ್ರವೃತ್ತಿಸಲಿಲ್ಲ. ಅವನ ಆಡಳಿತವು ಹಿಂದೂ ಪ್ರಜೆಗಳು ಪಠಾಣರ ಆಳ್ವಿಕೆಯಲ್ಲಿ ಸಹಾ ಕ್ಷೇಮದಿಂದಿ ರಲು ಸಾಧ್ಯವಿದೆಯೆಂಬ ನಂಬಿಕೆಯನ್ನು ಹುಟ್ಟಿಸಿತು. ಉಸ್ಮಾನನು ಪ್ರಜಾನು ರಾಗವನ್ನು ಸಂಪಾದಿಸಿದ ಒಬ್ಬ ಸರದಾರನಾದನು. ತಂದೆಯಾದರೂ ರಾಜ್ಯದ ಆಡಳಿತದಲ್ಲಿ ಮಗನಿಗೆ ಯೋಗ್ಯ ಸಲಹೆಗಳನ್ನಿತ್ತು ದಾರಿಯನ್ನು ತೋರಿಸು ತ್ತಿದ್ದನು. ಅಕ್ರಮಿಯೂ ಸ್ವೇಚ್ಛಾವರ್ತಿಯೂ ಆದ ಅಲ್ಲಾವುದ್ದೀನನ ರಾಜ್ಯ ಭಾರದಲ್ಲಿ ಪ್ರಜೆಗಳಿಗೆ ಹೆಚ್ಚಿನ ಹಿತವನ್ನು ಸಾಧಿಸಲು ಸಾಧ್ಯವಾಗದಿದ್ದರೂ ಪಠಾಣ ಸಾಮ್ರಾಜ್ಯದ ಇತರ ಪ್ರಾಂತಗಳಂತೆ ಮಣಿನಗರದಲ್ಲಿ ಪ್ರಜಾಮರ್ದ ನೆಯು ಜರಗಲಿಲ್ಲ. ಪ್ರಜೆಗಳ ಮೇಲೆ ಈ ದಬ್ಬಾಳಿಕೆಯು ನಡೆಸದಿರುವದು ಎಷ್ಟು ದೊಡ್ಡ ಕೆಲಸವೆಂಬುದು ಆ ಕಾಲದ ಸ್ಥಿತಿಗತಿಗಳನ್ನು ಪರಾಮರ್ಶಿಸುವು ದಾದರೆ ನಮಗೆ ವ್ಯಕ್ತವಾಗುತ್ತದೆ.

ಆದರೆ ಪ್ರಜೆಗಳ ದೌರ್ಭಾಗ್ಯದಿಂದ ದೇಶದಲ್ಲಿ ಈ ಶಾಂತಿ-ಸಂತೃಪ್ತಿಗಳು ಬಹು ಕಾಲ ನೆಲೆಸಲಿಲ್ಲ. ದಾರುಣವಾದ ಒಂದು ಕ್ಷಾಮವು ಮಣಿನಗರ ಪ್ರಾಂ ತದಲ್ಲಿ ಹರಡಿತು. ಕಾಲಕ್ಕೆ ಸರಿಯಾಗಿ ಮಳೆಯುಂಟಾಗದುದರಿಂದ ಬಿತ್ತಿದ ಪೈರುಗಳು ಒಣಗಿ ಹೋದವು. ದನಕರುಗಳಿಗೆ ಹುಲ್ಲು ಮೇವುಗಳು ಇಲ್ಲ ದಾದುವು. ಜನರು ಅನ್ನವಿಲ್ಲದೆ ನರಳಹತ್ತಿದರು. ದಾರಿದ್ರ್ಯ ದೇವತೆಯು ತನ್ನ ಮುಸುಕನ್ನು ತೆಗೆದು ಅಲ್ಲಿ ತನ್ನ ಕರಾಳ ರೂಪವನ್ನು ತೋರಿಸಿದಳು. ಕರವಸೂಲಿಯ ಮಾತು ಹಾಗಿರಲಿ; ಮೃತ್ಯುವಿನ ಮುಖದಿಂದ ಪ್ರಜೆಗಳನ್ನು ಸಂರಕ್ಷಿಸುವದು ಹೇಗೆಂಬುದು ಒಂದು ದೊಡ್ಡ ಸಮಸ್ಯೆಯಾಯಿತು ಉಸ್ಮಾನ ನಿಗೆ. ಜನರು ದನಕರುಗಳನ್ನೂ ಬೆಲೆಯುಳ್ಳ ಆಭರಣಗಳನ್ನೂ ವಿಕ್ರಯಿಸತೊಡ ಗಿದರು; ಆದರೆ ಈ ಬರಗಾಲದಲ್ಲಿ ಕೊಂಡುಕೊಳ್ಳುವ ಮಂದಿ ವಿರಳರಾಗಿದ್ದರು. ಅವುಗಳನ್ನು ಕೊಂಡುಕೊಂಡರೂ ದೊರಕುವ ಬೆಲೆಯು ಅತ್ಯಲ್ಪವಾಗಿದ್ದಿತು. ದೇಶದಲ್ಲಿ ಆಹಾರ ಸಾಮಗ್ರಿಗಳ ಬೆಲೆಯು ಬಹಳ ಏರಿದ್ದುದರಿಂದ ದನಕರು ಗಳನ್ನು, ಒಡವೆ ವಸ್ತುಗಳನ್ನು ಮಾರಿ ಬಂದ ಹಣದಿಂದ ಜನರ ಜೀವನವು ಬಹು ದಿನಗಳ ವರೆಗೆ ಸಾಗಲಿಲ್ಲ. ಊರು ದಾರಿದ್ರ್ಯದ ಕೊನೆಯ ಮೆಟ್ಟಿಲಿಗೆ

ತಲುಪಿತು. ಅನ್ನವಿಲ್ಲವೆ ಜನರು ಇಲಿಗಳಂತೆ ಸಾಯತೊಡಗಿದರು. ರೋಗಗಳು ಹಟ್ಟತೊಡಗಿದುವು. ಒಂದು ಮಾತಿನಲ್ಲಿ ಹೇಳುವದಾದರೆ, ಮಣಿನಗರವು ಮೃತ್ಯುವಿನ ಲೀಲಾವಿನೋದದ ರಂಗಭೂಮಿಯಾಗಿ ಪರಿಣಮಿಸಿತು.

ನಾಡಿಗೆ ಬಂದೊದಗಿದ ಈ ದುರಂತವನ್ನು ದರ್ಶಿಸಿ ಆ ತಂದೆ-ಮಕ್ಕಳಿಬ್ಬರೂ ಬಹುವಾಗಿ ಮರುಗಿದರು. ಜನರನ್ನು ಈ ಗೋಳಿನಿಂದ ಸಲಹಬೇಕೆಂದು ಅವರಿಬ್ಬರೂ ಬಯಸಿದರು; ಆದರೆ ಹೇಗೆಂಬುದು ಮಾತ್ರ ಅವರಿಗೆ ತಿಳಿಯಲಿಲ್ಲ. ಸಾವಿನ ದವಡೆಗಳಿಂದ ಸಾವಿರಾರು ಕುಟುಂಬಗಳನ್ನು ರಕ್ಷಿಸುವುದೆಂದರೆ ಅದೊಂದು ಮಹತ್ವದ ಸಮಸ್ಯೆಯಾಗಿದ್ದಿತು. ಅಂತ್ಯದಲ್ಲಿ ಸರಕಾರದವರ ಸಹಾಯವನ್ನು ಬೇಡುವದೊಳ್ಳೆಯದೆಂದು ಆ ತಂದೆ-ಮಕ್ಕಳು ನಿರ್ಧರಿಸಿದರು. ಪ್ರಜೆಗಳ ದುಃಖಪರಿಹಾರದ ಬಗ್ಗೆ ಅಲ್ಲಾವುದ್ದೀನನ ಪ್ರಭುತ್ವವು ಸಹಾನುಭೂತಿಯನ್ನು ತೋರುವದೆಂಬ ನಂಬಿಗೆಯು ಉಸ್ಮಾನನಿಗಿರಲಿಲ್ಲ; ಆದರೆ ತಂದೆಯು ಪ್ರಯತ್ನಿಸಿ ನೋಡೆಂದು ಹೇಳಿದನು. ಮಣಿನಗರದ ಯಥಾರ್ಥ ಪರಿಸ್ಥಿತಿಗಳನ್ನು ಸುಭೇದಾರನಿಗೆ ತಿಳಿಸಿದರೆ, ಅವನು ಪ್ರಜೆಗಳ ದುಃಖ ಪರಿಹಾರದ ಬಗ್ಗೆ ಏನನ್ನಾದರೂ ಮಾಡಬಹುವೆಂದು ಆ ಮುದುಕನು ತರ್ಕಿಸಿದನು. ಇಸ್ಲಾಂ ಧರ್ಮದ ಪ್ರಧಾನ ತತ್ವವಾದ ದಯೆಯು ಸುಭೇದಾರನಲ್ಲಿ ಇರುವದಾದರೆ ಈ ಸಂಕಟನಿವಾರಣೆಯ ಕೆಲಸದಲ್ಲಿ ಅವನು ಮುಂದೆ ಬರುವನೆಂದು ಮಹಮ್ಮದನು ವಾದಿಸಿದನು. ಆ ವೃದ್ಧನು ಹೀಗೆ ತರ್ಕಿಸುವದಕ್ಕೆ ಕಾರಣವು ಪಠಾಣರ ಆಳ್ವಿಕೆಯಲ್ಲಿ ಅವನಿಗಿರುವ ನಂಬಿಕೆಯಾಗಿದ್ದಿತು ಪಠಾಣರ ಹೃದಯಗಳು ಮೃಗೀಯತೆಯನ್ನು ಹೊಂದಿಲ್ಲವೆಂದು ಅವನು ಬಗೆದಿದ್ದನು.

ಆದರೆ ತಂದೆಯ ನುಡಿಗಳಲ್ಲಿ ಉಸ್ಮಾನನಿಗೆ ಹೆಚ್ಚಿಗೆ ನಂಬಿಕೆಯಿರಲಿಲ್ಲ. ಪ್ರಜೆಗಳ ದುಃಖಗಳನ್ನು ಪರಿಹರಿಸಲು ಸುಭೇದಾರನು ಉದ್ಯುಕ್ತನಾಗುವನೆಂದು ಅವನು ಭಾವಿಸಲಿಲ್ಲ. ಏಕೆಂದರೆ ಮಣಿನಗರದ ಸುತ್ತಮುತ್ತಲಿನ ತಾಲುಕುಗಳಲ್ಲಿ ಸಹಾ ಕ್ಷಾಮವು ಪಸರಿಸಿದ್ದಿತು; ಆದರೆ ಅಲ್ಲಿನ ಅಧಿಕಾರಿಗಳು ಜನರ ಸಂಕಟ ನಿವಾರಣೆಕಾಗಿ ಏನನ್ನೂ ಮಾಡಿರಲಿಲ್ಲ, ಎಂದು ಮಾತ್ರವಲ್ಲ, ಅಲ್ಲಿನ ಅಧಿಕಾರಿಗಳು ಕರವಸೂಲಿ ಮಾಡಲು ಜನರನ್ನು ಚಿತ್ರಹಿಂಸೆಗೆ ಗುರಿಮಾಡುತ್ತಿದ್ದರು; ಮಹಿಳೆಯರನ್ನು ಅಪಮಾನಪಡಿಸಲು ಆ ದುಷ್ಟರು ಹಿಂಜರಿಯಲಿಲ್ಲ. ಈ ಸಂಗತಿಗಳನ್ನು ಉಸ್ಮಾನನು ಕೇಳಿ ತಿಳಿದಿದ್ದ. ದಯೆ

ಯೆಂದರೇನೆಂಬುದನ್ನರಿಯದ ಅಧಿಕಾರಿಗಳು ಜನರ ಕ್ಷೇಮವನ್ನು ಚಿಂತಿಸುವದು ಪ್ರಯಾಸವೆಂದು ಉಸ್ಮಾನನಿಗೆ ಗೊತ್ತಿದ್ದಿತು. ಆದರೂ ತಂದೆಯ ಸಲಹೆಯಂತೆ ರೂಪನಗರಕ್ಕೆ ತೆರಳಿ ತನ್ನ ತಾಲೂಕಿನ ದುರಂತ ಚಿತ್ರವನ್ನು ಸುಭೇದಾರನ ಮುಂದಿಡುವ ಕೆಲಸದಲ್ಲಿ ಉಸ್ಮಾನನು ವೈಮುಸ್ಯವನ್ನು ತೋರಿಸಲಿಲ್ಲ.

ತಂದೆಯ ನಿರ್ದೇಶದಂತೆ ಉಸ್ಮಾನನು ರೂಪನಗರಕ್ಕೆ ತೆರಳಿದನು. ಅವನು ತನ್ನ ತಾಲೂಕಿನ ಸ್ಥಿತಿಗತಿಗಳನ್ನು ಸುಭೇದಾರನ ಮುಂದೆ ಹೇಗೆ ಮಂಡಿಸಿದನೆಂಬುದನ್ನೂ, ಸುಭೇದಾರನಿಂದ ಉಸ್ಮಾನನಿಗೆ ದೊರಕಿದ ಉತ್ತರವೇನೆಂಬುದನ್ನೂ ಕಳೆದ ಅಧ್ಯಾಯದಲ್ಲಿ ನಾವು ತಿಳಿದುಕೊಂಡಿರುವೆವು. ರೂಪನಗರದಿಂದ ಉಸ್ಮಾನನು ನಿರಾಶೆಯಿಂದ ಹಿಂದಿರುಗಬೇಕಾಗಿ ಬಂದಿತೆಂದು ಮಾತ್ರವಲ್ಲ; ಸುಭೇದಾರನು ಪ್ರಜೆಗಳನ್ನು ಚಿತ್ರಹಿಂಸೆಗೆ ಗುರಿಪಡಿಸಿಯಾದರೂ ಕರವಸೂಲಿ ಮಾಡಬೇಕೆಂದು ಆಜ್ಞಾಪಿಸಿದ್ದನು. ಉಸ್ಮಾನನು ಭಗ್ನಮನೋರಥನಾಗಿ ತನ್ನ ಊರಿಗೆ ಹಿಂದಿರುಗಬೇಕಾಗಿ ಬಂದಿತು.

ಅವನು ಹಿಂದಿರುಗಿ ಬಂದು ಸುಭೇದಾರನಿಂದ ತನಗೆ ಲಭ್ಯವಾದ ಆಜ್ಞೆಯನ್ನು ತನ್ನ ತಂದೆಗೆ ತಿಳಿಸಿದನು ಉಸ್ಮಾನನು ರೂಪನಗರದಿಂದ ಹಿಂದಿರುಗಿ ಬಂದ ಮೇಲೆ ತನ್ನ ತಂದೆಯೊಡನೆ ನಡೆಸಿದ ಸಂಭಾಷಣೆಯ ಒಂದು ಭಾಗವಾಗಿದೆ ಈ ಅಧ್ಯಾಯದ ಪ್ರಾರಂಭದಲ್ಲಿ ಹೇಳಿರುವುದು. ಸುಭೇದಾರನ ಆಜ್ಞೆಯು ಆ ವೃದ್ಧನ ಎದೆಗೆ ನೋವನ್ನುಂಟು ಮಾಡಿತೆಂಬದರಲ್ಲಿ ಸಂಶಯವಿಲ್ಲ; ಆದರೆ ಮಾಡುವದೇನು? ದಬ್ಬಾಳಿಕೆಯಲ್ಲಿ ಭಾಗವನ್ನು ವಹಿಸದೆ ಅದರಿಂದ ಆದಷ್ಟು ದೂರವಿರಲು ಮಾತ್ರ ಶಕ್ಯವೆಂದು ಮಹಮ್ಮದನು ಗ್ರಹಿಸಿದ. ಅದರಂತೆ ವರ್ತಿಸಲು ಮಗನಿಗೆ ಉಪದೇಶಿಸಿದ.

---

## ೫ ಇಬ್ಬರು ಮಹಾತ್ಮರು.

ಕಲಕಲ ಗಾನವನ್ನು ಮಾಡುತ್ತಾ, ಕಲ್ಲು ಬಂಡೆಗಳ ಮೇಲಿಂದ ನೆಗೆದು ಬಂದು ಚಿಕ್ಕ ಹೊಳೆಯು ತನ್ನ ಯಾತ್ರೆಯನ್ನು ಮುಂದುವರಿಸಿದ್ದಿತು. ಎರಡೂ ತೀರಗಳಲ್ಲಿ ಬೆಳೆದು ನಿಂತ ಉನ್ನತ ದ್ರುಮಗಳು ಮೌನದಿಂದ ನದಿರಾಣಿಯು ಹಾಡುತ್ತಿರುವ ಸಂಗತಿಯನ್ನು ಆಸ್ವಾದಿಸಿ ರಸವನ್ನು ಹೀರುತ್ತಿದ್ದುವು. ತಳಿರೆಡೆಗಾಗಿ ತನ್ನ ಕಿರಣಗಳನ್ನು ಚೆಲ್ಲಿ ನದಿರಾಣಿಯ ಸೌಂದರ್ಯ

ವನ್ನು ಇಣಿಕಿ ನೋಡುತ್ತಿದ್ದನು ದಿವಾಕರನು. ಸಮಯವು ಮುಂಜಾನೆ; ಆಗ ತಾನೆ ಉದಯವನ್ನು ಹೊಂದಿ ಬಾಂದಳದಲ್ಲಿ ಏರಿ ಬರುತ್ತಿರುವ ನೇಸರನ್ನು ನೋಡಿ ಹರುಷದಿಂದ ಪಿಕಗಳು ಮಧುರಗಾನವನ್ನು ಹಾಡುತ್ತಿದ್ದವು. ಮನುಷ್ಯನು ಮಾತ್ರವಲ್ಲ, ತಾವು ಸಹ ಸಂಗೀತವನ್ನು ಕೇಳಿ ಆನಂದಿಸಬಲ್ಲೆವೆಂಬುದನ್ನು ಸೂಚಿಸುವಂತೆ ಹುಲ್ಲೆಗಳು ತಮ್ಮ ಕಿವಿಗಳನ್ನು ನಿಗುರಿಸಿ ಹೊಳೆಯ ಸಿಹಿನೀರನ್ನು ಕುಡಿಯುತ್ತಿದ್ದುವು. ನೀರಡಿಕೆಯನ್ನು ತಣಿಸುವದಕ್ಕೆಂದು ತನ್ನ ಬಳಿಗೆ ಬಂದ ಹರಿಣಗಳನ್ನು ನೋಡಿ ನದಿರಾಣಿ ಒಂದು ಮೃದುಹಾಸವನ್ನು ಹೊರಚಲ್ಲುತ್ತಾ ಮುಂದೆ ಗಮಿಸುತ್ತಿದ್ದಳು.

ಆ ಹೊಳೆಯ ತೀರದಲ್ಲಿ ಒಂದು ಕುಟೀರವು ನಿಂತಿದ್ದಿತು. ಅಹುದು, ಅದನ್ನು ಒಂದು ಮನೆಯೆಂದು ಕರೆಯುವದರ ಬದಲು ಒಂದು ಪರ್ಣಶಾಲೆಯೆಂದು ಕರೆಯುವದು ಲೇಸು. ಆ ತಳಿರ ಮನೆಯ ಮುಂದಿರುವ ಚಪ್ಪರದಡಿಯಲ್ಲಿ ಪ್ರೌಢ ವಯಸ್ಕನಾದ ಒಬ್ಬ ಪುರುಷನು ಕುಳಿತಿದ್ದನು. ಅವನ ಗಡ್ಡವು ಉದ್ದವಾಗಿ ಬೆಳೆದುದರಿಂದ ಅವನ ಮೋರೆಯು ಸರಿಯಾಗಿ ಗೋಚರಿಸುತ್ತಿದ್ದಿಲ್ಲ; ಆದರೂ ಅದು ಚಲುವಾದುದೆಂದು ಹೇಳಬಹುದು. ಅವನ ನೇತ್ರಗಳಿಂದ ಸ್ಫುರಿಸುತ್ತಿರುವ ತೇಜಸ್ಸು ಪ್ರೇಕ್ಷಕರ ಹೃದಯದಲ್ಲಿ ಅವನನ್ನು ಕುರಿತು ಒಂದು ತರದ ಗೌರವ ಭಾವನೆಯು ಉದಿಸುವಂತೆ ಮಾಡದಿರಲಾರದು. ಅವನನ್ನು ನೋಡಿದೊಡನೆಯೇ ಆ ದೇಹದಲ್ಲಿ ಅಸಾಧಾರಣವಾದ ಒಂದು ಚೈತನ್ಯವು ಪ್ರವಹಿಸುತ್ತಿರುವದು ಕಂಡುಬರುತ್ತಿದ್ದಿತು. ಅವನ ಆಕೃತಿಯು ಗಂಭೀರಭಾವವುಳ್ಳದ್ದು; ಅವನ ವಿಶಾಲ ಲಲಾಟದ ಮೇಲೆ ಮೂಡಿದ ಗೆರೆಗಳು ಅವನು ವಿಚಾರಶಾಲಿಯಾದ ಒಬ್ಬ ಮನುಷ್ಯನೆಂಬುದನ್ನು ಸೂಚಿಸುತ್ತಿದ್ದವು. ಅವನ ರೀತಿಗಳಿಂದ ಅವನೊಬ್ಬ ಸಂನ್ಯಾಸಿ ಅಥವಾ ಯೋಗಿಯೆಂಬುದನ್ನು ತಿಳಿದುಕೊಳ್ಳಬಹುದು.

ಚಪ್ಪರದಡಿಯಲ್ಲಿರುವ ಒಂದು ಹುಲ್ಲು ಚಾಪೆಯ ಮೇಲೆ ಆ ಗೌರವಾಕೃತಿಯ ಮನುಷ್ಯನು ಮಂಡಿಸಿದ್ದನು. ಅವನ ಪಕ್ಕದಲ್ಲಿಯೇ ಕೈಜೋಡಿಸಿ ಒಬ್ಬ ತರುಣನು ಕುಳಿತಿದ್ದ. ಅವನ ಪ್ರಾಯವು ೨೩-೨೪ ಇರಬಹುದು. ಅವನ ಆಕೃತಿಯು ಚಲುವಾದುದು; ಗಂಭೀರಭಾವದಿಂದ ಕೂಡಿದ ವದನಮಂಡಲವಾಗಿದ್ದಿತು ಅವನದು. ಅವನು ಪ್ರೌಢವಯಸ್ಕನಲ್ಲಿ ಬಹು ಭಕ್ತಿಯುಳ್ಳವನಾಗಿದ್ದನು. ಅವನ ಮುಖಮುದ್ರೆಯು ಅವನು ವಿಚಾರಮಗ್ನನಾಗಿರುವನೆಂಬ

ದನ್ನು ಸೂಚಿಸುತ್ತಿದ್ದಿತು. ಅದರಂತೆಯೇ ಪ್ರೌಢ ವಯುಸ್ಕನಾದವರೂ ವಿಚಾರ ಮಗ್ನನಾಗಿದ್ದನು.

"ಗುರುದೇವ!" ತರುಣನು ಕೈಜೋಡಿಸಿ ಹೇಳಿದನು: "ನಮ್ಮ ಜನರ ಗೋಳು ಪ್ರತಿ ನಿಮಿಷವೂ ಹೆಚ್ಚುತ್ತಲಿದೆ. ಕ್ಷಾಮದಿಂದ ಪ್ರಜೆಗಳು ನರಳುತ್ತಿದ್ದಾರೆ. ಪಠಾಣರ ಅತ್ಯಾಚಾರಗಳ ಮೂಲಕ ನಾಡು ಕಂಗಾಲಾಗಿದೆ. ಪ್ರಜೆಗಳ ಹೆಂಡರು-ಮಕ್ಕಳನ್ನು ವಿಕ್ರಯಿಸಿ, ಕರವಸೂಲಿ ಮಾಡಲು ಅಧಿಕಾರಿಗಳು ಹಿಂಜರಿಯುವದಿಲ್ಲ. ಜನರು ನರಕಯಾತನೆಗಳನ್ನು ಸಹಿಸುತ್ತಿದ್ದಾರೆ. ನಾಡು ಬಡತನದ ಕೊನೆಯ ಮೆಟ್ಟಿಲಿಗೆ ತಲುಪಿದೆ. ಈ ದುರಂತವನ್ನು ನೋಡಿ ಮೌನದಿಂದಿರಲು ಸಾಧ್ಯವಾಗುವಂತಿಲ್ಲ. ನಿರಪರಾಧಿ ಜನರ ಮೇಲೆ ಆಳುವವರು ನಡೆಸುತ್ತಿರುವ ದಬ್ಬಾಳಿಕೆಯನ್ನು ನೋಡಿ ನನ್ನ ನೆತ್ತರು ಕುದಿಯುತ್ತಲಿದೆ. ಈ ದುರಾಚಾರಗಳನ್ನು ನಾವು ಎದುರಿಸಬೇಕೆಂದು ನನಗೆ ಅನಿಸುತ್ತದೆ."

"ಕುಮಾರ!" ಮೃದುಸ್ಮಿತವೊಂದನ್ನು ಹೊರಚೆಲ್ಲಿ ಸಂನ್ಯಾಸಿಯು ನುಡಿದನು: "ಅವಸರ ಪಡಬೇಡ. ಆ ವೇಳೆಯು ಇನ್ನೂ ಬಂದಿಲ್ಲ. ನಮ್ಮ ನಾಡಿನ ಪರಿಸ್ಥಿತಿಯು ಭಯಾನಕವಾಗಿವೆಯೆಂಬುದು ನಿಜ. ಜನರು ಅಪಾರ ಸಂಕಟಗಳನ್ನು ಅನುಭವಿಸುತ್ತಿದ್ದಾರೆ; ಆದರೂ ಅವರ ಹೃದಯಗಳಲ್ಲಿ ಸ್ವಾಭಿಮಾನವು ಇನ್ನೂ ಜಾಗೃತವಾಗಿಲ್ಲ; ಪರಾಧೀನತೆಯ ರೌದ್ರರೂಪವು ಅವರಿಗಿನ್ನೂ ತಿಳಿದಿಲ್ಲ. ಕುರಿಗಳಂತೆ ದುಃಖಿಸುತ್ತಿದ್ದಾರೆಯೇ ಹೊರತು ತಮ್ಮ ಸಂಕಟಗಳಿಗೆ ಕಾರಣಗಳಾವುವೆಂಬುದನ್ನು ಚಿಂತಿಸತಕ್ಕ ಬಲವನ್ನು ಅವರಿನ್ನೂ ಸಂಪಾದಿಸಿರುವದಿಲ್ಲ. ಅವರಲ್ಲಿ ಜ್ಞಾನೋದಯವಾಗಬೇಕು; ಸ್ವಾಭಿಮಾನವು ಜಾಗೃತವಾಗಬೇಕು. ಈಗ ಅನುಭವಿಸುತ್ತಿರುವ ಸಂಕಟಗಳಿಂದ ಮೋಚನೆಯನ್ನು ಹೊಂದಲು ಸ್ವಾಧೀನತೆಯೇ ದಿವ್ಯೌಷಧವೆಂಬುದನ್ನು ಜನರು ತಿಳಿಯಬೇಕು. ಈ ಜ್ಞಾನವು ಅವರಲ್ಲಿ ಉದಯವನ್ನು ಹೊಂದಬೇಕಾದರೆ ಈಗಿನ ಸಂಕಟಗಳನ್ನೂ ದುಃಖಗಳನ್ನೂ ಅವರು ಸಹಿಸಲೇ ಬೇಕಾಗಿರುತ್ತದೆ. ಅದಕ್ಕಾಗಿ ನಾವು ನೊಂದುಕೊಳ್ಳುವದರಿಂದ ಪ್ರಯೋಜನವಿಲ್ಲ."

"ಗುರುದೇವ, ಈಗಿನ ದಬ್ಬಾಳಿಕೆಯನ್ನು ಜನರು ಅನುಭವಿಸುತ್ತಿರುವದನ್ನು ಕಂಡೂ ನಾವು ಭೀರುಗಳಂತೆ ಮೌನದಿಂದಿರಬೇಕೆಂದು ನೀವು ಹೇಳುವಿರೇ? ಪಠಾಣರ ಅತ್ಯಾಚಾರಗಳನ್ನು ನೋಡಿ ಮೌನದಿಂದಿರಲು ನನಗೆ ಸಾಧ್ಯವಾಗುವದಿಲ್ಲ ಅವರನ್ನು ಯಾವ ರೀತಿಯಿಂದಲಾದರೂ ಎದುರಿಸಬೇಕೆಂದೆನಿ

ಸುತ್ತವೆ ನನಗೆ. ಮೊನ್ನೆಯ ದಿನ ಆ ಸಂದರ್ಭದಲ್ಲಿ ನಾನು ತಲುಪದಿದ್ದರೆ ಆ ಬಡ ಕೃಷಿಗಾರರ ಮಗಳ ಶೀಲಭಂಗವನ್ನು ಆ ಉನ್ಮತ್ತ ಪಠಾಣನು ಮಾಡು ತ್ತಿದ್ದ. ಸಕಾಲದಲ್ಲಿ ನನಗೆ ತಲುಪಲು ಸಾಧ್ಯವಾದುದರಿಂದ ಅವಳ ಶೀಲವನ್ನು ರಕ್ಷಿಸಲು ನನಗೆ ಸಾಧ್ಯವಾಯಿತು ಇದರಂತೆ ಸಕಾಲದಲ್ಲಿ ರಕ್ಷಣೆಯೊದಗದೆ ಎಷ್ಟು ಮಂದಿ ಆರ್ಯ ಮಹಿಳೆಯರ ಶೀಲವು ಈ ದುರಾತ್ಮರಿಂದ ಅಪಹೃತ ವಾಗುತ್ತಲಿದೆಯೆಂಬುದನ್ನು ವಿಚಾರಿಸುವಾಗ ನನ್ನ ಮೈಮೇಲಿನ ರೋಮಗಳು ಎದ್ದು ನಿಲ್ಲುತ್ತವೆ. ಈ ದುರಂತಗಳನ್ನೆಲ್ಲಾ ವೀಕ್ಷಿಸಿ ಮೌನದಿಂದಿರಲು ನನ್ನ ಆತ್ಮವು ಒಪ್ಪುವದಿಲ್ಲ." ಪ್ರಕ್ಷುಬ್ಧವಾದ ಸ್ವರದಲ್ಲಿ ತರುಣನು ಮಾತಾಡಿದನು. ಅವನ ಮನವು ಉದ್ವೇಗಭರಿತವಾಗಿದ್ದಿತು. ಅವನ ಕಣ್ಣುಗಳು ಸಿಟ್ಟಿನ ಕಿಡಿ ಗಳನ್ನು ಹೊರಚಲ್ಲುತ್ತಿದ್ದವು.

ತರುಣನ ಮಾತುಗಳನ್ನು ಕೇಳಿ ತಪಸ್ವಿಯು ಉದ್ವೇಗಪರವಶನಾಗಲಿಲ್ಲ. ಅವನ ಮೋರೆಯು ಯಾವ ಭಾವಬೇಧವನ್ನೂ ಹೊಂದಲಿಲ್ಲ. ಮೊದಲಿನ ಆ ಶಾಂತಸ್ವರದಲ್ಲಿಯೇ ಅವನು ಹೇಳಿದನು: "ಕುಮಾರ, ದುಡಕಬೇಡ; ಅದ ರಿಂದ ಹಾನಿಯಲ್ಲದೆ ಬೇರೆ ಯಾವ ಲಾಭವೂ ಉಂಟಾಗದು. ಇಂದಿನ ಅತ್ಯಾ ಚಾರಗಳನ್ನು ಎದುರಿಸಲು ಜನರ ಎದೆಗಳಲ್ಲಿ ವಿಚಾರವುದಿಸುವ ಮುನ್ನ ನಾವು ಕೆಲವು ಮಂದಿ ದುಡುಕುವುದರಿಂದ ಯಾವ ಪ್ರಯೋಜನವಿದೆ? ಕೆಲವು ಮಂ ದಿಯ ಪ್ರಾಣನಷ್ಟವಲ್ಲದೆ ಅದಕ್ಕಿಂತ ಹೆಚ್ಚಿನ ಲಾಭವುಂಟಾಗದು. ಈ ಸಂದರ್ಭ ದಲ್ಲಿ ಜನರಲ್ಲಿ ಜ್ಞಾನೋದಯವನ್ನುಂಟು ಮಾಡಲು ನಾವು ಹೆಣಗಬೇಕಾಗಿದೆ; ಅದಲ್ಲದೆ ಈಗ ನಾವು ಒಂದು ಕ್ರಾಂತಿಯನ್ನೆಬ್ಬಿಸಿದರೆ ಅದು ಪರಾಜಯದಲ್ಲಿ ಎಣಿಸಲ್ಪಡುತ್ತದೆ. ಪ್ರತಿ ದಿನವೂ ನಮ್ಮ ನಾಡಿನ ಸಹೋದರಿಯರ ಮಾನವು ನಷ್ಟವಾಗುತ್ತಲಿದೆ; ಜನರು ವಿವಿಧ ಹಿಂಸೆಗಳಿಗೆ ಗುರಿಯಾಗುತ್ತಿದ್ದಾರೆ. ಈ ಅತ್ಯಾಚಾರಗಳಿಂದ, ಈ ಅಪಮಾನಗಳಿಂದ ಮೋಚನೆಯನ್ನು ಹೊಂದಬೇಕಾ ದರೆ ಸ್ವಾಧೀನತೆಯು ಅತ್ಯಾವಶ್ಯಕವೆಂಬುದನ್ನು ಜನರು ತಿಳಿದುಕೊಳ್ಳಬೇಕಾ ಗಿದೆ. ಕುಮಾರ, ಅದುವರೆಗೆ ನಾವು ಶಾಂತರಾಗಿರಬೇಕಾಗುತ್ತದೆ. ದುಡುಕುವದ ರಿಂದ ಯಾವ ಪ್ರಯೋಜನವೂ ದೊರಕದು. ಕೇವಲ ಅಭಿಮಾನ ಪ್ರೇರಿತರಾಗಿ ಕ್ರಾಂತಿಯನ್ನೆಬ್ಬಿಸುವ ಮುನ್ನ ನಾವು ತುಸು ಆಲೋಚಿಸಬೇಕಾಗಿದೆ. ಪ್ರತಿ ಯೊಂದು ಹೆಜ್ಜೆಯನ್ನೂ ಮುಂದಿಡುವ ಮುನ್ನ ನಾವು ಚಿಂತಿಸಬೇಕು. ಹಾಗಾ ದರೆ ಹೆಚ್ಚಿನ ಕ್ಲೇಶಗಳಿಗೆ ಒಳಗಾಗದೆ ನಿರ್ದಿಷ್ಟ ಸ್ಥಾನಕ್ಕೆ ತಲುಪಬಹುದು;

ಅದಲ್ಲದೆ ಆಲೋಚನೆಯಿಲ್ಲದೆ ಕೆಲಸ ಮಾಡುವದು ಒಳ್ಳೆಯದಲ್ಲ."

ತಪಸ್ವಿಯ ಈ ಹಿತೋಪದೇಶದಿಂದ ತರುಣನ ಪ್ರಕ್ಷುಬ್ಧವಾದ ಚಿತ್ತವು ತುಸ ಶಾಂತತೆಯನ್ನು ಹೊಂದಿತು. ತಪಸ್ವಿಯ ಮೃದುಮಧುರ ಕಂಠಸ್ವರವು ಯಾರ ಹೃದಯವನ್ನು ಶಾಂತಗೊಳಿಸದಿರದು? ಆ ಅದ್ಭುತ ಶಕ್ತಿಯು ತಪಸ್ವಿಯ ನುಡಿಗಳಿಗಿದ್ದಿತು. ಅವನ ಉಪದೇಶವನ್ನು ಆಶ್ರಾವಿಸಿದ ಮೇಲೆ ತರುಣನು ತುಸ ಶಾಂತನಾಗಿ ಹೇಳಿದನು: "ಗುರುದೇವ, ಹಾಗಾದರೆ ನೀವು ಏನು ಮಾಡಬೇಕೆಂದು ನಿರ್ದೇಶಿಸುವಿರಿ? ಈ ಅತ್ಯಾಚಾರಗಳನ್ನು ನೋಡುತ್ತಾ ಮೌನದಿಂದಿರಬೇಕೆಂದು ನಿಮ್ಮ ಇಚ್ಛೆಯಾಗಿದೆಯೇ?"

"ಭೀರುಗಳಂತೆ ಮೌನದಿಂದಿರಲು ನಾನು ಹೇಳುವುದಿಲ್ಲ. ಕುಮಾರ, ನಮ್ಮ ಜನರಲ್ಲಿ ಹರಡಿರುವ ಭೀರುತನವನ್ನು ಹೋಗಲಾಡಿಸಲು ನಾವು ಪ್ರಯತ್ನಿಸಬೇಕಾಗಿದೆ. ಧೈರ್ಯದಿಂದ ನಾವು ಜನರಲ್ಲಿ ಪಸರಿಸಿರುವ ಅಜ್ಞಾನ ಯಾಮಿನಿಯನ್ನು ನೀಗುವಂತೆ ಮಾಡಲು ನಾವು ಉದ್ಯಮಿಸಬೇಕು. ಜನರ ಹೃದಯಗಳಲ್ಲಿ ಶೌರ್ಯಸಂಜೀವನವನ್ನು ಚೆಲ್ಲುವದು ಅತ್ಯಾವಶ್ಯಕ; ಜನರು ಒಂದಾಗುವಂತೆ ಮಾಡಲು ಹೆಣಗೋಣ. ಹೆಣ್ಣು-ಗಂಡು, ಹಾರುವ-ಹೊಲೆಯ ಇವರೆಲ್ಲರೂ ಒಂದಾಗಲಿ. ಎಲ್ಲರ ಹೃದಯಗಳಲ್ಲಿಯೂ ಸ್ವಾಧೀನತೆಯ ದಿವ್ಯ ಪ್ರಭೆಯು ಪಸರಿಸಲಿ! ಆಗ ನಮ್ಮ ನಾಡು ನೆತ್ತರ ಕಾಲುವೆಯನ್ನು ಹರಿಸದೆ, ಕಳೆದುಕೊಂಡ ಸ್ವಾತಂತ್ರ್ಯವನ್ನು ಮರಳಿ ಪಡೆಯಲು ಸಾಧ್ಯವಾಗಬಹುದು; ಆದರೆ ಈ ಸ್ವಾಧೀನತೆಯು ದೊರಕಬೇಕಾದರೆ ಪರಾಧೀನತೆಯೇ ತಮ್ಮ ಸಕಲ ಸಂಕಟಗಳಿಗೂ ಮೂಲ ಕಾರಣವೆಂಬುದನ್ನು ಜನರು ತಿಳಿದುಕೊಳ್ಳಬೇಕಾಗಿದೆ ಪರಾಧೀನತೆಯ ಮನೋಭಾವವನ್ನು ನೀಗಬೇಕು. ನಮ್ಮ ಕರ್ಮಕುಶಲತೆಯನ್ನು ಜನರಲ್ಲಿ ಜಾಗೃತಿಯನ್ನುಂಟು ಮಾಡತಕ್ಕ ಕೆಲಸಗಳಲ್ಲಿ ನಾವೀಗ ಉಪಯೋಗಿಸಬೇಕಾಗಿದೆ."

ಈ ರೀತಿ ತಪಸ್ವಿಯ ವದನದಿಂದ ಗಂಭೀರವಾದ ಉಪದೇಶ ಪ್ರವಾಹವು ನಿರರ್ಗಳವಾಗಿ ಪ್ರವಹಿಸಿತು. ಕುಮಾರನು ಶಾಂತನಾಗಿ ಗುರುದೇವನ ವಚನಾಮೃತವನ್ನು ಆಶ್ರಾವಿಸಿದನು. ತಪಸ್ವಿಯ ನುಡಿಗಳು ತರುಣನ ಹೃದಯದಲ್ಲಿ ಹೊಸ ಉತ್ಸಾಹವನ್ನು ಹುಟ್ಟಿಸಿದವು. ಅವನ ಎದೆಯಲ್ಲಿ ವ್ಯಾಪಿಸಿದ್ದ ದುಗುಡವನ್ನು ಗುರುದೇವನ ನುಡಿಗಳು ಹೋಗಲಾಡಿಸಿದುವು; ಹೊಸದೊಂದು ಕರ್ಮಪದ್ಧತಿಯನ್ನು ಅವನಿಗೆ ತೋರಿಸಿದುವು.

ಗುರು-ಶಿಷ್ಯರಿಬ್ಬರೂ ತಮ್ಮ ನಾಡಿನ ಅಭ್ಯುದಯವನ್ನು ಕುರಿತು ತರ್ಕಿಸುತ್ತಿದ್ದಾಗ ಆ ತಳಿರು ಮನೆಯ ಕಡೆಗೆ ಬೇರೊಂದು ವ್ಯಕ್ತಿಯು ಬರುತ್ತಿದ್ದಿತು. ಅವನೊಬ್ಬ ಪುರುಷನು; ಐವತ್ತು ವರುಷಗಳ ಪ್ರಾಯವಿರಬಹುದು. ತೆಳ್ಳಗಿನ ಮೈಕಟ್ಟು; ಆದರೆ ಕಾಂತಿಯುಕ್ತವಾದ ಕಣ್ಣುಗಳು. ಅವನ ಮೋರೆಯಿಂದ ಒಂದು ಅಸಾಧಾರಣ ಜ್ಯೋತಿಯು ಸ್ಫುರಿಸುತ್ತಿದ್ದಿತು. ಉದ್ದವಾದ ಬೀಳೀ ಗಡ್ಡವು ಬೆಳೆದು ಅವನ ಎದೆಯ ಮೇಲೆ ಬಿದ್ದಿದ್ದಿತು. ಕಾಲುಗಳಲ್ಲಿ ಚರ್ಮದ ಎರಡು ಚಪ್ಪಲಿಗಳು; ಬಲಗೈಯಲ್ಲಿ ಒಂದು ದಂಡ. ಉದ್ದವಾದ ಬೀಳೀ ಲುಂಗಿಯನ್ನು ಧರಿಸಿದ್ದನಾತ. ಅವನ ವೇಷ-ಭೂಷಣಗಳಿಂದ ಅವನೊಬ್ಬ ಪಠಾಣ ಗೃಹಸ್ಥನೆಂಬುದು ವ್ಯಕ್ತವಾಗುತ್ತಿದ್ದಿತು. ಅವನು ತಳಿರು ಮನೆಯ ಕಡೆಗೆ ಬರುತ್ತಿದ್ದನು.

ಎಲೆ ಮನೆಯ ಮುಂದೆ ಕುಳಿತಿರುವ ತಪಸ್ವಿಯು ತನ್ನ ಕುಟೀರದ ಕಡೆಗೆ ಬರುತ್ತಿದ್ದ ಪಠಾಣ ಗೃಹಸ್ಥನನ್ನು ಕಂಡನು. ಇಬ್ಬರ ದೃಷ್ಟಿಗಳೂ ಒಂದು ಗೂಡಿದುವು. ತಪಸ್ವಿಯು ತನ್ನ ಆಸನದಿಂದ ಎದ್ದು ನಿಂತನು. ಹರುಷದ ಕಳೆಯು ಆತನ ಕಣ್ಣುಗಳಲ್ಲಿ ಸ್ಫುರಿಸಲಾರಂಭಿಸಿತು. ಪಠಾಣ ಗೃಹಸ್ಥನು ತೀರ ಸನಿಯಕ್ಕೆ ಬಂದನು. ತಪಸ್ವಿಯು ಓಡಿ ಹೋಗಿ ಆ ಪಠಾಣನನ್ನು ತಬ್ಬಿಕೊಂಡನು. ಪಠಾಣನು ತನ್ನ ತೋಳುಗಳನ್ನು ಚಾಚಿ ತಪಸ್ವಿಯ ನ್ನು ಸ್ವೀಕರಿಸಿದನು. ಇಬ್ಬರ ನೇತ್ರಗಳಿಂದಲೂ ಹರ್ಷಬಾಷ್ಪಗಳು ಉಕ್ಕಿ ಹರಿದುವು. ಪಠಾಣನು ತಪಸ್ವಿಯ ಎದೆಯ ಮೇಲೆ ತನ್ನ ಮಸ್ತಕವನ್ನು ಮಡುಗಿದನು. ತಪಸ್ವಿಯು ಆಗಂತುಕನನ್ನು ತಬ್ಬಿಕೊಂಡ ಆ ಚಿತ್ರವು ತಾಯಿ ತನ್ನ ಕೂಸನ್ನು ಮುದ್ದಿಡುವ ಚಿತ್ರವನ್ನು ಹೋಲುತ್ತಿದ್ದಿತು. ಇಬ್ಬರ ವದನಗಳಿಂದಲೂ ನುಡಿಗಳು ಹೊರಸೂಸಲಿಲ್ಲ; ಮೌನವೇ ಅವರ ಭಾಷೆ! ಕಣ್ಣುಗಳಲ್ಲಿರುವ ಪ್ರಭೆಯು ಪರಸ್ಪರ ಹೃದಯಗಳನ್ನು ತಿಳಿದುಕೊಳ್ಳಬರುವ ಉಪಕರಣವಾಯಿತು. ಒಬ್ಬನು ಹಿಂದೂ ಮತದ ಸಂನ್ಯಾಸಿ; ಹಿಂದೂ ಮತಾದರ್ಶಗಳು ಆತನಲ್ಲಿ ರೂಪುಗೊಂಡಿದ್ದವು. ಇನ್ನೊಬ್ಬನಾದರೋ ಇಸ್ಲಾಂ ಧರ್ಮದ ಫಕೀರ; ಇಸ್ಲಾಂ ಸಂಸ್ಕಾರವು ಅವನಲ್ಲಿ ಹರಿಯುತ್ತಿದ್ದಿತು. ಪರಸ್ಪರ ಕಾದಾಡುತ್ತಿದ್ದ ಎರಡು ಬೇರೆ ಬೇರೆ ಧರ್ಮಗಳ ಅನುಯಾಯಿಗಳವರ ; ತಮ್ಮ ಧರ್ಮಗಳ ಅಭ್ಯುನ್ನತಿಯನ್ನು ಕಾಂಕ್ಷಿಸಿ ಪ್ರಯತ್ನಿಸುತ್ತಿರುವ ಎರಡು ಮಂದಿ ಮಹಾತ್ಮರವರು! ಆದರೆ ಅವರಿಬ್ಬರೂ ಸ್ನೇಹವಾಹಿನಿಯಲ್ಲಿ ಮುಳುಗಿ, ಎರಡು ಮಂದಿ

ಸಹೋದರರು ಅಪ್ಪಿಕೊಳ್ಳುವಂತೆ ಅವರು ಆಲಿಂಗನದಿಂದ ಬಂಧಿತರಾಗಿದ್ದರು. ಅದು ಎರಡು ವ್ಯಕ್ತಿಗಳ ಆಲಿಂಗನವಲ್ಲ. ಎರಡು ಮಹಾಜೀವಿಗಳ, ಎರಡು ಧರ್ಮಗಳ, ಎರಡು ಸಂಸ್ಕೃತಿಗಳ ಸಮ್ಮಿಲನವಾಗಿದ್ದಿತು ಅದು! ಅದು ಹಿಂದೂ-ಮುಸ್ಲೀಂ ಐಕ್ಯತೆಯ ಒಂದು ಭವ್ಯ ಚಿತ್ರ!

ತುಸ ಸಮಯದ ವರೆಗೆ ಅವರಿಬ್ಬರೂ ಆಲಿಂಗನದಲ್ಲಿ ನಿರತರಾಗಿದ್ದು ಎಲ್ಲವನ್ನೂ ಮರೆತಿದ್ದರು. ಕುಮಾರನು ಈ ಪಾವನ ಚಿತ್ರವನ್ನು ಸಕೌತುಕ ಪೂರ್ಣ ಲೋಚನನಾಗಿ ವೀಕ್ಷಿಸುತ್ತಲಿದ್ದನು. ತುಸ ಸಮಯವು ಕಳೆಯಿತು. ತಪಸ್ವಿಯು ತನ್ನ ಕೈಗಳೆರಡನ್ನೂ ಫಕೀರನ ದೇಹದಿಂದ ತೆಗೆದು ಹೇಳಿದನು:- "ಫಕೀರಸಾಹೇಬ! ಬಹು ದಿನಗಳಿಂದ ನಿಮ್ಮ ಹಾದಿಯನ್ನು ಇದಿರು ನೋಡು ತ್ತಿದ್ದೆ. ಈಗ ನಿಮ್ಮ ದರ್ಶನದಿಂದ ನನ್ನ ಮನವು ಹಿಗ್ಗಿದೆ. ಆರೋಗ್ಯ ದಿಂದಿರುವಿರಲ್ಲವೇ?"

"ಸ್ವಾಮಿಜೀ, ಆರೋಗ್ಯವಿದೆ. ನಿಮ್ಮ ಸನ್ನಿಧಿಗೆ ಬರಬೇಕೆಂದು ಬಹು ದಿನಗಳಿಂದ ಬಯಸುತ್ತಿದ್ದೆ. ಕಾರ್ಯಾಂತರದಿಂದ ದೂರ ದೇಶಗಳಿಗೆ ತೆರಳ ಬೇಕಾಗಿ ಬಂದಿತು. ಅಂದರೆ ಇಸ್ಲಾಂ ಧರ್ಮದವರ ಪುಣ್ಯಕ್ಷೇತ್ರವಾದ ಮಕ್ಕಕ್ಕೆ ಹೋಗಿದ್ದೆ. ಈ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಹಿಂದಿ ರುಗಿ ಬರುವಾಗ ರಾಜ್ಯದಲ್ಲಿ ದುರ್ಭಿಕ್ಷೆ ಮತ್ತು ಅಶಾಂತೆಗಳು ಹರಡಿದ್ದುವು. ಅಧಿಕಾರಿಗಳ ಸ್ವೇಚ್ಛಾವರ್ತನೆಯು ಅದರ ಪರಾಕಾಷ್ಠತೆಗೆ ತಲುಪಿದ್ದಿತು. ಹಸಿವೆಯಿಂದ ಜನತೆಯು ನರಳತೊಡಗಿತ್ತು. ಈ ಭೀಕರ ಚಿತ್ರದರ್ಶನದಿಂದ ನನ್ನ ಎದೆಯು ದಂಗಾಗಿ ಹೋಗಿದೆ. ಈ ವೇಳೆಯಲ್ಲಿ ಜನತೆಯ ಕಷ್ಟ ನಿವಾ ರಣೆಗೆ ದಾರಿಯೇನೆಂಬುದು ನನಗೆ ತಿಳಿಯದಾಗಿದೆ. ಆ ಬಗ್ಗೆ ನಿಮ್ಮೊಡನೆ ಮಾತಾಡಬೇಕೆಂಬ ಹಂಬಲದಿಂದ ಈ ಕಡೆ ಹೊರಟೆ."

"ಮಕ್ಕಾ ದರ್ಶನದಿಂದ ನಿಮ್ಮ ಆತ್ಮವು ಶಾಂತತೆಯನ್ನು ಸವಿಯಿತೇ? ಪರಿಶುದ್ಧ ಪೈಗಂಬರರ ಕ್ಷೇತ್ರದರ್ಶನದಿಂದ ನೀವು ಕೃತಾರ್ಥತೆಯನ್ನು ಪಡೆದಿ ರೆಂದು ಭಾವಿಸುತ್ತೇನೆ.

"ಸ್ವಾಮಿಜೀ! ಏಕೆ ಈ ಉಪಹಾಸ?" ಎಳೆ ನಗೆಯನ್ನು ಬೀರಿ, ಫಕೀ ರನು ಚಪ್ಪರದಡಿಯಲ್ಲಿ ಹಾಸಿದ ಚಾಪೆಯ ಮೇಲೆ ಕುಳಿತುಕೊಂಡು ಹೇಳಿ ದನು: "ಎಲ್ಲಿ ಸತ್ಯವೂ ನ್ಯಾಯವೂ ಇರುವವೋ ಅದೇ ಪುಣ್ಯಕ್ಷೇತ್ರ. ಅದ ಕ್ಕಿಂತ ಮಿಗಿಲಾದುದು ಈ ಜಗತ್ತಿನಲ್ಲಿ ಬೇರೊಂದಿಲ್ಲ. ಹಾಗಾದರೆ ನಾನೇಕೆ

ಮಕ್ಕಾಕ್ಕೆ ಹೋದುದೇಕೆಂದು ನೀವು ಪ್ರಶ್ನಿಸಬಹುದು. ನಾನು ಹೋದುದು ಪಡುವಲಿನಲ್ಲಿರುವ ಇಸ್ಲಾಂ ಜನತೆಯ ಸಂಪರ್ಕವನ್ನು ಪಡೆಯುವದಕ್ಕೆ ಮಾತ್ರವಾಗಿದೆ. ಅಲ್ಲಿನ ಇಸ್ಲಾಂ ಸಂಸ್ಕೃತಿಯ ಪರಿಚಯವನ್ನು ಹೊಂದುವ ದಕ್ಕೆ ಮಾತ್ರವಾಗಿದೆ."

"ಪಡುವಲು ದೇಶಗಳ ಇಸ್ಲಾಂ ಜನತೆಯ ಪರಿಚಯದಿಂದ ನೀವು ಏನ ನ್ನು ಗ್ರಹಿಸಿದಿರಿ?" ಹೀಗೆ ಫಕೀರನ ಮೋರೆಯನ್ನು ನೋಡುತ್ತ ತಪಸ್ವಿಯು ಪ್ರಶ್ನಿಸಿದ.

"ಅಪಾರವಾದ ತಿಳಿವನ್ನು ಸಂಪಾದಿಸಿದೆನು. ಸ್ವಾಮಿಜೀ, ಪಡುವಲಿನ ಇಸ್ಲಾಂ ರಾಜ್ಯಗಳು ಬಹಳ ಮುಂದುವರಿದಿವೆ. ಜನತೆಯು ಸುಸಂಸ್ಕೃತ ವಾಗಿದೆ; ಅತ್ಯುಚ್ಚ ನಾಗರಿಕತೆಯನ್ನು ಅಲ್ಲಿನ ಜನತೆಯು ಪಡೆದಿದೆ. ನಮ್ಮ ಇಲ್ಲಿನ ಜನತೆಯನ್ನು ಅವರೊಡನೆ ಹೋಲಿಸಿ ನೋಡುವಾಗ ನಾವು ಬೇಪ ರಂತಿದ್ದೇವೆ. ಇರಲಿ. ಈಗ ನಮ್ಮ ನಾಡಿಗೆ ಬಂದೊದಗಿದ ವಿಪತ್ತುಗಳಿಗೆ ಏನು ಪರಿಹಾರ?"

"ಸ್ವಾಧೀನತೆಯನ್ನು ಪಡೆಯುವದು." ತಪಸ್ವಿಯು ಒಂದು ಗಂಭೀರ ನೋಟವನ್ನು ಫಕೀರನ ಕಡೆಗೆ ಬೀರಿದನು.

"ಅಂದರೆ?" ಫಕೀರನು ಪ್ರಶ್ನಿಸಿದ.

"ಈಗಿನ ಆಡಳಿತವನ್ನು ನಾಮಾವಶೇಷವಾಗುವಂತೆ ಮಾಡಬೇಕು. ರಾಜನಿಗಾಗಿ ಪ್ರಜೆಗಳು ಜೀವಿಸುವದರ ಬದಲು, ಪ್ರಜೆಗಳಿಗೆ ಅರಸನು ಜೀವಿಸ ವಂತಾಗಬೇಕು. ಅಂದರೆ ಇಂದಿನ ಶಾಸನ ಸಂಪ್ರದಾಯವನ್ನು ಅಡಿ ಮೇಲು ಮಾಡಬೇಕಾಗಿದೆ. ಹಾಗಾದರೆ ಮಾತ್ರ ಜನರ ಸಂಕಟಗಳು ಪರಿಹಾರವಾಗ, ವವು."

"ನಿಮ್ಮ ಮಾತುಗಳ ತಾತ್ಪರ್ಯವನ್ನು ಗ್ರಹಿಸಿದೆ. ಈಗಿನ ಪಠಾಣ ಪ್ರಭುತ್ವವು ನಾಶವಾಗಬೇಕೆಂಬುದು ನಿಮ್ಮಿಚ್ಛೆಯಿದೆಯೆಂದು ತೋರುತ್ತದೆ."

"ಫಕೀರ ಸಾಹೇಬ, ಪಠಾಣರ ಮೇಲಾಗಲೀ, ಇಸ್ಲಾಮಿನ ಮೇಲಾ ಗಲೀ ನನಗೆ ಯಾವ ವಿದ್ವೇಷವೂ ಇರುವುದಿಲ್ಲ. ನಮ್ಮ ಕೃಷ್ಣನ ಮೇಲೆ ನಾನು ತೋರಿಸುತ್ತಿರುವ ಭಕ್ತಿಯನ್ನೇ ನಿಮ್ಮ ಪೈಗಂಬರರ ಮೇಲೂ ನಾನು ತೋರಿ ಸುತ್ತಿರುವೆನು. ಗೀತೆಯನ್ನು ನಾನು ಗೌರವಿಸುವಂತೆಯೇ ನಿಮ್ಮ ಖುರಾನು ಸಹ ಪರಿಶುದ್ಧವಾದುದೆಂದು ಬಹುಮಾನಿಸುತ್ತಿದ್ದೇನೆ; ಆದರೆ ಪೈಗಂಬರರ

ಅನುಯಾಯಿಗಳೆಂದು ಹೇಳಿಕೊಳ್ಳುತ್ತಿರುವ ಇಂದಿನ ಪಠಾಣ ಶಾಸಕರ ಧೋರಣೆಯನ್ನು ನಾನು ತೀವ್ರವಾಗಿ ಎದುರಿಸುತ್ತಿದ್ದೇನೆ. ಅವರು ನ್ಯಾಯಸಮ್ಮತವಾದ ರೀತಿಯಲ್ಲಿ ಜನಕ್ಷೇಮ ಚಿಂತನೆಯಿಂದ ಉದ್ಯಮಿಸುತ್ತಿದ್ದರೆ ಜನರನ್ನು ಪಾಲಿಸುವದು ತಮ್ಮ ಕರ್ತವ್ಯವೆಂದು ತಿಳಿದು ಅದರಂತೆ ವರ್ತಿಸುತ್ತಿದ್ದರೆ, ನಾನು ಅವರನ್ನು ಹಳಿಯುತ್ತಿರಲಿಲ್ಲ; ಆದರೆ ನಮ್ಮ ದುರ್ದೈವದಿಂದ ಪಠಾಣರ ಆಳ್ವಿಕೆಯು ಪ್ರಜಾಕ್ಷೇಮಕಾರಿಯಲ್ಲ. ಮಹಿಳೆಯರ ಶೀಲವು ಸುರಕ್ಷಿತವಾಗಿಲ್ಲ. ಕುನ್ನಿ ಬಾಳನ್ನು ನಾವು ಅನುಭವಿಸಬೇಕಾಗಿ ಬಂದಿದೆ. ದುರ್ಭಿಕ್ಷೆಯು ದೇಶದಲ್ಲೆಲ್ಲಾ ಪಸರಿಸಿರುವಾಗ ಪ್ರಜೆಗಳ ದುಃಖಪರಿಹಾರದ ಬಗ್ಗೆ ಚಿಂತಿಸುವದನ್ನು ಬಿಟ್ಟು, ಅಧಿಕಾರಿಗಳು ಪ್ರಜೆಗಳ ಹೆಂಡತಿ-ಮಕ್ಕಳನ್ನು ವಿಕ್ರಯಿಸಿ ಕರವಸೂಲಿ ಮಾಡ ಹೊರಟಿದ್ದಾರೆ. ಈ ಪೈಶಾಚಿಕ ವರ್ತನೆಗಳನ್ನು ಎದುರಿಸಲು ನಮ್ಮಲ್ಲಿರುವ ಮನುಷ್ಯತ್ವವು ಪ್ರೇರೇಪಿಸುತ್ತದೆ. ಇಂದಿನ ಆಡಳಿತವನ್ನು ಅಡಿಮೇಲು ಮಾಡದೆ. ಪ್ರಜೆಗಳಿಗೆ ಶಾಂತಿ ಮತ್ತು ಸುಖಗಳು ಲಭ್ಯವಾಗಲಾರವು ಎಂದು ನನಗೆ ಮನದಟ್ಟಾಗಿದೆ. ಈ ರೀತಿ ನಾನು ಚಿಂತಿಸುತ್ತಿರುವದು ಧರ್ಮಾಂಧತೆಯಿಂದಲ್ಲ. ಪಠಾಣರು ತಮ್ಮ ದಬ್ಬಾಳಿಕೆಯನ್ನು ಉಪೇಕ್ಷಿಸಿ ಪ್ರಜೆಗಳ ಹಿತದೃಷ್ಟಿಯಲ್ಲಿ ರಾಜ್ಯಭಾರವನ್ನೆಸಗಿಸಲಿ. ಆಗ ಅವರೊಡನೆ ಸಹರ್ಷದಿಂದ ನಾನು ಸಹಕರಿಸುವೆ. ಆಳತಕ್ಕವರು ಯಾರೆಂಬುದಕ್ಕೆ ನಾನು ಪ್ರಾಧಾನ್ಯತೆಯನ್ನು ಕೊಡುತ್ತಲಿರಲಿಲ್ಲ. ಪಠಾಣರೇ ಆಳಲಿ; ಅಥವಾ ಹಿಂದುಗಳೇ ಆಳಲಿ. ಆದರೆ ಆಡಳಿತವು ಪ್ರಜಾಹಿತಕ್ಕಾಗಿಯಾಗಿರಬೇಕು. ಆಳುವವರು ಪ್ರಜೆಗಳನ್ನು ಮುರಿಯಕೂಡದು."

ತಪಸ್ವಿಯ ಸ್ಪಷ್ಟವಾದ ನುಡಿಗಳನ್ನು ಫಕೀರನು ಶಾಂತಚಿತ್ತದಿಂದ ಕೇಳಿದನು. ಅವನು ಸ್ವಲ್ಪ ಸಮಯದ ವರೆಗೆ ಮೌನವನ್ನವಲಂಬಿಸಿದನು. ಅವನ ಮನಸ್ಸು ಅಗಾಧವಾದ ವಿಚಾರಗಳ ಕಡಲಿನಲ್ಲಿ ಮುಳುಗಿತು. ಆ ಮೇಲೆ ಅವನು ಮೃದು ಸ್ವರದಲ್ಲಿ ಹೇಳಿದನು: "ಸ್ವಾಮಿಜೀ, ನೀವು ಹೇಳುತ್ತಿರುವದು ನಿಜ; ನಿಮ್ಮ ನುಡಿಗಳಲ್ಲಿ ಸತ್ಯಾಂಶವಿದೆ. ಅಹುದು, ಆಳುವವರು ಪ್ರಜೆಗಳ ಕ್ಷೇಮವನ್ನು ವಿಸ್ಮರಿಸಕೂಡದು. ತನ್ನ ಮಕ್ಕಳಂತೆ ಅರಸನು ಪ್ರಜೆಗಳನ್ನು ಪೋಷಿಸಬೇಕು; ಆದರೆ ಈ ಸತ್ಯವು ನಮ್ಮ ಪಠಾಣ ಶಾಸಕರ ಮೆದುಳಿನೊಳಗೆ ಪ್ರವೇಶಿಸುವಂತಿಲ್ಲ. ತಮ್ಮ ಸ್ವಧರ್ಮದ ಕಡೆಗೇ ಲಕ್ಷ್ಯವನ್ನಿಟ್ಟು ಪ್ರಜೆಗಳನ್ನು ಅವರು ಯಾತನೆಗಳಿಗೊಳಪಡಿಸುತ್ತಿದ್ದಾರೆ.

ಅವರ ವರ್ತನೆಗಳಿಂದ ಇಸ್ಲಾಂ ಧರ್ಮವು ಕಲಂಕಿತವಾಗುತ್ತಲಿದೆ. ನಾನು ಒಂದು ಪಠಾಣ ವಂಶದಲ್ಲಿ ಹುಟ್ಟಿದವನೆಂಬುದು ನಿಜ. ಇಸ್ಲಾಂ ಧರ್ಮದಲ್ಲಿ ನನಗೆ ಭಕ್ತಿವಿಶ್ವಾಸಗಳಿವೆ; ಆದರೆ ಧರ್ಮದ ಹೆಸರಿನಲ್ಲಿ ಅಧಿಕಾರಿಗಳು ಜರುಗಿಸುತ್ತಲಿರುವ ಅತ್ಯಾಚಾರಗಳನ್ನು ನಾನು ಸಮರ್ಥಿಸಲಾರೆ. ಮನುಷ್ಯತ್ವವನ್ನು ಪ್ರೀತಿಸಬೇಕೆಂಬುದನ್ನು ನಾನು ತಿಳಿದಿದ್ದೇನೆ. ಆದುದರಿಂದ ಒಬ್ಬ ಸ್ವಧರ್ಮೀಯನನ್ನು ಪ್ರೀತಿಸುವಂತೆಯೇ ಒಬ್ಬ ಹಿಂದುವನ್ನು ಸಹ ನಾನು ಪ್ರೀತಿಸುತ್ತಲಿದ್ದೇನೆ. ಈ ಎರಡು ಧರ್ಮದವರೂ ಗೆಳೆತನದಿಂದ ಬಾಳಬೇಕೆಂಬದು ನನ್ನ ಕಾಂಕ್ಷೆಯಾಗಿರುತ್ತದೆ. ಆ ಉದ್ದೇಶದಿಂದ ನಾನು ಉದ್ಯಮಿಸುತ್ತಿದ್ದೇನೆ. ಇಸ್ಲಾಂ ಧರ್ಮದವರು ಆರ್ಯ ಸಂಸ್ಕೃತಿಯ ಮಹತ್ವವನ್ನು ತಿಳಿದುಕೊಳ್ಳಬೇಕು. ಅದರಂತೆಯೇ ಹಿಂದುಗಳು ಇಸ್ಲಾಂ ಸಂಸ್ಕೃತಿಯೆಂದರೇನೆಂಬದನ್ನು ತಿಳಿಯಲು ಶಕ್ತರಾಗಬೇಕು. ಪರಸ್ಪರ ತಿಳಿದುಕೊಂಡು ಮನುಷ್ಯನಿಗಿರುವ ಎರಡು ಕಣ್ಣುಗಳಂತೆ ಹಿಂದುಸ್ಥಾನಲ್ಲಿ ಬಾಳಬೇಕೆಂಬುದು ನನ್ನ ಜೀವನದ ಆ-ಕಾಂಕ್ಷೆಯಾಗಿರುತ್ತದೆ. ಎರಡೂ ಧರ್ಮದವರ ನಡುವಿನ ಅಂತರವನ್ನು ಹೋಗಲಾಡಿಸಲು ನಾನು ಪ್ರಯತ್ನಿಸುತ್ತಿರುವೆನು; ಆದರೆ ದೌರ್ಭಾಗ್ಯದಿಂದ ನನ್ನ ಪ್ರಯತ್ನಗಳು ವಿಫಲವಾಗುತ್ತಲಿವೆ. ಪಠಾಣ ಅಧಿಕಾರಿಗಳ ಅವಿವರ್ತನೆಗಳು ಈ ಅಂತರವನ್ನು ಹೆಚ್ಚಿಸುತ್ತಲಿವೆ."

"ಫಕೀರಸಾಹೇಬ!" ಸ್ನೇಹಪೂರ್ಣ ವಾಣಿಯಲ್ಲಿ ತಪಸ್ವಿಯು ಹೇಳಿದನು: "ನಿಮ್ಮ ಉದ್ದೇಶಶುದ್ಧಿಯನ್ನು ನಾನು ಬಲ್ಲೆ. ನಿಮ್ಮಂತೆಯೇ ಇತರ ಪಠಾಣರೂ ವರ್ತಿಸುವದಾಗಿದ್ದರೆ ಈ ಅಶಾಂತತೆಗಳಾಗಲೀ, ಕಲಹಗಳಾಗಲೀ ಉದಯಿಸುತ್ತಿರಲಿಲ್ಲ. ಪಠಾಣ ಅಧಿಕಾರಿಗಳು ಪ್ರಜೆಗಳ ಕಡೆಗೆ ಗಮನವನ್ನಿಡದೆ ಅಕ್ರಮಗಳನ್ನು ಜರುಗಿಸುತ್ತಿದ್ದಾರೆ. ನಮ್ಮ ಮಾನವು ದಿಕ್ಕಾಪಾಲಾಗಿದೆ. ನಮ್ಮ ಅಭಿಮಾನವನ್ನು ಸಂರಕ್ಷಿಸಲು, ನಮ್ಮ ಲಲನೆಯರ ಶೀಲವನ್ನುಳಿಸಲು ಪ್ರಭುತ್ವವನ್ನು ಎದುರಿಸಬೇಕೆಂದು ನನ್ನಲ್ಲಿರುವ ಮನುಷ್ಯತ್ವವು ನುಡಿಯುತ್ತಲಿದೆ. ನಾವು ಈಗಿನ ಆಳ್ವಿಕೆಯನ್ನು ಅಡಿಮೇಲು ಮಾಡಹೊರಟಿರುವದು ನಿಜ."

"ಸ್ವಾಮಿಜೀ, ಆತ್ಮಾಭಿಮಾನಿಯೆನಿಸಿಕೊಂಡ ಮಾನವನು ಈಗಿನ ಆಳ್ವಿಕೆಯನ್ನು ಒಪ್ಪಲಾರ; ಆದರೆ ಭೀಕರ ಬಂಡಾಯದಿಂದ ನಾಡಿನ ಹಿತವನ್ನು ಸಾಧಿಸಲು ಆಗುತ್ತದೆಂಬುದನ್ನು ನಾನು ನಂಬುವದಿಲ್ಲ. ಭಯಂಕರ

ವಾದ ಒಂದು ನೆತ್ತರಿನ ನದಿಯನ್ನು ಹರಿಸುವವಲ್ಲದೆ ಅದಕ್ಕಿಂತ ಹೆಚ್ಚಿನ ಲಾಭವು ಸಿದ್ಧಿಸಲಾರದು. ಆಳುವವರ ಹೃದಯಪರಿವರ್ತನೆಗಳಿಂದ ಮಾತ್ರ ದೇಶದ ಕ್ಷೇಮವನ್ನು ಸಾಧಿಸಲು ಶಕ್ಯವಿವೆಯೆಂದು ನನ್ನ ವಿಶ್ವಾಸವಾಗಿದೆ."

"ಫಕೀರಸಾಹೇಬ, ನಿಮ್ಮ ನುಡಿಯ ತಾತ್ಪರ್ಯವು ನನಗೆ ಹೊಳೆಯಿತು; ಆದರೆ ಹೃದಯವಿಲ್ಲದವರಲ್ಲಿ ಹೃದಯಪರಿವರ್ತನೆಯುಂಟಾಗುವದು ಹೇಗೆ? ಪಠಾಣ ಅಧಿಕಾರಿಗಳಿಗೆ ಮಾನುಷ ಹೃದಯಗಳು ಇರುವುದಾಗಿದ್ದರೆ ಈ ರೀತಿಯ ಮೃಗೀಯ ಶಾಸನವನ್ನು ಕೈಕೊಳ್ಳುತ್ತಿರಲಿಲ್ಲ. ಭೀಷಣ ಕ್ರಾಂತಿಯೊಂದನ್ನುಂಟು ಮಾಡಿ ಜನರನ್ನು ಇದಕ್ಕಿಂತಲೂ ದಾರುಣವಾದ ಕಿಚ್ಚಿನಲ್ಲಿ ದೂಡಲು ನಾನು ಬಯಸುತ್ತಲಿಲ್ಲ; ಆದರೆ ಅದು ಅನಿವಾರ್ಯವಾಗಿ ಬಂದೊದಗಿದೆ. ಅಹುದು, ಇಂದಿನ ವ್ಯಥೆಗಳನ್ನು ನೀಗಬೇಕಾದರೆ ಜನತೆಯು ಇನ್ನೂ ಸ್ವಲ್ಪ ಹೆಚ್ಚು ನೋವನ್ನು ಸಹಿಸಬೇಕಾಗಿ ಬರುತ್ತದೆ."

ದಯಾಪೂರ್ಣ ನೋಟವೊಂದನ್ನು ಚೆಲ್ಲಿ ಫಕೀರನು ತಪಸ್ವಿಯ ಮೋರೆಯನ್ನು ನೋಡಿದನು. ಇಬ್ಬರ ನೇತ್ರಗಳಿಂದಲೂ ಸ್ಫುರಿಸುತ್ತಿರುವ ಕಾಂತಿಗಳು ಬೇರೆ ಬೇರೆ ಆಗಿದ್ದವು. ತಪಸ್ವಿಯು ಶೌರ್ಯ ಮತ್ತು ಆತ್ಮಾಭಿಮಾನದ ಮೂರ್ತಿಯಾಗಿದ್ದರೆ, ಫಕೀರನು ಕರುಣೆ ಮತ್ತು ಸ್ನೇಹಗಳ ಬುಗ್ಗೆಯಂತಿದ್ದನು. ತಪಸ್ವಿಯು ತನ್ನ ಧ್ಯೇಯಸಾಧನೆಗಾಗಿ ಯಾವ ಭೀಕರ ಉದ್ಯಮಗಳನ್ನು ಜರಗಿಸಲೂ ಹಿಂಜರಿಯುವವನು. ಅದನ್ನು ಮೇಲಿನ ಸಂಭಾಷಣೆಯಿಂದ ಓದುಗರು ತಿಳಿದುಕೊಂಡಿರಬಹುದು. ಫಕೀರನು ಹಾಗಲ್ಲ; ತನ್ನ ಆದರ್ಶವು ಎಷ್ಟು ಮಹತ್ತರವಾಗಿದ್ದರೂ, ಅದರ ಸಾಧನೆಯಲ್ಲಿ ಅನ್ಯರಿಗೆ ಕೆಡುಕಾಗದಂತೆ ನೋಡಿಕೊಳ್ಳಲು ಅವನು ಜಾಗರೂಕನಾಗಿದ್ದ. ಹಿಂಸೆಯನ್ನು ಅವನು ಒಪ್ಪುತ್ತಿರಲಿಲ್ಲ. ಆದುದರಿಂದ ಪ್ರಭುತ್ವವನ್ನು ಅಡಿಮೇಲು ಮಾಡಲು ಬಂಡಾಯವನ್ನೆಬ್ಬಿಸಬೇಕೆಂಬ ತಪಸ್ವಿಯ ಆಲೋಚನೆಯನ್ನು ಫಕೀರನು ಸ್ವಾಭಾವಿಕವಾಗಿಯೇ ವಿರೋಧಿಸಿದ; ಆದರೆ ತಪಸ್ವಿಯು ಕಾಲೊಳಗೆ ನಾಟಿದ ಒಂದು ಮುಳ್ಳನ್ನು ತೆಗೆಯಲು ಇನ್ನೊಂದು ಮುಳ್ಳು ಅತ್ಯಾವಶ್ಯಕವೆಂಬ ವಿಚಾರದವನಾಗಿದ್ದನು. ಸದ್ಯದ ಭೀಕರ ದುರಂತಗಳಿಂದ ಪಾರಾಗಲು ಯಾವ ಘೋರ ಕರ್ಮಗಳನ್ನೆಸಗಿದರೂ ಅವು ಕ್ಷಮ್ಯವಾದುವೆಂದು ತಪಸ್ವಿಯ ವಿಚಾರವಾಗಿದ್ದಿತು; ಆದರೆ ಫಕೀರನಿಗೆ ಈ ಘೋರ ಕರ್ಮಗಳಿಂದ ನಾಡಿಗೆ ಶಾಂತಿದೊರಕಬಹುದೆಂಬ ನಂಬಿಕೆಯಿರಲಿಲ್ಲ; ಆದರೆ ಅವರಿಬ್ಬರೂ ಪರಾಧೀನತೆ

ಯನ್ನು ಎದುರಿಸುತ್ತಿದ್ದರು. ಪ್ರಭುತ್ವದಲ್ಲಿ ಒಂದು ಪರಿವರ್ತನೆಯಾಗದೆ ನಾಡಿಗೆ ಕ್ಷೇಮುಸಿಗದೆಂದು ಅವರಿಬ್ಬರೂ ತಿಳಿದಿದ್ದರು; ಆದರೆ ದುಷ್ಪ್ರಭುತ್ವವನ್ನು ಹೋಗಲಾಡಿಸಲು ಅವರಿಬ್ಬರು ಸ್ವೀಕರಿಸಿದ ದಾರಿಗಳೆರಡು ವಿಭಿನ್ನವಾದವುಗಳು. ಆಡಳಿತವನ್ನು ಅಡಿಮೇಲು ಮಾಡಿ ಹೊಸದೊಂದು ಶಾಸನಕೋಟೆಯನ್ನು ರಚಿಸಲು ಹೊರಟಿದ್ದನು ತಪಸ್ವಿಯು; ಆದರೆ ಫಕೀರನು ಅಧಿಕಾರಿಗಳಲ್ಲಿ ಒಂದು ಹೃದಯ ಪರಿವರ್ತನೆಯನ್ನುಂಟುಮಾಡುವುದರಿಂದ ನಾಡಿನ ದುರವಸ್ಥೆಯು ನೀಗಬಹುವೆಂಬ ವಿಶ್ವಾಸದವನಾಗಿದ್ದನು. ಈ ಹೃದಯ ಪರಿವರ್ತನೆಯು ಅಸಾಧ್ಯವೆಂದು ತಪಸ್ವಿಯ ವಿಚಾರವಾಗಿದ್ದಿತು. ಈ ಎರಡು ಮಂದಿ ಮಹಾತ್ಮರ ಕರ್ಮಪದ್ಧತಿಗಳು ವಿಭಿನ್ನವಾದವುಗಳಾಗಿದ್ದರೂ ಅವರಿಬ್ಬರ ಆದರ್ಶಗಳು ಒಂವೇ ಆಗಿದ್ದವು. ಜನತೆಯ ಕ್ಷೇಮುವನ್ನು ಅವರಿಬ್ಬರೂ ಚಿಂತಿಸುತ್ತಿದ್ದರು.

ಫಕೀರನು ಸ್ನೇಹಪರಿಪೂರ್ಣವಾದ ಧ್ವನಿಯಲ್ಲಿ ಹೇಳಿದನು: "ಸ್ವಾಮೀಜೀ, ಮಾನವ ವರ್ಗದಲ್ಲಿ ನನಗಿರುವ ವಿಶ್ವಾಸವು ಅಳಿದಿಲ್ಲ. ಮನುಷ್ಯನು ಎಷ್ಟು ಕಲಂಕಿತ ಹೃದಯನಾಗಿದ್ದರೂ ಅವನಲ್ಲಿ ದಿವ್ಯತ್ವದ ಒಂದು ಕಿಡಿಯಿದೆಯೆಂದು ನಂಬಿದ್ದೇನೆ. ಅವನ ಹೃದಯದರ್ಪಣವನ್ನು ಆವರಿಸಿದ ಕಪ್ಪುಬಣ್ಣವನ್ನು ತೊಳೆಯಲು ನಾವು ಪ್ರಯತ್ನಿಸಬೇಕು. ಹಾಗಾದರೆ ಅವನು ತನ್ನ ದಿವ್ಯತ್ವವನ್ನು ತಿಳಿದುಕೊಳ್ಳುತ್ತಾನೆ. ಆ ಸಾಧನೆಯು ಪ್ರೇಮುಮಾರ್ಗದಿಂದಲ್ಲದೆ ಇನ್ನಾವುದರಿಂದಲೂ ಆಗಲಾರದು. ಈ ದಿವ್ಯತೆಯ್ಯನ್ನು ಪ್ರಕಾಶಪಡಿಸಬೇಕಾದರೆ ಮಾನವನು ತನ್ನ ಮೃಗೀಯ ವಾಸನೆಗಳನ್ನು ಪರಿತ್ಯಜಿಸಿ ಮನುಷ್ಯತ್ವವನ್ನು ಪಡೆಯಲು ಯತ್ನಿಸಬೇಕಾಗಿದೆ. ಒಂದು ಅನ್ಯಾಯವನ್ನು ಎದುರಿಸುವದಕ್ಕಾಗಿ ಇನ್ನೊಂದು ಅನೀತಿಯನ್ನು ಜರುಗಿಸಿದರೆ ಅದರಿಂದ ಅನೀತಿಗಳನ್ನು ಹೆಚ್ಚಿಸಿದಂತಾಗುವದೇ ಹೊರತು, ನ್ಯಾಯ ಸಾಧನೆಯನ್ನು ಮಾಡಿದಂತಾಗಲಾರದು. ಅಹುದು; ಅಧಿಕಾರಿಗಳು ಭೀಷಣ ಹಿಂಸೆಗಳಲ್ಲಿ ನಿರತರಾಗಿರುವರೆಂಬುದು ನಿಜ. ಅಜ್ಞಾನದ ಕತ್ತಲೆಯು ಅವರನ್ನು ಆವರಿಸಿರುವದರಿಂದ ಅವರು ತಪ್ಪು ಹಾದಿಯನ್ನು ಹಿಡಿದಿದ್ದಾರೆ. ಸ್ವಾರ್ಥ ತತ್ಪರತೆಯಿಂದ ತಮ್ಮ ಮನುಷ್ಯತ್ವವನ್ನು ಅವರು ಮರೆತಿದ್ದಾರೆ. ಬಂಡಾಯವನ್ನು ಎಬ್ಬಿಸುವದರಿಂದ ಜನರ ಸಂಕಟಗಳನ್ನು ಇನ್ನಷ್ಟು ಹೆಚ್ಚಿಸಿದಂತಾಗುತ್ತದೆ. ಈ ವಿದ್ವೇಷಾಗ್ನಿಯಲ್ಲಿ ಜನತೆಯ ಹೃದಯಗಳು ಸುಡುವವು. ನೈತಿಕ ದೃಷ್ಟಿಯಲ್ಲಿ ಈಗಣದ

ಕ್ಕಿಂತಲೂ ಕೆಳಗಿನ ಮೆಟ್ಟಿಲಿಗೆ ನಾವು ಇಳಿಯುವೆವು. ಆದುದರಿಂದ ನಾನು ನಿಮ್ಮಲ್ಲಿ ಬೇಡುವದಿಷ್ಟೆ, ಈಗಿನ ಶೋಚನೀಯ ಸಂಕಟಗಳನ್ನು ನೋಡಿ, ನೀವು ವಿವೇಚನೆಯಿಲ್ಲವೆ ಬಂಡು ಮಾಡಬೇಡಿರಿ. ಎರಡು ವರ್ಗಗಳೂ ಗೆಳೆತನದಿಂದ ವರ್ತಿಸುವಂತೆ ಮಾಡಲೆತ್ನಿಸುವಾ. ಹಿಂದುಗಳ ಸಂತೃಪ್ತಿಯಿಂದಲ್ಲವೆ ಈ ದೇಶದಲ್ಲಿ ಜೀವಿಸಲು ತಮಗೆ ಶಕ್ಯವಿಲ್ಲವೆಂಬುವದನ್ನು ಇಸ್ಲಾಂಧರ್ಮಾವಲಂಬಿಗಳು ತಿಳಿದುಕೊಂಡರೆ, ಆ ಮೇಲೆ ಈ ಅತ್ಯಾಚಾರಗಳು ನಡೆಯಲಾರವು. ಆ ತಿಳುವನ್ನು ಜನತೆಯ ಮಧ್ಯದಲ್ಲಿ ಹರಡುವದಕ್ಕಾಗಿ ನಾವು ಉದ್ಯಮಿಸುವಾ."

"ಫಕೀರಸಾಹೇಬ!" ಒಂದು ಎಳೆನಗೆಯನ್ನು ಚೆಲ್ಲಿ ತಪಸ್ವಿಯು ನುಡಿದ: "ನಿಮ್ಮಷ್ಟು ಅಪಾರವಾದ ವಿಶ್ವಾಸವು ನನಗೆ ಮನುಷ್ಯನ ದಿವ್ಯತೆಯಲ್ಲಿಲ್ಲ. ಸ್ವಾರ್ಥ ತತ್ಪರನಾಗಿ ಅವನು ಪಶುವಿನಂತೆ ವರ್ತಿಸುತ್ತಾನೆ. ಇತರ ಎಲ್ಲ ಉಪಾಯಗಳೂ ಈಗ ವಿಫಲವಾಗಿವೆ. ಈ ಸಂದರ್ಭದಲ್ಲಿ ಕೊನೆಯದಾದ ದಂಡ ನೀತಿಯನ್ನು ಸ್ವೀಕರಿಸುವದು ತಪ್ಪಲ್ಲ. ಪರಾಧೀನತೆಯಿಂದ ನಾಡು ಬಳಲುತ್ತಲಿದೆ. ಸ್ವಾಭಿಮಾನವೆಂಬುದು ಜನರಲ್ಲಿಲ್ಲ. ಅಂಜಿಕೆಯು ಅವರಲ್ಲಿ ಮನೆಮಾಡಿದೆ. ಈ ರೀತಿಯಲ್ಲಿ ನಿರ್ಬಲರಾಗಿ ಜನರು ಬಾಳುವದಕ್ಕಿಂತ, ಈ ನರಕಯಾತನೆಗಳನ್ನು ಅನುಭವಿಸುವದಕ್ಕಿಂತ, ಸ್ವಾಧೀನತೆಯನ್ನು ಸಂಪಾದಿಸಲು ಕೆಲವು ಮಂದಿ ಮಡಿಯುವುದೊಳ್ಳೆಯದಲ್ಲವೇ? ಆಜನ್ಮ ಹಿಂಸೆಗಳ ತೆಕ್ಕೆಯಲ್ಲಿ ನರಳುವದಕ್ಕಿಂತ ಈ ಹಿಂಸೆಯನ್ನು ನಿವಾರಿಸುವದಕ್ಕಾಗಿ, ಪ್ರತಿಹಿಂಸೆಯನ್ನು ಆಚರಿಸುವದು ಅನೀತಿಯಾಗಲಾರದು. ನಮ್ಮ ಬಂಡಾಯದ ಉದ್ದೇಶವು ಅರಾಜಕತೆಯನ್ನು ಹರಡುವುದಲ್ಲ. ಈಗಿನ ಪ್ರಭುತ್ವವನ್ನು ಚೂರ್ಣೀಕರಿಸಿ ಆ ತಳಹದಿಯ ಮೇಲೆ ಹೊಸದೊಂದು ಭವ್ಯ ಪ್ರಭುತ್ವವನ್ನು ನಿರ್ಮಿಸುವದಾಗಿದೆ. ಈಗಿನ ಆಡಳಿತವು ಪ್ರಜೆಗಳ ಗೋಳನ್ನು ಕೇಳುವಂತಿಲ್ಲ; ಆದುದರಿಂದ ಪ್ರಜಾಹಿತದ ಕಡೆಗೆ ದೃಷ್ಟಿಯನ್ನಿಡತಕ್ಕ ಒಂದು ಪ್ರಭುತ್ವವನ್ನು ಸ್ಥಾಪಿಸುವದಕ್ಕಾಗಿ ಬಂಡುಮಾಡುವದು ನ್ಯಾಯವಾದುದಾಗಿದೆ. ಹಿಂಸೆಯಿಂದ ಪ್ರತಿಹಿಂಸೆಯು ಹುಟ್ಟುತ್ತದೆ. ಹಿಂಸೆಯಿಂದ ಸಂಪ್ರಾಪ್ತವಾದ ದುರಿತಗಳನ್ನು ಸುಟ್ಟನಂತರ ಪ್ರತಿಹಿಂಸೆಯ ದಾವಾಗ್ನಿಯು ತಾನಾಗಿಯೇ ಆರಿಹೋಗುತ್ತದೆ. ಆಳುವವರ ಅತ್ಯಾಚಾರಗಳು ಎಷ್ಟು ಹರಿತವಾಗಿವೆಯೋ, ಪ್ರತಿಹಿಂಸೆಯು ಅಷ್ಟೇ ತೀಕ್ಷ್ಣವಾಗಿ ಪರಿಣಮಿಸುತ್ತದೆ. ಈ ಪ್ರತಿಹಿಂಸೆಯಿಂದ ಇಸ್ಲಾಂ ಧರ್ಮವನ್ನು ಎದುರಿಸುವ ಉದ್ದೇಶವು ನಮಗಿಲ್ಲ. ಇಸ್ಲಾಂ ಧರ್ಮಿಗಳೊಡನೆ ಮೈತ್ರಿ

ಯಿಂದ ಜೀವಿಸಲು ಸಾಧ್ಯವಿದೆಯೆಂಬುದನ್ನು ನಾನು ನಂಬುತ್ತೇನೆ. ಆ ರೀತಿಯ ಒಂದು ಬಾಂಧವ್ಯವು ನೆಲೆಗೊಳ್ಳುವಂತೆ ಮಾಡುವದೇ ನಮ್ಮ ವಿದ್ರೋಹದ ಉದ್ದೇಶವಾಗಿದೆ. ನಿಮ್ಮ ಮೃದು ಹೃದಯವು ನಮ್ಮ ಕಠೋರ ಕರ್ಮಪದ್ಧತಿಯನ್ನು ಒಪ್ಪದೆಂಬುದನ್ನು ನಾನು ಬಲ್ಲೆ. ಆದರೂ ನಿಮ್ಮ ಆಶೀರ್ವಾದವು ನನಗೆ ಬೇಕಾಗಿದೆ. ನಿಮ್ಮ ಸಹಕರಣೆಯೂ ಅವಶ್ಯವಿದೆ. ಇತರ ಕೆಲಸಗಳಲ್ಲಿ ನಾವಿಬ್ಬರೂ ಒಂದೇ ದಾರಿಯನ್ನು ಅವಲಂಬಿಸುವುದು ಅಸಾಧ್ಯವಾಗಿದ್ದರೂ ಈ ಎರಡು ವರ್ಗಗಳ ಐಕ್ಯತೆಗಾಗಿ ನಾವು ಒಂದುಗೂಡಿ ಹೆಣಗಬಹುದು." ಒಳ್ಳೇ ಸ್ಫೂರ್ತಿಯಿಂದ ತಪಸ್ವಿಯು ಮೇಲಿನ ನುಡಿಗಳನ್ನಾಡಿದನು. ಫಕೀರನು ಎಲ್ಲವನ್ನೂ ಶಾಂತಚಿತ್ತದಿಂದ ಕೇಳಿದನು.

ಈ ತಪಸ್ವಿಯೂ ಫಕೀರನೂ ಯಾರೆಂಬುದನ್ನು ತಿಳಿಯಲು ವಾಚಕರು ಉತ್ಸುಕರಾಗಿರಬಹುದು. ಈ ಎರಡು ಮಂದಿ ಮಹಾತ್ಮರೂ ಪ್ರಕೃತ ಆಖ್ಯೆಯಲ್ಲಿ ಎರಡು ಪ್ರಧಾನ ಪಾತ್ರಗಳಾಗಿರುವದರಿಂದ ಅವರ ಅಲ್ಪ ಪರಿಚಯವನ್ನು ನಾನಿಲ್ಲಿ ಮಾಡಿಕೊಡಬಯಸುತ್ತೇನೆ. ತಪಸ್ವಿಯ ಹೆಸರು ಜ್ಞಾನಾನಂದನೆಂದು. ರೂಪನಗರದಲ್ಲಿ ಆ ಹೆಸರನ್ನು ಕೇಳದವರು ವಿರಳರೆಂದು ಹೇಳಬಹುದು. ಪ್ರತಿಯೊಬ್ಬ ಹಿಂದುವೂ ಆ ಹೆಸರನ್ನು ಬಹು ಗೌರವದಿಂದ ಉಚ್ಚರಿಸುತ್ತಿದ್ದನು. ಜ್ಞಾನಾನಂದನೆಂಬ ಆ ಹೆಸರು ಪ್ರತಿಯೊಬ್ಬನ ಹೃದಯದಲ್ಲಿಯೂ ಒಂದು ತರದ ಪೂಜ್ಯ ಭಾವನೆಯನ್ನು ಹುಟ್ಟಿಸುತ್ತಿದ್ದಿತು.

ಜ್ಞಾನಾನಂದನ ಕುಲ, ಗೋತ್ರ, ಊರು ಇವುಗಳನ್ನು ತಿಳಿದವರು ಯಾರೂ ಇರಲಿಲ್ಲ. ಊರು-ಮನೆಗಳಿಲ್ಲದ ಸಂನ್ಯಾಸಿಯ ಕುಲ-ಗೋತ್ರಗಳನ್ನು ತಿಳಿಯುವದು ಜನರಿಗೆ ಒಂದು ಪ್ರಯಾಸದ ಕೆಲಸವಾಗಿದ್ದಿತು. ಆತನು ಕೆಲವು ವರ್ಷಗಳ ಹಿಂದೆ ರೂಪನಗರ ಪ್ರಾಂತಕ್ಕೆ ಆಗಮಿಸಿದ್ದನು. ಈತನು ಬಂದುದೆಲ್ಲಿಂದ? ಎಂಬುದು ಯಾರಿಗೂ ತಿಳಿಯದು. ರೂಪನಗರದಿಂದ ಎರಡು-ಮೂರು ಹರದಾರಿಗಳ ದೂರದಲ್ಲಿದ್ದ ಒಂದು ಗ್ರಾಮದಲ್ಲಿ ಜ್ಞಾನಾನಂದನು ವಾಸಮಾಡಲಾರಂಭಿಸಿದನು. ಅಲ್ಲಿ ಪ್ರವಹಿಸುತ್ತಿದ್ದ ಒಂದು ಚಿಕ್ಕ ಹೊಳೆಯ ತೀರದಲ್ಲಿ ಒಂದು ಪರ್ಣಶಾಲೆಯನ್ನು ನಿರ್ಮಿಸಿ, ಅವನು ಅದರಲ್ಲಿ ತನ್ನ ಆಧ್ಯಾತ್ಮಿಕ ಸಾಧನೆಗಳನ್ನು ಪ್ರಾರಂಭಿಸಿದನು. ಅವನಿಗೆ ಲೌಕಿಕ ವಿಷಯಗಳಲ್ಲಿ ಆಸಕ್ತಿಯಿರಲಿಲ್ಲ. ಸತ್ಯಶೋಧನೆಗಾಗಿ ಹೊರಟಿದ್ದ ಒಬ್ಬ ಸಾಧಕನವನು. ಅವನ ತಪಸ್ಸನ್ನೂ ಜ್ಞಾನವನ್ನೂ ತಿಳಿದ ಜನರು ಅವನನ್ನು ಪೂಜ್ಯ

ಭಾವದಿಂದ ನೋಡತೊಡಗಿದರು. ಅವನ ಉಪದೇಶ ವಾಣಿಯಿಂದ ತಮ್ಮ ಎದೆಗಳ ಭಾರವನ್ನು ಕಳೆದುಕೊಳ್ಳುವದಕ್ಕಾಗಿ ಕುಗ್ರಾಮದಲ್ಲಿ ನೆಲೆಸಿದ್ದ ಅವನ ಪರ್ಣಶಾಲೆಗೆ ಬರತೊಡಗಿದರು. ಮಧುರ ನುಡಿಗಳಿಂದ ನೊಂದ ಎದೆಗಳ ತಾಪವನ್ನು ಪರಿಹರಿಸತಕ್ಕ ಚೈತನ್ಯವು ಜ್ಞಾನಾನಂದನಲ್ಲಿದ್ದಿತು. ಅವನೊಡನೆ ನಾಲ್ಕು ಮಾತುಗಳನ್ನಾಡುವದರಿಂದ ಜನರು ತಮ್ಮ ಕ್ಲೇಶಗಳನ್ನು ನಿವಾರಿಸಿಕೊಳ್ಳುತ್ತಿದ್ದರು. ಅವನ ನೇತ್ರಗಳಿಂದ ಸ್ಫುರಿಸುತ್ತಿದ್ದ ದಿವ್ಯತೇಜಸ್ಸು ಸಂದರ್ಶಕರ ಎದೆಗಳಲ್ಲಿ ಬೆಳಕನ್ನು ತುಂಬುತ್ತಿದ್ದಿತು. ಇದು ಒಂದು ಅತಿಶಯೋಕ್ತಿಯೆಂದು ವಾಚಕರು ಭಾವಿಸಬಹುದು; ಆದರೆ ವಾಸ್ತವವು ಹಾಗಲ್ಲ. ಮನುಷ್ಯನ ಆತ್ಮವು ಸಂಸ್ಕಾರವನ್ನು ಹೊಂದಿ ಉನ್ನತವಾದ ಒಂದು ವಲಯಕ್ಕೆ ತಲುಪಿದಾಗ ಅವನ ಹೃದಯವು ವಿಶ್ವದಷ್ಟು ವಿಶಾಲವಾಗಿ ಪರಿಣಮಿಸುತ್ತದೆ. ಆ ಜೀವವು ತನ್ನ ವ್ಯಕ್ತಿತ್ವವನ್ನು ಮರೆತು ವಿಶ್ವಜೀವನದ ಒಂದು ಕಣವಾಗಿ ಪರಿಣಮಿಸುತ್ತದೆ. ಆಗ ಜಗತ್ತಿನ ಇತರ ಜೀವಿಗಳಲ್ಲಿ ಸಹಾ ತನ್ನ ರೂಪವನ್ನು ದರ್ಶಿಸಲಿರುವ ಶಕ್ತಿಯು ಆತ್ಮಕ್ಕೆ ಪ್ರಾಪ್ತವಾಗುತ್ತದೆ. ಆಗ ಕೇವಲ ಒಂದು ನುಡಿಯಿಂದ, ಒಂದು ನೋಟದಿಂದ ನೊಂದು ಬಂದವನ ಎದೆಯನ್ನು ತಣಿಸಲಿರುವ ಚೈತನ್ಯವು ಆತ್ಮಕ್ಕೆ ಲಭ್ಯವಾಗುತ್ತದೆ. ಇದಾಗಿದೆ ಆತ್ಮನ ದಿವ್ಯತೆಯು. ಆಗ ಆತ್ಮನ ಬದುಕು ಕೇವಲ ಸಾಧಾರಣ ಬದುಕಾಗಿರದೆ ಒಂದು ಮಹಾ ಜೀವನವಾಗುತ್ತದೆ. ಈ ಮಹೋನ್ನತಿಯು ಲಭ್ಯವಾಗಬೇಕಾದರೆ ಆತ್ಮಸಂಸ್ಕಾರವು ಅತ್ಯಾವಶ್ಯಕ. ನಮ್ಮ ಪುರಾಣಗಳಲ್ಲಿ ಗೋಚರಿಸುತ್ತಿರುವ ಋಷಿಗಳೂ ಮುನಿಗಳೂ ಜೈನರ ತೀರ್ಥಂಕರರೂ ಈ ಮಹೋನ್ನತಿಯನ್ನು ಪಡೆದವರಾಗಿದ್ದರು. ಜ್ಞಾನಾನಂದನು ಸಹ 'ಮಹಾ ಜೀವನ'ವೆಂಬ ಉನ್ನತದ ಮೆಟ್ಟಿಲಿಗೆ ತಲುಪಿದವನಾಗಿದ್ದನು. ಮಹೋನ್ನತಿಯನ್ನು ಪಡೆದ ಆತನ ನುಡಿಗಳು ನೊಂದ ಎದೆಗಳ ತಾಪವನ್ನು ಪರಿಹರಿಸಿದುವೆಂದು ಹೇಳಿದರೆ ಅದಕ್ಕೆ ಆಶ್ಚರ್ಯಪಡಬೇಕಾಗಿಲ್ಲ. ಅಂಥ ಆ ಚೈತನ್ಯವನ್ನು ಅವನು ಪಡೆದಿದ್ದನು.

ಜ್ಞಾನಾನಂದನ ತಳಿರು ಮನೆಯು ನೊಂದವರಿಗೆ ಒಂದು ತೀರ್ಥಸ್ಥಳವಾಗಿ ಪರಿಣಮಿಸಿತು. ಆತನ ದರ್ಶನದಿಂದ ಜನರು ತಮ್ಮ ಎದೆಗಳ ಭಾರವನ್ನು ಕಳೆದುಕೊಳ್ಳಲಾರಂಭಿಸಿದರು. ಅವರ ನೋವನ್ನಾರಿಸುವ ಕೆಲಸದಲ್ಲಿ ಜ್ಞಾನಾನಂದನಿಗೆ ಬೇಸರವಿಲ್ಲ. ಜನರ ದುಃಖಗಳನ್ನು ತನ್ನ ಉಪದೇಶ

ವಾಣೆಯಿಂದ ಪರಿಹರಿಸಲು ತಾನು ಶಕ್ತನಾದುದಕ್ಕೆ ಅವನು ಸಂತೋಷಪಡುತ್ತಿದ್ದನು. ತನ್ನ ಕರುಣೆಯ ಶೀತಲ ಜಲವನ್ನು ನೊಂದು ಬಂದವರ ಹೃದಯಗಳಿಗೆ ಅವನು ನೀಡಿದನು.

ಆದರೆ ರೂಪನಗರದಲ್ಲಿ ನೆಲೆಸಿದ ಪಠಾಣರ ಆಳ್ವಿಕೆಯು ಈ ತಪಸ್ವಿಯಲ್ಲಿ ಹಲವು ಪರಿವರ್ತನೆಗಳನ್ನುಂಟು ಮಾಡಿತು. ಇದುವರೆಗೆ ಜ್ಞಾನಾನಂದನು ಕೇವಲ ಆತ್ಮವಿಕಾಸಕ್ಕಾಗಿ ಉದ್ಯಮಿಸುತ್ತಿದ್ದನು; ರಾಜಕಾರಣದಿಂದ ದೂರವಿರುತ್ತಿದ್ದನು; ಲೌಕಿಕ ವಿಷಯಗಳು ಆತನಿಗೆ ಬೇಕಿರಲಿಲ್ಲ; ಆದರೆ ಪಠಾಣರ ನಿರಂಕುಶ ದಬ್ಬಾಳಿಕೆಯು ಅವನನ್ನು ರಾಜಕಾರಣದಲ್ಲಿ ಪ್ರವೇಶಿಸುವಂತೆ ಮಾಡಿತು. ಆಳರಸರ ವಿವಿಧ ಹಿಂಸೆಗಳಿಗೊಳಗಾಗಿ ಜನರು ನರಳುತ್ತಿರುವದನ್ನು ನೋಡಿ ಮೌನವೆಂದಿರಲು ಆ ತಪಸ್ವಿಗೆ ಸಾಧ್ಯವಾಗಲಿಲ್ಲ. ನಾಡಿನಲ್ಲೆಲ್ಲ ಹರಡಿದ ಪರಾಧೀನತೆಯು ಅವನನ್ನು ಕರ್ಮರಂಗದಲ್ಲಿ ಪ್ರವೇಶಿಸಲು ಪ್ರೇರೇಪಿಸಿತು. ದುರ್ಭಿಕ್ಷೆ, ಅಪಮಾನಗಳ ಸಂಕೋಲೆಯಿಂದ ಜನರು ನರಳುತ್ತಿರುವದನ್ನು ನೋಡಿ ಅವನ ಎದೆಯು ಕರಗಿತು. ಈ ನರಜೀವಿಗಳ ಕ್ಷೇಮಸಾಧನೆಗಾಗಿ ಹೆಣಗಲು ಜ್ಞಾನಾನಂದನ ಅಂತರಾತ್ಮನು ಪ್ರೇರೇಪಿಸಿದನು. ಜನರಲ್ಲಿ ಹರಡಿದ್ದ ಅಜ್ಞತೆ, ಭೀರುತನಗಳಿಂದ ಆರ್ಯ ಸಂಸ್ಕೃತಿಯು ಅಧಃಪತನವನ್ನು ಹೊಂದುತ್ತಲಿವೆಯೆಂಬುದನ್ನು ಆ ಮೇಧಾವಿಯು ತಿಳಿದುಕೊಂಡನು. ಜನರು ಸಚೇತನರಾಗಬೇಕಾದರೆ ಈ ಪರಾಧೀನತೆಯನ್ನು ಹೋಗಲಾಡಿಸುವದು ಅತ್ಯಾವಶ್ಯಕವೆಂಬುದು ಜ್ಞಾನಾನಂದನಿಗೆ ಹೊಳೆಯಿತು. ಜನರು ಅನುಭವಿಸುತ್ತಿರುವ ಸಂಕಟಗಳು ಅವನ ಎದೆಗೆ ಹೆಚ್ಚಿನ ನೋವನ್ನುಂಟು ಮಾಡಲಿಲ್ಲ; ಆದರೆ ಅವರಲ್ಲಿ ಹರಡಿರುವ ದಾಸ್ಯಮನೋಭಾವನೆ, ಅಜ್ಞತೆ, ಪೌರುಷಶೂನ್ಯತೆ ಇವುಗಳು ಜ್ಞಾನಾನಂದನ ಮನಸ್ಸಿಗೆ ಅಪಾರ ವೇದನೆಯನ್ನುಂಟು ಮಾಡಿದುವು. ಆದುದರಿಂದ ಜನತೆಯ ಪ್ರಬುದ್ಧತೆಯ ಬಗ್ಗೆ ಹೆಣಗಲು ಆತನು ನಿರ್ಧರಿಸಿದನು. ಪಾರತಂತ್ರ್ಯದಲ್ಲಿ ಬಳಲುತ್ತಿರುವ ರೂಪನಗರವನ್ನು ದಾಸ್ಯದಿಂದ ಮೋಚಿಸಬೇಕೆಂದು ಅವನು ಸಂಕಲ್ಪಿಸಿದನು.

ನಾಡಿನ ಪರಿಸ್ಥಿತಿಯು ಮೇಲೆ ಹೇಳಿದಂತೆ ಜ್ಞಾನಾನಂದನಲ್ಲಿ ಒಂದು ಪರಿವರ್ತನೆಯನ್ನುಂಟು ಮಾಡಿತು. ಯೋಗಸಾಧನೆಯನ್ನು ಪರಿತ್ಯಜಿಸಿ ಭೀಷಣ ಕರ್ಮರಂಗದಲ್ಲಿ ಪ್ರವೇಶಿಸಲು ಅವನು ಉದ್ಯುಕ್ತನಾದನು. ಅವನ

ಎದೆಯಲ್ಲಿ ಅಡಗಿದ್ದ ಸ್ವಧರ್ಮಾಭಿಮಾನವು ಜಾಗೃತವಾಯಿತು. ಅವನು ಪಠಾಣ ಶಾಸನೆಗೆ ವಿರುದ್ಧವಾಗಿ ಜನತೆಯನ್ನು ಸಂಘಟಿಸಬೇಕೆಂದು ಸಂಕಲ್ಪಿಸಿದನು. ಅವನು ತನ್ನ ಸಂಕಲ್ಪವನ್ನು ಈಡೇರಿಸಲು ಹೇಗೆ ಹೆಣಗಿದನು, ಒಬ್ಬ ಕರ್ಮಕುಶಲನಂತೆ ಹೇಗೆ ಉದ್ಯಮಿಸಿದನು? ಇವುಗಳನ್ನೆಲ್ಲ ವಿವರಿಸ ಹೊರಟರೆ ಅದೊಂದು ದೊಡ್ಡ ಗ್ರಂಥವಾಗಬಹುದು. ಅವನ ಪ್ರಯತ್ನಗಳು ಬಹು ವಿಜ್ಞಾನಪ್ರದವಾಗಿರಬಹುದಾದರೂ ಅವುಗಳನ್ನು ವಿವರಿಸುವದು ಇಲ್ಲಿ ಉಚಿತವಲ್ಲ. ಅವನು ನಾಡಿನ ಅಭ್ಯುದಯವನ್ನು ಕಾಂಕ್ಷಿಸಿ ಹೆಣಗಿದನೆಂದು ಇಲ್ಲಿ ಹೇಳಿದರೆ ಸಾಕಾಗಿದೆ. ಆತನ ನಿರಂತರ ಪರಿಶ್ರಮಗಳು ಫಲಪ್ರದವಾಗದೆ ಇರಲಿಲ್ಲ. ಜನತೆಯಲ್ಲಿ ಒಂದು ನವಚೈತನ್ಯವು ಆವಿರ್ಭವಿಸುವಂತೆ ಮಾಡುವ ಕೆಲಸದಲ್ಲಿ ಅವನು ಪೂರ್ಣ ಯಶಸ್ವಿಯಾಗದಿದ್ದರೂ ರೂಪನಗರದ ತರುಣರ ದೃಷ್ಟಿಗಳನ್ನು ನಾಡಸೇವೆಯ ಕಡೆಗೆ ತಿರುಗಿಸುವ ಉದ್ಯಮದಲ್ಲಿ ಅವನು ಕೃತಕಾರ್ಯನಾದನು.

ತರುಣರು ಶಾಂತಚಿತ್ತದಿಂದ ಸಂನ್ಯಾಸಿಯ ವಾಣಿಗಳನ್ನು ಕೇಳಿದರು; ತಮ್ಮ ಸುತ್ತಮುತ್ತಲಿನ ಸ್ಥಿತಿಗತಿಗಳೇನೆಂಬುದನ್ನು ನಿರೀಕ್ಷಿಸಿದರು. ಪರಾಧೀನತೆಯಲ್ಲಿ ಬಳಲುತ್ತಿರುವ ಜನತೆಯನ್ನು ಅವರು ನೋಡಿದರು. ಜನರ ಹೃದಯಗಳಲ್ಲಿರುವ ಸ್ವಾಭಿಮಾನವು ನಶಿಸಿಹೋಗಿದೆಯೆಂಬುದು ಅವರಿಗೆ ವ್ಯಕ್ತವಾಯಿತು ದಾಸ್ಯದ ಶೃಂಖಲೆಗಳು ತಮ್ಮ ಕಾಲುಗಳಿಗೆ ಬಿಗಿದಿರುವದು ಅವರಿಗೆ ಗೋಚರಿಸಿತು. ಜ್ಞಾನಾನಂದನ ಪ್ರಭಾವದಿಂದ ಅವರ ಎದೆಗಳಲ್ಲಿ ಅಡಗಿದ್ದ ಆತ್ಮಾಭಿಮಾನವು ಜಾಗೃತವಾಯಿತು. ಪರಾಶ್ರಯದಲ್ಲಿ ಬಾಳುವದು ಲಜ್ಜಾವಹವಾದುದೆಂದು ಅವರು ತಿಳಿದುಕೊಂಡರು. ಅವರ ಹೃದಯಗಳಲ್ಲಿ ಸ್ವಾಧೀನತೆಯ ಸೂರ್ಯನ ಕಿರಣಗಳು ಪ್ರಕಾಶವನ್ನು ಚೆಲ್ಲಿದವು. ನವಚೈತನ್ಯವು ಆ ತರುಣರ ಎದೆಗಳಿಂದ ಸ್ಫುರಿಸತೊಡಗಿತು. ತರುಣರು ತನ್ನ ನುಡಿಗಳನ್ನು ಆಲಿಸಿದುದನ್ನು ನೋಡಿ ಜ್ಞಾನಾನಂದನಿಗೆ ಅಪಾರ ಹರುಷವೆನಿಸಿತು. ಅವರಿಂದ ಸ್ವಾಧೀನತೆಯ ಸಂಪಾದನೆಯ ಪ್ರತಿಜ್ಞೆಯನ್ನು ಅವನು ಮಾಡಿಸಿದನು. ಜ್ಞಾನಾನಂದನ ಉಪದೇಶದಂತೆ ನಾಡಸೇವೆಗೆ ಹೊರಟ ತರುಣರಲ್ಲಿ ಕುಮಾರ ಅಮರಸಿಂಹನು ಒಬ್ಬನಾಗಿದ್ದನು.

ಈ ಅಮರಸಿಂಹನು ಇತರ ತರುಣರಿಗಿಂತ ಹೆಚ್ಚು ಬುದ್ಧಿಶಾಲಿಯಿದ್ದುದರಿಂದ ಅವನು ಇತರರಿಗಿಂತ ಹೆಚ್ಚಾಗಿ ಜ್ಞಾನಾನಂದನ ಕೃಪೆಯನ್ನು ಸಂಪಾದಿ

ಸಿದನು. ಕುಮಾರನು ಬುದ್ಧಿಶಾಲಿ ಮಾತ್ರವಲ್ಲ, ಅಸಾಮಾನ್ಯ ಧೀರನೂ ಸಹ ಇದ್ದುದರಿಂದ ಈ ತರುಣರ ತಂಡಕ್ಕೆ ನಾಯಕನಾದನು. ಈ ತರುಣರ ಸಂಘಟನೆಯಿಂದ ಪಠಾಣರಿಗೆ ವಿರುದ್ಧವಾಗಿ ಒಂದು ವಿದ್ರೋಹವನ್ನೆಬ್ಬಿಸುವದಾಗಿದ್ದಿತು ಜ್ಞಾನಾನಂದನ ಉದ್ದೇಶವು. ಈ ದುರಿತಗಳಿಂದ ಜನತೆಯನ್ನು ರಕ್ಷಿಸಬೇಕಾದರೆ ವಿದ್ರೋಹವಲ್ಲದೆ ಬೇರೆ ದಾರಿಯಿಲ್ಲವೆಂದಾಗಿದ್ದಿತು ಜ್ಞಾನಾನಂದನ ವಿಚಾರವು. ಗುರುವಿನ ಆಜ್ಞೆಯಂತೆ ಶಿಷ್ಯರು ರೂಪನಗರದ ಹಳ್ಳಿಗಳಿಗೆ ತೆರಳಿ ಜನಜಾಗ್ರತೆಗಾಗಿ ಪ್ರಯತ್ನಿಸಹತ್ತಿದರು. ಜ್ಞಾನಾನಂದನ ಪರ್ಣಶಾಲೆಯಲ್ಲಿ ಹುಟ್ಟಿದ್ದ ವಿದ್ರೋಹ ಬೆಂಕಿಯ ಕಿಡಿಗಳನ್ನು ಅವರು ದೇಶದ ಮೂಲೆಮೂಲೆಗಳಲ್ಲಿ ಹರಡತೊಡಗಿದರು. ಅವರೆಲ್ಲರ ಪ್ರಯತ್ನಗಳ ಫಲವಾಗಿ ವಿದ್ರೋಹ ಬೆಂಕಿಯು ಪ್ರಜ್ವಲಿಸಬೇಕಾದ ವೇಳೆಯು ಸನಿಯವಾಗತೊಡಗಿತು. ಅಧಿಕಾರಿಗಳ ಹಿಂಸೆಗೆ ಪ್ರತಿಹಿಂಸೆಯು ಉತ್ತರಕೊಡಲಾರಂಭಿಸಿತು. ಅಧಿಕಾರಿಗಳ ದಬ್ಬಾಳಿಕೆಯು ಉಗ್ರಣವೂ ಭೀಷಣವೂ ಆದಂತೆಯೇ ಹಲವು ಸಾರೆ ವಿದ್ರೋಹಿಗಳ ಪ್ರತಿಕ್ರಿಯೆಗಳೂ ಸಹ ರೌದ್ರರೂಪದಲ್ಲಿ ಪ್ರತ್ಯಕ್ಷವಾಗತೊಡಗಿದವು. ಅನ್ಯಾಯಕ್ಕೆ ಪ್ರತಿಯಾಗಿ ಅನ್ಯಾಯ, ಹಿಂಸೆಗೆ ಪ್ರತಿಯಾಗಿ ಹಿಂಸೆ ಹೀಗೆ ವಿದ್ರೋಹಿಗಳು ಅಧಿಕಾರಿಗಳ ಮೇಲಿರುವ ಸೇಡನ್ನು ತೀರಿಸಿಕೊಳ್ಳತೊಡಗಿದರು. ವಿದ್ರೋಹಿಗಳ ಹಿಂಸೆಯೂ ಪ್ರತಿಕ್ರಿಯೆಗಳೂ ಭಯಂಕರವಾಗಿದ್ದರೂ ಅವು ಅಧಿಕಾರಿಗಳ ಹಿಂಸೆಗಳಿಗಿಂತ ತೀರ ವಿಭಿನ್ನವಾಗಿದ್ದವು. ಅಧಿಕಾರಿಗಳು ಪ್ರಜೆಗಳಲ್ಲಿರುವ ಮನುಷ್ಯತ್ವವನ್ನು ಇಲ್ಲದಂತೆ ಮಾಡುವದಕ್ಕಾಗಿ ದಬ್ಬಾಳಿಕೆಯನ್ನು ಅವಲಂಬಿಸಿದ್ದರು; ಆದರೆ ವಿದ್ರೋಹಿಗಳ ಭೀಷಣ ಪ್ರತಿಕ್ರಿಯೆಗಳು ಮರ್ದಿತ ಜನತೆಯು ತನ್ನ ಮನುಷ್ಯತ್ವವನ್ನು ಸಂರಕ್ಷಿಸಿಕೊಳ್ಳಲು, ತಮ್ಮ ಸ್ವಾಭಿಮಾನವನ್ನು ಕಾಪಾಡಿಕೊಳ್ಳಲು ಜರುಗಿಸುತ್ತಿದ್ದ ಭಯಂಕರ ಹೋರಾಟವಾಗಿದ್ದವು. ಈ ದೃಷ್ಟಿಯಿಂದ ಜ್ಞಾನಾನಂದನ ಮುಂದಾಳುತನದಲ್ಲಿ ಹುಟ್ಟಿದ ವಿದ್ರೋಹವನ್ನು ನಿರೀಕ್ಷಿಸುವದಾದರೆ ಅದು ಕೇವಲ ಒಂದು ಪ್ರತಿಹಿಂಸೆ ಮಾತ್ರವಾಗಿರದೆ, ಕಳೆದುಕೊಂಡ ಸ್ವಾತಂತ್ರ್ಯವನ್ನು ಮರಳಿ ಪಡೆಯಲು ಜನತೆಯು ನಡೆಯಿಸುತ್ತಿದ್ದ ಒಂದು ಮಹಾ ಸಂಗ್ರಾಮವಾಗಿದೆಯೆಂಬುದು ವ್ಯಕ್ತವಾಗದಿರದು. ಸತ್ವಶೂನ್ಯವಾದ ಹೃದಯದಲ್ಲಿ ಅನೀತಿಯನ್ನು ಎದುರಿಸಲಿರುವ ಧೈರ್ಯವನ್ನು ಈ ವಿದ್ರೋಹವು ಹುಟ್ಟಿಸುತ್ತಿದ್ದಿತು. ಬಲಹೀನ ಹೃದಯಗಳಲ್ಲಿ ನವಚೈತನ್ಯವು ನೆಲೆಗೊಳ್ಳುವಂತೆ ಮಾಡುತ್ತಿದ್ದಿತು.

ಆದುದರಿಂದ ಈ ವಿದ್ರೋಹದಲ್ಲಿ ಅಪಾರ ನೋವು, ಹಿಂಸೆ ಇವುಗಳೆಲ್ಲ ಅಡಗಿದ್ದರೂ ಅದು ಸೂರ್ಯೋದಯವಾಗುವದಕ್ಕೆ ಮುನ್ನ ತೋರುತ್ತಿರುವ ನಸುಬೆಳಕಿನಂತೆ ಸ್ವಾಧೀನಜೀವನವು ಉದಯವನ್ನು ಹೊಂದುವದರ ಲಾಂಛನ ವಾಗಿದ್ದಿತು. ವಿದ್ರೋಹವೆಷ್ಟರಮಟ್ಟಿಗೆ ನ್ಯಾಯಸಮ್ಮತವಾದುವೆಂಬದನ್ನು ತರ್ಕಿಸಲು ನಾನಿಲ್ಲಿ ಹೊರಡುವದಿಲ್ಲ; ಆದರೆ ಸತ್ವಶೂನ್ಯವಾಗಿ ಬಿದ್ದ ಜನತೆ ಯನ್ನು ಅದು ಜಾಗೃತಗೊಳಿಸಿತೆಂಬದು ನಿರ್ವಿವಾದವು. ಪರಾಧೀನತೆ ಯಲ್ಲಿ ಬಳಲುತ್ತಿರುವ ಜನರ ಎದೆಗಳಲ್ಲಿ ಹೊಸ ಉಸಿರನ್ನು ಅದು ಊದಿತು.

ಈ ರೀತಿಯ ಭೀಷಣ ಕರ್ಮರಂಗದಲ್ಲಿ ಪ್ರವೇಶಿಸಿದ ಜ್ಞಾನಾನಂದ ನಲ್ಲಿ ಒಂದು ಮಹಾತ್ಮ್ಯೆಯು ಇದ್ದೇ ಇದ್ದಿತು. ಅವನು ಅವಲಂಬಿಸಿದ ದಾರಿಯಿಂದಲ್ಲ ಅವನೊಬ್ಬ ಮಹಾತ್ಮನೆಂದು ನಾನು ನುಡಿಯುತ್ತಿರುವದು. ಜನತೆಯ ಅಭ್ಯುನ್ನತಿಗಾಗಿ ಆತನು ಹೆಣಗುತ್ತಿರುವದು, ನಾಡಿನ ಅಭ್ಯುದಯ ವೇ ತನ್ನ ಅಭ್ಯುದಯವೆಂಬ ಮಹಾಮನಸ್ಕತೆ ಇವುಗಳು ಅವನೊಬ್ಬ ಮಹಾತ್ಮ ನೆಂಬುದನ್ನು ಸೂಚಿಸುತ್ತಿದ್ದವು

ರೂಪನಗರ ಪ್ರಾಂತವಲ್ಲಿ ಎಲ್ಲರಿಂದಲೂ ಬಹುಮಾನಿತನಾದ ಬೇರೊಬ್ಬ ಪುರುಷನಿದ್ದನು. ಜ್ಞಾನಾನಂದನು ಹಿಂದುಗಳಿಗೆ ಮಾತ್ರ ಬೇಕಾದ ಒಬ್ಬ ನಾಗಿದ್ದರೆ ಎರಡನೆಯವನು ಹಿಂದುಗಳಿಂದಲೂ ಮುಸಲ್ಮಾನರಿಂದಲೂ ಬಹು ಮಾನಿತನಾದ ಒಬ್ಬ ವ್ಯಕ್ತಿಯಾಗಿದ್ದನು. ಪರಸ್ಪರ ವಿದ್ವೇಷವನ್ನು ಕಾರುತ್ತಿದ್ದ ಈ ಎರಡು ಬಣದವರೂ ಈ ವ್ಯಕ್ತಿಯನ್ನು ಒಂದೇಸವನೆ ಬಹುಮಾನಿಸುತ್ತಿದ್ದ ರೆಂದರೆ ಅದೊಂದು ಕೌತುಕದ ಸಂಗತಿಯು. ಈ ಮಹನೀಯನು ಫಕೀರ ಇಬ್ರಾಹಿಮ್ ಹುಸ್ಸೇನ ಎಂಬ ಇಸ್ಲಾಂ ಧರ್ಮದ ಸಂನ್ಯಾಸಿಯಾಗಿದ್ದನು. ಫಕೀರ ಹುಸ್ಸೇನನು ಇಸ್ಲಾಂ ಧರ್ಮದ ಸಂನ್ಯಾಸಿಯಾಗಿದ್ದರೂ ಕೇವಲ ವರ್ಗ ಪ್ರೇಮವೆಂಬ ಗೋಡೆಗಳಿಂದ ಆವೃತನಾಗದೆ, ಜಗತ್ತಿನ ಮನುಷ್ಯ ಸಮುದಾ ಯವನ್ನೇ ಸ್ನೇಹಿಸುತ್ತಿದ್ದ ಒಬ್ಬ ಮಹಾತ್ಮನಾಗಿದ್ದನು. ಅವನ ದಯಾ ಮೃತವು ಕೇವಲ ಇಸ್ಲಾಧರ್ಮದವರ ಮೇಲೆ ಮಾತ್ರವಲ್ಲ; ಹಿಂದೂ, ಜೈನ ಎಂಬಿತ್ಯಾದಿ ವಿವಿಧ ವರ್ಗದವರ ಮೇಲೆಯೂ ವರ್ಷಿಸುತ್ತಿದ್ದಿತು. ಸ್ವಧರ್ಮದ ಮೇಲೆ ಅಪಾರ ಭಕ್ತಿ-ವಿಶ್ವಾಸಗಳುಳ್ಳವನಾಗದ್ದರೂ ಫಕೀರ ಹುಸೇನನು ಅನ್ಯಧರ್ಮಾವಲಂಬಿಗಳನ್ನು ಹಳಿಯುತ್ತಿರಲಿಲ್ಲ. ಇತರ ಮತದವರನ್ನು ಸಹ ಪ್ರೀತಿಸುವದು, ಅವರೊಡನೆ ಗೆಳೆತನದಿಂದ ವರ್ತಿಸುವದು ಇವು ತನ್ನ ಧರ್ಮಾ

ಚರಣೆಗೆ ಸೇರಿದವುಗಳಾಗಿವೆಯೆಂದು ಅವನು ಮನಗಂಡಿದ್ದನು. ಆದುದರಿಂದ ಫಕೀರ ಹುಸ್ಸೇನನ ಮತಭಕ್ತಿಯು ಪರಮತದವರಿಗೆ ಪೀಡೆಯಾಗಿ ಪರಿಣಮಿಸಲಿಲ್ಲ

ಈ ವಿಶಾಲ ಹೃದಯದ ಸಂನ್ಯಾಸಿಯನ್ನು ಹಿಂದುಗಳೂ ಮುಸ್ಲೀಮರೂ ಏಕರೀತಿಯಲ್ಲಿ ಬಹುಮಾನಿಸುತ್ತಿದ್ದುದಕ್ಕೆ ಕಾರಣವು ಫಕೀರನ ಮಹಾಮನಸ್ಕತೆಯಾಗಿದ್ದಿತು. ಪರರನ್ನು ಪೀಡಿಸಲು ಅವನು ಎಂದಿಗೂ ಒಪ್ಪುತ್ತಿರಲಿಲ್ಲ. ಧರ್ಮದ ಹೆಸರಿನಲ್ಲಿ ಪಠಾಣರು ಅನ್ಯಮತದವರ ಮೇಲೆ ಜರುಗಿಸುತ್ತಿದ್ದ ಅತ್ಯಾಚಾರಗಳನ್ನು ಫಕೀರನು ತೀವ್ರವಾಗಿ ವಿರೋಧಿಸುತ್ತಿದ್ದನು. ಈ ಅತ್ಯಾಚಾರಗಳು ಇಸ್ಲಾಂ ಧರ್ಮವನ್ನು ಕಲಂಕಿತವಾಗುವಂತೆ ಮಾಡುತ್ತವೆ ಎಂಬುದನ್ನು ಅವನು ಬಲ್ಲವನಾಗಿದ್ದನು. ಎರಡು ವರ್ಗದವರೂ ಗೆಳೆತನದಿಂದ ಬಾಳಿ ಪರಸ್ಪರ ಅಭ್ಯುದಯಗಳಿಗಾಗಿ ಹೆಣಗಬೇಕೆಂಬುದು ಫಕೀರನ ಒಂದು ತತ್ವವಾಗಿದ್ದಿತು. ದೇಶದ ಸಂಪತ್ತು ಮತ್ತು ಸೌಭಾಗ್ಯಗಳು ಹೆಚ್ಚಬೇಕಾದರೆ ಹಿಂದುಸ್ಥಾನದ ಎರಡು ನೇತ್ರಗಳಿಂತಿರುವ ಹಿಂದೂ, ಮುಸ್ಲೀಂ ಎಂಬ ಎರಡು ವರ್ಗಗಳು ಪರಸ್ಪರ ಮೈತ್ರಿಯಿಂದ ಜೀವಿಸುವದು ಅತ್ಯಾವಶ್ಯಕವೆಂದು ಫಕೀರನು ಮನಗಂಡಿದ್ದನು. ಈ ಮೈತ್ರಿಯಿಂದ ಮಾತ್ರ ಸ್ವಾಧೀನತೆಯನ್ನು ಪಡೆಯಲು ಸಾಧ್ಯವೆಂಬುದು ಅವನ ವಾದವಾಗಿದ್ದಿತು. ಆ ಧ್ಯೇಯವನ್ನು ಸಾಧಿಸಲು ಅವನು ಮನಃಪೂರ್ವಕ ಹೆಣಗುತ್ತಲಿದ್ದ. ಮತವಿದ್ವೇಷದ ಬೆಂಕಿಯನ್ನು ನಂದಿಸಲು ಬಹುವಾಗಿ ಪರಿಶ್ರಮಿಸುತ್ತಲಿದ್ದ.

ಈ ಉತ್ಕೃಷ್ಟ ಮನುಷ್ಯನು ಜ್ಞಾನಾನಂದನ ಗೆಳೆಯನಾಗಿ ಪರಿಣಮಿಸಿದುದರಲ್ಲಿ ಆಶ್ಚರ್ಯಪಡಬೇಕಾಗಿಲ್ಲ. ಅವರಿಬ್ಬರ ಆದರ್ಶಗಳು ಒಂದೇ ಆಗಿದ್ದರೂ, ಇಬ್ಬರೂ ಅವಲಂಬಿಸಿದ ದಾರಿಗಳು ಭಿನ್ನವಾದವುಗಳು. ಫಕೀರ ಹುಸೇನನಿಗೆ ಪ್ರತಿಹಿಂಸೆಯಲ್ಲಿ ನಂಬಿಕೆಯಿಲ್ಲ; ಅದರಿಂದ ನಾಡಿನ ಕ್ಲೇಶಗಳು ಇನ್ನಷ್ಟು ಹೆಚ್ಚುವವೆಂದು ಅವನ ವಾದವಾಗಿದ್ದಿತು. ಸ್ನೇಹ-ಔದಾರ್ಯಗಳಿಂದ ಎರಡು ವರ್ಗಗಳ ನಡುವೆ ಗಾಢ ಮೈತ್ರಿಯು ನೆಲೆಗೊಳ್ಳುವಂತೆ ಮಾಡಬೇಕೆಂದೂ, ಈ ಮೈತ್ರಿಯು ದೃಢವಾದ ಮೇಲೆ ಎರಡು ಬಣಗಳಿಗೂ ಸ್ವೀಕಾರ್ಯವಾದ ರೀತಿಯಲ್ಲಿ ರಾಜ್ಯಶಾಸನವನ್ನು ಸಾಗಿಸಬೇಕೆಂದೂ ಫಕೀರನ ವಾದಗಳಾಗಿದ್ದವು. ಪಠಾಣರ ಅತ್ಯಾಚಾರಗಳಿಗೆ ವಿರುದ್ಧವಾಗಿ ಹಿಂದುಗಳು ಒಂದು ವಿದ್ರೋಹವನ್ನು ಎಬ್ಬಿಸುವದಾದರೆ ಈ ಎರಡು ಪಂಗಡಗಳ

ಅಂತರವು ಹೆಚ್ಚುವವೆಂದು ಫಕೀರನು ತಿಳಿದಿದ್ದನು. ಐಕ್ಯಸಾಧನೆಯ ದೃಷ್ಟಿಯಿಂದ ಅವನು ಜ್ಞಾನಾನಂದನ ವಿದ್ರೋಹದ ಹಂಚಿಕೆಯನ್ನು ತೀವ್ರವಾಗಿ ಎದುರಿಸಿದನು. ಈ ವಿದ್ರೋಹದಿಂದ ಜನರ ದುರಿತಗಳು ಇನ್ನಷ್ಟು ಹೆಚ್ಚುವವಲ್ಲದೆ ಕ್ಷೇಮವು ಲಭಿಸಲಾರದೆಂದು ಅವನು ವಾದಿಸಿದ.

ಫಕೀರನ ಕರ್ಮಪದ್ಧತಿಯು ಜ್ಞಾನಾನಂದನ ಕರ್ತೃಪದ್ಧತಿಗಿಂತ ವಿಭಿನ್ನವಾದುದೆಂಬುದು ನಿಜ; ಆದರೆ ಇಬ್ಬರೂ ಒಂದೇ ನಾಡಿನ ಕಲ್ಯಾಣವನ್ನು ಬಯಸತಕ್ಕವರಾಗಿದ್ದರು. ಎರಡು ವರ್ಗಗಳ ಐಕ್ಯತೆಯಲ್ಲಿ ಅವರಿಗಿಬ್ಬರಿಗೂ ವಿಶ್ವಾಸವಿದ್ದಿತು. ಇದಲ್ಲದೆ ಜ್ಞಾನಾನಂದನಲ್ಲಿದ್ದ ಅಪಾರ ಚೈತನ್ಯವನ್ನೂ ಜ್ಞಾನಶಕ್ತಿಗಳನ್ನೂ ಫಕೀರನು ತಿಳಿದಿದ್ದನು. ಫಕೀರನ ಮಹಾಮನಸ್ಕತೆಯನ್ನು ಜ್ಞಾನಾನಂದನು ಬಲ್ಲವನಾಗಿದ್ದನು. ಈ ಎರಡು ಮಹಾಶಕ್ತಿಗಳು ಪರಸ್ಪರ ನೋಡಿದವು. ಈ ಎರಡು ಆತ್ಮಗಳು ಸ್ನೇಹರಜ್ಜುವಿನಿಂದ ಬಂಧಿತವಾದವು. ಆದುದರಿಂದ ಜ್ಞಾನಾನಂದನು ವಿಫಲನಾಗಿದ್ದರೂ ಫಕೀರ ಹುಸ್ಸೇನನ ಜೀವನದ ಗೆಳೆಯನಾದನು.

ಈ ಅಧ್ಯಾಯದ ಪ್ರಾರಂಭದಲ್ಲಿ ನುಡಿದಂತೆ ಫಕೀರ ಹುಸ್ಸೇನನು ತನ್ನ ಮಕ್ಕಾ ಪ್ರವಾಸವನ್ನು ಮುಗಿಸಿ ಸ್ವದೇಶಕ್ಕೆ ಮರಳಿ ಬಂದ ಮೇಲೆ ತನ್ನ ಆತ್ಮಮಿತ್ರನ ದರ್ಶನಕ್ಕಾಗಿ ಬಂದಿದ್ದನು. ಜ್ಞಾನಾನಂದನು ತನ್ನ ಗೆಳೆಯನನ್ನು ಯಾವ ರೀತಿಯಲ್ಲಿ ಸ್ವೀಕರಿಸಿದನೆಂಬುದನ್ನು ತಿಳಿದೇ ಇದ್ದೇವೆ. ಅವರಿಬ್ಬರೂ ನಾಡಿನ ದುರಿತ ಸ್ಥಿತಿಗಳನ್ನು ನೋಡಿ ಸಂತಾಪಪಟ್ಟರು; ಅಭ್ಯುನ್ನತಿಯ ದಾರಿಯನ್ನು ಚಿಂತಿಸಿದರು. ಅವರ ಚಿಂತನೆಗಳ ಗತಿಗಳಾವುವೆಂಬುದನ್ನು ನಾವು ಅವರಿಬ್ಬರ ಸಂವಾದದಿಂದ ತಿಳಿದುಕೊಂಡಿರುತ್ತೇವೆ. ಆ ಎರಡು ಮಂದಿ ಮಹಾತ್ಮರ ಕರ್ಮಪದ್ಧತಿಗಳು ಪರಸ್ಪರ ವಿಭಿನ್ನವಾದವುಗಳಾಗಿದ್ದರೂ ನಾಡಿನ ಅಭ್ಯುದಯವನ್ನು ಅವರಿಬ್ಬರೂ ಕಾಂಕ್ಷಿಸುತ್ತಿದ್ದರು. ಸ್ವಾಧೀನ ಜೀವನ ಭಾಸ್ಕರನ ಉದಯವನ್ನು ಅವರಿಬ್ಬರೂ ಇದಿರು ನೋಡುತ್ತಿದ್ದರು!

---

## ೬ ಪಾಪಚಿಂತನೆ

'ಜಾವಿಂದ, ದುರ್ಜಯಸಿಂಹರು ಹೊರಗೆ ಬಂದು ನಿಂತಿದ್ದಾರೆ." ಮೃದುಸ್ವರದಲ್ಲಿ ದ್ವಾರಪಾಲಕನು ಹೇಳಿದನು.

ಹುಕ್ಕವನ್ನು ಸೇದುವುದರಿಂದ ಬಾಯೊಳಗೆ ತುಂಬಿದ ಹೊಗೆಯನ್ನು ಹೊರಗೆ ಬಿಟ್ಟನು ಯಾಕೂಬಖಾನನು. ಹೊಗೆಯು ವಕ್ರಾಕಾರವನ್ನು ತಾಳುತ್ತಾ ವಾಯುವಿನಲ್ಲಿ ಬೆರೆತಿತು. ಅನಂತರ ಹುಕ್ಕದಿಂದ ತನ್ನ ಕಣ್ಣುಗಳನ್ನೆತ್ತಿ ದ್ವಾರಪಾಲಕನ ಕಡೆಗೆ ಹೊರಳಿಸಿದನು. ಏನೆಂಬ ಪ್ರಶ್ನೆಯನ್ನು ಸೂಚಿಸಿತು ಯಾಕೂಬನ ದೃಷ್ಟಿ.

ದ್ವಾರಪಾಲಕನು ಪುನಃ ಹೇಳಿದ. "ದುರ್ಜಯಸಿಂಹರು ಬಂದಿದ್ದಾರೆ."

"ಒಳಗೆ ಬರಹೇಳು." ಈ ಆಜ್ಞೆಯು ಬಂದಿತು ಸುಭೇದಾರನಿಂದ. ದ್ವಾರಪಾಲಕನು ಹೊರಗೆ ತೆರಳಿದ.

ಎರಡು ನಿಮಿಷಗಳಲ್ಲಿಯೇ ಕೃಷ್ಣವರ್ಣದ ವ್ಯಕ್ತಿಯೊಂದು ಹಜಾರದೊಳಗೆ ಪ್ರವೇಶಿಸಿತು. ಮುಖವು ಬಹು ಕ್ರೂರವಾಗಿದ್ದು, ಆತನ ಹೃದಯವು ಬರಡಾದುದೆಂಬುದನ್ನು ಸೂಚಿಸುತ್ತಿದ್ದಿತು. ಕಣ್ಣುಗಳು ಕಿರಿದಾಗಿದ್ದು ಪಾಪಮಯವಾದುದವನ ಜೀವನವೆಂಬುದನ್ನು ಸೂಚಿಸುತ್ತಿದ್ದವು. ಆ ರೂಪವು ನೋಡುವವರ ಮನಸ್ಸಿನಲ್ಲಿ ಜಿಗುಪ್ಸೆಯನ್ನು ಹುಟ್ಟಿಸದೆ ಇರಲಾರದು ಈ ಕರಾಳ ಸ್ವರೂಪದ ವ್ಯಕ್ತಿಯ ಹೆಸರು ದುರ್ಜಯಸಿಂಹನೆಂದು.

ಅವನು ಸುಭೇದಾರನಿಗೆ ನೆಲಮುಟ್ಟಿ ಮೂರು ಸಲ ವಂದಿಸಿ ದೂರ ಸರಿದು ನಿಂತನು; ಆದರೆ ಸುಭೇದಾರನು ದುರ್ಜಯನ ವಂದನೆಗಳನ್ನು ಸ್ವೀಕರಿಸಲಿಲ್ಲ. ಪ್ರಶ್ನಾರ್ಥಕದ ಒಂದು ನೋಟವನ್ನು ದುರ್ಜಯನ ಮೋರೆಯ ಕಡೆಗೆಸೆದು ಸುಭೇದಾರನು ಮೌನವನ್ನವಲಂಭಿಸಿದನು. ತಾನೇ ಸ್ವತಃ ಸಂಭಾಷಣೆಯನ್ನು ಪ್ರಾರಂಭಿಸುವ ಧೈರ್ಯವು ದುರ್ಜಯನಿಗಿರಲಿಲ್ಲ. ಆದುದರಿಂದ ಅವನು ನೆನೆದ ಬೆಕ್ಕಿನಂತೆ ಮುದುಡಿಕೊಂಡು ನಿಂತನು. ಅವನ ಅಂಗಾಂಗಗಳಲ್ಲಿ ಭೀತಿ ಮತ್ತು ಕುಟಿಲತೆಗಳು ಹೊರಸೂಸುತ್ತಿದ್ದವು.

"ದುರ್ಜಯ," ಸುಭೇದಾರನೇ ಸಂಭಾಷಣೆಯನ್ನು ಪ್ರಾರಂಭಿಸಿದ. "ಇದುವರೆಗೆ ಏನು ಮಾಡುತ್ತಿದ್ದೆ?"

"ತಮ್ಮ ಆಜ್ಞೆಯನ್ನು ನೆರವೇರಿಸುವದರಲ್ಲಿ ಉದ್ಯುಕ್ತನಾಗಿದ್ದೆ." ದುರ್ಜಯನು ಉತ್ತರ ಕೊಟ್ಟನು. ಅವನ ಸ್ವರವು ಬಹು ಕರ್ಕಶವಾಗಿದ್ದಿತು. ಮಾಧುರ್ಯವೆಂಬುದು ಅವನ ಸನಿಯಕ್ಕೆ ಸುಳಿದಿರಲಿಲ್ಲ.

"ನನ್ನ ಆಜ್ಞೆಯನ್ನು ನೆರವೇರಿಸಲೊ? ಯಾವುದು ನನ್ನ ಆಜ್ಞೆ?" ಸುಭೇದಾರ ಗರ್ಜಿಸಿದ "ಕತ್ತೇ ಮಗನೇ, ನಿನ್ನಂಥ ನಾಯಿಗಳಿಗೆ ಅನ್ನ ಹಾಕುವವ

ರಿಂದ ಯಾವ ಪ್ರಯೋಜನವೂ ಇಲ್ಲ."

"ಸಾಹೇಬ, ಈ ಬಡವನ ಮೇಲೆ ಸಿಟ್ಟಾಗಬೇಡಿರಿ; ಮಹತ್ವದ ಸಂಗತಿಗಳನ್ನು ತೆಗೆದುಕೊಂಡು ಬಂದಿದ್ದೇನೆ. ಅವುಗಳನ್ನು ಕೇಳಿದ ಮೇಲೆ ನನ್ನಲ್ಲಿ ತಪ್ಪಿದ್ದರೆ ದಂಡಿಸಿರಿ.''

"ಸುಡುಗಾಡು! ಹೇಳಬೇಕಾದುದನ್ನು ಬೇಗನೆ ಬೊಗಳು!"

"ಸಾಹೇಬ, ಪಠಾಣ ಪ್ರಭುತ್ವಕ್ಕೆ ವಿರುದ್ಧವಾಗಿ ಕೆಲವರು ಬಂಡು ಮಾಡಲು ಹೊರಟಿರುವದನ್ನು ಖಾವಿಂದರು ತಿಳಿದಿರಬಹುದು. ಆ ವಿಷಯವನ್ನು ಶೋಧಿಸಲು ಗಮಿಸಿದ್ದೆ."

"ಶೋಧಿಸಿ ಏನಾಯಿತು?"

"ಕೆಲವು ಮಂದಿ ತುಂಟರು ತಮಗೆ ವಿರುದ್ಧವಾಗಿ ಗೊಂದಲಗಳನ್ನೆಬ್ಬಿಸಲು ಹವಣಿಸುತ್ತಿರುವರು. ಪಠಾಣ ಶಾಸನವನ್ನು ಅಡಿಮೇಲು ಮಾಡುವದೇ ಅವರ ಉದ್ದೇಶವಾಗಿದೆ."

"ಯಾರು ಆ ನೀಚರು?" ಹೀಗೆ ಸುಭೇದಾರನು ಗರ್ಜಿಸಿದ.

"ಕೆಲವು ಮಂದಿ ಹಿಂದೂ ತರುಣರು; ರೂಪನಗರ ಪ್ರಾಂತದಲ್ಲಿ ಒಂದು ಬಂಡಾಯವನ್ನೆಬ್ಬಿಸಿ ಹಿಂದೂ ರಾಜ್ಯವನ್ನು ಕಟ್ಟುವ ಯೋಚನೆಯಲ್ಲಿದ್ದಾರೆ."

"ಕತ್ತೆ, ಈ ಸಂಗತಿಯನ್ನು ನೀನು ಮೊದಲೇ ಏಕೆ ಅರುಹಲಿಲ್ಲ? ಆ ತುಂಟರು ಯಾರು? ಹೇಗೆ ಬಂಡಾಯವನ್ನೆಬ್ಬಿಸಲುದ್ಯುಕ್ತರಾಗಿರುವರು?" ದುಗುಡದಿಂದ ಸುಭೇದಾರನು ಮಾತಾಡಿದ.

"ಖಾವಿಂದರು ನಾನು ಹೇಳುತ್ತಿರುವದನ್ನು ಪೂರ್ಣವಾಗಿ ಕೇಳಬೇಕು. ಸದಾ ತಮ್ಮ ಹಿತವನ್ನೇ ಕೋರುತ್ತಿರುವ ನನ್ನ ಮೇಲೆ ಸಿಟ್ಟು ಮಾಡಬಾರದಾಗಿ ಕೋರಿಕೆಯು. ಇಲ್ಲಿಂದ ಎರಡು ಹರದಾರಿಗಳ ದೂರದಲ್ಲಿ ಒಬ್ಬ ಸಂನ್ಯಾಸಿಯು ಒಂದು ಹೊಳೆಯ ತೀರದಲ್ಲಿ ಒಂದು ಪರ್ಣಶಾಲೆಯನ್ನು ಕಟ್ಟಿ ವಾಸ ಮಾಡುತ್ತಿದ್ದಾನೆ. ಅವನು ತೋರಿಕೆಗೆ ಮಾತ್ರ ಒಬ್ಬ ಸಂನ್ಯಾಸಿ; ನಿಜವಾಗಿಯೂ ಅವನೊಬ್ಬ ಬಂಡುಗಾರನಿರುತ್ತಾನೆ. ಕಳೆದ ಸಲ ನಾನು ಮಣಿನಗರಕ್ಕೆ ಹೋಗಿ ಬರುವಾಗ ದಾರಿ ತಪ್ಪಿತು. ಹಾಗೆಯೇ ಈ ಹೊಳೆಯ ತೀರಕ್ಕೆ ಬಂದೆ. ಇಲ್ಲಿ ಒಂದು ಬೆಳಕು ಆ ರಾತ್ರಿಯಲ್ಲಿ ಗೋಚರಿಸಿತು. ಪ್ರಕಾಶವು ದೃಗ್ಗೋಚರವಾಗಲು ಅಲ್ಲಿ ಜನರಿರಬೇಕೆಂದು ಊಹಿಸಿ ಆ ಕಡೆಗೆ ತೆರಳಿದೆ. ಅಲ್ಲಿಗೆ ಹೋಗಿ ನೋಡುವಾಗ ಒಂದು ಪರ್ಣಶಾಲೆಯು ಗೋಚರಿಸಿತು. ಎಲೆ

ಮನೆಯ ಮುಂದಿರುವ ಚಪ್ಪರದಲ್ಲಿ ಒಂದು ದೀಪವು ಉರಿಯುತ್ತಿದ್ದಿತು. ಬೆಳಕು ಇದ್ದುದರಿಂದ ಅಲ್ಲಿ ನಡೆಯುತ್ತಿರುವುದೇನೆಂಬುದು ನನಗೆ ವ್ಯಕ್ತವಾಗಿ ಕಂಡು ಬಂದಿತು. ಅಲ್ಲಿ ಒಬ್ಬ ಸಂನ್ಯಾಸಿಯೂ ಹತ್ತಿಪ್ಪತ್ತು ಮಂದಿ ತರುಣರೂ ಸಂಭಾಷಣೆಯಲ್ಲಿ ನಿರತರಾಗಿದ್ದರು. ಮರೆಯಲ್ಲಿ ನಿಂತು ಅವರ ಸಂಭಾಷಣೆಯನ್ನು ಕೇಳಿದೆ. ರಾಜ್ಯದಲ್ಲಿ ಬಂಡಾಯವನ್ನು ಎಬ್ಬಿಸುವ ವಿಷಯವನ್ನು ಅಂದು ಮಾತಾಡುತ್ತಿದ್ದರು. ಆ ದಿನ ನಮ್ಮ ಕಣಜವನ್ನು ಸುಲಿದುಕೊಂಡು ಹೋದವರು ಕಳ್ಳರಲ್ಲ; ಈ ಬಂಡುಗಾರರಾಗಿರುತ್ತಾರೆ. ಈ ಸಂಗತಿಗಳೆಲ್ಲಾ ಅವರ ಸಂಭಾಷಣೆಯಿಂದ ನನಗೆ ತಿಳಿದಿತು."

"ಅನಂತರ ನೀನೇನು ಮಾಡಿದೆ? ಆಗಲೇ ಅವರನ್ನೇಕೆ ನೀನು ಬಂದಿ ಮಾಡಲಿಲ್ಲ?' ಈ ಸಲ ಸ್ವಲ್ಪ ಮೃದುಸ್ವರದಲ್ಲಾಗಿದ್ದಿತು ಸುಭೇದಾರನು ಮಾತಾಡಿದುದು.

"ಅವರ ಕಣ್ಣುಗಳಿಗೆ ಬೀಳದೆ ಪಾರಾಗುವ ದಾರಿಯನ್ನು ಹುಡುಕಿದೆ." ಮರ್ಜಯನು ತನ್ನ ಮಾತುಗಳನ್ನು ಮುಂದುವರಿಸಿದ. "ಅವರ ದೃಷ್ಟಿಗೆ ಬಿದ್ದರೆ ಅವರು ನನಗೆ ಕೇಡನ್ನು ಬಗೆಯುವರೆಂಬ ನಂಬಿಕೆ ಇದ್ದುದರಿಂದ ಅವರ ಕಣ್ಣುಗಳಿಗೆ ನಾನು ಕಾಣಿಸಿಕೊಳ್ಳಲಿಲ್ಲ. ನಾನೊಬ್ಬ ರಾಜಭಕ್ತನಾಗಿರುವದರಿಂದ ಜನರು ನನ್ನನ್ನು ನಿಂದ್ಯದೃಷ್ಟಿಯಲ್ಲಿ ನೋಡುತ್ತಿದ್ದಾರೆ. ಸಾಲದುದಕ್ಕೆ ಆ ಜನರು ಬಂಡುಗಾರರು; ಯಾವ ಭಯಂಕರ ಕೃತ್ಯವನ್ನು ಮಾಡಲೂ ಹಿಂಜರಿಯಲಾರರು. ಆದುದರಿಂದ ಬಹು ಎಚ್ಚರಿಕೆಯಿಂದ ಅವರ ಕಣ್ಣುಗಳಿಗೆ ಬೀಳದೆ ಅಲ್ಲಿಂದ ಪಾರಾದೆ. ನಾನು ಏಕಾಂಗಿ; ಅವರು ಹತ್ತೆಂಟು ಮಂದಿ ಇದ್ದರು. ಅವರನ್ನು ಹಿಡಿಯಲು ಪ್ರಯತ್ನಿಸುವದು ಹುಚ್ಚುತನವೆಂದು ವಿಚಾರಿಸಿದೆ. ನಾನು ಒಬ್ಬನೇ ಆಗಿರದೆ ಎರಡು ಮೂರು ಮಂದಿಯಾದರೂ ಸಂಗಡವಿರುತ್ತಿದ್ದರೆ ಅವರನ್ನು ಹಿಡಿಯಲು ಪ್ರಯತ್ನಿಸದೆ ಇರುತ್ತಲಿರಲಿಲ್ಲ. ರಾಜ್ಯದ ಕ್ಷೇಮವನ್ನು ಚಿಂತಿಸಿ ಮಾವಿಂದರಿಗೆ ಈ ರಹಸ್ಯವನ್ನು ಉಸುರುತ್ತಿದ್ದೇನೆ."

"ಆ ಗುಡಿಸಿಲಿರುವದೆಲ್ಲಿ ಎಂಬದನ್ನು ನೀನು ಕಂಡುಹಿಡಿದಿರುವೆಯಾ? ಆ ಸ್ಥಳವು ಗೊತ್ತಾದರೆ ದುಷ್ಟರನ್ನು ಹಿಡಿಯುವದು ಪ್ರಯಾಸದ ಕೆಲಸವಲ್ಲ."

"ಬಲ್ಲೆ; ಆ ತುಂಟರು ಸೇರತಕ್ಕ ಸ್ಥಳದ ಗುರುತು ನನಗಿದೆ. ಯಾರಾದರೂ ನನ್ನ ಸಂಗಡ ಬರುವದಾದರೆ ಆ ಸ್ಥಳವನ್ನು ತೋರಿಸಿ ಕೊಡುತ್ತೇನೆ."

"ಹಾಗಾದರೆ ಒಳ್ಳೆಯದು; ನಾಳೆ ದಿನವೇ ಕೆಲವು ಮಂದಿ ದಂಡಾಳು

ಗಳನ್ನು ಕರೆದುಕೊಂಡು ದೌಲತನು ಅಲ್ಲಿಗೆ ಹೋಗಲಿ. ಸ್ಥಳವನ್ನು ತೋರಿಸಿ ಕೊಡಲು ನೀನೂ ಅವರ ಸಂಗಡ ಹೋಗಬೇಕು."

"ಅಪ್ಪಣೆ. ನಿಮ್ಮ ಮಾತುಗಳಂತೆ ವರ್ತಿಸುವದೆಂದರೆ ನನಗೆ ಬಹು ಸಂತೋಷ; ಆದರೂ ಒಂದು ಸೂಚನೆಯಿದೆ."

"ಏನದು?"

"ಹಗಲು ಹೊತ್ತು ಅಲ್ಲಿಗೆ ಹೋಗುವದು ಒಳ್ಳೆಯದಲ್ಲ. ಆ ಅಪರಾಧಿಗಳೆಲ್ಲರೂ ನಮಗೆ ಸಿಗಲಾರರು. ತಮ್ಮ ಕೆಲಸಗಳನ್ನು ನೆರವೇರಿಸುವದಕ್ಕಾಗಿ ಹೊರಗೆ ಹೋದ ಪುಂಡರೆಲ್ಲ ರಾತ್ರಿಹೊತ್ತು ಅಲ್ಲಿ ಒಂದು ನೆರೆಯುತ್ತಾರೆ. ಸ್ವಲ್ಪಮಂದಿ ದಂಡಾಳುಗಳನ್ನು ಕರೆದುಕೊಂಡು ರಾತ್ರಿಹೊತ್ತು ನಾವು ಅಲ್ಲಿಗೆ ಹೋದರೆ ಸುಲಭದಲ್ಲಿ ಅವರನ್ನೆಲ್ಲ ಹಿಡಿಯಬಹುದು. ಆದರೆ ನಾವು ಅವರನ್ನು ಹಿಡಿಯುವದಕ್ಕಾಗಿ ತೆರಳುತ್ತಿರುವೆವೆಂಬ ಸುಳಿವು ಅವರಿಗೆ ಹತ್ತಬಾರದು."

"ಆಗಲಿ. ಕೆಲಸವನ್ನು ನಿನ್ನ ಅಭಿಪ್ರಾಯದಂತೆ ನಾಳೆ ರಾತ್ರಿಯೇ ಜರಗಿಸೋಣ. ಇದುವರೆಗೆ ಆಡಳಿತದಲ್ಲಿ ಅಧಿಕಾರಿಗಳು ಅಲಸತೆಯನ್ನು ತೋರಿಸಿದುದರಿಂದ ಈ ಬಂಡುಗಾರರು ಉದ್ಭವಿಸಿದರು. ಅವರ ಉದಯವನ್ನು ನೀನು ಸಕಾಲದಲ್ಲಿ ಅರಿತುದು ಒಂದು ಉಪಕಾರವಾಯಿತು."

"ತಮ್ಮ ಸೇವೆಯೇ ನನಗೆ ಬೇಕಾದುದಾಗಿದೆ. ಇತರ ಹಿಂದುಗಳಂತೆ ಪಠಾಣರನ್ನು ತಿರಸ್ಕಾರ ದೃಷ್ಟಿಯಿಂದ ನೋಡತಕ್ಕವನು ನಾನಲ್ಲ. ಪಠಾಣರೆಂದರೆ ನನಗೆ ತುಂಬಾ ಗೌರವ. ಆದುದರಿಂದಲೇ ಅವರ ಹಿತವನ್ನು ಚಿಂತಿಸಲು ನಾನು ಪ್ರಯತ್ನಿಸುತ್ತಿದ್ದೇನೆ."

"ಇರಲಿ. ದುರ್ಜಯ, ನಿನ್ನ ಯೋಗ್ಯತೆಯೇನೆಂಬುದು ನನಗೆ ಗೊತ್ತಿದೆ. ಆದುದರಿಂದಲೇ ನಿನ್ನನ್ನು ಪರಮಾಪ್ತನೆಂದು ಭಾವಿಸುತ್ತಿದ್ದೇನೆ. ಆ ದಿನ ನಾನು ಹೇಳಿದ ಕೆಲಸವೇನಾಯಿತು?"

"ಏನದು?" ಎಂದು ದುರ್ಜಯನು ತನ್ನ ಕಣ್ಣುಗಳನ್ನು ಅರಳಿಸಿದನು.

"ಆ ಮಹತ್ವತ ಸಂಗತಿಯನ್ನು ಮರೆತು ಬಿಟ್ಟೆಯಾ? ನಿನ್ನಂಥ ಕತ್ತೆಯನ್ನು ಕಟ್ಟಿಕೊಂಡು ಏನು ಮಾಡಬೇಕೆಂಬುದು ತಿಳಿಯುವದಿಲ್ಲ."

"ಸಾಹೇಬ, ಈ ದಾಸನ ಮೇಲೆ ತಾವು ಅಪನಂಬಿಗೆಯನ್ನು ತೋರಿಸಬಾರದು. ಸದಾ ತಮ್ಮ ಹಿತವನ್ನೇ ಚಿಂತಿಸಿ ಪ್ರಯತ್ನಿಸುತ್ತಿರುವೆನು ನಾನು."

"ಇಲ್ಲ, ದುರ್ಜಯ, ಸಿಟ್ಟಾಗಬೇಡ. ನಿನ್ನಲ್ಲಿ ನನಗೆ ನಂಬಿಕೆಯಿಲ್ಲದಿದ್ದರೆ

ನನ್ನ ಎದೆಯ ಗುಟ್ಟನ್ನು ನಿನಗುಸುರುತ್ತಿದ್ದೇನೆ? ಆ ಹೆಣ್ಣುಮಗಳ ಕಾರ್ಯ ವನ್ನು ಚಿಂತಿಸಿದೆಯಾ?"

ಏನನ್ನೋ ಆಲೋಚಿಸುತ್ತಿರುವವನಂತೆ ನಟಿಸುತ್ತ ದುರ್ಜಯನು ಮಾತಾ ಡದೆ ಸ್ವಲ್ಪ ಹೊತ್ತು ನಿಂತನು. ಅನಂತರ ಜ್ಞಾಪಿಸಿಕೊಂಡವನಂತೆ ನಟಿ ಸುತ್ತ ಹೇಳಿದನವನು: "ಸಾಹೇಬ, ತುಸ ಕ್ಷಮಿಸಿರಿ; ಅಂದರೆ ಅವಳು ತಮ್ಮ ವಶಳಾಗುವಳು. ತಾವು ನನ್ನನ್ನು ಮಣಿನಗರಕ್ಕೆ ಕಳುಹಿದುದರಿಂದ ಆ ಕೆಲ ಸಕ್ಕೆ ಕೈ ಹಾಕಲು ಸಾಧ್ಯವಾಗಲಿಲ್ಲ. ಇನ್ನು ನಾನು ಅದರಲ್ಲಿ ಕೈ ಹಾಕುವೆ. ನಾನು ಅದನ್ನು ಮರೆತಿರಬಹುದೆಂದು ತಾವು ಭಾವಿಸಬಾರದು."

"ಇರಲಿ. ದುರ್ಜಯ, ನೀನಲ್ಲದೆ ಬೇರೆ ಆಪ್ತರು ನನಗಿಲ್ಲ. ಆದುದರಿಂದ ಲೇ ನನ್ನ ಪೂರ್ವಪರಲ್ಲಿ ಇಡದ ಪ್ರೀತಿ-ವಿಶ್ವಾಸಗಳನ್ನು ನಿನ್ನ ಮೇಲೆ ಮಡಗಿದ್ದೇನೆ. ನನ್ನ ಈ ಹಂಬಲವನ್ನು ಈಡೇರಿಸಿದರೆ ಇದಕ್ಕಿಂತ ಮಹ ತ್ವದ ಕೆಲಸಗಳಿಗೆ ನಿನ್ನನ್ನು ಹಚ್ಚುತ್ತೇನೆ. ಆ ದಿನ ಅವಳನ್ನು ನೋಡಿದಂದಿ ನಿಂದ ನನ್ನ ಮನಸ್ಸು ಅವಳ ರೂಪಕ್ಕೆ ಮರುಳಾಗಿ ಹೋಗಿದೆ. ಅವಳಲ್ಲಿ ನಾನು ಸುಖಿಸದಿದ್ದರೆ ನನಗೆ ಶಾಂತಿ ದೊರಕುವಂತಿಲ್ಲ. ನೋಡು, ಹಲವು ಚೆಲುವೆಯರನ್ನು ಕಂಡಿದ್ದೇನೆ; ಆದರೆ ಈ ಮೋಹನ ರೂಪವನ್ನು ನಾನು ಎಲ್ಲಿಯೂ ನೋಡಿರುವದಿಲ್ಲ. ಅವಳನ್ನು ವಶಪಡಿಸುವ ಕೆಲಸ ನಿನ್ನದು." ಒಬ್ಬ ಆಪ್ತಮಿತ್ರನಲ್ಲಿ ನುಡಿದಂತೆ ಸುಭೇದಾರನಂದನು. ಪ್ರಾರಂಭದಲ್ಲಿ ಸುಭೇ ದಾರನು ದುರ್ಜಯನ ಮೇಲೆ ಪ್ರದರ್ಶಿಸಿದ್ದ ತುಚ್ಛ ರಸವು ಈಗ ಅವನಲ್ಲಿ ಇಲ್ಲದಾಯಿತು. ಸಿಟ್ಟಿನ ನುಡಿಗಳ ಬದಲು ಪ್ರೀತಿಯ ಮಾತುಗಳನ್ನಾಡಿದನು.

"ಖಾವಿಂದ, ಆ ಬಗ್ಗೆ ತಾವು ಚಿಂತಿಸಬೇಕಾದುದಿಲ್ಲ. ಈ ದಾಸನ ಎದೆ ಯಲ್ಲಿ ಜೀವವಿರುವುದಾದರೆ ತಮ್ಮ ಬಯಕೆಯು ಈಡೇರುವದೆಂದು ನಂಬಿರಿ; ಆದರೆ ದುಡುಕುವದರಿಂದ ಕೆಲಸ ಕೆಟ್ಟುಹೋಗಬಹುದು. ನಮ್ಮ ಹೆಂಗಸ ರಿಗೆ ಪಾತಿವ್ರತ್ಯದ ಹುಚ್ಚು ಬಹಳ; ಅವರು ಅದಕ್ಕಾಗಿ ಪ್ರಾಣಗಳನ್ನು ಕಳೆದುಕೊಳ್ಳಲು ಸಹ ಹಿಂಜರಿಯುವದಿಲ್ಲ. ಆದುದರಿಂದ ಈ ಹೆಣ್ಣುಮಗ ಳನ್ನು ಸ್ವಾಧೀನಪಡಿಸಿಕೊಳ್ಳುವ ಕೆಲಸದಲ್ಲಿ ಬಹು ಜಾಗ್ರತೆಯಿಂದ ವರ್ತಿಸ ಬೇಕಾಗಿದೆ" ಒಬ್ಬ ಅನುಭವಶಾಲಿಯಂತೆ ದುರ್ಜಯನು ಮಾತನಾಡಿದನು. ಅವನ ನುಡಿಗಳಲ್ಲಿ ತಾನು ಹಿಡಿದ ಕೆಲಸವು ಜಯವಾಗುವದೆಂಬ ವಿಶ್ವಾಸವು ತುಂಬಿ ತುಳುಕುತ್ತಿದ್ದಿತು.

"ಒಳ್ಳೇದು. ನಿನಗೆ ಹೇಗೆ ಸರಿದೋರುವದೋ ಹಾಗೆ ವರ್ತಿಸು; ಆದರೆ ನನ್ನ ಆಗ್ರಹವನ್ನು ಪೂರೈಸಬೇಕು, ತಿಳಿಯಿತೇ? ಅವಳನ್ನು ಸ್ವಾಧೀನ ಪಡಿಸಿಕೊಳ್ಳಲು ಯಾವ ಉಪಾಯವನ್ನು ಆಲೋಚಿಸಿರುವೆ?" ದುರ್ಜಯನ ಮೋರೆಯನ್ನು ನೋಡುತ್ತ ಸುಭೇದಾರನು ಪ್ರಶ್ನಿಸಿದ.

ಸ್ವಲ್ಪ ಸಮಯದ ವರೆಗೆ ಚಿಂತಿಸಿದ ನಂತರ ದುರ್ಜಯನು:"ಕಡಿಮೆ ಪಕ್ಷ ಹದಿನೈದು ದಿನಗಳ ವರೆಗಾದರೂ ನಾವು ಕಾಯಬೇಕಾಗಿಬರುತ್ತದೆ."

"ಏಕೆ?"

"ಅವಳು ಏಕಾಂಗಿಯಾಗಿರುವಾಗ ಸೆರೆ ಹಿಡಿದು ತೆಗೆದುಕೊಂಡು ಬರಬೇಕು. ಆಕೆಯ ಗೃಹವನ್ನು ಆಕ್ರಮಿಸುವದೆಂದರೆ ಅದು ತುಂಬಾ ಸಾಹಸದ ಮಾತು. ಅದು ಜಯಪ್ರದವಾಗುವದರ ಬದಲು ನಮ್ಮ ಕೆಲಸವನ್ನು ಕೆಡಿಸಲಿಕ್ಕೆ ಸಾಕು; ಇದಲ್ಲದೆ ಅದು ಜನರ ಮನಸ್ಸನ್ನು ಸೆಳೆಯದಿರಲಾರದು. ಆದುದರಿಂದ ಅದಕ್ಕಿಂತ ವಿಭಿನ್ನವಾದ ಬೇರೊಂದು ಉಪಾಯವನ್ನು ನಾನು ಕಂಡುಹಿಡಿದಿದ್ದೇನೆ."

"ನಿನ್ನ ಉಪಾಯವೇನು?"

"ಸಾಹೇಬರು ಕೇಳಿಕೊಳ್ಳೋಣವಾಗಲಿ. ಇನ್ನು ಹದಿನೈದು ದಿನಗಳೊಳಗಾಗಿ ರಾಮನವಮಿಯು ಬರುತ್ತದೆ. ಆ ವಿಶೇಷ ದಿವಸದಲ್ಲಿ ಹಿಂದುಗಳ ರೂಢಿಗನುಸಾರವಾಗಿ ದೇವರ ದರ್ಶನಕ್ಕಾಗಿ ಆಕೆ ರಾಮದೇವಾಲಯಕ್ಕೆ ಹೋಗದಿರಲಾರಳು. ಆಗ ನಾವು ಆಕೆ ಏಕಾಂಗಿಯಾಗಿರುವ ಸಮಯವನ್ನು ನೋಡಿ ಅವಳನ್ನು ಸೆರೆಹಿಡಿಯಬೇಕಾಗಿದೆ. ಒಮ್ಮೆ ಆಕೆ ಕೈವಶವಾದರೆ ಅನಂತರ ತಮ್ಮ ಇಚ್ಛೆ ಸುಲಭದಲ್ಲಿ ಈಡೇರುವದು."

"ಆಗಲಿ; ನಿನ್ನ ಉಪಾಯದಂತೆಯೇ ಮಾಡು!" ತುಸ ಆಲೋಚಿಸಿದ ಮೇಲೆ ಸುಭೇದಾರನು ದುರ್ಜಯನ ಹಂಚಿಕೆಗೆ ಒಪ್ಪಿದನು.

"ಸಾಹೇಬ!" ಅಂಜುತ್ತ ನುಡಿದ ದುರ್ಜಯ.

"ಏನು ದುರ್ಜಯ?"

"ನನ್ನದೊಂದು ಬಿನ್ನಹವಿದೆ." "ಏನದು?"

"ಸ್ವಜನರ ನಿಂದೆಯನ್ನು ಸಹ ಲೆಕ್ಕಿಸದೆ ನಾನು ತಮ್ಮ ಸೇವೆಯನ್ನು ಮಾಡುತ್ತಿದ್ದೇನೆ. ನನ್ನ ಜಾತಿಯವರು ನನ್ನನ್ನು ಧರ್ಮದ್ರೋಹಿಯೆಂದು ಹಂಗಿಸುತ್ತಿದ್ದಾರೆ."

"ಅದಕ್ಕೇನು? ನಮ್ಮ ಜಾತಿಗೆ ಸೇರಿ ಬಿಡು; ಆ ಮೇಲೆ ಯಾರು ಹಂಗಿಸುತ್ತಾರೆ ನೋಡುವಾ."

ಸುಭೇದಾರನ ಈ ಸಲಹೆಗೆ ದುರ್ಜಯನು ಮರುನುಡಿಯಲಿಲ್ಲ. ಏಕೆಂದರೆ ಇಸ್ಲಾಂ ಧರ್ಮ ಸ್ವೀಕಾರವು ದುರ್ಜಯನ ಮನಸ್ಸೊಪ್ಪಿದ ವಿಷಯವಾಗಿರಲಿಲ್ಲ. ಕೆಲವು ನಿಮಿಷಗಳವರೆಗೆ ಮೌನದಿಂದಿದ್ದು ಆ ಮೇಲೆ ಸುಭೇದಾರನಿಗೆ ಹೀಗೆ ಬಿನ್ನೈಸಿದನು: "ಸಾಹೇಬ, ತಮ್ಮಲ್ಲಿ ಅಪಾರ ಭಕ್ತಿ-ವಿಶ್ವಾಸಗಳನ್ನಿಟ್ಟು ನಾನು ದುಡಿಯುತ್ತಲಿದ್ದೇನೆ. ನನ್ನ ಮೇಲೆ ಕೃಪೆಮಾಡಿ ಒಂದು ಪುಟ್ಟ ಉಪಕಾರವನ್ನು ಮಾಡಬೇಕು. ನನಗೆ ಒಬ್ಬ ಸರದಾರನ ಉದ್ಯೋಗವನ್ನಾದರೂ ಕೊಡಿಸಬೇಕು. ನಾನು ಪಠಾಣರ ಹಿತಚಿಂತಕನೆಂಬುದು ತಾವು ತಿಳಿದ ಸಂಗತಿಯೇ ಆಗಿರುತ್ತದೆ."

"ಒಳ್ಳೆಯದು. ಆ ವಿಷಯವನ್ನು ಕುರಿತು ನಾನು ಆಲೋಚಿಸುತ್ತೇನೆ. ನಿನ್ನನ್ನು ಮರೆಯುವವನು ನಾನಲ್ಲವೆಂಬುದನ್ನು ನಂಬು."

"ಸಾಹೇಬ, ತಾವು ಆಶ್ರಿತರ ರಕ್ಷಕರೆಂಬ ನಂಬಿಕೆಯು ನನ್ನಲ್ಲಿ ಪೂರ್ಣವಾಗಿದೆ. ಸ್ವಗೃಹಕ್ಕೆ ತೆರಳಲು ಅಪ್ಪಣೆಯಾಗಬೇಕು."

"ಸರಿ. ಈಗ ಬೀಡಾರಕ್ಕೆ ಹೋಗು; ಆದರೆ ಒಂದು ಮಾತು. ನಾಳೆ ಸಂಜೆಗೆ ತಪ್ಪದೆ ಬಾ. ಆ ಹೊಳೆಯ ತೀರದಲ್ಲಿ ವಿದ್ರೋಹಿಗಳಿದ್ದಾರೆಯೆಂದು ಹೇಳಿದೆಯಲ್ಲ? ನಾಳೆ ಅವರನ್ನು ಧ್ವಂಸ ಮಾಡಬೇಕು. ನಾಳೆ ದೌಲತ್‌ಖಾನನನ್ನು ನಿನ್ನ ಸಂಗಡ ಕಳುಹಿಸಿಕೊಡುತ್ತೇನೆ."

"ಅಪ್ಪಣೆಯಂತೆ ನಾಳೆ ಸಂಜೆಗೆ ತಮ್ಮಲ್ಲಿಗೆ ಬರುವೆ" ಹೀಗೆ ನುಡಿದನು ದುರ್ಜಯನು; ಮತ್ತು ಸುಭೇದಾರನಿಗೆ ನೆಲಮುಟ್ಟಿ ಮೂರು ಸಲ ವಂದನೆ ಮಾಡಿ ಹೊರಗೆ ತೆರಳಿದನು.

ಸತ್ಕರ್ಮಗಳನ್ನು ಆಚರಿಸಿ ಹೆಸರು ಪಡೆಯುವದು ಈ ಜಗತ್ತಿನಲ್ಲಿ ತುಂಬಾ ಪ್ರಯಾಸದ ಕೆಲಸ; ಆದರೆ ದುಷ್ಕರ್ಮಗಳಿಂದ ತನ್ನ ಹೆಸರನ್ನು ಮನುಷ್ಯನು ಬಹು ಬೇಗನೆ ಶಾಶ್ವತಪಡಿಸಿಕೊಳ್ಳಬಹುದು. ಈ ಎರಡನೆಯ ವರ್ಗಕ್ಕೆ ಸೇರಿದ ಮನುಷ್ಯನಾಗಿದ್ದನು ದುರ್ಜಯನು. ಅವನ ಜೀವನದ ಸ್ವರೂಪವನ್ನು ಅರಿತವರಿಗೆ ಈತನೇನು ದುಷ್ಕರ್ಮಗಳನ್ನು ಆಚರಿಸುವದಕ್ಕಾಗಿ ಜನ್ಮ ತಾಳಿದನೇ, ಎಂಬ ಸಂಶಯ ತೋರಿ ಹೋಗಬಹುದು. ಪಾಪಚಿಂತನೆ, ಪಾಪಾಚರಣೆ, ಪಾಪಮಯ ಜೀವನ ಇವುಗಳು ದುರ್ಜಯನಲ್ಲಿ ಮೂರ್ತಿ

ಗೊಂಡಿದ್ದವು. ಮನುಷ್ಯನ್ಯಾಗೀಯ ವಾಸನೆಗಳೆಲ್ಲ ದುರ್ಜಯನಲ್ಲಿ ತುಂಬಿ ತುಳುಕುತ್ತಲಿದ್ದವು. ಪರದ್ರೋಹದಲ್ಲಿಯೇ ತಮ್ಮ ಆಯುಷ್ಯವನ್ನು ವಿನಿಯೋಗಿಸಬೇಕೆಂದು ಕಂಕಣವನ್ನು ಧರಿಸಿದ ಕೆಲವು ಮಂದಿಯನ್ನು ಜಗತ್ತಿನಲ್ಲಿ ನಾವು ನೋಡಬಹುದು. ಅವರಲ್ಲಿ ದುರ್ಜಯನೂ ಒಬ್ಬನಾಗಿದ್ದನು. ತನಗೆ ಅವಶ್ಯವಿರಲಿ, ಇಲ್ಲದಿರಲಿ; ಅನ್ಯರನ್ನು ಹಿಂಸಿಸುವದನ್ನು ಅವನು ಮಾಡದಿರುತ್ತಿರಲಿಲ್ಲ. ಮನುಷ್ಯನಲ್ಲಿಯ ನೈತಿಕ ಬಲಹೀನತೆ ಅವನಲ್ಲಿ ಸೊಗಸಾಗಿ ಗೋಚರಿಸುತ್ತಿದ್ದಿತು. ಒಂದು ರಜಪೂತ ವಂಶದಲ್ಲಿ ಅವನು ಜನ್ಮವೆತ್ತಿದ್ದರೂ ರಜಪೂತರಿಗೆ ಸಹಜವಾಗಿರುವ ಗಾಂಭೀರ್ಯ, ಪರಹಿತಸಾಧನೆ ಎಂಬಿತ್ಯಾದಿ ಸದ್ಗುಣಗಳಲ್ಲಿ ಒಂದಾದರೂ ಅವನಲ್ಲಿರಲಿಲ್ಲ. ರಜಪೂತ ಎಂಬ ಹೆಸರಿಗೆ ಕಲಂಕವನ್ನು ತಂದೊಡ್ಡತಕ್ಕ ಒಬ್ಬ ಅಧಮನು ಅವನಾಗಿದ್ದನು.

ಈ ಪ್ರಕೃತಿಯ ಮನುಷ್ಯನೊಬ್ಬನಿಂದ ಲೋಕವು ಏನಾದರೂ ನಿರೀಕ್ಷಿಸುತ್ತಲಿದ್ದರೆ ಅವು ದುಷ್ಕರ್ಮಗಳೂ, ಜನದ್ರೋಹವೂ ಅಲ್ಲದೆ ಬೇರೆ ಯಾವವೂ ಆಗಿರಲಾರವು. ಸತ್ಕರ್ಮಗಳನ್ನು ಆಚರಿಸಲು ಅವನಲ್ಲಿ ಚೈತನ್ಯವಿರಲಿಲ್ಲ. ಅವನ ಪೈಶಾಚಿಕ ವಾಸನೆಗಳು ಅವನನ್ನು ಒಳ್ಳೆಯ ದಾರಿಯ ಕಡೆಗೆ ಒಯ್ಯುವಂತಿಲ್ಲ. ಆದುದರಿಂದ ಸಂಸ್ಕಾರಶೂನ್ಯನಾದ ದುರ್ಜಯನಿಂದ ರೂಪನಗರದ ನಿವಾಸಿಗಳಿಗೆ ನೋವಲ್ಲದೆ ಇನ್ನಾವದೂ ಲಭಿಸಲಿಲ್ಲ. ಅವರು ಈ ಮನುಷ್ಯನಿಂದ ಹಲವು ವಿಧಗಳ ಅತ್ಯಾಚಾರಗಳನ್ನು ಅನುಭವಿಸ ಬೇಕಾಗಿ ಬಂದಿತು.

"ಸಮಾನ ಶೀಲೇ ವ್ಯಸನೇಷು ಸಖ್ಯಂ" ಇದು ಒಂದು ಹಳೆಯ ನುಡಿ. ಈ ನುಡಿಯಂತೆ ದುಷ್ಟವಿಚಾರಗಳಿಂದ ಪರಿಪೂರ್ಣನಾದ ದುರ್ಜಯಸಿಂಹನೂ ಸ್ವೇಚ್ಛಾಧಿಕಾರಿಯೂ ವಿಷಯಲಂಪಟನೂ ಆದ ಸುಭೇದಾರ ಯಾಕೂಬಖಾನನೂ ಮಿತ್ರರಾದರು. ಸುಭೇದಾರನ ವಾಸನೆಗಳನ್ನು ಪೂರೈಸುವದು, ಅವನ ಗುಪ್ತಹೇರನಾಗಿ ನಾಡಿನಲ್ಲೆಲ್ಲ ಸಂಚರಿಸಿ ನಾಡ ಜನರ ರಹಸ್ಯಗಳನ್ನು ಸಂಗ್ರಹಿಸುವದು ಇವು ದುರ್ಜಯನ ಕೆಲಸಗಳಾಗಿ ಪರಿಣಮಿಸಿದವು. ಸುಭೇದಾರನ ವಿಷಯವಾಸನೆಗಳನ್ನು ಸಂತೃಪ್ತಿಗೊಳಿಸಿಕೊಳ್ಳುವದಕ್ಕಾಗಿ ದುರ್ಜಯನು ಸ್ವಧರ್ಮದ ಮಹಿಳೆಯರ ಶೀಲವನ್ನೂ ಅಪಹರಿಸಲು ಹಿಂಜರಿಯಲಿಲ್ಲ. "ಮಹಿಳೆಯರನ್ನು ಮಾನಿಸು" ಎಂಬ ಆರ್ಯ ವಚನವನ್ನು ಮೀರಿ ನಡೆಯಲು ಅವನು ಹಿಂದು ಮುಂದು ನೋಡಲಿಲ್ಲ. ಸುಭೇದಾರನ ಕೃಪಾ

ಕಟಾಕ್ಷವೀಕ್ಷಣ ಸಂಪಾದನೆಗಾಗಿ ತನ್ನ ನಾಡಿನ ಹಲವು ಮಂದಿ ಲಲನೆಯರ ಶೀಲವನ್ನು ಅಪಹರಿಸಿದನು; ಪಠಾಣರ ಸಹಾಯದಿಂದ ಸ್ವಜನರನ್ನು ಹಲವು ರೀತಿಯಿಂದ ಗೋಳಾಡಿಸಿದನು: ಆದರೆ ತಾನು ಜರುಗಿಸುವದು ಅನೀತಿಯೆಂಬ ಕಲ್ಪನೆಯು ಅವನಿಗಿರಲಿಲ್ಲ. ಪಠಾಣ ಅಧಿಕಾರಿಗಳು ಒಂದು ವೇಳೆ ಜನರ ಮೇಲೆ ಅಲ್ಪ-ಸ್ವಲ್ಪ ದಯಾ ದಾಕ್ಷಿಣ್ಯಗಳನ್ನು ತೋರಿಸಿರಬಹುದು; ಆದರೆ ದುರ್ಜಯನು ತನ್ನ ಜನರಿಗೆ ಯಾವ ಕನಿಕರವನ್ನೂ ತೋರಿಸಲಿಲ್ಲ. ಸುಭೇದಾರನ ಪ್ರೀತಿಯನ್ನು ಸಂಪಾದಿಸುವದಕ್ಕಾಗಿ ಅವನಾಚರಿಸಿದ ಪಾಪಕರ್ಮಗಳಿಗೆ ಮಿತಿಯಿಲ್ಲ. ಜನರ ಮೇಲೆ ಪ್ರೇಮವಿಲ್ಲದ ಸುಭೇದಾರನು ದುರ್ಜಯನನ್ನು ದಬ್ಬಾಳಿಕೆಯ ಕೆಲಸಗಳಲ್ಲಿ ತನ್ನ ಹಸ್ತಕನನ್ನಾಗಿ ಉಪಯೋಗಿಸಿಕೊಂಡನು.

ವಿಧಿಯ ಲೀಲಾವಿನೋದವು ವಿಚಿತ್ರವಾದದ್ದು. ದುಷ್ಟನೂ ಜನದ್ರೋಹಿಯೂ ಆದ ದುರ್ಜಯನ ಮಡದಿಯು ಅವನ ಸ್ವಭಾವಗಳೊಡನೆ ಸಾಮ್ಯವಿರತಕ್ಕ ಮಹಿಳೆಯಾಗಿರಲಿಲ್ಲ. ದುರ್ಜಯನು ಎಷ್ಟು ದುಷ್ಕರ್ಮಿಯೂ ದಯಾಶೂನ್ಯನೂ ಆಗಿದ್ದನೋ ಅಷ್ಟೇ ಅವನ ಸ್ವಭಾವಕ್ಕೆ ವಿಪರೀತವಾಗಿ ಅವನ ಮಡದಿಯು ದಯಾಭರಿತೆಯೂ ಸದ್ಗುಣಗಳ ಕಣಿಯೂ ಆಗಿದ್ದಳು. ಪತಿಪತ್ನಿಯರ ಈ ವಿರುದ್ಧ ಸ್ವಭಾವಗಳನ್ನು ನೋಡಿದೊಡನೆಯೇ ವಿಧಿಯ ಲೀಲಾವಿನೋದವು ಎಷ್ಟು ಮಹತ್ತರವಾದುದೆಂಬುದು ವ್ಯಕ್ತವಾಗದಿರದು. ದುರ್ಜಯನ ಮಡದಿಯ ಹೆಸರು ನಿರುಪಮೆ. ಅವಳು ಗುಣಗಳಲ್ಲಿ ನಿರುಪಮೆಯೇ ಆಗಿದ್ದಳು; ಆದರೆ ನಿರುಪಮೆಗೆ ತನ್ನ ಪ್ರೇಮವನ್ನು ಕೊಟ್ಟು ಅವಳ ದಾಂಪತ್ಯಜೀವನವನ್ನು ಹರ್ಷಮಯವಾಗಿ ಮಾಡಲು ದುರ್ಜಯನಿಂದ ಸಾಧ್ಯವಾಗಲಿಲ್ಲ. ದುರ್ಜಯನ ದುರಾಚಾರಗಳಿಂದ ಅವಳ ಜೀವನವು ಕ್ಲೇಶಪರಿಪೂರ್ಣವಾಯಿತು. ಕಂಬನಿಗಳಿಂದ ತನ್ನ ಮೋರೆಯನ್ನು ಕ್ಷಾಲಿಸುತ್ತ ಆಕೆಯು ದಿನಗಳನ್ನು ಕಳೆಯಬೇಕಾಗಿ ಬಂದಿತು.

ಸುಭೇದಾರನ ವಸತಿಯಿಂದ ದುರ್ಜಯನು ತನ್ನ ನಿಲಯಕ್ಕೆ ಬಂದನು. ನಿರುಪಮೆಯು ತನ್ನ ಪತಿಯನ್ನು ಒಳಕ್ಕೆ ಬರಮಾಡಿಕೊಂಡಳು. ಪತಿಯು ಪರಮ ದುಷ್ಟನಾಗಿದ್ದರೂ ಅವಳು ಅವನನ್ನು ಪ್ರೀತಿಸುತ್ತಿದ್ದಳು. ಅವನ ಬುದ್ಧಿಯನ್ನು ಪರಿವರ್ತನೆ ಹೊಂದುವಂತೆ ಮಾಡೆಂದು ಜಗದೀಶ್ವರನನ್ನು ಆತ್ಮಾರ್ಥವಾಗಿ ಬೇಡುತ್ತಿದ್ದಳು.

ಪತಿಯು ಕಣ್ಣುಗಳನ್ನು ನೋಡಿದೊಡನೆಯೇ ಯಾವದೋ ಒಂದು

ಹೊಸ ಪಾಪವನ್ನು ಆಚರಿಸಲು ಅವನು ಹೊರಟಿರುವನೆಂದು ನಿರುಪಮೆ ತಿಳಿದುಕೊಂಡಳು. ಅವನ ಕಾಲುಗಳಲ್ಲಿ ಬಿದ್ದು ಅವಳು ಕಂಬನಿಗರೆದಳು.

"ಬೇಡುತ್ತೇನೆ, ನನ್ನ ಮಾತುಗಳನ್ನು ಕೇಳಿರಿ; ನನ್ನ ನುಡಿಗೆ ಮನ್ನಣೆಯನ್ನು ನೀಡಿರಿ. ಈ ಪಾಪದ ಬದುಕನ್ನು ಪರಿತ್ಯಜಿಸಿರಿ. ಜನರ ಶಾಪಗಳನ್ನು ಸಂಪಾದಿಸಬೇಡಿರಿ." ಎಂದು ಶೋಕಿಸಿದಳು ನಿರುಪಮಾ.

"ನಿರುಪಮಾ, ನಿನ್ನಿಂದ ನನಗೆ ಸೌಖ್ಯವಿಲ್ಲ. ನಾನು ಮನೆಗೆ ಬಂದರೆ ಯಾವಾಗಲೂ ಕಣ್ಣೀರು ಕಾಲುವೆ ಹರಿಸುತ್ತಿರುವೆ. ಪಾಪ-ಶಾಪ ಇವುಗಳೆಲ್ಲ ಬರೀ ಹುಚ್ಚು! ಆ ಕುನ್ನಿಗಳು ನನ್ನನ್ನು ದೂಷಿಸುತ್ತಿರುವವೆಂದು ನೀನೇಕೆ ಮರುಗುತ್ತಿರುವೆ? ಒಬ್ಬ ಸರದಾರನ ಮಡದಿಯಾಗಿ ಜೀವಿಸಲು ನೀನು ಆಗ್ರಹಿಸುವುದಿಲ್ಲವೆ?"

"ಅನ್ಯರಿಗೆ ಕೇಡು ಬಗೆದು ಸಿಗುವ ಸಂಪತ್ತು ಬೇಡ; ಬಡತನವೇ ಸಾಕೆನಗೆ. ಅದೇ ಭಾಗ್ಯ! ಅಧಿಕಾರದಾಶೆಯಲ್ಲಿ ದೇವರನ್ನು ಮರೆಯಬೇಡಿರಿ."

"ದೇವರು! ನಾನು ಉನ್ನತ ಪದವಿಗೆ ಹತ್ತುವವನ್ನು ನೋಡಿ ಅವನಿಗೇನು ಅಸೂಯೆಯೋ? ಈ ದೇವರನ್ನು ನಂಬಿದ್ದರಿಂದಲೇ ನಾವು ಹಾಳಾದೆವು."

"ಹಾಗೆನಬಾರದು; ಪಾಪ ಕಟ್ಟಿಕೊಳ್ಳಬೇಡಿ." ಅವನ ಚರಣಗಳಲ್ಲಿ ಹಣೆಯನ್ನಿಟ್ಟು ಮರುಗಿದಳು ನಿರುಪಮಾ. ಆ ಸಾಧ್ವಿಯ ಕಣ್ಣೀರು ದುಷ್ಟನ ಪಾದಗಳನ್ನು ಕ್ಷಾಲಿಸಿತು. ಆತನಿಗೆ ಹೃದಯವಿದ್ದಿದ್ದರೆ-ಆತ್ಮವಿದ್ದಿದ್ದರೆ-ತನ್ನ ಮಡದಿಯ ದೀನವಾಣಿಯನ್ನು ಕೇಳುತ್ತಿದ್ದ; ಆದರೆ ಪಾಪದ ಯಾಮಿನಿಯು ಅವನ ಆತ್ಮವನ್ನು ಆವರಿಸಿದ್ದಿತು. ಆದುದರಿಂದ ತನ್ನ ಗತಜೀವನವನ್ನು ನೆನೆದು ಮರುಗದೆ, ತನ್ನ ಚರಣದಲ್ಲಿ ಬಿದ್ದಿರುವ ಪತ್ನಿಯನ್ನು ಹಿಡಿದೆಬ್ಬಿಸಿ: "ಹುಚ್ಚೀ! ಜನರು, ದೇವರು ಇವುಗಳನ್ನು ಕಟ್ಟಿಕೊಂಡು ಪ್ರಯೋಜನವಿಲ್ಲ. ಪಠಾಣರೇ ನಮ್ಮ ಭಾಗದ ದೇವರು; ಅವರನ್ನು ಆರಾಧಿಸಿ ಸಂತೃಪ್ತಿಗೊಳಿಸಿದರೆ ನಮ್ಮ ಸಕಲ ಪುರುಷಾರ್ಥಗಳು ಕೈಗೂಡುವವು."

ದುರ್ಜನನ ಈ ಮಾತುಗಳು ಆ ಹೆಣ್ಣು ಹೃದಯವನ್ನು ನಡುಗುವಂತೆ ಮಾಡಿತು. ನಿರುಪಮೆಯ ನೇತ್ರಗಳಿಂದ ಉದುರಿದ ಅಶ್ರುಕಣಗಳನ್ನು ಭೂಮಿತಾಯಿಯು ಸ್ವೀಕರಿಸಿದಳು.

——

## ೭ ಮೊದಲನೆಯ ಕಾದಾಟ

ಹಾಲು ಚೆಲ್ಲಿದ ಹಾಗೆ ಬಿದ್ದಿತ್ತು ತಿಂಗಳು ಬೆಳಕು. ತರುಲತಾದಿಗಳ ಮೇಲೆ ಜ್ಯೋತ್ಸ್ನಾಪೀಯೂಷವನ್ನು ವರ್ಷಿಸಿ ಭೂರಮೆಯ ತಾಪವನ್ನು ಪರಿಹರಿಸಲು ಹಿಮಾಂಶುವು ಯತ್ನಿಸುತ್ತಿದ್ದನು. ಸುಧಾಕರನ ಪೂರ್ಣ ಹಾಸವನ್ನು ದರ್ಶಿಸಿ ತರುಲತಾದಿಗಳು ಹಿಗ್ಗುತ್ತಲಿದ್ದವು. ಮಾರುತನು ತಾನು ಕೇಳಿದ ಯಾವುದೋ ಒಂದು ಗೀತೆಯನ್ನು ಮೃದುಸ್ವರದಲ್ಲಿ ಹಾಡುತ್ತ ತನ್ನ ಹೆಜ್ಜೆಗಳನ್ನು ಮುಂದಿಡುತ್ತಿದ್ದನು. ವಿಶ್ವವು ಶಾಂತತೆಯ ವಾತಾವರಣದಲ್ಲಿ ತೇಲುತ್ತಿದ್ದಿತು.

ಆ ಹೊಳೆಯ ತೀರದಲ್ಲಿ ವಿದ್ರೋಹಿಗಳು ನೆರೆದಿದ್ದರು ನಿರ್ಜಲವಾದ ತಮ್ಮ ಎದೆಗಳನ್ನು ಗುರುದೇವನ ಪೀಯೂಷ ವಾಣಿಯಿಂದ ಜಲಪಡಿಸಿಕೊಳ್ಳುವದಕ್ಕಾಗಿ. ನಾಡದೇವಿಯ ವಿಮೋಚನೆಗೆಂದು ಕಂಕಣವನ್ನು ಧರಿಸಿದ ಆ ವೀರಾಳುಗಳು ಪ್ರಶಾಂತವಾಗಿದ್ದ ಆ ಹೊಳೆಯ ದಂಡೆಯಲ್ಲಿ ನೆರೆದಿದ್ದರು. ಪ್ರತಿಯೊಬ್ಬನ ವದನಮಂಡಲದಲ್ಲಿಯೂ ಸ್ವಾಧೀನಜೀವನದ ಕಳೆಯು ಶೋಭಿಸುತ್ತಲಿದ್ದಿತು. ವೀರಶ್ರೀಯು ಪ್ರತಿಯೊಬ್ಬನ ಮೋರೆಯ ಮೇಲೆಯೂ ನರ್ತಿಸುತ್ತಿದ್ದಳು. ಸ್ವಾಭಿಮಾನವು ಎಲ್ಲರಲ್ಲಿಯೂ ಸುಳಿದಾಡುತ್ತಿದ್ದಿತು. ನಾಡಿನ ಬಿಡುಗಡೆಗಾಗಿ ತಮ್ಮ ಪ್ರಾಣಗಳನ್ನು ಸಹ ಬಲಿಯಾಗಿ ಅರ್ಪಿಸಲು ಹೊರಟ ಧೀರಾತ್ಮರು ಆ ಯೋಗಿಯಿಂದ ನವಚೈತನ್ಯವನ್ನು ಹೀರುವದಕ್ಕಾಗಿ ಅಲ್ಲಿ ಸೇರಿದ್ದರು. ಅವರು ಇಪ್ಪತ್ತು ಮಂದಿ ಇರಬಹುದು.

ತಾರಾಮಂಡಲದಲ್ಲಿ ವಿರಾಜಿಸುತ್ತಿರುವ ಸುಧಾಂಶುವಿನಂತೆ ಈ ವೀರರ ಗಣದ ಮಧ್ಯದಲ್ಲಿ ಜ್ಞಾನಾನಂದನು ಬೆಳಗುತ್ತಿದ್ದನು. ಅವನ ವದನವು ಇತರರೆಲ್ಲರ ಮೋರೆಗಳಿಗಿಂತ ಹೆಚ್ಚು ಪ್ರಕಾಶಮಾನವಾಗಿದ್ದಿತು. ಯಾವುದೋ ಒಂದು ಅಸಾಮಾನ್ಯ ಚೈತನ್ಯವು ಅವನಲ್ಲಿ ಹರಿದಾಡುತ್ತಿದ್ದಿತು. ಆ ಯೋಗಿಯು ಹೊಳೆಯ ತೀರದಲ್ಲಿರುವ ಹುಲ್ಲುಗಾವಲಿನ ಮೇಲೆ ಆಸೀನನಾಗಿದ್ದನು. ಆತನ ಸುತ್ತಲೂ ನಾಡಸೇವೆಯ ಮಹಾವ್ರತವನ್ನು ಹಿಡಿದ ವೀರರು ಮಂಡಿಸಿದ್ದರು. ಅವರು ಮೌನದಿಂದ ತಮ್ಮ ಆಚಾರ್ಯನ ವದನಮಂಡಲದಿಂದ ಹೊರಬೀಳತಕ್ಕ ಉಪದೇಶವಾಣಿಯನ್ನು ನಿರೀಕ್ಷಿಸುತ್ತಿದ್ದರು. ಹೊಳೆಯ ಕಲಕಲಗಾನವಲ್ಲದೆ ಇನ್ನಾವುದೂ ಅಲ್ಲಿನ ಶಾಂತತೆಯನ್ನು ಭಂಜಿಸುತ್ತಿರಲಿಲ್ಲ ಎಲರಿನ ಸುಯ್ಯೆಂಬ ಸ್ವರವಲ್ಲದೆ ಇನ್ನಾವ ಸಪ್ಪಳವೂ ಅಲ್ಲಿರಲಿಲ್ಲ.

ತನ್ನ ನಚ್ಚಿನ ಶಿಷ್ಯರನ್ನು ನೋಡಿ ಪ್ರೇಮಪರಿಪೂರ್ಣ ಸ್ವರದಲ್ಲಿ ಜ್ಞಾನಾನಂದನು ಹೇಳತೊಡಗಿದನು. ಅವನ ಕಂಠಸ್ವರವು ಬಹು ಇಂಪಾಗಿದ್ದಿತು. ಅದು ಯಾವ ಶಿಲಾ ಹೃದಯವನ್ನು ಸಹ ಸ್ಪರ್ಶಿಸದಿರಲಾರದು. ಅವನು ನುಡಿಯುತೊಡಗಿದನು: "ಆತ್ಮಾಭಿಮಾನ ಪ್ರೇರಿತರಾಗಿ ನಾಡಿನ ಬಿಡುಗಡೆಗೆ ಕಂಕಣವನ್ನು ಧರಿಸಿದ ನಿಮಗೆ ಇನ್ನು ಹೆಚ್ಚಿನದು ಉಪದೇಶಿಸಬೇಕಾಗಿಲ್ಲ. ನಮ್ಮ ಉದ್ದೇಶವೇನು? ನಾವು ಕಾದಾಡಲು ಹೊರಟಿರುವುದೇಕೆ? ಈ ಸಂಗತಿಗಳನ್ನು ನೀವು ತಿಳಿದಿರುವಿರಿ. ಒಂದು ಉತ್ಕೃಷ್ಟ ಧ್ಯೇಯಸಾಧನೆಗಾಗಿ ಪ್ರಾಣಾರ್ಪಣೆಗೆ ಸಹ ನೀವು ಹಿಂಜರಿಯಲಾರಿರಿ ಎಂಬುದನ್ನು ನಾ ಬಲ್ಲೆ. ಈ ನಿಮ್ಮ ಉತ್ಸಾಹವು ಕೊನೆಯ ತನಕ ಇರಲಿ. ಈಗ ನಿಮ್ಮ ಎದೆಗಳಲ್ಲಿರುವ ಧೈರ್ಯವು ಕುಂದದಿರಲಿ! ಪರಾಧೀನತೆಯಲ್ಲಿ ಬಳಲುತ್ತಿರುವ ಈ ದೇಶವನ್ನು ಸ್ವತಂತ್ರವನ್ನಾಗಿ, ಸಶಕ್ತವನ್ನಾಗಿ ಮಾಡತಕ್ಕ ಕೆಲಸವು ನಿಮ್ಮ ಹೆಗಲುಗಳ ಮೇಲಿದೆಯೆಂಬುದು ನೆನಪಿನಲ್ಲಿರಲಿ! ನಾವು ಎಂಥ ಅವನತಿಯನ್ನು ಹೊಂದಿರುತ್ತೇವೆಂಬದನ್ನು ವಿವರಿಸಬೇಕಾಗಿಲ್ಲ. ದಾಸ್ಯಜೀವನದ ಅನುಭವಗಳು ನಮಗೆ ಬೇಕಷ್ಟಿವೆ. ನಮ್ಮ ಸಹೋದರಿಯರ ಮಾನವನ್ನು ರಕ್ಷಿಸುವ ಶಕ್ತಿಯು ಸಹ ನಮಗಿಲ್ಲ. ಕುರಿಗಳ ಬದುಕಿಗಿಂತಲೂ ಹೀನವಾಗಿವೆ ನಮ್ಮ ಬಾಳು! ಬುದ್ಧಿಯಿದ್ದರೂ ವಿಚಾರಿಸುವ ಶಕ್ತಿಯಿಲ್ಲದವರಾಗಿರುತ್ತೇವೆ. ಶರೀರಗಳಲ್ಲಿ ಬಲವಿದ್ದರೂ ಕಾದಾಡಲು ಧೈರ್ಯವಿಲ್ಲ. ಹೃದಯಗಳಿದ್ದರೂ ಕಲ್ಲುಗಳಿಗೆ ಸಮಾನರಾಗಿರುತ್ತೇವೆ ಈ ರೀತಿಯ ಬಲಹೀನತೆಯಿಂದಲೇ ನಾವು ಅನ್ಯರಿಗೆ ದಾಸರಾಗಿದ್ದೇವೆ! ಅನ್ಯರ ಸುಖಸಂತೃಪ್ತಿಗಳಿಗಾಗಿ ತೊಗಲಚೀಲಗಳಲ್ಲಿ ನಮ್ಮ ಬಾಳನ್ನು-ಕುನ್ನಿ ಬಾಳನ್ನು-ಸಾಗಿಸುತ್ತಿರುವೆವು. ಈ ಹೀನಸ್ಥಿತಿಗೆ ಕಾರಣರೆಂದು ನಾವು ಅನ್ಯರನ್ನು ದೂಷಿಸುವದರಿಂದ ಪ್ರಯೋಜನವಿಲ್ಲ. ಅದರಿಂದ ವೃಥಾ ಕಂಠಶೋಷಣೆಯಲ್ಲದೆ ಬೇರೆ ಪ್ರಯೋಜನ ಸಿಗದು. ನಾವು ಆತ್ಮಾಭಿಮಾನವುಳ್ಳವರಾಗಿದ್ದರೆ, ನಾವು ಪೌರುಷವುಳ್ಳವರಾಗಿದ್ದರೆ, ನಾವು ಮನುಷ್ಯತ್ವವುಳ್ಳವರಾಗಿದ್ದರೆ ನಾವು ಎಂದಿಗೂ ಅನ್ಯರ ದಾಸರಾಗುತ್ತಿರಲಿಲ್ಲ; ಪರಾಧೀನತೆಯನ್ನನುಭವಿಸುತ್ತಿರಲಿಲ್ಲ. ನಮ್ಮ ಹೆಂಗಸರು ಅನ್ಯರ ವಿಷಯಸಂತೃಪ್ತಿಗಿರುವ ಯಂತ್ರಗಳಾಗಿ ಪರಿಣಮಿಸುತ್ತಿರಲಿಲ್ಲ. ನಾವು ನಮ್ಮ ಶಕ್ತಿಯನ್ನು, ನಮ್ಮ ತೇಜಸ್ಸನ್ನು, ನಮ್ಮ ಓಜಸ್ಸನ್ನು ಕಳೆದುಕೊಂಡು ಮೃಗಪ್ರಾಯರಾಗಿ ಪರಿಣಮಿಸಿರುತ್ತೇವೆ; ಈ ಶೋಚನೀಯ ದುರವಸ್ಥೆಗೆ ಇಳಿ

ರುತ್ತೇವೆ. ಆ ಬಗ್ಗೆ ನಾವು ಖೇದಿಸುವದರಿಂದ ಪ್ರಯೋಜನವಿಲ್ಲ. ಕಳೆದುದು ಕಳೆದು ಹೋಯಿತು. ಈಗಲಾದರೂ ನಾವು ಜಾಗ್ರತರಾಗಬೇಕಾಗಿದೆ. ಕಳೆದು ಹೋದ ತೇಜಸ್ಸನ್ನು ಓಜಸ್ಸನ್ನು ಮರಳಿ ಪಡೆಯಬೇಕಾಗಿವೆ. ನಮ್ಮನ್ನು ಬಂಧಿಸಿದ ದಾಸ್ಯ ಶೃಂಖಲೆಗಳನ್ನು ಹರಿದು ದೂರ ಒಗೆಯಬೇಕಾಗಿದೆ; ನಾಡದೇವಿಯನ್ನು ಸ್ವತಂತ್ರಳನ್ನಾಗಿ ಮಾಡಬೇಕಾಗಿದೆ; ನಾವಿಂದು ಮನುಷ್ಯರಾಗಬೇಕಾಗಿದೆ."

"ಈ ಮಹತ್ತರವಾದ ಕರ್ತವ್ಯವು ನಿಮ್ಮ ಹೆಗಲ ಮೇಲೆ ಬಿದ್ದಿದೆ." ಜ್ಞಾನಾನಂದನು ಪ್ರಕಾಶಮಾನವಾದ ತನ್ನ ದೃಷ್ಟಿಯನ್ನು ಶಿಷ್ಯಗಣದ ಕಡೆಗೆ ಹೊರಳಿಸಿ ತನ್ನ ಉಪದೇಶವನ್ನು ಮುಂದುವರಿಸಿದನು:—"ನೀವು ನಿಮ್ಮ ಕರ್ತವ್ಯಗಳನ್ನು ಮರೆಯಬೇಡಿರಿ; ಅಂಜಿಕೆಯಿಂದ ಕರ್ತವ್ಯಚ್ಯುತಿಯುಂಟಾಗದಿರಲಿ. ಈಗ ನಮ್ಮನ್ನಾಳುತ್ತಿರುವ ಪಠಾಣರ ಶಾಸನವನ್ನು ಚೂರ್ಣೀಕರಿಸುವದರಿಂದ ಮಾತ್ರವಾಗಲಿಲ್ಲ ನಮ್ಮ ಕೆಲಸ. ನಾಡಿನ ಬಿಡುಗಡೆಗಾಗಿ ನೀವು ಮಾಡಿರುವ ಈ ವಿದ್ರೋಹದಲ್ಲಿ ಎಲ್ಲವನ್ನೂ ತ್ಯಾಗ ಮಾಡಲು ಸಿದ್ಧರಾಗಿರಬೇಕು. ನಮ್ಮ ಆದರ್ಶವು ಸುಲಭಸಾಧ್ಯವಲ್ಲ. ಅಪಾರವಾದ ಕಷ್ಟನಷ್ಟಗಳನ್ನು ಅನುಭವಿಸಬೇಕಾಗಿ ಬರಬಹುದು. ದೇಹವನ್ನು ಶೂಲದ ಮೇಲೆ ಪರಿತ್ಯಜಿಸಬೇಕಾಗುವ ಸಂದರ್ಭವು ಬಂದೊದಗಬಹುದು; ಆದರೆ ಅಂಜಕೂಡದು; ಬೆದರಕೂಡದು. ಎಂಥ ಘನಘೋರ ವಿಪತ್ತನ್ನಾದರೂ ಎದುರಿಸತಕ್ಕ ಎದೆಗಾರಿಕೆಯು ನಿಮ್ಮಲ್ಲಿರಬೇಕು. ನೀವೀಗ ಕಾದಾಡಹೊರಟಿರುವದು ಒಂದು ವ್ಯಕ್ತಿಗೆ ಬೇಕಾಗಿಯಲ್ಲ; ಒಂದು ಸಮುದಾಯಕ್ಕೆ ಬೇಕಾಗಿಯಲ್ಲ; ಒಂದು ನಾಡನ್ನು ಪಾರತಂತ್ರ್ಯದಿಂದ ರಕ್ಷಿಸುವದಕ್ಕಾಗಿ, ಒಂದು ಸ್ವತಂತ್ರ ರಾಜ್ಯವನ್ನು ಸೃಷ್ಟಿಸುವದಕ್ಕಾಗಿ ಎಂಬುದನ್ನು ನೆನಪಿನಲ್ಲಿಡಬೇಕು. ನಾವು ಕೆಲವು ಮಂದಿ ಈ ಯಜ್ಞದಲ್ಲಿ ಪ್ರಾಣಗಳನ್ನು ಆಹುತಿಗಳಾಗಿ ಅರ್ಪಿಸುವದರಿಂದ ಒಂದು ನಾಡು, ಒಂದು ಧರ್ಮ ಇವುಗಳು ನೆಲೆನಿಲ್ಲುತ್ತವೆ. ಕೆಲವು ಮಂದಿಗಳ ಶರೀರತ್ಯಾಗದಿಂದ ಮುಂದಿನವರ ಬದುಕು ಭಾಸುರವಾಗಿ ಪರಿಣಮಿಸುತ್ತದೆ. ಇಂದಿನ ಜನತೆಯ ಆಗು-ಹೋಗುಗಳು ನಿಮ್ಮ ಕರಗಳಲ್ಲಿವೆ."

"ಗುರುದೇವ, ತಮ್ಮ ಉಪದೇಶವಾಣಿಯು ನಮ್ಮ ಹೃದಯಗಳಲ್ಲಿ ನವಚೈತನ್ಯವನ್ನು ತುಂಬುತ್ತಲಿದೆ. ನಮ್ಮ ದೇಹಗಳಲ್ಲಿ ಉಸಿರಿರುವನಕ ನಮ್ಮ ಉದ್ದೇಶದಿಂದ ವ್ಯತಿಚಲಿಸಲಾರವು." ಹೀಗೆ ಹೇಳಿದವನು ಕುಮಾರ ಅಮರ

ಸಿಂಹನಾಗಿದ್ದನು.

"ನಿಜ; ತಮ್ಮ ಉಪದೇಶದಂತೆ ವರ್ತಿಸುವೆವು. ಪರರಿಗೆ ಶಿರಗಳನ್ನು ಬಾಗಿಸ ಲಾರೆವು. ಸ್ವಾತಂತ್ರ್ಯಯಜ್ಞದಲ್ಲಿ ಈ ದೇಹಗಳನ್ನು ಪೂರ್ಣಾಹುತಿಯನ್ನಾಗಿ ಸಮರ್ಪಿಸುವೆವು." ಉಳಿದ ಶಿಷ್ಯರು ನುಡಿದರು.

"ನಿಮ್ಮೆಲ್ಲರ ಧ್ಯೇಯನಿಷ್ಠೆಯನ್ನೂ ಸ್ವಾತಂತ್ರ್ಯ ಪ್ರೇಮವನ್ನೂ ನಾ ಬಲ್ಲೆ. ನಿಮ್ಮ ಈ ದೃಢ ಸಂಕಲ್ಪವನ್ನು ಕಂಡು ನನಗೆ ಸಂತೋಷವಾಗುತ್ತದೆ" ಶಿಷ್ಯರ ನುಡಿಗಳನ್ನು ಆಲಿಸಿದ ಜ್ಞಾನಾನಂದನು ಒಂದು ಮೃದುಹಾಸವನ್ನು ಚೆಲ್ಲುತ್ತಾ ನುಡಿದನು: "ಆದರೆ ನೀವು ಒಂದು ಸಂಗತಿಯನ್ನು ನೆನಪಿನಲ್ಲಿಡಬೇ ಕಾಗಿದೆ. ನಾವು ಒಂದು ತತ್ವಸಾಧನೆಗಾಗಿ ಕಾದಾಡುತ್ತಿರುವೆವೇ ಹೊರತು ವೈಯಕ್ತಿಕ ವಿದ್ವೇಷದಿಂದಲ್ಲ. ಪಠಾಣರ ಅಕ್ರಮದ ಆಳ್ವಿಕೆಯಿಂದ ನಮ್ಮ ಸ್ವಾತಂತ್ರ್ಯವು ನಶಿಸುತ್ತಿರುವದರಿಂದ ಪಠಾಣರ ಪ್ರಭುತ್ವವನ್ನು ಎದುರಿಸು ತ್ತಿರುವೆವು. ಪಠಾಣರ ಆಡಳಿತದೊಡನೆ ಕಾದಾಡ ಹೊರಟಿರುವೆವೇ ಹೊರತು, ಪಠಾಣರೊಡನೆಯಲ್ಲ ಕಾದಾಡ ಹೊರಟಿರುವುದೆಂಬುವದನ್ನು ನೀವು ನೆನಪಿನಲ್ಲಿಡ ಬೇಕಾಗಿದೆ. ಪಠಾಣ ಜನತೆಯೊಡನೆ ನಾವು ವಿದ್ವೇಷವನ್ನು ಪ್ರದರ್ಶಿಸುವದಾ ದರೆ ಅದು ನಾವು ಮನುಷ್ಯತ್ವದೊಡನೆ ತೋರಿಸುತ್ತಿರುವ ಒಂದು ದೊಡ್ಡ ಅನೀತಿಯಾಗುವದು. ಪಠಾಣರ ಪ್ರಭುತ್ವವನ್ನು ನಾಮಾವಶೇಷಗೊಳಿಸುವದು ನಮ್ಮ ಉದ್ದೇಶವಾಗಿದೆಯೇ ಹೊರತು ಪಠಾಣರನ್ನು ಹಿಂಸಿಸುವದಲ್ಲ. ಸಾಧಾ ರಣ ಪಠಾಣರು ನಮ್ಮಂತೆಯೇ ಮನುಷ್ಯಸ್ವಭಾವಗಳುಳ್ಳವರಾಗಿರುತ್ತಾರೆ. ಅವರಿಂದ ನಮಗೆ ಯಾವ ತೊಂದರೆಗಳೂ ಇಲ್ಲ. ಅವರನ್ನು ಸ್ವಂತ ಬಾಂಧವ ರೆಂಬ ದೃಷ್ಟಿಯಲ್ಲಿ ನಾವು ನೋಡಬೇಕು. ಅವರನ್ನು ಹಿಂಸಿಸುವ ಕೆಲಸದಲ್ಲಿ ಉದ್ಯುಕ್ತರಾಗಕೂಡದು. ಅವರ ಮಹಿಳೆಯರನ್ನು ಗೌರವಿಸಬೇಕು. ನಿಮ್ಮವ ರಲ್ಲಿ ಯಾವನಾದರೂ ಒಬ್ಬನು ಪಠಾಣರನ್ನು ಹಿಂಸಿಸುವದು ಧರ್ಮಾಭಿ ಮಾನವೆಂದು ವಿಚಾರಿಸುತ್ತಿದ್ದರೆ ಅವನು ಈ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲುಗಾರನಾಗುವದೊಳ್ಳೆಯದಲ್ಲ. ನಾವು ಒಂದು ಜಾತಿಯ ಸಲುವಾಗಿಯೋ ಒಂದು ಸಮುದಾಯದ ಸಲುವಾಗಿಯೋ ಕಾದಾಡುತ್ತಲಿಲ್ಲ. ಮನುಷ್ಯತ್ವವನ್ನು ಕಾಪಾಡುವದಕ್ಕಾಗಿ, ಸ್ವಾಧೀನ ಜೀವನವನ್ನು ಪಡೆಯುವದಕ್ಕಾಗಿ ನಾವು ಕಾದಲು ಹೊರಟಿದ್ದೇವೆ. ಪಠಾಣರ ದುಷ್ಪ್ರಭುತ್ವವು ನಮ್ಮ ಸ್ವಾಧೀನ ಜೀವನವನ್ನು ಕೊಲ್ಲುತ್ತಿರುವದರಿಂದ ಅದನ್ನು ನಾವು ಎದುರಿಸಬೇಕಾಗಿದೆ.

ಪಠಾಣರು ಮಾನುಷಜೀವಿಗಳೇ ಇರುವುದರಿಂದ, ಮಾನುಷಧರ್ಮಕ್ಕಾಗಿ ಕಾದಾಡ ಹೋರಟ ನಾವು ಕಟ್ಟುವ ರಾಜ್ಯದಲ್ಲಿ ಹಿಂದುಗಳಿಗೆ ಮಾತ್ರವಲ್ಲ; ಪಠಾಣರಿಗೂ ಇತರ ಮತಾವಲಂಬಿಗಳಿಗೂ ಪರಿಸಮಾನ ಸ್ಥಾನಗಳನ್ನು ನೀಡುವುದು ನಮ್ಮ ಕರ್ತವ್ಯವಾಗಿದೆ. ಈ ರೀತಿಯ ಒಂದು ವಿಶಾಲ ಮನೋಭಾವನೆಯಿಂದ ನೀವು ಕೆಲಸಕ್ಕೆ ಹೊರಡಬೇಕಾಗಿದೆ. ಅದಲ್ಲದೆ ಕೇವಲ ಸ್ವಧರ್ಮೀಯರ ಅಭ್ಯುನ್ನತಿಯ ಕಡೆಗೆ ದೃಷ್ಟಿ ಇಟ್ಟರೆ ಸಾಲದು."

ಹೀಗೆ ಜ್ಞಾನಾನಂದನು ತನ್ನ ಶಿಷ್ಯರಿಗೆ ಉಪದೇಶಿಸುತ್ತಿದ್ದಾಗ ಹೊಳೆಯ ಆ ತೀರದಲ್ಲಿದ್ದ ಕಾಡಿನಿಂದ ಏನೋ ಒಂದು ಸಪ್ಪಳವು ಕೇಳಬಂದಿತು. ಆ ಸಪ್ಪನ್ನು ಕೇಳಲು ಜ್ಞಾನಾನಂದನು ತನ್ನ ಉಪದೇಶಗಳನ್ನು ನಿಲ್ಲಿಸಿದನು. ಶಿಷ್ಯರು ಒಬ್ಬರ ಮೋರೆಯನ್ನು ಇನ್ನೊಬ್ಬರು ನೋಡಿದರು. ಕ್ಷಣಕಾಲ ಅಲ್ಲಿ ಮೌನವು ಆವರಿಸಿತು. ಅನಂತರ ಕುಮಾರ ಅಮರಸಿಂಹನು ಪಕ್ಕದಲ್ಲಿ ಕುಳಿತಿದ್ದ ತರುಣನನ್ನು ಹೀಗೆ ಪ್ರಶ್ನಿಸಿದ. "ಅದೇನು ಸಪ್ಪಳವಾದುದು?"

"ಕುಮಾರ, ಏನೆಂಬುದು ತಿಳಿಯದು. ಒಂದು ವೇಳೆ ಹೊಳೆಯಲ್ಲಿ ನೀರು ಕುಡಿಯಲಿಕ್ಕೆ ಬಂದ ಒಂದು ಕಾಡು ಹಂದಿಯಿರಲಿಕ್ಕೆ ಸಾಕು."

"ಕಾಡು ಹಂದಿಯಲ್ಲ; ಎರಡು ಕಾಲುಗಳ ಮೃಗವೊಂದು ಮಾಡಿದ ಸಪ್ಪಳದ ಹಾಗೆ ತೋರುತ್ತದೆ ನನಗೆ" ಎಂದನು ಕುಮಾರ. ಆ ಶಬ್ದ ಬಂದ ಕಡೆಗೆ ಗುರುದೇವನು ತನ್ನ ದೃಷ್ಟಿಯನ್ನು ಚೆಲ್ಲಿದನು. ಅವನಿಗೆ ಅಲ್ಲಿ ಯಾವುದೋ ಒಂದು ಅವ್ಯಕ್ತ ವಸ್ತು ಗೋಚರಿಸಿದ ಹಾಗೆ ಕಂಡಿತು. ಆಗ ಅವನು ಕುಮಾರನನ್ನು ಸನಿಯಕ್ಕೆ ಕರೆದು ಹೇಳಿದನು: "ನೋಡು, ಕುಮಾರ, ಅಲ್ಲಿ ಏನೋ ಕಾಣಿಸುತ್ತದೆ. ಅದೇನಿರಬಹುದು?"

ಗುರುದೇವನು ಬೆರಳು ತೋರಿಸಿದ ಕಡೆಗೆ ಅಮರಸಿಂಹನು ತನ್ನ ದೃಷ್ಟಿಯನ್ನು ಚಲಿಸಿದನು. ಅಲ್ಲಿ ಯಾವುದೋ ಒಂದು ಜೀವಿ ಚಲಿಸುತ್ತಿದ್ದಂತೆ ಅವನಿಗೆ ಗೋಚರಿಸಿತು; ಆದರೆ ಬೆಳದಿಂಗಳಿನಲ್ಲಿ ಅದು ಪ್ರಾಣಿಯೋ ಅಥವಾ ಮನುಷ್ಯನೋ ಎಂಬುದು ವ್ಯಕ್ತವಾಗಿ ತೋರಿಬರಲಿಲ್ಲ. ತರುಣರೆಲ್ಲರೂ ಆ ಕಡೆಗೇ ತಮ್ಮ ಕಣ್ಣುಗಳನ್ನು ಓಡಿಸಿದರು. ಕುಮಾರನು ಕಂಡ ಆ ಸ್ವರೂಪವು ಅವರ ಕಣ್ಣುಗಳಿಗೆ ಬೀಳದೆ ಇರಲಿಲ್ಲ. ಅದೇನೆಂದು ತಿಳಿಯಬೇಕೆಂಬ ಅಭಿಲಾಷೆಯು ಎಲ್ಲರಲ್ಲಿಯೂ ಹುಟ್ಟಿತು. ಒಬ್ಬನು ಹೇಳಿದನು: "ಅದೇನೆಂದು ಹೋಗಿ ನೋಡಿ ಬರುವೆ."

"ಒಳ್ಳೆಯದು. ಜೋಕೆ! ಒಂದು ವೇಳೆ ಶತ್ರುಗಳಿರಲಿಕ್ಕೆ ಸಾಕು. ಹಾಗಾದರೆ ನೀನು ಅವರ ಕಣ್ಣುಗಳಿಗೆ ಬೀಳುವದು ಒಳಿತಾಗಲಿಕ್ಕಿಲ್ಲ." ಎಂದನು ಜ್ಞಾನಾನಂದ.

"ಇಲ್ಲ. ಬಹು ಎಚ್ಚರಿಕೆಯಿಂದ ತಿಳಿದುಕೊಂಡು ಬರುತ್ತೇನೆ." ಎಂದು ನುಡಿದು ಆ ಶಿಷ್ಯನು ಆ ಸ್ವರೂಪದೆಡೆಗೆ ಚಲಿಸಿದನು.

ಅನಂತರ ಅವರು ಯಾರೂ ಮಾತಾಡಲಿಲ್ಲ. ಕಾರಣವೇನೆಂದರೆ ಒಂದು ವೇಳೆ ಅವರು ಶತ್ರುಗಳಾಗಿದ್ದರೆ ತಮ್ಮ ಸುಳಿವು ಅವರಿಗೆ ಸಿಗಬಾರದೆಂದಾಗಿತ್ತು. ಪಠಾಣರ ಗೂಢಚಾರರಾಗಿರಬಹುದು. ತಮಗೆ ಗೋಚರಿಸಿದುದೆಂಬ ಸಂದೇಹವು ಅವರೆಲ್ಲರಿಗೂ ಇದ್ದಿತು.

ಹತ್ತು ನಿಮಿಷಗಳು ಕಳೆಯಲು ಆ ಸ್ವರೂಪವೇನೆಂದು ತಿಳಿಯ ಹೋದ ಶಿಷ್ಯನು ಹಿಂದಿರುಗಿ ಬಂದನು. ಅವನೊಡನೆ ಜ್ಞಾನಾನಂದನು ಪಿಸುಮಾತಿನಲ್ಲಿ ಪ್ರಶ್ನಿಸಿದನು: —"ಏನದು?"

"ಪಠಾಣರು!" "ಪಠಾಣರೇ?"

"ಅಹುದು."

ಅವರು ಬೇರೆ ಮಾತಾಡಲಿಲ್ಲ. ವಿಸ್ಮಯದ ದೃಷ್ಟಿಯನ್ನು ಜ್ಞಾನಾನಂದನ ಹೊರತು ಇತರರೆಲ್ಲರೂ ಬೀರಿದರು. ಜ್ಞಾನಾನಂದನಿಗೆ ವಿಸ್ಮಯವುಂಟಾಗಲಿಲ್ಲ. ಅವನು ತನಗೆ ಸಹಜವಾದ ಶಾಂತಸ್ವರದಲ್ಲಿ ಹೇಳಿದನು: - "ಅವರಿಗೆ ನಮ್ಮ ಸುಳಿವು ದೊರೆತಿದೆ. ನಮ್ಮನ್ನು ಬಂಧಿಸುವದಕ್ಕಾಗಿ ಬಂದಿದ್ದಾರೆ. ಇರಲಿ. ಅವರು ಎಷ್ಟು ಮಂದಿಯಿರಬಹುದು?"

"ತಿಂಗಳು ಬೆಳಕಿನಲ್ಲಿ ಸರಿಯಾಗಿ ಕಾಣಿಸಲಿಲ್ಲ; ಹತ್ತಿಪ್ಪತ್ತು ಮಂದಿ ಇರಬೇಕೆಂದು ತೋರುತ್ತದೆ." ನೋಡ ಹೋಗಿದ್ದವನು ನುಡಿದನು.

"ಮಾಡುವುದೇನು?" ಈ ಉದ್ಗಾರವು ಎಲ್ಲರ ವದನಗಳಿಂದಲೂ ಹೊರಬಿದ್ದಿತು. ಎಲ್ಲರಲ್ಲಿಯೂ ಉದ್ವೇಗ, ಆಶ್ಚರ್ಯಗಳು ತುಂಬಿದ್ದುವು.

"ಮಾಡುವುದೇನು?" ತನ್ನ ಕಣ್ಣುಗಳಲ್ಲಿ ಅರಳಿಸಿದ ಜ್ಞಾನಾನಂದ: "ಎರಡು ದಾರಿಗಳಿವೆ. ಒಂದನೆಯದು, ಅವರನ್ನು ಎದುರಿಸುವದು; ಎರಡನೆಯದು, ಪಲಾಯನ ಮಂತ್ರವನ್ನು ಪಠಿಸುವುದು."

"ಪಲಾಯನ ಮಾಡುವದೇ? ಅದು ವೀರರ ಧರ್ಮವಲ್ಲ." ಎಂದನು ಕುಮಾರ.

"ಅದೇಕೆ ಹಾಗೆ ಹೇಳುತ್ತಿರುವೆ? ವೀರಧರ್ಮವೆಂದರೆ ವಿವೇಕವಿಲ್ಲದ ಕಾದಾಟವಲ್ಲ. ಸಂದರ್ಭ; ಆವಶ್ಯಕತೆ, ಪರಿಸ್ಥಿತಿ ಇವುಗಳನ್ನು ಆಲೋಚಿಸಿ ಕಾದಾಡುವುದಾಗಿದೆ ವೀರ ಧರ್ಮ. ನೂರು ಮಂದಿ ಶತ್ರುಗಳೊತನೆ ಹತ್ತು ಮಂದಿ ಕಾದಾಡುವವರಿಂದ ಯಾವ ಫಲವೂ ದೊರಕದು; ಹಾನಿಯಲ್ಲದೆ ಬೇರೊಂದು ಸಿಗದು. ಅಂಥ ಸಂದರ್ಭದಲ್ಲಿ ಕದನದಲ್ಲಿ ತನ್ನ ಶಕ್ತಿಯನ್ನು ವಿನಿಯೋಗಿಸದೆ ಹಿಂದೆಗೆಯುವದು ಯೋಗ್ಯವಾದುದಾಗಿದೆ. ಅದು ಹೇಡಿತನವಲ್ಲ. ನಾಲ್ಕು ಹೆಜ್ಜೆ ಮುಂದಕ್ಕೆ ಹೋಗಬೇಕಾದರೆ ಎರಡು ಹೆಜ್ಜೆ ಹಿಂದಕ್ಕೆ ಸರಿಯಬೇಕಾಗಿ ಬರುತ್ತದೆ. ಆದ್ದರಿಂದಲೇ ಧೀರನು ತನ್ನ ಧ್ಯೇಯ ಸಾಧನೆಗಾಗಿ ಹಲವು ಬಾರಿ ಕದನದಿಂದ ಹಿಮ್ಮೆಟ್ಟಬಹುದು."

"ಗುರುದೇವ, ಹಾಗಾದರೆ ನಾವು ಈಗ ಶತ್ರುಗಳ ಸಂಗಡ ಕಾದಕೂಡದೇ?" ಕುಮಾರನು ಸಂನ್ಯಾಸಿಯ ವಿಚಾರವನ್ನು ಕೆರಳಿಸಿದ.

ಸಂನ್ಯಾಸಿಯು ಆಲೋಚನಾಮಗ್ನನಾದ. ದೋಣಿಯು ಆ ತೀರದಲ್ಲಿ ಹತ್ತಿಂಟು ಮಂದಿ ನಿಂತಿರುವದು ಬೆಳದಿಂಗಳಿನಲ್ಲಿ ಶಿಷ್ಯರಿಗೆ ಗೋಚರಿಸಿತು. ತರುಣರು ಆ ಕಡೆಗೆ ತಮ್ಮ ದೃಷ್ಟಿಯನ್ನು ಹೊರಳಿಸಿ ನೋಡಿದರು. "ಶತ್ರುಗಳು ತೀರ ಸಮೀಪಕ್ಕೆ ಬಂದಿದ್ದಾರೆ." ಸಂನ್ಯಾಸಿಯು ತನ್ನ ಆಲೋಚನೆಯಿಂದ ಎಚ್ಚೆತ್ತು ನುಡಿದ: "ಸಾಧ್ಯವಾದರೆ ಕಾದಾಟಕ್ಕೆ ಎಡೆಯನ್ನು ಕೊಡದಿರುವದು ಒಳ್ಳೆಯದು. ಈ ಸಂದರ್ಭದಲ್ಲಿ ಹಾನಿಯಲ್ಲದೆ ಬೇರೊಂದು ಸಿಗದು."

"ಅವರ ಕಣ್ಣುಗಳಿಗೆ ಬೀಳದೆ ಪಾರಾಗುವದು ಹೇಗೆ?" ತರುಣರಲ್ಲಿ ಒಬ್ಬನು ಪ್ರಶ್ನಿಸಿದ.

"ಅದನ್ನು ಕುರಿತೇ ನಾನು ಆಲೋಚಿಸುತ್ತಿರುವೆ." ಇದಾಗಿತ್ತು ಸಂನ್ಯಾಸಿಯ ಉತ್ತರ.

"ಅಗೋ, ಅವರು ಈ ಕಡೆಗೇ ಬರುತ್ತಿರುವರು; ಅವರು ನಮ್ಮನ್ನು ನೋಡಿದರೆಂದು ತೋರುತ್ತದೆ." ಎಂದ ಬೇರೊಬ್ಬ.

"ಒಳ್ಳೆಯದು, ನಿಮ್ಮೆಲ್ಲರ ಸನಿಯದಲ್ಲಿ ಶಸ್ತ್ರಗಳಿಲ್ಲವೇ?"

"ಇವೆ!"

"ಹಾಗಾದರೆ ಬನ್ನಿ ಗುಡಿಸಲಿಗೆ ತೆರಳುವಾ!" ಎಂದ ಸಂನ್ಯಾಸಿ.

ಶತ್ರುಗಳ ಸಂಗಡ ಕಾದಾಡಬೇಕೆಂಬ ಆಗ್ರಹವು ಹಲವರಿಗಿದ್ದಿತು. ಪಠಾಣರಿಗೆ ತಮ್ಮ ಭುಜಬಲವನ್ನು ತೋರಿಸಬೇಕೆಂದು ಹಲವು ಮಂದಿ

ಹುರುಪಿನ ತರುಣರು ಹಂಬಲಿಸುತ್ತಿದ್ದರು! ಆದರೆ ಜ್ಞಾನಾನಂದನ ವಚನವು ಅವರಲ್ಲಿ ನಿರಾಶೆಯನ್ನುಂಟು ಮಾಡಿತು; ಆದರೂ ತಪಸ್ವಿಯ ನುಡಿಯನ್ನು ಮೀರಿ ನಡೆವ ಧೈರ್ಯವು ಅವರಾರಿಗೂ ಇರಲಿಲ್ಲ. ಆದುದರಿಂದ ಎಲ್ಲರೂ ಅವನನ್ನು ಹಿಂಬಾಲಿಸಿದರು.

ಜ್ಞಾನಾನಂದನು ಗುಡಿಸಿಲಿನೊಳಗೆ ಪ್ರವೇಶಿಸಲಿಲ್ಲ. ಅವನು ಮೆಲ್ಲನೆ ಎಡಭಾಗಕ್ಕೆ ತಿರುಗಿದನು. ಅಲ್ಲೊಂದು ಕಲ್ಲು ಬಂಡೆ ನಿಂತಿದ್ದಿತು. ಆ ಬಂಡೆಯ ಕೆಳಗಿನ ಭಾಗವು ಒಂದು ಗುಹೆಯಂತಿದ್ದು, ಅದರಲ್ಲಿ ಹತ್ತೆಂಟು ಮಂದಿಗೆ ಅವಿತುಕೊಳ್ಳಲು ಸ್ಥಳವಿದ್ದಿತು. ಅವರು ಹೊರಗಿನವರ ದೃಷ್ಟಿಗೆ ಬೀಳರು. ಆ ಗುಹೆಯು ಒಳಗೆ ವಿಶಾಲವಾಗಿದ್ದರೂ ಅದರ ಮುಖವು ಬಹು ಇಕ್ಕಟ್ಟಾಗಿದ್ದು, ಎರಡು ಅಡಿಗಳಿಗಿಂತ ಹೆಚ್ಚು ಅಗಲವಿರಲಿಲ್ಲ. ಅದರೊಳಗೆ ಒಬ್ಬೊಬ್ಬನಾಗಿಯೇ ಪ್ರವೇಶಿಸಬೇಕಾಗಿದ್ದಿತಲ್ಲದೆ, ಒಟ್ಟಿಗೆ ಹೆಚ್ಚು ಮಂದಿ ಒಳನುಗ್ಗಲು ಸಾಧ್ಯವಿರಲಿಲ್ಲ.

ಜ್ಞಾನಾನಂದನು ತನ್ನ ಸಂಗಡಿಗರನ್ನು ಕರೆದುಕೊಂಡು ಈ ಗುಹೆಯೊಳಗೆ ಪ್ರವೇಶಿಸಿದ. ಅವನ ಸೂಚನೆಯಂತೆ ಅವರೆಲ್ಲರೂ ಗುಹೆಯೊಳಗೆ ಕುಳಿತುಕೊಂಡರು. ಯಾರೂ ಮಾತಾಡಕೂಡದೆಂದು ಅಪ್ಪಣೆ ಮಾಡಿದ ಸಂನ್ಯಾಸಿ. ಅವನ ಆಜ್ಞೆಯಂತೆ ಯಾರೂ ಮಾತಾಡಲಿಲ್ಲ. ಅಲ್ಲಿ ಮೌನತೆಯು ಹರಡಿತು.

ಯಾರೂ ಮಾತಾಡಲಿಲ್ಲ. ಎಲ್ಲರೂ ಅಲ್ಲಿ ಹರಡಿದ್ದ ಕತ್ತಲೆಯಲ್ಲಿ ಆಲೋಚಿಸುತ್ತ ಕುಳಿತಿದ್ದರು. ಹೊರಗೆ ಜನರು ಮಾತಾಡುತ್ತಿರುವ ಸಪ್ಪಳವು ಕೇಳಿಸಿತು. ಆ ನಾದವನ್ನು ಕೇಳುತ್ತಲೆ ಕುಮಾರನು ಹೇಳಿದ: "ಅವರು ನಮ್ಮನ್ನು ಹುಡುಕುತ್ತಿರುವಂತೆ ತೋರುತ್ತದೆ."

"ಅಹುದು." ಎಂದ ಜ್ಞಾನಾನಂದ.

ಹತ್ತು ನಿಮಿಷಗಳು ಕಳೆದವು. ಹೊರಗಿನವರ ಮಾತುಗಳು ವ್ಯಕ್ತವಾಗಿ ಕೇಳಬರತೊಡಗಿದವು. "ಅವರೆತ್ತ ಹೋದರು?" ಎಂದು ಹೊರಗೆ ಒಬ್ಬನು ನುಡಿಯುತ್ತಿರುವದು ಒಳಗಿನವರಿಗೆ ಕೇಳಿಬಂದಿತು.

"ನಮ್ಮ ಸುಳಿವು ಆ ಮಂಡಲಿಗೆ ದೊರಕಿದ ಹಾಗಿದೆ." ಇನ್ನೊಂದು ಧ್ವನಿ.

"ಇರಬಹುದು; ಅವರು ಇಲ್ಲೆಲ್ಲಿಯಾದರೂ ಅವಿತುಕೊಂಡಿರಬಹುದು."

"ಆದರೆ ಎಲ್ಲಿ? ಹೊಳೆಯ ದಂಡೆಯಲ್ಲಿ ಅವರು ಕುಳಿತಿರುವದನ್ನು ನಾನು

ನೋಡಿದ್ದೇನೆ. ಇಷ್ಟು ಬೇಗನೆ ಅವರೆಲ್ಲಿಗೆ ಹೋದರು? ಅವರೇನೂ ಗಾಳಿಯಲ್ಲಿ ಮಾಯವಾಗಿರಲಾರರು" ಪುನಃ ಎರಡನೆಯ ಧ್ವನಿ ಗುಹೆಯ ಒಳಗಿನವರಿಗೆ ಕೇಳಿಸಿತು.

ಮೊದಲನೆಯ ಸ್ವರವು ನುಡಿಯುತ್ತಿತ್ತು: "ನಿಜ. ಇಲ್ಲೆಲ್ಲಿಯೋ ಅಡಗಿರಬೇಕು. ಇಷ್ಟು ಅಲ್ಪ ಸಮಯದಲ್ಲಿ ಅವರು ದೂರವೆಲ್ಲಿಗೂ ಹೋಗಲಾರರು. ಇಲ್ಲೆಲ್ಲಿಯೋ ಅವಿತಿರಬೇಕು ಅವರು."

ಸನಿಯಕ್ಕೆ ಅವರು ಬರುತ್ತಿರುವರೆಂಬುದನ್ನು ವಿದ್ರೋಹಿಗಳು ತಿಳಿದುಕೊಂಡರು. ಬಂಡೆಯ ಮೇಲೆ ಪಠಾಣರ ಕಾಲಸಪ್ಪಳವನ್ನು ಸಹ ವಿದ್ರೋಹಿಗಳು ಕೇಳತೊಡಗಿದರು. ಶತ್ರುಗಳು ಹತ್ತಿರಕ್ಕೆ ಬಂದರೆಂಬುದನ್ನು ತಿಳಿಯಲು ಸಂನ್ಯಾಸಿಯು ಹೇಳಿದ: "ಸಮಯವು ಬಂದೊದಗಿದೆ; ಚಾತುರ್ಯದಿಂದ ಅವರನ್ನು ಸೋಲಿಸಬೇಕು."

"ಹೇಗೆ?" ಇಪ್ಪತ್ತು ಮಂದಿಯೂ ಏಕಕಾಲದಲ್ಲಿ ಪ್ರಶ್ನಿಸಿದರು.

"ಹೇಳುತ್ತೇನೆ. ಕುಮಾರ! ನೀನು ಈಗೊಂದು ಕೆಲಸ ಮಾಡಬೇಕು."

"ಏನದು?" ಕುಮಾರನು ಪ್ರಶ್ನಿಸಿದ.

"ನೀನು ಗುಹೆಯ ಹೊರಗೆ ಹೋಗಿ ಶತ್ರುಗಳ ದೃಷ್ಟಿಗೆ ಬೀಳಬೇಕು; ಆದರೆ ಅವರ ಕೈಗೆ ಸಿಗಕೂಡದು. ನಿನ್ನನ್ನು ಕಂಡೊಡನೆಯೇ ಅವರು ನಿನ್ನನ್ನು ಹಿಡಿಯಲು ಪ್ರಯತ್ನಿಸುತ್ತಾರೆ. ಅವರ ಕೈಗೆ ಬೀಳದೆ ಇಲ್ಲಿಗೆ ಓಡಿ ಬಾ. ಅನಂತರ ಕೆಲಸವನ್ನು ಇಲ್ಲಿರುವವರು ಮಾಡುವರು."

ಅಪ್ಪಣೆಯಂತೆ ಕುಮಾರನು ಎದ್ದು ನಿಂತ.

"ಜಾಗ್ರತೆ. ಅವರೊಡನೆ ಕಾದಾಡಿಸಿಲ್ಲಬೇಡ. ಅವರ ದೃಷ್ಟಿಗೆ ಕಾಣಿಸಿಕೊಂಡು ಪುನಃ ಇಲ್ಲಿಗೆ ಹಿಂದಿರುಗಬೇಕು."

"ಆಗಲಿ." ಎಂದು ಹೇಳಿ, ಕುಮಾರನು ಹೊರಗೆ ತೆರಳಿದ.

ಅನಂತರ ಜ್ಞಾನಾನಂದನು ತನ್ನ ದೃಷ್ಟಿಯನ್ನು ಇತರರ ಕಡೆಗೆ ತಿರುಗಿಸಿದ: "ಶತ್ರುಗಳನ್ನು ಕಾಣುತ್ತಲೆ ನೀವು ಕ್ಷೋಭಿಸಕೂಡದು. ಹಾಗಾದರೆ ಪ್ರತಿಯೊಂದು ಕೆಲಸವೂ ಕೆಟ್ಟು ಹೋಗುವದು. ಸಾವಧಾನತೆಯಿಂದ ನೀವು ಕೆಲಸವನ್ನು ಜರುಗಿಸಬೇಕು."

ಈ ಸೂಚನೆಗೆ ಇತರ ವಿದ್ರೋಹಿಗಳು ಒಪ್ಪಿದರು.

"ನಾನು ಹೇಳುವದನ್ನು ಮನಸ್ಸಿಟ್ಟು ಕೇಳಿ. ನೀವು ಶಬ್ದಮಾಡಕೂಡ

ದು. ನಾವು ಮಾತಾಡಿದರೆ ನಮ್ಮ ಕಂಠಸ್ವರಗಳಿಂದ ನಾವು ಎಷ್ಟು ಮುಂದೆ ಇರುವೆವೆಂದು ಊಹಿಸಲು ಶತ್ರುಗಳಿಗೆ ಸಾಧ್ಯವಾಗುತ್ತದೆ. ಕುಮಾರನನ್ನು ಅವರು ಹಿಂಬಾಲಿಸುವರೆಂಬುದರಲ್ಲಿ ಸಂಶಯವಿಲ್ಲ. ಗುಹೆಯ ಮುಖವು ಅಗಲ ಕಿರಿದಾದ್ದರಿಂದ ಒಬ್ಬನೇ ಈ ಗುಹೆಯೊಳಗೆ ಪ್ರವೇಶಿಸುವದನ್ನು ಅವರು ನೋಡುವರು. ಗುಹೆಯಲ್ಲಿ ನಾವು ಅಡಗಿದ್ದೇವೆಂಬುದು ಅವರಿಗೆ ತಿಳಿಯುವದು. ನಮ್ಮ ಸುಳಿವು ಸಿಕ್ಕಿತೆಂಬ ಉಬ್ಬಿನಿಂದ ಅವರು ಹೆಚ್ಚಿಗೆ ಚಿಂತಿಸಲಾರರು. ಒಬ್ಬೊಬ್ಬರಾಗಿ ಗುಹೆಯೊಳಗೆ ಪ್ರವೇಶಿಸಲು ಪ್ರಾರಂಭಿಸುವರು. ಆಗ ನೀವು ಎರಡು ಸಾಲಾಗಿ ನಿಂತು ಶತ್ರುಪಕ್ಷದವರು ಒಬ್ಬೊಬ್ಬರಾಗಿ ಪ್ರವೇಶಿಸಿದಂತೆಯೇ ಅವರ ಮಸ್ತಕಗಳನ್ನು ಕಡಿದು ಚೆಲ್ಲಬೇಕು."

ಕೆಲವು ನಿಮಿಷಗಳಲ್ಲಿಯೇ ವಿದ್ರೋಹಿಗಳು ಸಂನ್ಯಾಸಿಯ ನುಡಿಗಳನ್ನು ಅನುಸರಿಸಿದರು. ಅವನ ಉಪದೇಶಗಳು ಅವನು ಒಬ್ಬ ತತ್ವಚಿಂತಕನೂ ತಪಸ್ವಿಯೂ ಮಾತ್ರವಾಗಿರದೆ, ರಣಶಾಸ್ತ್ರದಲ್ಲಿ ನೈಪುಣ್ಯವನ್ನು ಸಂಪಾದಿಸಿದ ಒಬ್ಬ ಯುದ್ಧತಂತ್ರಜ್ಞನೆಂಬುವನ್ನೂ ಸೂಚಿಸುತ್ತಲಿದ್ದುವು. ಶಿಷ್ಯರ ಮುಖಗಳಲ್ಲಿ ಉದ್ವೇಗ ಮತ್ತು ಕುತೂಹಲಗಳು ತುಂಬಿದ್ದರೂ ಜ್ಞಾನಾನಂದನ ವದನ ಮಂಡಲದಲ್ಲಿ ಯಾವ ಭಾವವ್ಯತ್ಯಾಸವೂ ಉಂಟಾಗಲಿಲ್ಲ. ಮೊದಲಿನ ಪ್ರಶಾಂತ ವೃತ್ತಿಯೇ ಈಗಲೂ ಅವನಲ್ಲಿ ತುಂಬಿದ್ದಿತು. ಅವನ ಚಿತ್ತಸ್ವಾಧೀನತೆಯೂ ಅವನ ಮನೋಬಲವೂ ಎಷ್ಟು ಅಗಾಧವಾದುವೆಂಬನ್ನು ಸೂಚಿಸುತ್ತಿದ್ದವು.

ಸಂನ್ಯಾಸಿಯ ನಿರ್ದೇಶದಂತೆ ಗುಹೆಯ ಬಾಗಿಲಲ್ಲಿ ವಿದ್ರೋಹಿಗಳು ಎರಡು ಸಾಲಾಗಿ ನಿಂತರು. ಎಲ್ಲರ ಕೈಗಳಲ್ಲಿಯೂ ಖಡ್ಗಗಳಿದ್ದುವು. ಮುಂದೆ ಜರಗುವದೇನೆಂದು ಪ್ರತಿಯೊಬ್ಬರೂ ನಿರೀಕ್ಷಿಸುತ್ತಿದ್ದರು.

ಕಾಲುಗಳ ಸಪ್ಪಳವು ಕೇಳಿ ಬಂದಿತು; ಯಾರೋ ಗುಹೆಯ ಕಡೆಗೆ ಓಡಿ ಬರುತ್ತಿದ್ದಂತೆ ಅವರಿಗೆ ಭಾಸವಾಯಿತು ಕುಮಾರನು ಗುಹೆಯೊಳಗೆ ಪ್ರವೇಶಿಸಿದನು. ಬಹು ವೇಗದಿಂದ ಧಾವಿಸಿದುದರಿಂದ ಅವನ ಶ್ವಾಸೋಚ್ಛ್ವಾಸಗಳು ಬಹು ತೀವ್ರವಾಗಿದ್ದುವು. ಅವನ ಲಲಾಟದ ಮೇಲೆ ಕೆಲವು ಸ್ವೇದ ಬಿಂದುಗಳು ಕಂಗೊಳಿಸುತ್ತಿದ್ದವು. ಜ್ಞಾನಾನಂದನು ಕುಮಾರನನ್ನು ಪ್ರಶ್ನಿಸಿದ: "ಏನಾಯಿತು? ಅವರು ಬರುತ್ತಿರುವರೇ?"

ತನ್ನ ಹಣೆಯ ಮೇಲೆ ನಿಂತ ಬೆವರನ್ನೊರೆಸುತ್ತ ಕುಮಾರನು ಜವಾಬು

ಹೇಳಿದ: "ಅಹುದು, ಅವರು ಬರುತ್ತಿದ್ದಾರೆ; ನನ್ನನ್ನು ನೋಡಿದರು. ನೋಡಿದೊಡನೆಯೇ ಅವರು ನನ್ನನ್ನು ಹಿಂಬಾಲಿಸಿದರು."

ಕುಮಾರನು ನುಡಿಗಳನ್ನು ಪೂರೈಸುವ ಮುನ್ನ ಹತ್ತೆಂಟು ಮಂದಿ ಗುಹೆಯ ಕಡೆಗೆ ಓಡಿಬರುತ್ತಿರುವ ಕಾಲ ಸದ್ದುಗಳು ಕೇಳಿಬಂದುವು. ವಿದ್ರೋಹಿಗಳು ತಮ್ಮ ಕರವಾಳಗಳನ್ನು ಸರಿಪಡಿಸಿಕೊಂಡರು. ಇನ್ನೊಂದು ನಿಮಿಷದಲ್ಲಿಯೇ ಒಬ್ಬ ಪಠಾಣನು ಒಳಗೆ ಪ್ರವೇಶಿಸಿದ. ಒಳಗೆ ಎಷ್ಟು ಮಂದಿ ಇರುವರೆಂಬದು ಅವನಿಗೆ ತಿಳಿಯಲಾಗಲಿಲ್ಲ. ಹಾಗೆಯೇ ಒಂದು ಕ್ಷಣ ನಿಂತ. ಇನ್ನೊಂದು ಕ್ಷಣದಲ್ಲಿ ತನ್ನ ಎಡಭಾಗದಿಂದ ವಾಯುವನ್ನು ಭೇದಿಸುತ್ತ ತನ್ನ ಕಡೆಗೆ ಏನೋ ಒಂದು ಚಲಿಸುತ್ತಿರುವದನ್ನು ನೋಡಿದ ಆ ಪಠಾಣ ದಂಡಾಳು. ಅದೇನು?--ಹರಿತವಾದ ಒಂದು ಕರವಾಳ! ಅವನ ತಲೆಯನ್ನು ಮುಂಡದಿಂದ ಬೇರ್ಪಡಿಸುವದಕ್ಕಾಗಿ ಬಹು ವೇಗದಲ್ಲಿ ಆ ಮನುಷ್ಯನ ಕಡೆಗೆ ಬರುತ್ತಿದ್ದಿತು! ಹಾಗೆ ಅದೇನೆಂದು ತಿಳಿದುಕೊಳ್ಳುವ ಮುನ್ನ-ಅದನ್ನು ತಡೆಯುವದು ಹೇಗೆಂದು ಆಲೋಚಿಸುವ ಮುನ್ನ-ಮಿಂಚಿನಂತೆ ಹೊಳೆದ ಆ ಕತ್ತಿಯು ಅವನ ರುಂಡವನ್ನು ಶರೀರದಿಂದ ಬೇರ್ಪಡಿಸಿತು; ದೇಹವು ನೆಲದಲ್ಲಿ ಪತಿಸಿತು; ನೆತ್ತರು ಹರಿದಿತು! ಈ ಭಯಂಕರ ವ್ಯಾಪಾರವು ಜರುಗಿದುದು ನಿಮಿಷಾರ್ಧವಲ್ಲಾಗಿದ್ದಿತು! ದೇಹವು ನೆಲಕ್ಕೆ ಬೀಳುವಾಗ ಉಂಟಾದ ಒಂದು ಕಿರು ಸದ್ದಲ್ಲದೆ ಬೇರೆ ಯಾವ ಸಪ್ಪಳವೂ ಇಲ್ಲ.

ಮೊದಲನೆಯವನ ಕತೆಯು ಮೇಲೆ ಹೇಳಿದಂತೆ ಸಮಾಪ್ತಿಯಾಗಲು, ಎರಡನೆಯವನು ಒಳಗೆ ಪ್ರವೇಶಿಸಿದ. ಅವನ ಗತಿಯೂ ಒಂದನೆಯವನಂತೆಯೇ ಆಯಿತು. ಹೀಗೆ ನಾಲ್ಕು ಮಂದಿ ಪಠಾಣ ದಂಡಾಳುಗಳು ತಮ್ಮ ಶಿರಸ್ಸುಗಳನ್ನು ವಿದ್ರೋಹಿಗಳ ಖಡ್ಗಗಳಿಗೆ ಬಲಿಯರ್ಪಿಸಿದರು. ಅವರು ಶತ್ರುಗಳನ್ನು ಎದುರಿಸಲು ಅನುವು ಸಹ ದೊರಕದೆ ಮೃತರಾದರು!

ಹೊರಗೆ ಒಬ್ಬ ದಂಡಾಳು ಆಡುತ್ತಿರುವ ಮಾತುಗಳು ಗುಹೆಯೊಳಕ್ಕೆ ಹರಿದು ಬಂದವು.

"ಅಬ್ದುಲ್ಲ, ಶತ್ರುಗಳು ಎಷ್ಟು ಮಂದಿ ಇರುವರು?" ಅಬ್ದುಲ್ಲನು ಯಮಲೋಕದ ಹಾದಿಯನ್ನು ಹಿಡಿದುದರಿಂದ ಹೊರಗಿನವನ ಪ್ರಶ್ನೆಗೆ ಉತ್ತರ ಸಿಗಲಿಲ್ಲ. ಪುನಃ ಆ ಪಠಾಣ ದಂಡಾಳು ಪ್ರಶ್ನಿಸಿದನು:—"ಒಳಗೆ ಎಷ್ಟು ಮಂದಿ ಇರುವರು?" ಆದರೆ ಜವಾಬು ದೊರಕಲಿಲ್ಲ.

ಗುಹೆಯೊಳಗೆ ನಾಲ್ಕಾರು ಮಂದಿ ಸೈನಿಕರು ತೆರಳಿದ್ದರೂ ಯಾವ ಪ್ರತ್ಯುತ್ತರವೂ ಲಭಿಸದಿರುವದು ಹೊರಗಿನವರ ಎದೆಗಳಲ್ಲಿ ಅಂಜಿಕೆಯನ್ನು ಹುಟ್ಟಿಸಿತು. ಒಳಗೆ ಹೋದವರನ್ನು ವಿದ್ರೋಹಿಗಳು ಕೊಂದು ಹಾಕಿದರೋ ಎಂಬ ಸಂಶಯವು ಅವರನ್ನು ಬಾಧಿಸದೆ ಇರಲಿಲ್ಲ. ಇದಲ್ಲದೆ ಒಳಗೆ ಹೋದವರ ಮಾತುಗಳಾಗಲಿ ವೈರಿಗಳೊಡನೆ ಕಾದಾಟದ ಧ್ವನಿಗಳಾಗಲೀ ಹೊರಗಿನವರಿಗೆ ಕೇಳ ಬರಲಿಲ್ಲ. ಹೀಗೆ ಅಂಜಿಕೆಯಿಂದ ಆವೃತರಾದ ಪಠಾಣರು ಮುಂದೇನು ಮಾಡಬೇಕೆಂದು ತಿಳಿಯದೆ ತುಸ ಹೊತ್ತು ವಿಮೂಢರಾದರು.

ಊಹಿಸಿದಂತೆ ಪಠಾಣರು ಒಬ್ಬರ ಬೆನ್ನ ಹಿಂದೆ ಇನ್ನೊಬ್ಬರು ಪ್ರವೇಶಿಸದಿರುವದು ಒಳಗಿದ್ದ ವಿದ್ರೋಹಿಗಳನ್ನು ಆಲೋಚನಾಮಗ್ನರಾಗುವಂತೆ ಮಾಡಿತು. ಒಂದೇಸವನೆ ಪಠಾಣರು ಮುಂದೆ ನುಗ್ಗುತ್ತಿದ್ದರೆ ಅವರನ್ನು ನಿರ್ಭಯದಿಂದ ಕಡಿದು ಚಲ್ಲಬಹುದಿತ್ತು; ಆದರೆ ಅವರು ಹೊರಗೆ ನಿಂತಿದ್ದರು. ಒಳಗೆ ಬರುವಂತಿಲ್ಲ. ವಿದ್ರೋಹಿಗಳು ಹೀಗೆ ವಿಚಾರಮಗ್ನರಾಗಿರುವಾಗ ಒಬ್ಬ ಪಠಾಣನು ತಮ್ಮೆಡೆಗೆ ಬರುತ್ತಿರುವದನ್ನು ನೋಡಿದರು. ಎರಡು ಸಾಲಿನವರೂ ಕತ್ತಿಗಳನ್ನು ಎತ್ತಿ ಹಿಡಿದರು; ಆದರೆ ಅವರ ಖಡ್ಗಪ್ರಯೋಗವು ಈ ಸಲ ಯಶಸ್ವಿಯಾಗಲಿಲ್ಲ. ಅವರು ಊಹಿಸಿದುದಕ್ಕಿಂತ ಜಾಗ್ರತೆಯಿಂದ ಪಠಾಣನು ಒಳನುಗ್ಗಿದ್ದನು. ಖಡ್ಗ ಪ್ರಹಾರವು ಅವನ ಮಸ್ತಕದ ಮೇಲೆ ಬೀಳದೆ ತೊಡೆಯ ಮೇಲಾಯಿತು. ಈ ಭಯಂಕರ ಅಪಘಾತದಿಂದ ಅವನು ನಿಶ್ಚಲನಾಗಿ ನೆಲದಲ್ಲಿ ಪತಿಸಿದನು. ಅವನು ಹೊರಗಿನವರಿಗೆ ಕೇಳುವಂತೆ ಕೂಗಿ ಹೇಳಿದನು: "ಒಳಗೆ ಬಂದರೆ ಜೀವ ನಾಶವಾಗುವದು; ಒಳಗೆ ನುಗ್ಗುವ ಮುನ್ನ ಶತ್ರುಗಳು ಕಡಿದು ಚಲ್ಲುವರು. ಆದುದರಿಂದ...." ತನ್ನ ನುಡಿಗಳನ್ನು ಪೂರೈಸುವದರೊಳಗಾಗಿ ಒಂದು ಕರವಾಳವು ಗಾಳಿಯನ್ನು ಭೇದಿಸುತ್ತಾ ಬಂದು ಆ ಪಠಾಣನ ಮಸ್ತಕವನ್ನು ಛೇದಿಸಿತು.

ಹೊರಗೆ ನೆರೆದಿದ್ದ ಪಠಾಣರು ಒಳಗೆ ಹೋದ ತಮ್ಮ ಸಂಗಡಿಗನ ಕೂಗನ್ನು ಸ್ಪಷ್ಟವಾಗಿ ಕೇಳಿದರು. ಅವನಾಡಿದ ಮಾತುಗಳ ತಾತ್ಪರ್ಯವನ್ನು ಅವರು ಗ್ರಹಿಸಿದರು. ಒಳಗೆ ಪ್ರವೇಶಿಸುವದರಿಂದ ಹಾನಿಯಲ್ಲದೆ ಬೇರೊಂದು ಸಿಗದೆಂದು ಅವರು ತಿಳಿದುಕೊಂಡರು. ವಿದ್ರೋಹಿಗಳನ್ನು ಮರ್ದಿಸಬೇಕೆಂಬ ಉತ್ಸುಕತೆಯು ಅವರೆಲ್ಲರಿಗೂ ಇದ್ದರೂ ಪ್ರಾಣಗಳನ್ನು ಕಳೆದುಕೊಳ್ಳುವ ಧೈರ್ಯವು ಅವರಿಗಿರಲಿಲ್ಲ. ತುಸ ವಿಸ್ಮಯದಿಂದ ಅವರು ಪರಸ್ಪರ ಮುಖ

ಗಳನ್ನು ನೋಡಿದರು. ಅವರ ಸಂಖ್ಯೆ ಮೂವತ್ತು ಇರಬಹುದು. ಕೈಗಳಲ್ಲಿ ಆಯುಧಗಳನ್ನು ಹಿಡಿದುಕೊಂಡು ನಿಂತರು. ಮುಂದೇನು ಮಾಡಬೇಕೆಂಬುದು ಅವರಿಗೆ ತಿಳಿಯಲಿಲ್ಲ.

ದೌಲತಖಾನನೆಂದಾಗಿತ್ತು ಆ ದಂಡಿನ ಮುಂದಾಳಿನ ಹೆಸರು. ಅವನು ಚಿಂತೆಯಿಂದ ತನ್ನ ಸಂಗಡಿಗನ ಮೋರೆಯನ್ನು ನೋಡುತ್ತಾ ಹೇಳಿದನು. "ದುರ್ಜಯಸಿಂಹಜೀ, ಈಗೇನು ಮಾಡುವದು? ಒಳನುಗ್ಗೋಣವೆಂದರೆ ಅವರ ಕತ್ತಿಗಳಿಗೆ ತಲೆಗಳನ್ನೊಪ್ಪಿಸಬೇಕಾಗಿ ಬರುವದು."

"ಒಳಗೆ ಹೋಗುವ ಆವಶ್ಯಕತೆಯಿಲ್ಲ." ಎಂದ ದುರ್ಜಯಸಿಂಹ. "ನಾವು ಹೊರಗೆ ಕಾದು ನಿಂತರೆ ಸಾಕು."

"ಆದರೆ ಎಷ್ಟು ಸಮಯದ ವರೆಗೆ ಹೀಗೆ ನಿಲ್ಲಬಹುದು? ಅನ್ನ-ಆಹಾರಗಳಿಲ್ಲದೆ ಬಳಲಬೇಕಾಗುವದು. ಬೇರೇನು ಗುಣವಿದೆ?"

"ಒಳಗಿರುವವರು ಹೊರಗೆ ಬರದೆ ನಿರ್ವಾಹವಿಲ್ಲವಷ್ಟೆ? ಅವರಿಗೂ ಅನ್ನ, ನೀರು ಬೇಡವೇ? ನಿಶ್ಚಯವಾಗಿಯೂ ಅವರು ಹೊರಗೆ ಬಂದೇ ಬರುವರು. ನಮಗೆ ಆವಶ್ಯಕವೆನಿಸಿದ ಅನ್ನ-ಆಹಾರಗಳನ್ನು ತೆಗೆದುಕೊಂಡು ಬರುವದಕ್ಕಾಗಿ ನಾಲ್ಕಾರು ಮಂದಿ ದಂಡಾಳುಗಳನ್ನು ನಗರಕ್ಕೆ ಕಳುಹಿಸಿದರೆ ಸಾಕು. ನಾವು ಇಲ್ಲಿ ಗುಹೆಯ ಬಾಗಿಲನ್ನು ಪಹರೆ ಮಾಡುವಾ."

ದೌಲತ್‌ಖಾನನಿಗೆ ದುರ್ಜಯನ ಸಲಹೆಯು ಸಮಂಜಸವಾಗಿ ತೋರಿತು. ನಾಲ್ಕಾರು ಮಂದಿ ದಂಡಾಳುಗಳನ್ನು ಅವನು ರೂಪನಗರಕ್ಕೆ ಕಳುಹಿದನು. ರೂಪನಗರವು ಎರಡು ಹರದಾರಿಗಳಿಗಿಂತ ಹೆಚ್ಚು ದೂರವಿಲ್ಲದುದರಿಂದ ಬೆಳಗಾಗುವ ಮುನ್ನ ಈ ದಂಡಾಳುಗಳಿಗೆ ಅನ್ನಾಹಾರಗಳನ್ನು ತೆಗೆದುಕೊಂಡು ಬರಲು ಶಕ್ಯವಿದ್ದಿತು. ದೌಲತಖಾನನು ಆದಷ್ಟು ಬೇಗನೆ ಹಿಂದಿರುಗಬೇಕೆಂದು ಎಚ್ಚರಿಕೆಯನ್ನು ರೂಪನಗರಕ್ಕೆ ಹೊರಟವರಿಗೆ ನೀಡಿದನು. ಉಳಿದವರು ಕಾಡಿನಲ್ಲಿ ಕಟ್ಟಿಗೆಯನ್ನು ಸಂಗ್ರಹಿಸಿ ಗುಹೆಯ ಮುಂದೆ ಬೆಂಕಿಯನ್ನಿರಿಸಿದರು. ಅವರು ಬೆಂಕಿಯ ಸುತ್ತಲೂ ನೆರೆದು ಗುಹೆಯೊಳಗಿರುವ ವಿದ್ರೋಹಿಗಳು ಯಾವಾಗ ಹೊರಗೆ ಬರುತ್ತಾರೆಂಬದನ್ನು ಇದಿರು ನೋಡತೊಡಗಿದರು.

ಜ್ಞಾನಾನಂದನು ಪಠಾಣರು ಹೀಗೆ ಮಾಡುವರೆಂದು ವಿಚಾರಿಸಿರಲಿಲ್ಲ. ತನ್ನ ಆಲೋಚನೆಯು ಅಷ್ಟು ದೂರ ತಲುಪದುದಕ್ಕೆ ಅವನು ಪರಿತಪಿಸಿದನು. ತಮ್ಮ ಪರಿಸ್ಥಿತಿಯು ಬೋನಿನಲ್ಲಿ ಬಿದ್ದ ಇಲಿಯಂತಾಯಿತೆಂದು ಅವನು ಗ್ರಹಿ

ಸಿದ. ಗುಹೆಯೊಳಗೆ ಆಹಾರ-ಸಾಮಗ್ರಿಗಳಾಗಲೀ, ನೀರಡಿಕೆಯನ್ನು ತಣಿಸಲು ಜಲವಾಗಲೀ ಇಲ್ಲದುದರಿಂದ ತಾವು ಬಹು ತೊಂದರೆಗಳಿಗೆ ಈಡಾಗಬೇಕಾಗು ವುದೆಂಬುದು ಅವನಿಗೆ ತಿಳಿದಿತು. ಹೊರಗಿನವರಿಗೆ ಆಹಾರ ಸಾಮಗ್ರಿಗಳನ್ನು ಒದಗಿಸಿಕೊಳ್ಳುವ ಸೌಕರ್ಯಗಳಿದ್ದುವು; ಆದರೆ ಗುಹೆಯೊಳಗೆ ಯಾವ ಸೌ- ಕರ್ಯಗಳೂ ಇಲ್ಲದೆ ಉಪವಾಸದಿಂದ ಸಾಯಬೇಕಾಗುವದೆಂಬ ಭೀತಿಯು ಅವನ ಎದೆಯಲ್ಲುದಿಸದಿರಲಿಲ್ಲ.

ಆದರೆ ಒಂದು ಕ್ಷಣದ ವರೆಗೆ ಮಾತ್ರ ಈ ಭೀತಿಯು ಆತನನ್ನು ಆವರಿ ಸಿದ್ದುದು. ಅವನ ಆತ್ಮವು ಕತ್ತಲೆಯಿಂದ ತುಂಬಿದ ಅವನ ಎದೆಯಲ್ಲಿ ನವ ಪ್ರಭೆಯನ್ನು ಪರಡಿತು. ಧೈರ್ಯವು ತಪಸ್ವಿಯನ್ನು ಮೇಲಕ್ಕೆತ್ತಿತು. ಆ ಪ್ರಶಾಂತಭಾವವೇ ಪುನಃ ಅವನ ವದನದಲ್ಲಿ ಬೆಳಗಿತು.

ಜ್ಞಾನಾನಂದ! ಆ ನರಜೀವಿಯ ಬಾಳು ರಹಸ್ಯಮಯ. ನಿರಾಶೆಯಿಲ್ಲ; ಭೀತಿಯಿಲ್ಲ; ಅಂಜಿಕೆಯಿಲ್ಲ; ಬಲಹೀನತೆಯ ಯಾವ ಸುಳಿವೂ ಅವನಲ್ಲಿ ಗೋಚರಿಸದು. ಎಲ್ಲರನ್ನೂ ಕಂಪಾಯಮಾನರನ್ನಾಗಿ ಮಾಡತಕ್ಕ ಮೃತ್ಯುವು ಸಹಾ ಆ ಸಂನ್ಯಾಸಿಯ ಧೈರ್ಯವನ್ನು ಚಂಚಲಗೊಳಿಸಲಾರದು; ಆತನಲ್ಲಿ ಯಾವ ಭೇದವನ್ನುಂಟು ಮಾಡಲಾರದು. ಇತರ ವಿದ್ರೋಹಿಗಳು ನಿರಾಶ ರಾದಾಗ, ಅವರಲ್ಲಿರತಕ್ಕ ಚೈತನ್ಯವು ಕುಗ್ಗಿದಾಗ, ಜ್ಞಾನಾನಂದನ ಎದೆಯಲ್ಲಿ ಹೊಸ ಆಶೆಯು ಅಂಕುರಿಸುತ್ತಿದ್ದಿತು. ನವ ಚೈತನ್ಯವು ಅವನಲ್ಲಿ ಗೋಚರಿಸುತ್ತಿ ದ್ದಿತು! ಅವನ ಬುದ್ಧಿಯು ಒಂದು ನವಪಥವನ್ನು ಶೋಧಿಸುವದರಲ್ಲಿ ಉದ್ಯುಕ್ತ ವಾಗುತ್ತಿದ್ದಿತು! ಈ ಚಿರೋತ್ಸಾಹವೇ, ಈ ಅಚಲ ಧೈರ್ಯವೇ ಜ್ಞಾನಾ ನಂದನೆಂದು ಹೇಳಿದರೆ ತಪ್ಪಾಗಲಾರದು. ಈ ನವಚೈತನ್ಯವೇ ಜ್ಞಾನಾನಂದನ ಮಾಹಾತ್ಮ್ಯೆಯು. ಈ ವೈಶಿಷ್ಟ್ಯದ ಮೂಲಕ ಸ್ವಾಧೀನತೆಯನ್ನು ಪಡೆಯಲು ಹೊರಟ ವಿದ್ರೋಹಿಗಳ ಮುಂದಾಳು ಜ್ಞಾನಾನಂದನಾದನು.

"ಸೋದರರೇ" ಸ್ನೇಹಪೂರ್ಣಸ್ವರದಲ್ಲಿ ಅಲ್ಲಿ ನೆರೆದ ಎಲ್ಲ ತರುಣರ ವದನಮಂಡಲಗಳ ಕಡೆಗೆ ದೃಷ್ಟಿಯನ್ನು ಬೀರಿ, ನುಡಿದನು ಜ್ಞಾನಾನಂದ: "ಜೀವಹಾನಿಯಿಲ್ಲದೆ ಈ ಪ್ರಯತ್ನದಲ್ಲಿ ವಿಜಯವನ್ನು ಪಡೆಯಬೇಕೆಂದಿದ್ದೆ; ಅದು ಸಾಧ್ಯವೆಂದು ತೋರುವದಿಲ್ಲ. ನಮ್ಮಲ್ಲಿ ಕೆಲವರು ಮಡಿಯಬೇಕಾಗು ವದು. ವಿಧಿಯ ಸಂಕಲ್ಪ ಹಾಗಿದ್ದರೆ ಅವನ್ನು ನಿವಾರಿಸುವುದು ಅಶಕ್ಯ. ಪಠಾಣ ರೊಡನೆ ಒಂದು ಕೈ ನೋಡಬೇಕೆಂಬ ಹಂಬಲವು ನಿಮಗೂ ಇದೆಯಷ್ಟೆ?"

"ಅಹುದು. ನಮ್ಮಲ್ಲಿ ಕಲಿತನವೆಷ್ಟರ ಮಟ್ಟಿಗೆ ಇದೆಯೆಂಬದನ್ನು ಅವರಿಗೆ ತೋರಿಸಿ ಕೊಡುವದು ಅಗತ್ಯ." ಈ ನುಡಿಗಳನ್ನಾಡಿದವನು ಕುಮಾರ ಅಮರ ಸಿಂಹನಾಗಿದ್ದನು

"ಹಾಗಾದರೆ ಆ ನೀಚರು ನಮ್ಮನ್ನು ಸೋಲಿಸಲೂ ಅಂಜುವರು." ಎಂದು ಹೇಳಿದ ಇನ್ನೊಬ್ಬ.

"ಇರಲಿ. ಈ ವಿಪತ್ತಿನಿಂದ ನಿವಾರಣೆಯನ್ನು ಹೊಂದಬೇಕಾದರೆ ಕಾದಾಡುವದೆ ಬೇರೆ ಗತ್ಯಂತರವಿಲ್ಲ. ನಮ್ಮ ತಂತ್ರವೇನೆಂಬುದನ್ನು ಶತ್ರುಗಳು ಊಹಿಸಿದ ಹಾಗಿದೆ. ಆದುದರಿಂದ ಅವರು ಒಳಗೆ ಪ್ರವೇಶಿಸದೆ ಹೊರಗೆ ಕೂಡಿದ್ದಾರೆ. ನಾವು ಇಲ್ಲಿ ಕುಳಿತರೆ ಅನ್ನ-ನೀರು ಇಲ್ಲದೆ ಸಾಯಬೇಕಾಗಿ ಬಂದೀತು. ಆದುದರಿಂದ ಅವರೊಡನೆ ಕಾದಾಡುವದು ಯುಕ್ತಿಯುಕ್ತವಾಗಿದೆ. ಅವರು ಹೆಚ್ಚು ಕಡಿಮೆ ಮೂವತ್ತು ನಾಲ್ವತ್ತು ಮಂದಿ ಇರುವಂತೆ ತೋರುತ್ತದೆ. ಬಹುಸಂಖ್ಯಾಕರಾದ ಅವರೊಡನೆ ಕಾದಿ ಜಯಶೀಲರಾಗುವದು ಪ್ರಯಾಸದ ಕೆಲಸ; ಆದರೆ ಈಗ ಕಾದಾಟವಲ್ಲದೆ ಬೇರೆ ಉಪಾಯವಿಲ್ಲ. ಆದುದರಿಂದ ನೀವೆಲ್ಲರೂ ನನ್ನ ಮಾತನ್ನು ಮುಂದೆ ಕೇಳಬೇಕು. ಗುಹೆಯ ಬಾಗಿಲಿಗೆ ಎಲ್ಲರೂ ತಲುಪಿದರೆ, ಎರಡು ಭಾಗಗಳಾಗಿ ವಿಂಗಡಿತರಾಗಿ, ಒಂದು ಬಣದವರು ಅವರ ಮೇಲೆ ಸಾಗಿಹೋಗಬೇಕು. ಇನ್ನೊಂದು ಬಣದವರು ಶತ್ರುಗಳ ಕಣ್ಣುಗಳಿಗೆ ಬೀಳದೆ ಬಂಡೆಯ ಪಶ್ಚಿಮ ಭಾಗಕ್ಕೆ ಹೋಗತಕ್ಕದ್ದು. ಅಲ್ಲಿ ಹೋಗಿ ಅವಿತುಕೊಂಡರೆ ಪಠಾಣರು ಕಾಣಲಾರರು. ಮೊದಲನೆಯ ಬಣದವರು ಪಠಾಣರ ಸಂಗಡ ಕಾದಾಡಲಿ. ಹತ್ತೆಂಟು ಮಂದಿಗಳನ್ನು ಕಾಣುವಾಗ ಅವರು ನಮ್ಮನ್ನು ಜಯಿಸುವದು ಸುಲಭವೆಂದು ವಿಚಾರಿಸುತ್ತಾರೆ, ನಮ್ಮೊಡನೆ ಕಾದಾಡಲು ಹೊರಡುತ್ತಾರೆ; ಆದರೆ ನಾವು ಅವರ ಸಂಗಡ ಕಾಳಗಕ್ಕೆ ನಿಲ್ಲದೆ ಮೆಲ್ಲನೆ ಗುಹೆ ಮುಖದ ಕಡೆಗೆ ಹಿಂಜರಿಯಬೇಕು. ಅವರು ಸ್ವಾಭಾವಿಕವಾಗಿಯೇ ನಮ್ಮನ್ನು ಹಿಂಬಾಲಿಸುತ್ತಾರೆ. ಆಗ ಎರಡನೆಯ ಗುಂಪು ಶತ್ರುಗಳ ಬೆನ್ನ ಹಿಂದೆ ಬಂದು ಅವರನ್ನು ಹಿಂಬದಿಯಿಂದ ಎದುರಿಸಬೇಕು. ಬಳಿಕ ಅವರು ಇಕ್ಕಟ್ಟಾದ ಗುಹೆಯ ದಾರಿಯಲ್ಲಿ ಸಿಕ್ಕಿ ಬೀಳುತ್ತಾರೆ."

ಹೀಗೆ ಜ್ಞಾನಾನಂದನು ತನ್ನ ಹಂಚಿಕೆಯನ್ನು ಪಿಸು ಮಾತಿನಲ್ಲಿ ಶಿಷ್ಯರಿಗೆ ಉಸುರಿದನು. ಅವನ ಹಂಚಿಕೆಯನ್ನು ನೆರವೇರಿಸಲು ಅವರೆಲ್ಲರೂ ಸನ್ನದ್ಧರಾದರು. ಅವರು ಹತ್ತು-ಹತ್ತು ಮಂದಿ ಇರುವ ಎರಡು ಗುಂಪುಗಳಾಗಿ

ಸಿಂಗಡಿಸಲ್ಪಟ್ಟರು. ಒಂದನೆಯ ಗುಂಪಿನವರು ಕರಗಳಲ್ಲಿ ಖಡ್ಗಗಳನ್ನು ರಭಸ ಪಿಸುತ್ತಾ ಶತ್ರುಗಳ ಮೇಲೆ ಸಾಗಿ ಹೋದರು. ಪಠಾಣರು ಉರಿಯುತ್ತಿದ್ದ ಬೆಂಕಿಯ ಮುಂದೆ ಕುಳಿತಿದ್ದರು. ತಮ್ಮನ್ನು ಎದುರಿಸಲು ವಿದ್ರೋಹಿಗಳು ಬರುತ್ತಿರುವದನ್ನು ನೋಡಿ ಆಯುಧಗಳನ್ನು ಸರಿಪಡಿಸಿಕೊಂಡರು ಪಠಾಣ ಮಂಡಾಳುಗಳು. ಅವರು ಕಾಳಗಕ್ಕೆ ಸಜ್ಜಾಗುವ ಮುನ್ನ ವಿದ್ರೋಹಿಗಳು ಮುಂದೆ ಸಾಗಿ ಶತ್ರುಗಳ ಮೇಲೆ ಬಿದ್ದರು. ಘೋರವಾದ ಒಂದು ಯುದ್ಧವು ಅಲ್ಲಿ ಜರು ಗಿತು. ಕತ್ತಿಗಳು ಪರಸ್ಪರ ಸಂಘರ್ಷಿಸಿ ಬೆಂಕಿಯ ಕಿಡಿಗಳನ್ನು ಕಾರಿದವು, ಒಬ್ಬರು ಇನ್ನೊಬ್ಬರ ಎದೆಯನ್ನು ಶೀಳಲೆತ್ನಿಸಿದರು.

ಈ ಸಂದರ್ಭದಲ್ಲಿ ವಿದ್ರೋಹಿಗಳ ಎರಡನೆಯ ಗುಂಪಿನವರು ಪಠಾಣರ ಕಣ್ಣುಗಳಿಗೆ ಬೀಳದೆ ಬಂಡೆಯ ಪಶ್ಚಿಮ ದಿಕ್ಕಿಗೆ ಸರಿದು ಅವಿತುಕೊಂಡರು ಬಂಡೆಯ ಮರೆಯಲ್ಲಿ. ಅವರು ಪಠಾಣರ ಮೇಲೆ ಸಾಗಿ ಹೋಗಲು ಸಂ- ದರ್ಭ ದೊರಕುವದು ಯಾವಾಗ ಎಂದು ಇದಿರು ನೋಡುತ್ತಿದ್ದರು. ಅವರು ಬಂಡೆಯ ಮರೆಯಲ್ಲಿ ಅವಿತಿರುವದು ಪಠಾಣರಿಗೆ ಗೋಚರವಾಗಲೇ ಇಲ್ಲ.

ವಿದ್ರೋಹಿಗಳು ಹತ್ತು ಹನ್ನೆರಡು ನಿಮಿಷಗಳ ತನಕ ಪಠಾಣರ ಸಂಗಡ ಕಾದಿದ ಮೇಲೆ ಮೊದಲಿನ ನಿಶ್ಚಯದಂತೆ ಮೆಲ್ಲನೆ ಹಿಂಜರಿಯತೊಡಗಿದರು ವಿದ್ರೋಹಿಗಳು ಹಿಮ್ಮೆಟ್ಟುವುದನ್ನು ನೋಡಿ ಪಠಾಣರ ಉತ್ಸಾಹವು ಹೆಚ್ಚಿತು. ಬಂಡುಗಾರರನ್ನು ಬೇಗನೆ ಸದೆಬಡಿಯಬೇಕೆಂದು ಅವರು ಆಲೋಚಿಸಿ ವಿದ್ರೋ ಹಿಗಳನ್ನು ಹಿಂಬಾಲಿಸಿದರು. ವಿದ್ರೋಹಿಗಳು ಒಂದೊಂದು ಹೆಜ್ಜೆ ಹಿಂದಕ್ಕೆ ಸರಿದಂತೆ ಪಠಾಣರು ಒಂದೊಂದು ಹೆಜ್ಜೆ ಮುಂದಕ್ಕೆ ಸರಿದರು. ವಿದ್ರೋಹಿ ಗಳು ಹಿಂಜರಿಯುತ್ತಿದ್ದುದೇಕೆಂಬುದನ್ನು ಪಠಾಣರು ತಿಳಿಯಲಿಲ್ಲ. ವಿದ್ರೋಹಿ ಗಳು ಹಿಂಜರಿದು ಗುಹೆಯ ಅಗಲ ಕಿರಿದಾದ ಬಾಗಿಲಿಗೆ ತಲುಪಿದರು.

ಅನಿರೀಕ್ಷಿತವಾಗಿ ಪಠಾಣರ ಹಿಂಬದಿಯಿಂದ ವಿದ್ರೋಹಿಗಳ ಎರಡನೆಯ ಗುಂಪೊಂದು ಮುತ್ತಿತು. ತಾವು ಸೋತವರಂತೆ ನಟಿಸಿ, ವಿದ್ರೋಹಿಗಳು ಹಿಮ್ಮೆ ಟ್ಟಿದುದೇಕೆಂಬುದು ಪಠಾಣರಿಗೆ ತಿಳಿದಿತು. ಮುಂಬದಿಯಿಂದಲೂ, ಹಿಂಬದಿ ಯಿಂದಲೂ ಶತ್ರುಗಳು ಆಕ್ರಮಿಸಿ ಹೋರಾಡುತ್ತಿರುವದನ್ನು ಅವಲೋಕಿಸಲು ಅಲ್ಲಿಂದ ಪಾರಾಗುವ ಬಗೆ ತಿಳಿಯಲಿಲ್ಲ. ಎರಡು ಪಾರ್ಶ್ವಗಳಲ್ಲಿಯೂ ಎತ್ತರದ ಕಲ್ಲು ಬಂಡೆಗಳು ನಿಂತಿದ್ದುದರಿಂದ, ಅಲ್ಲಿಂದ ಪಾರಾಗಲು ಅವರಿಗೆ ದಾರಿಯೇ ಇರಲಿಲ್ಲ. ಭೀಕರದ ಮೃತ್ಯುವು ತಮ್ಮ ಮುಂದೆ ನಿಂತಿರುವದನ್ನು ಅವರು

ನೋಡಿದರು.

ಕಾಳಗವು ಜರುಗಿತು. ಎರಡು ಪಕ್ಷದವರೂ ಧೀರತೆಯಿಂದ ಕಾದಿದರು. ಪಠಾಣರು ತಮ್ಮ ಪರಾಕ್ರಮವನ್ನೆಲ್ಲ ತೋರಿಸಿದರು. ವಿದ್ರೋಹಿಗಳೂ ಕಡಿಮೆಯವರಲ್ಲ. ಅವರೂ ಅಪೂರ್ವ ಧೈರ್ಯ-ಸಾಹಸಗಳನ್ನು ತೋರಿಸಿದರು. ಆಕಾಶದಲ್ಲಿ ತೇಲುತ್ತಿದ್ದ ಪೂರ್ಣಿಮಾ ಚಂದ್ರನು ಇಕ್ಕಟ್ಟಾದ ಆ ಕಂಡಿಯ ಕಡೆಗೆ ತನ್ನ ದೃಷ್ಟಿಯನ್ನು ಹೊರಳಿಸಿ ಈ ಭೀಕರ ಕದನವನ್ನು ನೋಡಿದ. ಮಾರುತನು ದುಃಖದಿಂದ ನಿಟ್ಟುಸಿರೊಂದು ಬಿಟ್ಟ. ನೆಲವು ನೆತ್ತರಿನಿಂದ ಕೆಂಪುವರ್ಣವನ್ನು ತಾಳಿತು.

ಅಂತ್ಯದಲ್ಲಿ ವಿದ್ರೋಹಿಗಳೇ ವಿಜಯಿಗಳಾದರು. ಇಕ್ಕಟ್ಟಾದ ಆ ಕಂಡಿಯಿಂದ ಸಾಗಲು ಬೇರೆ ದಾರಿಯಿಲ್ಲದುದರಿಂದ ಪಠಾಣರು ವಿದ್ರೋಹಿಗಳ ಶಸ್ತ್ರಪಾತಗಳಿಗೆ ಬಲಿಯಾಗಿ ಧರಾತಲದಲ್ಲಿ ಒರಗತೊಡಗಿದರು. ಮುಂದಕ್ಕೂ ಹಿಂದಕ್ಕೂ ಸರಿಯಲು ಅವರಿಗೆ ಅವಕಾಶವಿರಲಿಲ್ಲ. ಕಂಡಿಯಿಂದ ಹೊರಗೆ ದಾಟದಂತೆ ಹತ್ತೆಂಟು ಮಂದಿ ವಿದ್ರೋಹಿಗಳು ತಡೆದು ನಿಲ್ಲಿಸಿದ್ದರು. ಪಠಾಣರು ವಿದ್ರೋಹಿಗಳಿಗಿಂತ ಹೆಚ್ಚು ಮಂದಿ ಇದ್ದರೂ ಆ ಕಂಡಿಯೊಳಗೆ ಸಿಕ್ಕಿಬಿದ್ದುದರಿಂದ ವಿದ್ರೋಹಿಗಳ ಆಘಾತಗಳನ್ನು ನಿಭಾಯಿಸಿಕೊಳ್ಳಲಾಗಲಿಲ್ಲ. ಅವರ ಪ್ರಯತ್ನವು ಪರಾಜಯದಲ್ಲಿ ಪರಿಣಮಿಸಿತು.

ಪಠಾಣರ ಸಂಗಡ ವಿದ್ರೋಹಿಗಳು ನಡೆಸಿದ ಮೊದಲನೆಯ ಹೋರಾಟವು ವಿದ್ರೋಹಿಗಳ ವಿಜಯದಲ್ಲಿ ಪರಿಣಮಿಸಿತು. ಮೂರು ಮಂದಿ ವಿದ್ರೋಹಿಗಳು ಮಡಿದಿದ್ದರು. ಐದು ಮಂದಿಗೆ ಗಾಯಗಳಾಗಿದ್ದುವು. ಇದಕ್ಕಿಂತ ಹೆಚ್ಚಿನ ಹಾನಿ ಅವರಿಗೆ ಸಂಭವಿಸಲಿಲ್ಲ. ಪಠಾಣರಲ್ಲಿ ಒಬ್ಬನ ಹೊರತು ಇತರರೆಲ್ಲರೂ ನೆಲದ ಮೇಲೆ ಬಿದ್ದಿದ್ದರು. ಹಲವರು ಪ್ರಾಣಗಳನ್ನು ಕಳೆದಿದ್ದರು. ಇತರರು ಗಾಯಪಡೆದು ನೆಲದ ಮೇಲೆ ಹೊರಳಾಡುತ್ತಿದ್ದರು.

ಶತ್ರುಗಳ ಆಘಾತಕ್ಕೆ ಒಳಗಾಗದೆ ಸುರಕ್ಷಿತನಾದ ಪಠಾಣರ ದಂಡಿನವನು ದುರ್ಜಯಸಿಂಹನಾಗಿದ್ದನು. ಇತರರನ್ನು ಅವನು ಹಿಂಬಾಲಿಸದಿದ್ದುದರಿಂದ ಅವನ ಜೀವವುಳಿದಿತ್ತು. ಅವನ ಸಾಹಸಮಯ ಜೀವನವು ಇನ್ನೂ ಮುಂದೆ ಸಾಗಬೇಕೆಂದಾಗಿದ್ದಿತು ವಿಧಿಯ ಸಂಕಲ್ಪವು.

——

## ಬಂಧನಕ್ಕೊಳಗಾದ ಹೇಮಾ.

ಆಕೆಯು ತನಗುಂಟಾದ ಮೂರ್ಛೆಯಿಂದ ತಿಳಿದೆದ್ದಳು. ತನ್ನ ಕಣ್ಣುಗಳನ್ನು ತೆರೆದು ನಾಲ್ಕು ಪಾರ್ಶ್ವಗಳಿಗೆ ಹೊರಳಿಸಿದಳು. ತಾನಿರುವದೆಲ್ಲಿ? ಎಂಬುದು ಅವಳಿಗೆ ತಿಳಿಯಲಿಲ್ಲ. ಅವಳ ಮನೋದರ್ಪಣದಲ್ಲಿ ಯಾವ ಚಿತ್ರವೂ ಹೊಳೆಯಲಿಲ್ಲ. ಮನವು ಶೂನ್ಯವಾಗಿದ್ದಿತು. ಪ್ರಜ್ಞೆಯುಂಟಾಗಿದ್ದರೂ ಆಲೋಚಿಸುವ, ತಾನು ನೋಡಿದುದನ್ನು ತಿಳಿದುಕೊಳ್ಳುವ ಶಕ್ತಿಯನ್ನು ಅವಳು ಪಡೆದಿರಲಿಲ್ಲ. ಹಾಗೆಯೇ ತೆರೆದಿರುವ ರೆಪ್ಪೆಗಳನ್ನು ಮುಚ್ಚದೆ ಅವಳು ಪಲ್ಲಕ್ಕಿಯಲ್ಲಿ ಬಿದ್ದಿದ್ದಳು. ಕ್ರಮೇಣ ಅವಳ ಬುದ್ಧಿಯು ಮೊದಲಿನ ಅವಸ್ಥೆಗೆ ಬಂದು ತಲುಪಿತು. ತಾನು ಇರುವುದೆಲ್ಲಿ? ಎಂಬುದನ್ನು ತಿಳಿಯಲು ಅವಳು ಶಕ್ತಳಾದಳು. ಅವಳ ದೃಷ್ಟಿಗೆ ಬಿದ್ದ ನೋಟವು ತಾನಿರುವದೆಲ್ಲಿ ಎಂಬ ವಿಷಯವು ಅವಳ ಸ್ಮೃತಿಪಥದಲ್ಲಿ ಪ್ರವೇಶಿಸುವಂತೆ ಮಾಡಿತು. ದೀರ್ಘವಾದ ಬಿಸಿಯುಸಿರನ್ನು ಆ ತರುಣಿಯು ಬಿಟ್ಟಳು; ನೇತ್ರಗಳಲ್ಲಿ ಬಾಷ್ಪಕಣಗಳು ತುಂಬಿದವು; ಹಾಗು ಅವು ಉಕ್ಕಿ ಹರಿದು ಅವಳ ಕೋಮಲ ಕಪೋಲಗಳನ್ನು ನೆನಿಸಿದವು.

ನೇತ್ರಗಳಿಂದ ಉಕ್ಕಿಬರುತ್ತಿದ್ದ ಬಾಷ್ಪಸಲಿಲಗಳನ್ನು ಒರೆಸಿಕೊಳ್ಳುವದಕ್ಕಾಗಿ ಕೈಗಳನ್ನು ಅಲುಗಿಸಿದಳು; ಆದರೆ ಆಕೆಯ ಪಾಣಿದ್ವಂದವು ಹಗ್ಗಗಳಿಂದ ಬಂಧಿತವಾಗಿದ್ದಿತು. ಕಾಲುಗಳನ್ನು ಅಲ್ಲಾಡಿಸಿದಳು; ಆದರೆ ಅವುಗಳನ್ನು ಚಲಿಸುವ ಸ್ವಾತಂತ್ರ್ಯವು ಅವಳಿಗಿರಲಿಲ್ಲ. ತಾನು ಒಂದು ಪಲ್ಲಕ್ಕಿಯಲ್ಲಿ ಮಲಗಿರುವೆನೆಂದೂ ತನ್ನ ಸಮ್ಮತವಿಲ್ಲದೆ ಯಾರೋ ತನ್ನನ್ನು ಎಲ್ಲಿಗೋ ಬಲಾತ್ಕಾರದಿಂದ ಒಯ್ಯುತ್ತಿರುವರೆಂದೂ ಅವಳಿಗೆ ಭಾಸವಾಯಿತು. ಆದರೆ ಎಲ್ಲಿಗೆ, ಏಕೆ ಎಂಬುದು ಅವಳಿಗೆ ತಿಳಿಯಲಿಲ್ಲ. ಅವಳಿಗೆ ಚೀರಬೇಕೆಂದೆನಿಸಿತು. ಹಾಗೆ ಚೀರುವದರಿಂದ ಯಾವ ಪ್ರಯೋಜನವೂ ಸಿಗದೆಂದು ಅವಳು ಇನ್ನೊಂದು ಕ್ಷಣದಲ್ಲಿ ತಿಳಿದುಕೊಂಡಳು. ಹಾಗೆ ಚೀರುವದು ಹುಚ್ಚುತನವೆಂದು ಅವಳಿಗೆ ಹೊಳೆಯದಿರಲಿಲ್ಲ. ಅವಳ ಎದೆಯಲ್ಲಿ ಭೀತಿಯು ಉಕ್ಕಿಹರಿಯುತ್ತಿದ್ದಿತೆಂಬುದು ನಿಜ; ಆದರೆ ಆ ಭೀತಿಯಿಂದ ಕಂಗೆಡುವ ಹೆಣ್ಣುಮಗಳು ಅವಳಾಗಿರಲಿಲ್ಲ. "ಆಲೋಚಿಸಲು ಸಮಯವಿದೆ; ಚಿಂತಿಸಲು ಅವಕಾಶವಿದೆ" ಎಂದು ಆ ಹೆಣ್ಣು ಧೈರ್ಯವನ್ನು ತಾಳಿತು.

ಆರು ಮಂದಿ ಪಠಾಣರು ಆ ಪಲ್ಲಕ್ಕಿಯನ್ನು ಹೊತ್ತುಕೊಂಡು ಹೋಗುತ್ತಿದ್ದರು. ಎಲ್ಲರ ನಡುವಿನಲ್ಲಿ ಕತ್ತಿಗಳು ನೇತಾಡುತ್ತಿದ್ದವು. ಅವರ ಚಲನೆಯು ಬಹು ವೇಗವಾಗಿದ್ದಿತು. ಈ ಸಂಚಾರದ ಮಧ್ಯೆ ಅವರು ಮಾತನಾಡುತ್ತಿರಲಿಲ್ಲ. ಒಬ್ಬನು ಕೊನೆಗೆ ಹೀಗೆಂದನು: "ನೋಡಣ್ಣಾ, ಈ ಕೆಲಸವು ಸಾಧಿಸಿತು; ನಿಜವಾಗಿಯೂ ನಮಗೆ ಪಾರಿತೋಷಕವು ಸಿಗದಿರಲಾರದು."

"ಹೌದಣ್ಣಾ, ಗುಡಿಯ ಹತ್ತಿರಕ್ಕೆ ತಲುಪಲು ಸ್ವಲ್ಪ ವಿಲಂಬವಾಗಿದ್ದರೆ ಈ ಹಕ್ಕಿಯು ನಮಗೆ ಸಿಗುತ್ತಿರಲಿಲ್ಲ" ಎಂದನು ಎರಡನೆಯವನು

"ಅದಕ್ಕೆಂದೇ ತ್ವರೆ ಮಾಡಲು ನಾನು ನುಡಿದುದು" ಮೂರನೆಯವನೆಂದ.

"ಈ ಹಕ್ಕಿಯನ್ನು ನೋಡಿದೊಡನೆಯೇ ಸುಭೇದಾರರು ಹಿಗ್ಗಿ ಪರವಶರಾಗುವರು." ಎಂದ ಮೊದಲು ಮಾತಾಡಿದ ಪಠಾಣನು.

"ಅಹುದು, ನಿಜ. ದಾರಿಯಲ್ಲಿ ಕಾಫರ ಜನರು ಗಂಟು ಬಿದ್ದರೆ ಸ್ವಲ್ಪ ತೊಂದರೆಯಾದೀತು! ಇದು ಬಂಡುಗಾರರು ಹೆಚ್ಚಿದ ಕಾಲ; ಅವರು ನೋಡಿದರೆ ಹಕ್ಕಿಯನ್ನು ನಮ್ಮ ಪಂಜರದಿಂದ ಬಿಡಿಸಲು ಯತ್ನಿಸಬಹುದು." ಒಬ್ಬ ದೂರಾಲೋಚನೆಯ ಮನುಷ್ಯನಂತೆ ನಾಲ್ಕನೆಯವನು ಮಾತಾಡಿದನು.

"ನಿಜ; ಕೈಗೆ ಸಿಕ್ಕಿದ ಹಕ್ಕಿಯನ್ನು ಸುರಕ್ಷಿತವಾಗಿ ಒಯ್ಯಬೇಕಣ್ಣಾ. ಪೇಚಾಟಕ್ಕೆ ಸಿಕ್ಕಿಬಿದ್ದು ಕೈಲಾಗದವರೆಂಬ ಹೆಸರನ್ನು ಪಡೆಯಬಾರದು. ಬೇಗನೆ ತೆರಳುವಾ. ದುರ್ಜಯಸಿಂಹನ ಮನೆಯು ಇಲ್ಲಿಂದ ಬಹು ದೂರವಿರಲಾರದು." ಒಬ್ಬ ಅನುಭವಶಾಲಿಯಂತೆ ಮಾತಾಡಿದನು ಎರಡನೆಯವನು.

ಹೀಗೆ ಮಾತಾಡುತ್ತಾ ಪಲ್ಲಕ್ಕಿಯನ್ನು ಹೊತ್ತುಕೊಂಡು ಪಠಾಣ ದಂಡಾಳುಗಳು ಮುಂದೆ ಸಾಗುತ್ತಿದ್ದರು. ಅವರ ಮಾತುಗಳನ್ನೆಲ್ಲಾ ಇಲ್ಲಿ ಎತ್ತಿ ಬರೆಯುವದು ಅನಾವಶ್ಯಕ. ತಮ್ಮನ್ನು ಜನರು ನೋಡಬಹುದೆಂಬ ಭೀತಿಯು ಅವರಿಗಿದ್ದಿತು. ಆದುದರಿಂದ ತ್ವರಿತವಾಗಿ ಅವರು ಮುಂದೆ ಸಾಗುತ್ತಿದ್ದರು. ಪಲ್ಲಕ್ಕಿಯೊಳಗೆ ಇದ್ದ ಮಹಿಳೆಯು ಆಲೋಚನಾಮಗ್ನಳಾಗಿದ್ದಳು. ಭಯವು ಅವಳ ಎದೆಯನ್ನು ಆವರಿಸಿದ್ದಿತು; ಆದರೆ ಅವಳು ಕೇವಲ ನಿರಾಶಾಭರಿತಳಾಗಲಿಲ್ಲ. ಆಕೆಯ ವದನಮಂಡಲದಲ್ಲಿ ಆತ್ಮವಿಶ್ವಾಸವು ಕಳೆಗೊಂಡಿದ್ದಿತು. ತನ್ನನ್ನೇಕೆ ಬಂಧಿಸಿ ಈ ದಂಡಾಳುಗಳು ಒಯ್ಯುವರೆಂಬುದು ಅವಳಿಗೆ ತಿಳಿಯಲಿಲ್ಲ. ಅವರ ಈ ಕೆಲಸದ ಹಿಂದೆ ಯಾವುದೋ ಒಂದು ದುರುದ್ದೇಶವಿದೆಯೆಂದು ಅವಳು ಊಹಿಸಿದಳು. ಕೈಕಾಲುಗಳು ಕಟ್ಟಲ್ಪಟ್ಟಿದ್ದುದರಿಂದ ಚಲಿಸಲಾಗು

ತ್ತಿರಲಿಲ್ಲ. ಚಿಂತಾಮಗ್ನಳಾಗಿ ಪಲ್ಲಕ್ಕಿಯಲ್ಲಿ ಬಿದ್ದಿರುವದಲ್ಲದೆ ಬೇರೇನೂ ಮಾಡಲು ಸಾಧ್ಯವಾಗಲಿಲ್ಲ.

ಈ ವನಿತೆಯನ್ನು ಅವಳ ಇಷ್ಟಕ್ಕೆ ವಿಪರೀತವಾಗಿ ಒಯ್ಯುತ್ತಿದ್ದ ದಂಡಾಳುಗಳು ಅರ್ಧ ಗಳಿಗೆಯ ವರೆಗೆ ಸಂಚರಿಸಲು ಒಂದು ಪಟ್ಟಣವನ್ನು ಸೇರಿದರು. ಅವರು ಆ ನಗರದ ಒಂದು ಬೀದಿಯನ್ನು ಹಿಡಿದರು. ಸ್ವಲ್ಪ ಮುಂದೆ ಗಮಿಸಲು ಒಂದು ಭವ್ಯ ನಿಲಯವು ಗೋಚರಿಸಿತು. ಅವರು ಬೀದಿಯನ್ನು ಬಿಟ್ಟು ಮನೆಯ ಹಿತ್ತಲೊಳಗೆ ಪ್ರವೇಶಿಸಿದರು. ಒಂದು ಪಲ್ಲಕ್ಕಿಯೊಡನೆ ನಾಲ್ಕಾರು ಮಂದಿ ಪ್ರವೇಶಿಸುವುದನ್ನು ಕಾಣಲು ಮನೆಯ ಕಾವಲುಗಾರನು ಪ್ರಶ್ನಿಸಿದನು: "ನೀವು ಯಾರು?"

"ದುರ್ಜಯಸಿಂಹರಿರುವರೇ? ಅವರ ಅಪ್ಪಣೆಯಂತೆ ಬಂದಿದ್ದೇವೆ." ಹೀಗೆ ದಂಡಾಳುಗಳಲ್ಲಿ ಒಬ್ಬನು ಜವಾಬು ಹೇಳಿದ.

"ಒಳ್ಳೆಯದು. ಅವರು ಮನೆಯೊಳಗೆ ಇದ್ದಾರೆ. ನೀವು ಬಂದ ಸಂಗತಿಯನ್ನು ಅವರಿಗೆ ಅರುಹುತ್ತೇನೆ." ಹೀಗೆನ್ನುತ್ತಾ ಕಾವಲುಗಾರನು ಮನೆಯೊಳಗೆ ಪ್ರವೇಶಿಸಿದ. ತಮ್ಮ ಹೆಗಲಮೇಲಿದ್ದ ಪಲ್ಲಕ್ಕಿಯನ್ನು ನೆಲದ ಮೇಲಿಟ್ಟು ದಂಡಾಳುಗಳು ನಿಂತುಕೊಂಡರು. ಸೈನಿಕರು ತನ್ನನ್ನು ತಂದಿರುವದೆಲ್ಲಿಗೆ? ಎಂಬ ವನ್ನು ತಿಳಿಯಲು ಉತ್ಸುಕಳಾಗಿ ಪಲ್ಲಕ್ಕಿಯ ಪರದೆಯಲ್ಲಿದ್ದ ಒಂದು ಕಿಂಡಿಗಾಗಿ ಆ ಹೆಂಗಸು ತನ್ನ ದೃಷ್ಟಿಯನ್ನು ಹೊರಳಿಸಿದಳು. ಆ ಅಗಲ ಕಿರಿದಾದ ಕಿಂಡಿಯ ಮೂಲಕ ಮನೆಯ ಒಂದು ಪಾರ್ಶ್ವವು ಮಾತ್ರ ಗೋಚರಿಸಿತಲ್ಲದೆ ಬೇರೆ ಯಾವುದೂ ಅವಳಿಗೆ ಕಾಣಲಿಲ್ಲ.

ನಾಲ್ಕು ನಿಮಿಷಗಳು ಕಳೆಯುವುದರೊಳಗಾಗಿ ಮನೆಯೊಳಗೆ ಪ್ರವೇಶಿಸಿದ್ದ ಕಾವಲುಗಾರನು ಹಿಂದಿರುಗಿ ಬಂದ. ಅವನ ಬೆನ್ನ ಹಿಂದೆ ಬೇರೊಂದು ಪುರುಷವ್ಯಕ್ತಿಯೂ ಸಹಾ ಹೊರಗೆ ಬಂದಿತು. ಈ ವ್ಯಕ್ತಿಯು ದುರ್ಜಯಸಿಂಹನಾಗಿದ್ದನು. ದುರ್ಜಯನು ಪಲ್ಲಕ್ಕಿಯನ್ನೂ ದಂಡಾಳುಗಳನ್ನೂ ಕಾಣುತ್ತಲೆ "ಹೋದ ಕೆಲಸವಾಯಿತೇ?" ಎಂದು ಪ್ರಶ್ನಿಸಿದನು.

ಪಲ್ಲಕ್ಕಿಯನ್ನು ತೆಗೆದುಕೊಂಡು ಬಂದಿದ್ದ ಆರು ಮಂದಿ ದಂಡಾಳುಗಳಲ್ಲಿ ಒಬ್ಬನು ಒಂದು ಹೆಜ್ಜೆ ಮುಂದೆ ಬಂದು ಹೇಳಿದನು: "ನಾವು ಹಿಡಿದ ಕೆಲಸವನ್ನು ಪೂರೈಸದೆ ಹಿಂದಿರುಗುವದುಂಟೇ? ನೀವು ತೋರಿಸಿದ ಹಕ್ಕಿಯನ್ನು ಹಿಡಿದು ತಂದಿರುವೆವು."

"ಒಳ್ಳೆಯದು" ದುರ್ಜಯನ ವದನದಲ್ಲಿ ಒಂದು ಮಂದಸ್ಮಿತವು ನರ್ತಿಸಿತು: "ನೀವು ಹಿಡಿದು ತಂದ ಪಕ್ಷಿಯು ಬಹು ಬೆಲೆಯುಳ್ಳದ್ದಿರುತ್ತದೆ. ಆದುದರಿಂದ ಅದನ್ನು ಪಂಜರದಲ್ಲೇ ಇಡಬೇಕಾಗಿದೆ. ಈ ಹಕ್ಕಿಗಿರುವ ಗೂಡು ಯಾವುದೆಂದು ತೋರಿಸುತ್ತೇನೆ. ಪಲ್ಲಕ್ಕಿಯನ್ನು ತೆಗೆದುಕೊಂಡು ನನ್ನ ಬೆನ್ನಹಿಂದೆ ಬನ್ನಿ."

ದುರ್ಜಯನ ನುಡಿಗಳನ್ನು ಕೇಳಲು, ಸೈನಿಕರು ನೆಲದ ಮೇಲಿನ ಪಲ್ಲಕ್ಕಿಯನ್ನು ಹೆಗಲುಗಳ ಮೇಲೇರಿಸಿಕೊಂಡರು. ದುರ್ಜಯನು ಮುಂದೆ ನಡೆದನು; ದಂಡಾಳುಗಳು ಅವನನ್ನು ಹಿಂಬಾಲಿಸಿ ನಡೆದರು. ಮನೆಯ ಹಿತ್ತಲಿನ ತೋಟದಲ್ಲಿ ಸ್ವಲ್ಪ ದೂರ ಚಲಿಸಲು, ಒಂದು ಚಿಕ್ಕ ಮನೆಯು ಅವರಿಗೆ ಗೋಚರಿಸಿತು. ತೋಟದ ಒಳಭಾಗದಲ್ಲಿ ಅದು ಇದ್ದುದರಿಂದ ಬೀದಿಯಲ್ಲಿ ಹೋಗುವವರಿಗೆ ಆ ಗೃಹವು ಗೋಚರಿಸದು. ಅಲ್ಲಿ ಕಿರುಚಿದರೂ ಆ ಧ್ವನಿಯು ಬೀದಿಗೆ ತಲುಪದು. ಕದಗಳು ಮುಚ್ಚಲ್ಪಟ್ಟುದುದರಿಂದ ಆ ಮನೆಯಲ್ಲಿ ಜನರಿಲ್ಲವೆಂಬುದು ವ್ಯಕ್ತವಾಗುತ್ತಿದ್ದಿತು. ದುರ್ಜಯನು ಮನೆಯ ಕದಗಳನ್ನು ಬಿಚ್ಚಿದನು; ಅವನು ಒಳಗೆ ಪ್ರವೇಶಿಸಿದನು. ದಂಡಾಳುಗಳು ಪಲ್ಲಕ್ಕಿಯೊಡನೆ ಅವನನ್ನು ಅನುಸರಿಸಿದರು. ದುರ್ಜಯನು ಪಲ್ಲಕ್ಕಿಯನ್ನು ಮನೆಯೊಳಗೆ ಇಡಲು ಆಜ್ಞಾಪಿಸಿದ. ಸೈನಿಕರು ಅದರಂತೆ ವರ್ತಿಸಿದರು.

ಪಲ್ಲಕ್ಕಿಯನ್ನು ನೆಲದ ಮೇಲಿಟ್ಟು ಅನಂತರ ಅವರು ಅದರೊಳಗಿದ್ದ ಮಹಿಳೆಯ ಕೈಕಾಲುಗಳ ಕಟ್ಟುಗಳನ್ನು ಬಿಚ್ಚಿದರು. ಚಲನೆಯ ಸ್ವಾತಂತ್ರ್ಯವು ಲಭ್ಯವಾಗಲು ಕೆಣಕಲ್ಪಟ್ಟ ಸರ್ಪದಂತೆ ಅವಳು ಪಲ್ಲಕ್ಕಿಯಿಂದ ಎದ್ದುನಿಂತಳು. ಅವಳ ಕಣ್ಣುಗಳಲ್ಲಿ ಕೋಪದ ಕಿಡಿಗಳು ಜ್ವಲಿಸುತ್ತಿದ್ದವು. ಬಿಚ್ಚಿಹೋದ ಕುಂತಳವು ಅವಳ ಭುಜಗಳ ಮೇಲೆ ಬಿದ್ದಿದ್ದಿತು. ಅವಳು ಒಂದು ದೀರ್ಘವಾದ ನಿಶ್ವಾಸವನ್ನು ಹೊರಚೆಲ್ಲಿದಳು. ಈ ಮಾತು ಆಕೆಯ ತುಟಿಗಳಿಂದ ಹೊರಬಿದ್ದಿತು: "ನೀವು ಯಾರು? ನನ್ನನ್ನೇಕೆ ಇಲ್ಲಿ ತಂದಿರುವಿರಿ?"

ಅವಳ ಪ್ರಶ್ನೆಗಳಿಗೆ ಯಾರೂ ಪ್ರತ್ಯುತ್ತರಗಳನ್ನು ಕೊಡಲಿಲ್ಲ. ದುರ್ಜಯನು ಅಲಕ್ಷ್ಯಭಾವದಿಂದಿದ್ದನು.

"ನನ್ನನ್ನು ಇಲ್ಲಿಂದ ಹೋಗಗೊಡಿರಿ. ಇಲ್ಲದಿದ್ದರೆ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ.

ನಿಶ್ಶಬ್ದತೆಯಾಗಿತ್ತು ಅವಳಿಗೆ ಲಭಿಸಿದ ಉತ್ತರವು.

"ನಿನ್ನನ್ನು ನೋಡಿದರೆ ಒಬ್ಬ ಹಿಂದುವಿನ ಹಾಗೆ ತೋರುತ್ತದೆ. ಒಬ್ಬ ಹಿಂದೂವನಿತೆಯನ್ನು ಹೀಗೆ ಅಪಮಾನಿಸುವದು ಸರಿಯಲ್ಲ" ದುರ್ಜಯನ ಮೋರೆಯ ಕಡೆಗೆ ತನ್ನ ದೃಷ್ಟಿಯನ್ನು ಓಡಿಸುತ್ತ ಅಂದಳು ಆ ಮಹಿಳೆ.

ಆದರೆ ಮಾತಿಲ್ಲ. ದುರ್ಜಯನ ತುಟಿಗಳ ಮೇಲೆ ಒಂದು ಕಿರುನಗೆಯು ನರ್ತಿಸುತ್ತಿದ್ದಿತು.

"ಏಕೆ, ನನ್ನನ್ನು ಹೀಗೆ ಪೀಡನೆಗೆ ಗುರಿಪಡಿಸುತ್ತಿರುವಿರಿ? ನನ್ನನ್ನು ಬಿಟ್ಟು ಬಿಡಿರಿ; ಇಲ್ಲದಿದ್ದರೆ ನೆಟ್ಟಗಾಗಲಿಕ್ಕಿಲ್ಲ!"

"ಸುಂದರೀ! ನಿನ್ನನ್ನು ತಂದಿರುವದೇಕೆಂಬುದು ಅನಂತರ ನಿನಗೆ ತಿಳಿಯು ವದು. ನಮ್ಮಿಂದ ನಿನಗೆ ಯಾವ ಕೇಡೂ ಆಗಲಾರದು. ನಿನ್ನ ಹಿತವನ್ನು ಚಿಂತಿಸಿಯೇ ನಾವು ಈ ರೀತಿ ವರ್ತಿಸಿದ್ದೇವೆ." ಇದಾಗಿದ್ದಿತು ದುರ್ಜಯನ ಪ್ರತ್ಯುತ್ತರ.

ಅನಂತರ ಆ ತರುಣಿಯು ನುಡಿದಳು: "ನಿನಗೆ ಅಕ್ಕ-ತಂಗಿಯರಿಲ್ಲವೆ? ಮಡದಿ-ಮಕ್ಕಳಿಲ್ಲವೆ? ನನ್ನನ್ನು ನಿನ್ನ ತಂಗಿಯೆಂದು ಭಾವಿಸು. ನನ್ನನ್ನು ಇಲ್ಲಿಂದ ಹೋಗಗೊಡು."

ಆದರೆ ಆಕೆಯ ಅಪೇಕ್ಷೆಯನ್ನು ಕೇಳಲಿಲ್ಲ ದುರ್ಜಯನ ಕಿವಿಗಳು. ಪಲ್ಲಕ್ಕಿಯನ್ನು ತಂದ ಭಟರಿಗೆ ಹೊರಟು ಹೋಗಲು ಆಣತಿಯನ್ನಿತ್ತ ದುರ್ಜಯ. ಅವರು ಹೊದ ಮೇಲೆ ದುರ್ಜಯನೂ ಹೊರಗೆ ತೆರಳಿದ; ಕದಗಳನ್ನು ಮುಚ್ಚಿ ಬೀಗವನ್ನು ಹಾಕಿದ. ಆಕೆಯು ಆ ನಿಲಯದಲ್ಲಿ ಬಂಧನಸ್ಥಳಾದಳು.

ಕತ್ತಲೆ, ಬೆಳಕಿಲ್ಲ; ಅವಳೊಬ್ಬಳೇ ಉಳಿದಳು ಆ ಮನೆಯಲ್ಲಿ. ತನ್ನನ್ನು ಬಂಧನಕ್ಕೆ ಗುರಿಮಾಡಿದವರು ಯಾರು? ಏತಕ್ಕಾಗಿ? ಎಂಬುದನ್ನು ಅವಳಿಗೆ ತಿಳಿಯಲಾಗಲಿಲ್ಲ; ಆದರೆ ಯಾವುದೋ ಒಂದು ಭಯಂಕರ ಅನರ್ಥವು ತನ್ನನ್ನು ಇದಿರು ನೋಡುತ್ತಿದೆ, ಎಂಬುದನ್ನು ಅವಳು ಅರಿತಳು. ಬಲಹೀನೆಯಾದ ತಾನು ಈ ವಿಪತ್ತಿನಿಂದ ಪಾರಾಗುವದು ಹೇಗೆಂಬುದು ಅವಳಿಗೆ ಹೊಳೆಯಲಿಲ್ಲ. ಈ ಬಂಧನದಲ್ಲಿ ನರಳುವದಲ್ಲದೆ ಬೇರೆ ಗತಿಯೇನು? ಈ ನೀಚರು ತನ್ನನ್ನು ಯಾವ ಅಪಮಾನಕ್ಕೆ ಗುರಿಪಡಿಸುವರೋ, ಎಂದು ಆ ಸಾಧ್ವಿಯು ಕಂಪಿಸಿದಳು; ನೆಲದ ಮೇಲೆ ಬಿದ್ದು ಭೂಮಿತಾಯಿಯನ್ನು ತನ್ನ ಅಶ್ರುಸಲಿಲದಿಂದ ನೆನೆಸಿದಳು. ಅವಳ ಶೋಕವನ್ನು ಆ ಮನೆಯ ನಾಲ್ಕು ಗೋಡೆಗಳು ನೋಡಿದವು!

ಸಮಯವು ಸಂಜೆಯಾಯಿತು. ಗೋಡೆಯಲ್ಲಿರುವ ಕಿಟಕಿಗಾಗಿ ಬರುತ್ತಿದ್ದ ಬೆಳಕು ಮರೆಯಾದುದರಿಂದ ಸಂಜೆಯಾಯಿತೆಂದು ಆಕೆಯು ತಿಳಿದುಕೊಂಡಳು. ಮನೆಯೊಳಗಿನ ಪ್ರಕಾಶವು ಇಲ್ಲದಾಯಿತು. ಇರುಳು ಆ ಸ್ಥಳವನ್ನು ಆಕ್ರಮಿಸಿತು. ಕತ್ತಲೆಯಾದರೆ ಮಾಡುವದೇನು? ತನ್ನ ಅಂತರಂಗದಲ್ಲಿ ಹರಡಿದ್ದ ಇರುಳಿಗಿಂತ ಭಯಾನಕವಾಗಿ ಹೊರಗಿನ ಕತ್ತಲೆಯು ಅವಳಿಗೆ ತೋರಲಿಲ್ಲ. ಚಿಂತಾಮಗ್ನವಾಗಿ ನೆಲದ ಮೇಲೆ ಬಿದ್ದ ಶಿರಸ್ಸನ್ನು ಆಕೆ ಮೇಲಕ್ಕೆತ್ತಲಿಲ್ಲ. ಈ ಇರುಳಿನಲ್ಲಿ ಒಂದು ಗಾನವು-ಸವಿಯಾದ ಒಂದು ಹಾಡು-ತೇಲಿ ಬಂದು ಆಕೆಯ ಕರ್ಣೇಂದ್ರಿಯಗಳಲ್ಲಿ ಪ್ರವೇಶಿಸಿತು. ಕರ್ಣಪೀಯೂಷವೆನಿಸಿದ ಆ ಗಾನವನ್ನು ಆಸ್ವಾದಿಸಲು ಆ ಲಲನೆಯ ಮನವು ಜಾಗ್ರತವಾಯಿತು. ಒಮ್ಮೆ ತಲೆಯೆತ್ತಿ ನೋಡಿದಳು. ದೂರದಿಂದ-ಆ ಮನೆಯ ಹಿತ್ತಲಿನ ಇನ್ನೊಂದು ಪ್ರದೇಶದಿಂದ-ಆ ಗಾನವು ಹರಿದು ಬರುತ್ತಿದ್ದಿತು. ಆ ಹಾಡಿಗೆ ಆಕೆ ಕಿವಿಗೊಟ್ಟಳು.

ಪಾಪಿ ನಾನು ದೇವನೇ!
ಕಿಚ್ಚಿನಿಂದ ಪಾರು ಮಾಡು
ಕರುಣಾಳು ಬೇಕೆ ಬೇಗನೇ!
ನೊಂದ ಎದೆಗೆ ಶಾಂತಿ ನೀಡು.
ಬೆಂದ ಮನಕೆ ಶೀತಲ ಸಲಿಲ
ಬಿಂದುಗಳನು ಸಂಚಿಸೆಲ್ಲೈ;
ಬಳಲಿ ಬೆಂಡಾದ ಜೀವಕೆ
ಕರುಣೆಯನು ನೀ ತೋರೆಲ್ಲೈ!
ಪ್ರೇಮವನ್ನು ಅರಸಿ ನಡೆದೆ;
ಪ್ರೇಮ ಮೂರ್ತಿಯನ್ನು ಪಡೆದೆ.
ದೇವ ನಿನ್ನ ವರವು ಆಯ್ತು
ಎನಗೆ ಒಂದು ಶಾಪವಾಗಿ;
ಎನ್ನ ಮನದ ಬಯಕೆ ಈಗ
ತೋರಿತೊಂದು ತಾಪವಾಗಿ.
ಎನ್ನ ಎದೆಯಲ್ಲಿ ನಿಂತ ಬಿಂಬ
ತೋರಿತೊಂದು ಭಾರವಾಗಿ;

ಹೊರಲು ಬಲವು ಇಲ್ಲ ನನಗೆ
ಪಾಪ ರಜ್ಜು ಬಿಗಿಯುತಲಿದೆ!
ನನ್ನ ಆತ್ಮವೀಗ ಪಾಪದಾ
ಕೆಸರಿನಲಿ ಮುಳುಗೇಳುತಿವೆ!
ಬೆಳಕ ಕಾಣದೆ ಬಹು ನೋವು
ಸಹಿಸಿ ನಿನ್ನೆಡೆಗೆ ಬಂದಿಹೆನು;
ಕರಪಿಡಿದು ಎತ್ತು ಎನ್ನ ಮೇಲಕೆ
ಓ, ಕರುಣಾಳು ಬಾ ಬೆಳಕೇ!

ಕರುಣೆಯಿಂದ ತುಂಬಿದ ಕಂಠಸ್ವರ; ಹೃದಯವನ್ನು ಕರಗಿಸತಕ್ಕ ಹಾಡು. ಕರುಣೆ ಪ್ರತಿಯೊಂದು ನುಡಿಯಲ್ಲಿಯೂ ತುಂಬಿದ್ದಿತು. ಎದೆಯಲ್ಲಿ ಹರಿಯುತ್ತಿದ್ದ ಶೋಕವಾಹಿನಿಯು ಹಾಡಿನ ರೂಪದಿಂದ ಹೊರಗೆ ಬರುತ್ತಿದ್ದಿತು. ಈ ಮೃದುಗೀತೆಯನ್ನು ಹಾಡಿದವರು ಯಾರಿರಬಹುದು? ತನ್ನ ಸ್ವಾತಂತ್ರ್ಯವನ್ನು ತಡೆದು ಬಂಧನಕ್ಕೊಳಗು ಮಾಡಿದ ಈ ಕಠಿಣಾತ್ಮರ ಸದನದಿಂದ ಈ ರೀತಿಯ ಮೃದುಮಧುರ ಹೃದಯಾನರ್ಜಕ ಗೀತೆಯನ್ನು ಕೇಳಿ ಬಂಧನದಲ್ಲಿ ನರಳುತ್ತಿರುವವಳಿಗೆ ಬಹು ಆಶ್ಚರ್ಯವಾಗಿ ತೋರಿತು. ಹಾಡಿನ ಒಂದೊಂದು ನುಡಿಯೂ ಅವಳಲ್ಲಿ ಬಹಳ ಆಳವಾಗಿ ಬೇರೂರಿತು. ನೆಲದಿಂದ ಎದ್ದು ಕುಳಿತು ಆ ತರುಣಿಯು ತನ್ನೊಳಗೇ ಹೀಗೆ ಹಾಡಿಕೊಂಡಳು:

"ಕೆಸರಿನಲಿ ಮುಳುಗೇಳುತಿಹೆನು,
ಬೆಳಕ ಕಾಣದೆ ಬಹು ನೋವು
ಸಹಿಸಿ ನಿನ್ನೆಡೆ ಬಂದಿಹೆನು.
ಕರಪಿಡಿದು ಎತ್ತು ಎನ್ನ ಮೇಲಕೇ
ಓ, ಕರುಣಾಳು ಬಾ ಬೆಳಕೇ!"

ಗೀತೆಯ ಕೊನೆಯ ಭಾಗವನ್ನು ತನ್ನೊಳಗೆ ಹಾಡುವಾಗ ಪ್ರಕ್ಷುಬ್ಧವಾದ ಅವಳ ಚಿತ್ತಕ್ಕೆ ಒಂದು ಬಗೆಯ ಶಾಂತಿಯು ಲಭಿಸಿತು.

ರಾತ್ರಿ ಮನೆಯ ಕದಗಳು ಬಿಚ್ಚಲ್ಪಟ್ಟವು. ಇನ್ನೇನು ಅನಾಹುತಗಳು ಜರುಗುವವೋ ಎಂದು ಆ ತರುಣಿ ಗಾಬರಿಯಾದಳು. ಒಬ್ಬ ಮುದುಕಿ ಮನೆಯನ್ನು ನುಗ್ಗುತ್ತಿರುವದನ್ನು ಅವಳು ಕಂಡಳು. ಕದಗಳ ಬಳಿಯಲ್ಲಿ ಒಬ್ಬ ಭಟನು ನಿಂತಿದ್ದನು. ಮುದುಕಿ ಕಣ್ಣುಗಳನ್ನಗಲಿಸಿ ತರುಣಿಯನ್ನು ನೋಡಿ

ದಳು. ತರುಣಿ ವೃದ್ಧೆಯನ್ನು ಪ್ರಶ್ನಿಸಿದಳು: "ನೀನು ಯಾರು?"

"ನಾನು ನಿನಗೆ ಆಹಾರವನ್ನು ತಂದಿರುವೆ."

"ನನಗೆ ಆಹಾರವು ಅವಶ್ಯವಿಲ್ಲ."

"ಹಾಗೆನಬಾರದು" ಎಂದಳು ಮುದುಕಿ.

"ಈ ನರಕದಲ್ಲಿ ಬದುಕುವವಕ್ಕಿಂತ ಸಾಯುವದು ಮೇಲು" ಎಂದು ಒದರಿದಳು ತರುಣಿ.

"ಮಗೂ, ಹಾಗೆನಬಾರದು. ನಿನ್ನ ಭಾಗ್ಯೋದಯವಾಗಿದೆ."

"ಏಕೆ, ಹಾಗೆ ಹೇಳುವೆ?"

"ಇನ್ನು ಕೆಲವು ದಿನಗಳಲ್ಲಿಯೇ ನೀನು ಈ ಊರಿನ ಭಾಗ್ಯದೇವತೆಯಾಗುವೆ."

"ಅಂದರೆ?" ತರುಣಿ ತನ್ನ ಕಣ್ಣುಗಳನ್ನಗಲಿಸಿದಳು.

"ನಿನ್ನನ್ನು ತಂದವರು ಸುಭೇದಾರರ ಬಲಗೈಯಂತಿರುವ ದುರ್ಜನಯ ಸಿಂಹರು. ಅವರು ನಿನ್ನನ್ನು ಸುಭೇದಾರರಿಗೆ ಕಾಣಿಕೆಯಾಗಿ ಅರ್ಪಿಸುತ್ತಾರೆ."

"ಹಾ! ತಿಳಿಯಿತು." ತರುಣಿ ಗರ್ಜಿಸಿದಳು: "ಈ ಜಗತ್ತಿನಲ್ಲಿ ಮಾನಿನಿಯರು ಜೀವಿಸಲು ಸಾಧ್ಯವಿಲ್ಲವೇ? ಹೋಗು, ನನಗೆ ಆಹಾರ ಬೇಡ. ಉಪವಾಸ ಬಿದ್ದು ಸಾಯುವೆನು; ಆದರೆ ಶೀಲವನ್ನು ಕಳೆದುಕೊಳ್ಳಲಾರೆ." ಕೋಪಾಗ್ನಿಯಿಂದ ಜ್ವಲಿಸುತ್ತ ತರುಣಿ ಒದರಿದಳು. ಅವಳ ಕಣ್ಣುಗಳಲ್ಲಿ ಜ್ವಲಿಸುತ್ತಿರುವ ಕೋಪಾನಲವನ್ನು ಕಾಣುವಾಗ ವೃದ್ಧೆಯ ಕಾಲುಗಳು ನಡುಗಹತ್ತಿದವು. ಅವಳು ಮೃದುನುಡಿಯಲ್ಲಿ ತರುಣಿಗೆ ಹೇಳಿದಳು. "ಮಗಳೇ, ಸಿಟ್ಟಾಗಬೇಡ; ..."

"ಹೊರಡಿಲ್ಲಿಂದ!" ತರುಣಿಯು ಗರ್ಜಿಸಿದಳು. "ನನಗೆ ಆಹಾರ ಬೇಡ; ಈ ದೇಹವನ್ನು ಕಾಪಾಡತಕ್ಕ ಅವಶ್ಯಕತೆ ನನಗಿಲ್ಲ."

ತರುಣಿಯ ಈ ರೌದ್ರಭಾವವನ್ನು ಕಾಣುತ್ತಲೆ ಮುದುಕಿಯಲ್ಲಿ ಮಾತಾಡುವ ಧೈರ್ಯವುಳಿಯಲಿಲ್ಲ. ಅವಳು ಆ ಮನೆಯಲ್ಲಿ ಆಹಾರದ ಪಾತ್ರೆಗಳನ್ನು ಮಡಗಿ ಮೆಲ್ಲನೆ ಹಿಂದಕ್ಕೆ ಜಾರಿದಳು. ಮುದುಕಿ ಹೊರಗೆ ಬರಲು, ಭಟನು ಕದಗಳನ್ನು ಮುಚ್ಚಿ ಬೀಗ ಹಾಕಿದನು. ಮುದುಕಿಯ ನುಡಿಗಳಿಂದ ಘಾತುಕರು ತನ್ನನ್ನು ಬಂಧಿಸಿದ್ದೇಕೆಂಬುದನ್ನು ತರುಣಿಯು ತಿಳಿದುಕೊಂಡಳು. ಅವರ ದುರ್ವರ್ತನೆಯು ಅವಳ ಮನಸ್ಸಿನಲ್ಲಿ ಕೋಪಾನಲವು ಪ್ರಜ್ವ

ಲಿಸಿತು. ತನ್ನ ಮುಂದಿದ್ದ ಪಾತ್ರೆಯನ್ನು ಅವಳು ಒಡೆದು ಚೂರು-ಚೂರು ಮಾಡಿದಳು. ಯಾವ ಆಹಾರವನ್ನೂ ತೆಗೆದುಕೊಳ್ಳದೆ ಆಕೆಯು ಉಪವಾಸ ಮಲಗಿದಳು.

ರಾತ್ರಿಯು ಕಳೆದು ಬೆಳಗಾಯಿತು. ಆಕೆಯು ಹಿಂದಕ್ಕೆ ಸರಿಯಲು ಬೆಳಕು ಹರಡಿತು. ಇನನ ಒಂದೆರಡು ಕಿರಣಗಳು ಕಿಡಕಿಗಾಗಿ ಹರಿದು ಬಂದು ಆ ಮನೆಯೊಳಗೆ ಪಸರಿಸಿದವು. ಜಗತ್ತು ಪ್ರಕಾಶಮಾನವಾದರೇನು? ಬಂಧನದಲ್ಲಿ ನರಳುತ್ತಿದ್ದ ತರುಣಿಯ ಹೃದಯದಲ್ಲಿ ನವಸ್ಫೂರ್ತಿ ಪ್ರಸಾರವಾಗಲಿಲ್ಲ. ಹಿಂದಿನ ದಿನ ಆಹಾರವಿಲ್ಲದುದರಿಂದ ಅವಳ ದೇಹವು ಬಳಲಿ ಬಲಹೀನವಾಗಿದ್ದಿತು. ಮಾನಸಿಕ ವೇದನೆಗಳಿಂದ ವದನವು ಕಳೆಗುಂದಿದ್ದಿತು. ಆ ಪ್ರಭಾತದಲ್ಲಿ ಹಿಂದಣ ದಿನ ಸಂಜೆಗೆ ತಾನು ಆಸ್ವಾದಿಸಿದ ಕಂಠದಿಂದಲೇ ಬೇರೊಂದು ಗಾನವು ಹರಿದು ತರುಣಿಯ ಬಳಿಗೆ ಬಂದಿತು. ಜೇನಿನಂತೆ ಸವಿಯಾದ ಆ ಹಾಡು ಗಾಳಿಯಲ್ಲಿ ತೇಲಿ ಬಂದು ತರುಣಿಯ ಶ್ರವಣೇಂದ್ರಿಯಗಳಲ್ಲಿ ಪ್ರವೇಶಿಸಿತು.

ಜಗಕೆಲ್ಲ ಬಣ್ಣಗಳ ಬಳಿಯುತಿಹ
ದಿವಾಕರ, ಎನ್ನ ಹೃದಯ ಪದ್ಮದ-
ಲಿ ನವ ಪ್ರಭೆಯನು ಹರಹು ನೀನೆಲೈ!
ಮರಗಳನೇರಿ ಸವಿಗಾನವನು
ಹಾಡಿ ನಲಿವ ಪಕ್ಷಿಗಳೇ, ನೀವು
ಗಾನದಿಂ ಎನ್ನೆದೆಯ ತುಂಬಿರೈ!
ನೊಂದಿಹ ಒಂದು ಜೀವ ಬಿಸಿಲಲಿ
ಕುಣಿಕುಣಿದು ಹಾಡಿ ನಲಿಯಲಿ;
ಹರುಷವಾಹಿನಿಯೀಗ ಹರಿಯಲಿ!
ನವತೇಜವನು ಹೀರುತ ಈ ಜೀವ
ಕುಣಿಕುಣಿದು ದಣಿವ ಪಡೆಯಲಿ;
ಎನ್ನ ಎದೆಯು ಮಾತ್ರ ಈಗ ತುಂಬಲಿ!

ಹರುಷದ ಕಳೆಯನ್ನು ಸ್ಫುರಿಸುತ್ತಿದ್ದಿತು ಆ ಹಾಡು; ಆದರೆ ಅದರಲ್ಲಿಯೂ ಶೋಕ ಹುದುಗಿದ್ದಿತು. ನವಪ್ರಭಾತದಲ್ಲಿ ಒಂದು ಜೀವವು ಹರುಷದ ಕಡಲಿನಲ್ಲಿ ತೇಲಲು ಕಾತರಿಸುತ್ತಿದ್ದಿತು. ಆ ಸಿಹಿರಸವು ಸವಿಯಲು ಸಿಗಲಿಲ್ಲ

ವೆಂಬುದು ಹಾಡಿನಿಂದ ವ್ಯಕ್ತವಾಗುತ್ತಿದ್ದಿತು. ಈ ಗಾನವು ಬಂಧನದಲ್ಲಿದ್ದ ಆ ತರುಣಿಯ ಹೃದಯದಲ್ಲಿ ನವೋತ್ಸಾಹವು ಆವಿರ್ಭವಿಸುವಂತೆ ಮಾಡಿತು. ಇರುಳು ಆವರಿಸಿದ ಅವಳ ಮನದಲ್ಲಿ ಒಂದು ಪ್ರಭಾಕಿರಣವು ಗೋಚರಿಸಿತು. ಆಗಲವಳು ತನ್ನ ಮೋಹನಸ್ವರದಿಂದ ಆ ನಿಲಯದಲ್ಲಿ ಪಸರಿಸಿದ್ದ ನಿಃಶಬ್ದತೆಯನ್ನು ಭೇದಿಸಿದಳು. ಅವಳ ಕೊರಳಿಂದ ಈ ಸವಿ ಹಾಡು ಪ್ರವಹಿಸಿತು:

ಬಲಹೀನೆ ನಾನಿಹೆನು
ಗತಿಯಾರು ಎನಗಿಲ್ಲ.
ಬಂಧನದಿ ಸಿಲುಕಿ ನೋವು,
ಉಣುತಿಹ ಪಾಪಿ ನಾನು.
ಗೂಡಿನಲಿ ಸಿಲುಕಿ ಸ್ವಾ-
ಧೀನತೆಯ ಕಳೆದುಕೊಂಡ
ಶುಕದಂತೆ ಈ ಪಂಜರ-
ದಿ ಮರುಗುತಿಹೆನು ನಾನು!
ಗತಿಹೀನೆ ನಾನಿರಲು
ಎನ್ನ ಕಾಯಲ್ ನೀನ-
ಲ್ಲದೆ ಇಹರು ಇನ್ನಾರು?
ಎನ್ನ ಮೊರೆಯ ಕೇಳುತ
ಪಾರುಮಾಡು ದೇವನೇ;
ಎನ್ನ ಕ್ಲೇಶ ಪಾಶವ
ಹರಿದು ಕಾಯೋ ನೀನೆಲೆ
ದೇವ! ಪತಿತ ಪಾವನನೆ!

ಆ ತರುಣಿಯ ಹೃದಯದಂತರಾಳದಿಂದ ಪ್ರಾರ್ಥನೆಯು ವಾಯುಮಂಡಲದಲ್ಲಿ ಪ್ರವೇಶಿಸಿ ಬಾಹ್ಯ ಜಗತ್ತಿನಲ್ಲಿ ವ್ಯಾಪಿಸಿತು. ಹಾಡು ಮುಗಿಯಲು ತರುಣಿ ಮೌನವನ್ನವಲಂಬಿಸಿದಳು. ಎರಡು ನಿಮಿಷಗಳು ಕಳೆಯಲು ಹೊರಗಿಂದ ಬೇರೊಂದು ಹಾಡು ತರುಣಿಯ ಕಡೆಗೆ ಹರಿದು ಬಂದಿತು.

ನೊಂದವರ ದುಃಖವನು,
ಬೆಂದವರ ಶೋಕವನು,
ನರಳುವವರ ನೋವನ್ನು
ಹರಿಸುವನು ದಯಾಮಯನು.

ನೊಂದು, ಬೆಂದು ಶೋಕದ
ಯಾಮಿನಿಯಲಿ ಬಿದ್ದಿಹ
ನರಜೀವಿಯ ಹೃದಯಕೆ
ನೀಡುವನು ಶಾಂತಿ ಸಲಿಲವನು
ಕಾರುಣ್ಯ ವಾರಿಧಿಯು!
ಹರಡಿರಲು ಕರುಣೆಯು,
ಪಿಯೂಷವನು ಸರ್ವತ್ರ,
ಜಗವೆ ಶೋಕಮಯವೆನುತ
ಕಾತರಿಸದಿರು ನೀನು;
ನಿನ್ನ ಈ ಮೊರೆಯನ್ನು
ಕೇಳುವನು, ಕ್ಲೇಶವನು
ಹರಿಸುವನು ಕರುಣಾಳು!

ಹಾಡು ನಿಂತಿತು. ಈ ಹಾಡು ಬಂಧನವಲ್ಲಿ ನರಳುತ್ತಿದ್ದ ಆ ಹೆಣ್ಣುಹೃದಯಕ್ಕೆ ಹೊಸ ಶಾಂತಿಯನ್ನು ನೀಡಿತು. ಅವಳ ಆತ್ಮವು ಒಂದು ಹೊಸ ವಿಶ್ವಾಸವನ್ನು ಪಡೆದಿತು. ಅವಳ ಹೃದಯದಲ್ಲಿ ತನ್ನ ಮೊರೆಯನ್ನು ಒಂದು ಪರಮ ಶಕ್ತಿಯು ಕೇಳುತ್ತಲಿದೆಯೆಂಬ ನಂಬಿಗೆಯು ಹುಟ್ಟಿತು.

ಕೆಲವು ಗಳಿಗೆಗಳು ಕಳೆದುವು; ಮುಚ್ಚಿದ್ದ ಗವಾಕ್ಷಗಳು ಬಿಚ್ಚಲ್ಪಟ್ಟವು. ಹೊರಗಿನಿಂದ ಬೆಳಕು ಹರಿದು ಬಂದು ಕೋಣೆಯೊಳಗೆ ಪಸರಿಸಿತು. ಬಂಧನಸ್ಥಳಾದ ವನಿತೆಯು ಶಿರವನ್ನೆತ್ತಿ ಬೆಳಕು ಬಂದ ಕಡೆಗೆ ನೋಡಿದಳು. ಗವಾಕ್ಷದ ಹತ್ತಿರ ಒಬ್ಬ ಹೆಂಗಸಿನ ಚಲುವೊಗವು ಹೊಳೆಯುತಿದ್ದುದನ್ನು ಅವಳು ನೋಡಿದಳು. ಚಲುವು ಮೋರೆಯದು! ಆಕೆಯ ವಿಶಾಲಲೋಚನಗಳಿಂದ ಕರುಣೆಯು ಉಕ್ಕಿ ಹರಿಯುತ್ತಿದ್ದಿತು.

ಬಂಧನಸ್ಥಳಾದ ವನಿತೆಯು ಎದ್ದು ಕುಳಿತು ಒಂದು ಅಚ್ಚರಿಯ ನೋಟವನ್ನು ಹೊರಗೆ ನಿಂತಿದ್ದ ತರುಣಿಯ ಕಡೆಗೆ ಬೀರಿದಳು. ಅವಳ ತುಟಿಗಳಿಂದ ಈ ಮಾತುಗಳು ಉದರಿದವು: "ಯಾರೆ ನೀನು?"

"ನಿನ್ನಂತೆ ಒಬ್ಬ ಹತಭಾಗಿನಿ!"

"ಅಂದರೆ?"

"ಶೋಕದ ಕಡಲಲ್ಲಿ ತೇಲುವ ಒಂದು ಹೆಣ್ಣು ಜೀವ. ನನ್ನದರಂತೆಯೆ

ನಿನ್ನದೂ ಒಂದು ನೊಂದ ಹೃದಯವೆಂಬುದನ್ನು ನಿನ್ನ ಬೆಳಗಿನ ಹಾಡಿನಿಂದ ಊಹಿಸಿದೆ.

"ಹಾಗಾದರೆ ನಿನ್ನೆ ಸಂಜೆಗೂ, ಈ ದಿನ ಮುಂಜಾನೆಯೂ ಹಾಡಿದಾಕೆಯು ನೀನೇ ಏನು?"

"ಅಹುದು."

"ನಿನ್ನ ಹೆಸರೇನು?" "ನಿರುಪಮಾ!"

"ಈ ಗೃಹಮೊಡತಿಯೇನು?"

"ಅಹುದು." ಎಂದು ತುಸ ಲಜ್ಜೆಯಿಂದ ಶಿರತಗ್ಗಿಸಿದಳು ನಿರುಪಮಾ.

"ಅಕ್ಕ, ನಿನ್ನ ಸಹಾಯವು ನನಗೆ ಬೇಕಾಗಿಲ್ಲ. ನೀನು ಬಂದುದೇಕೆಂಬುದು ನನಗೆ ತಿಳಿದಿತು; ಒಂದು ಭಯಂಕರ ವ್ಯಾಪಾರಕ್ಕೆ ನನ್ನನ್ನು ಒಡಂಬಡಿಸಲಿಕ್ಕಾಗಿದೆ! ಬೇಡ, ನಾನಿಲ್ಲಿ ಸಾಯುವೆ; ನಿಮ್ಮ ಕುಟಿಲತಂತ್ರಗಳಲ್ಲಿ ಪಾಲುಗಾರಳಾಗೆನು." ಹೀಗೆ ತಿರಸ್ಕಾರ ಪರಿಪೂರ್ಣ ಸ್ವರದಲ್ಲಿ ಒಳಗಿದ್ದಾಕೆ ಅಂದಳು ಅವಳ ಮೋರೆಯಿಂದ ಕೋಪವು ಸ್ಫುರಿಸಿತು.

"ಇಲ್ಲ ತಂಗೀ, ಸಿಟ್ಟಾಗಬೇಡ; ಆ ಕೆಲಸಕ್ಕೆ ನಿನ್ನನ್ನು ಒಡಂಬಡಿಸಲು ಬಂದವಳಲ್ಲ ನಾನು. ಈ ವಿಪತ್ತಿನಿಂದ ಪಾರಾಗಲು ನಿನಗೆ ಸಹಾಯ ಮಾಡಲು ಬಯಸುತ್ತಿರುವವಳು ನಾನು. ನೀನು ಸಂಕಟಗಳ ತೆಕ್ಕೆಯಲ್ಲಿ ಸಿಕ್ಕಿಬಿದ್ದುದನ್ನು ನೋಡಿ ಪರಿತಪಿಸುತ್ತಿದ್ದೇನೆ."

"ಯಾವ ಸಹಾಯವನ್ನು ಮಾಡುವೆ? ಈ ಬಂಧನದಿಂದ ನನ್ನನ್ನು ಮೋಚಿಸಬಲ್ಲೆಯಾ?" ಉತ್ಸುಕತೆಯಿಂದ ಬಂಧನವಾಸಿನಿಯು ನಿರುಪಮೆಯನ್ನು ಪ್ರಶ್ನಿಸಿದಳು.

"ಅದು ಶಕ್ಯವಾದುದಾಗಿದ್ದರೆ ಈ ಮೊದಲೇ ಮಾಡುತಿದ್ದೆ; ಓರ್ವ ಸೋದರಿಯನ್ನು ರಕ್ಷಿಸಿದ ಪುಣ್ಯವನ್ನು ಸಂಪಾದಿಸುತ್ತಿದ್ದೆ; ಆದರೆ ಆ ತ್ರಾಣವು ನನಗಿಲ್ಲ; ಆದರೂ ಈ ತುರಂಗದಲ್ಲಿ ನಿನ್ನ ಮಾನಕ್ಕೆ ಚ್ಯುತಿ ಬಾರದಂತೆ ನೋಡಿಕೊಳ್ಳಬಲ್ಲೆ. ನಿನಗೆ ಬಂದೊದಗಬಹುದಾದ ಕೇಡನ್ನು ನಿವಾರಿಸಬಲ್ಲೆ." ಹೀಗೆ ಹೊರಗೆ ನಿಂತಿದ್ದ ನಿರುಪಮೆಯು ಹೇಳಿದಳು.

ಅವಳ ಕನಿಕರದಿಂದ ತುಂಬಿದ ಮಾತುಗಳನ್ನು ಕೇಳಿ ಬಂಧನದಲ್ಲಿರುವಾಕೆಗೆ ಸ್ವಲ್ಪ ಆಶ್ವಾಸವಾಯಿತು. ದುಃಖದಲ್ಲಿದ್ದವರಿಗೆ ಸ್ವಲ್ಪ ಕನಿಕರವನ್ನು ತೋರಿಸತಕ್ಕವರು ಲಭಿಸಿದರೆ ಅವರ ಎದೆಯ ಭಾರವು ಕಡಿಮೆಯಾಗುತ್ತದೆ.

ಅದರಂತೆಯೇ ಆಯಿತು ಬಂಧನದಲ್ಲಿರುವಾಕೆಯ ಸ್ಥಿತಿಯು. ತನಗೆ ಮರುಕವನ್ನು ತೋರಿಸುತ್ತಿರುವವಳ ಸಂಗಡ ನಿಷ್ಠುರದ ಮಾತುಗಳನ್ನಾಡಿದ ಬಗ್ಗೆ ಆಕೆ ಪರಿತಪಿಸಿದಳು; ನಿರುಪಮೆಯೊಡನೆ ಕ್ಷಮೆಯನ್ನು ಬೇಡಿದಳು. "ಕ್ಷಮಿಸು, ನೀನು ನನಗೆ ಬೇಕಾದವಳೆಂಬುದನ್ನು ತಿಳಿಯದುದರಿಂದ ಹಾಗೆಮಾತಾಡಿದೆ."

"ಅದಿರಲಿ, ಹೇಮಾ, ನೀನು ಹೀಗೆ ಉಪವಾಸದಿಂದಿರುವದು ಸರಿಯಲ್ಲ.'

"ನನ್ನ ಹೆಸರನ್ನು ನೀನು ಹೇಗೆ ಅರಿತೆ?"

"ಹೇಮಾ, ನೀನು ಯಾರೆಂಬುದನ್ನು ಬಲ್ಲೆ. ನೀನು ಕುಮಾರ ಅಮರಸಿಂಹನ ಧರ್ಮಪತ್ನಿಯಿರುವೆ. ಸುಭೇದಾರ ಯಾಕೂಬಖಾನನ ದುರಾಗ್ರಹದ ಮೂಲಕ ನೀನು ಈ ಸಂಕಟಕ್ಕೆ ಒಳಗಾಗಬೇಕಾಯಿತು. ಈ ಅನಾಹುತಕ್ಕೆ ಗುರಿಯಾದುದರಿಂದ ನೀನು ಹತಾಶಳಾಗಿ ಆಹಾರವನ್ನು ತ್ಯಜಿಸುವದು ಸರಿಯಲ್ಲ. ಆಹಾರವಿಲ್ಲದೆ ಶರೀರವು ಬಲಗುಂದಿದರೆ ಮಾನವನ್ನು ಸಂರಕ್ಷಿಸಿಕೊಳ್ಳುವ ಕೆಲಸವು ಇನ್ನಷ್ಟು ಪ್ರಯಾಸದ್ದಾಗುವದು. ಆದುದರಿಂದ ನೀನು ಆಹಾರವನ್ನು ತೆಗೆದುಕೋ. ಗೂಡಿನಲ್ಲಿ ಸಿಕ್ಕಿಬಿದ್ದ ಹಕ್ಕಿಯ ಅವಸ್ಥೆಯಾಗಿದ್ದರೂ, ಇಲ್ಲಿಂದ ನೀನು ಪಾರಾಗಬಹುದು. ಸತ್ಯಪಥದಲ್ಲಿ ಸಂಚರಿಸತಕ್ಕ ಸಾಧ್ವಿಯನ್ನು ವಿಶ್ವನಿಯಾಮಕ ಚೈತನ್ಯವು ಸಂರಕ್ಷಿಸವೇ? ತಂಗೀ, ಬೇಸರಪಡಬೇಡ. ನಿನ್ನೆ ರಾತ್ರಿ ಆಹಾರವನ್ನು ತೆಗೆದುಕೊಂಡು ಬಂದ ಆ ವೃದ್ಧ ದಾಸಿಯ ಸಂಗಡ ಸಿಟ್ಟು ಮಾಡಿ ನೀನು ಅನ್ನದ ಪಾತ್ರೆಯನ್ನು ಒಡೆದು ಹಾಕಿಬಿಟ್ಟೆ ಎಂಬದನ್ನು ನಾನು ಅರಿತೆ."

"ಅಕ್ಕ, ಈ ಸೆರೆಯು ನನಗೆ ಈಗ ಜೀವನದಲ್ಲಿಯೇ ಜಿಗುಪ್ಸೆ ಹುಟ್ಟುವಂತೆ ಮಾಡಿದೆ. ನನಗೆ ಆಹಾರವು ಬೇಕಿಲ್ಲ." ಎಂದು ಹೇಳಿದಳು ಹೇಮಾ.

"ಇಲ್ಲ; ಹೇಮಾ, ಧೈರ್ಯವನ್ನು ತಾಳಿಕೋ. ದೇವರು ನಿನ್ನನ್ನು ಕಾಯುವನು." ಪ್ರೀತಿಯ ಸ್ವರದಲ್ಲಿ ನಿರುಪಮೆಯು ಹೇಳಿದಳು.

ನಿರುಪಮೆಯ ಅಪೇಕ್ಷೆಯನ್ನು ಹೇಮಾ ಸ್ವೀಕರಿಸದೆ ಬೇರೆ ನಿರ್ವಾಹವಿರಲಿಲ್ಲ. ತಾನು ಆಹಾರತ್ಯಾಗವನ್ನು ಮಾಡುವುದಿಲ್ಲವೆಂದು ಹೇಮಾ ಒಪ್ಪಿಕೊಂಡಳು. ನಿರುಪಮೆಯು ಹೇಮಳಿಗೆ ಪ್ರಾಪ್ತವಾದ ವಿಪತ್ತನ್ನು ಆಕೆಗೆ ಬೇಕಾದವರಿಗೆ ಅರುಹಿ, ಅವರಿಂದ ಸಹಾಯ ಲಭಿಸುವಂತೆ ಮಾಡುವೆನೆಂಬ ಭರವಸೆಯನ್ನಿತ್ತಳು ಇದರಿಂದ ಹೇಮಳ ದುಃಖದ ಹೊರೆಯು ಸ್ವಲ್ಪ ಮಟ್ಟಿಗೆ ಕಡಿಮೆಯಾಯಿತು.

ಕೊನೆಗೆ ನಿರುಪಮೆ ಹೇಳಿದಳು: "ಹೇಮಾ, ಈ ಅಮೂಲ್ಯಾಭರಣವು ನಿನ್ನ ಬಳಿಯಲ್ಲಿರುವುದೊಳ್ಳೆಯದು."

"ಏನದು?" ಹೇಮಳ ಉತ್ಸುಕತೆಯಿಂದ ತುಂಬಿದ ಸ್ವರವು ಹೊರಟಿತು.

"ಇಗೋ!" ನಿರುಪಮೆಯು ತನ್ನ ಮಡಲಿನಿಂದ ಒಂದು ಹೊಳೆವ ವಸ್ತುವನ್ನು ತೆಗೆದಳು. ಅದು ಹರಿತವಾದ ಒಂದು ಕಠಾರಿಯಾಗಿದ್ದಿತು. ಅದನ್ನು ಸ್ವೀಕರಿಸಲು ಹೇಮಳು ಗವಾಕ್ಷದ ಹೊರಗೆ ಕೈಚಾಚಿದಳು. ನಿರುಪಮೆಯು ಆ ಆಯುಧವನ್ನು ಹೇಮಳಿಗೆ ನೀಡಿದಳು. "ಹೇಮಾ, ಈ ಆಯುಧವು ನಿನ್ನ ಪಕ್ಕದಲ್ಲಿರಲಿ ಶೀಲವನ್ನು ಕಾಯಲು ಇದಕ್ಕಿಂತ ಉತ್ತಮವಾದುದು ಬೇರೊಂದಿಲ್ಲ. ರಕ್ಷಣೆಯನ್ನು ಹೊಂದಲು ಬೇರೆ ಉಪಾಯವಿಲ್ಲವೆ ನಿರಾಶೆಯನ್ನು ಪಡೆದಾಗ-ಮಹಿಳೆಯ ಅಮೂಲ್ಯಸಂಪತ್ತಾದ ಶೀಲವು ವಿಪತ್ತಿಗೆ ಸಿಲುಕಿದಾಗ ಇದನ್ನು ಉಪಯೋಗಿಸಿಯಾದರೂ ಶೀಲವನ್ನು ಕಾಯ್ದುಕೊಳ್ಳಲು ಸಾಧ್ಯನಾಗುತ್ತಿದೆ. ಅಂಥ ಸಂದರ್ಭದಲ್ಲಿ ಇವನ್ನು ಉಪಯೋಗಿಸಿ ದೇಹತ್ಯಾಗವನ್ನು ಮಾಡಬಹುದು."

ಹೇಮಾ ಮಾತಾಡಲಿಲ್ಲ. ನಿರುಪಮೆಯು ಕೊಟ್ಟ ಆಯುಧವನ್ನು ಅವಳು ಸ್ವೀಕರಿಸಿದಳು; ಹರಿತವಾದ ಆ ಕಠಾರಿಯ ಮೊನೆಯನ್ನು ನೋಡಿದಳು. ಹೇಮಾ ಮೌನದಿಂದಿರುವದನ್ನು ನೋಡಿ, ನಿರುಪಮೆಯು ತನ್ನ ನುಡಿಗಳನ್ನು ಮುಂದುವರಿಸಿದಳು:—"ಈಗ ಹೋಗುತ್ತೇನೆ ಹೇಮಾ; ಸಂಜೆಗೆ ಬಂದು ನಿನ್ನನ್ನು ಕಾಣುವೆನು"

"ಒಳ್ಳೆಯದು. ನಿನ್ನ ದರ್ಶನದಿಂದ ನನ್ನ ಎದೆಯ ಭಾರ ಕುಗ್ಗಿತು."

ನಿರುಪಮೆಯು ಹೊರಟು ಹೋದಳು; ಹೇಮಾ ಆಲೋಚನಾಮಗ್ನಳಾದಳು.

---

## ೯ ಬಡತನದ ಶೂಲಿ.

ಬಡತನವು ಹೆಚ್ಚಿತು. ಕ್ಷಾಮವು ಬಂದುದರಿಂದ ಪೈರುಗಳು ನಾಶವಾದವು. ದನಕರುಗಳಿಗೆ ಹುಲ್ಲು-ಮೇವುಗಳು ದೊರಕದಾದವು. ಜನರ ಹೊಟ್ಟೆಗಳನ್ನು ತುಂಬಲಿರುವ ಕಾಳು-ಕಡ್ಡಿಗಳು ಲಭಿಸದಾದವು. ತುತ್ತಿನ ಚೀಲಗಳು ಬರಿದಾದವು. ದಾರಿದ್ರ್ಯ ದೇವತೆಯು ತನ್ನ ಕರಾಳ ರೂಪವನ್ನು ಧರಿಸಿ ರಾಮ

ನಗರದ ನಿವಾಸಿಗಳ ಎದೆಗಳ ಮೇಲೆ ತನ್ನ ರೌದ್ರ ನಾಟ್ಯವನ್ನು ನಡೆಸಿದಳು.

ಕೂಳಿನಿಂದ ಜೀವವು ನೆಲೆಸಿಂತಿದೆ. ಅನ್ನದ ಬಲದಿಂದ ಮನುಷ್ಯನು ಬಾಳುತ್ತಿದ್ದಾನೆ. ಜಗನ್ಮಿಥ್ಯವೆಂದು ಉಸುರುತ್ತಿರುವ ವೇದಾಂತಿಯೂ ಸಹ ಅನ್ನವಿಲ್ಲದೆ ಬರೀ ವಾಯು ಸೇವನೆಯಿಂದ ಜೀವಿಸಲಾರ. ಅವನ ಯಂತ್ರವು ನಡೆಯಬೇಕಾದರೆ ಆಹಾರವು ಅತ್ಯಾವಶ್ಯಕ, ಅನಿವಾರ್ಯ. ಹೊಟ್ಟೆಗೆ ಹಿಟ್ಟು ಲಭಿಸದಿದ್ದರೆ ಜೀವನದ ನಾಟಕವು ನಡೆಯದು; ಆ ತೇರು ಮುಂದಕ್ಕೆ ಸಾಗದು. ಕೂಳಿನಿಂದ ಮನುಷ್ಯನು ಜೀವಿಸುತ್ತಿದ್ದಾನೆ. ದೇಶವು ಸುಖಸಂತೃಪ್ತಿಗಳಿಂದ ಇರಬೇಕಾದರೆ ಪ್ರಜೆಗಳ ಹಸಿವೆಯನ್ನು ಅಡಗಿಸಲು ಆಹಾರವಿರಬೇಕು; ತುತ್ತಿನ ಚೀಲಗಳು ತುಂಬಿರಬೇಕು. ಹಾಗಾದರೆ ಮಾತ್ರ ಆ ದೇಶದಲ್ಲಿ ಸುಖಸಂತೃಪ್ತಿಗಳು ನೆಲೆಸುವವು; ಅಲ್ಲಿ ಗೊಂದಲಗಳು ಆವಿರ್ಭವಿಸದೆ ಶಾಂತಿಯು ಹರಡುವದು.

ಆದರೆ ರಾಮನಗರ ಸಂಸ್ಥಾನವನ್ನು ಬರಗಾಲವು ಸ್ಪರ್ಶಿಸಲು ಪ್ರಜೆಗಳಿಗೆ ಅನ್ನವೆಂಬುದು ಒಂದು ಬಿಡಿಸಲಾಗದ ಮಹಾ ಸಮಸ್ಯೆಯಾಗಿ ಪರಿಣಮಿಸಿತು. ತಾವು ಬದುಕುವದು ಹೇಗೆ? ಹೆಂಡತಿ-ಮಕ್ಕಳನ್ನು ಸಲಹುವದು ಹೇಗೆ? ಈ ಚಿಂತೆಗಳು ಅವರಲ್ಲಿ ವ್ಯಾಪಿಸಿದವು. ದನಸ-ಧಾನ್ಯಗಳು ಅವರ ಪಕ್ಕದಲ್ಲಿರಲಿಲ್ಲ. ದನಕರುಗಳನ್ನು ವಿಕ್ರಯಿಸಿ ಧಾನ್ಯ ಪಡೆಯೋಣವೆಂದರೆ, ಅವನ್ನು ಕೊಂಡುಕೊಳ್ಳಲು ಜನರಿಲ್ಲದೆ ಹೋದರು. ಕ್ಷಾಮದ ಮೂಲಕ ಎಲ್ಲರೂ ದರಿದ್ರರಾಗಿ ಪರಿಣಮಿಸಿರಲು, ಜನರಲ್ಲಿ ದನಕರುಗಳನ್ನೂ ವಸ್ತ್ರ-ಒಡವೆಗಳನ್ನೂ ಕೊಂಡುಕೊಳ್ಳಲಿರುವ ತ್ರಾಣವು ಹೇಗೆ ಉಳಿಯುವದು? ಎಲ್ಲರೂ ವಸ್ತ್ರ-ಒಡವೆಗಳನ್ನು ಮಾರುವವರಾದರು; ಕೊಂಡುಕೊಳ್ಳುವವರು ಯಾರೂ ಇರಲಿಲ್ಲ. ಬೆಲೆ ಬಾಳುವ ಸಾಮಗ್ರಿಗಳನ್ನು ಜನರು ಒಪ್ಪತ್ತಿನ ಕೂಳಿಗಾಗಿ ಮಾರತೊಡಗಿದರು. ಪೇಟೆಯಲ್ಲಿ ಆಹಾರಸಾಮಗ್ರಿಗಳ ಬೆಲೆಯು ಹೆಚ್ಚ ಹತ್ತಿತು ವ್ಯಾಪಾರಗಾರರು ದುಡ್ಡನ್ನು ಸಂಪಾದಿಸಲು ಇದೇ ಒಳ್ಳೆಯ ಸಮಯವೆಂದು ಆಹಾರ-ಸಾಮಗ್ರಿಗಳ ಬೆಲೆಯನ್ನು ಮೊದಲಿಗಿಂತ ಹತ್ತರಷ್ಟು ಏರಿಸಿ ಮಾರತೊಡಗಿದರು; ಆದರೆ ಹೆಚ್ಚು ಬೆಲೆಯನ್ನು ಕೊಟ್ಟು ಕೊಂಡುಕೊಳ್ಳುವ ಚೈತನ್ಯವು ಜನರಲ್ಲಿರಲಿಲ್ಲ. ಅರೆಹೊಟ್ಟೆ, ಪೂರ್ಣ ಉಪವಾಸಗಳನ್ನು ಮಾಡಬೇಕಾಗಿ ಬಂದಿತು. ಒಂದು ತಿಂಗಳಿನಲ್ಲಿ ಮೂವತ್ತು ದಿನಗಳೂ ಅವರಿಗೆ ಏಕಾದಶಿಗಳಾದವು. ಹಲವರು ನಾಡನ್ನು ಬಿಟ್ಟು ದೂರ ದೇಶಗಳಿಗೆ ತೆರಳು

ಹೋದರು. ಇನ್ನು ಕೆಲವರು ಹಸಿವೆಯ ತಾಪವನ್ನು ಸಹಿಸಲಾರದೆ ಬಾವಿ, ಕೆರೆ ಇವುಗಳಲ್ಲಿ ನೆಗೆದು ಪ್ರಾಣ ಬಿಟ್ಟರು. ಇನ್ನು ಕೆಲವರು ಹೆತ್ತಮಕ್ಕಳಿಗೆ ತಿನ್ನಿಸಲು ಅನ್ನವಿಲ್ಲದುದರಿಂದ ಮಕ್ಕಳನ್ನು ನಡುದಾರಿಯಲ್ಲೇ ಬಿಟ್ಟು ಆ ಪುಣ್ಯವನ್ನು ಆರ್ಜಿಸಿದರು. ಆಹಾರ ಸಾಮಗ್ರಿಗಳು ದೊರಕದಾಗಲು ಜನರು ದನಕರುಗಳಂತೆ ಹುಲ್ಲು-ಎಲೆಗಳನ್ನು ತಿಂದು ತಮ್ಮ ತುತ್ತಿನ ಚೀಲಗಳನ್ನು ತುಂಬಿಕೊಳ್ಳಲು ಪ್ರಾರಂಭಿಸಿದರು. ಹಲವರು ಮೃತ್ತಿಕೆಯನ್ನು ಆಹಾರ ಸಾಧನವಾಗಿ ಉಪಯೋಗಿಸಲು ಸಾಧ್ಯವಿದೆಯೇ? ಎಂಬುದಕ್ಕಾಗಿ ಅದನ್ನು ತಿಂದು ನೋಡಿ ಸಂಶೋಧನೆಗಳನ್ನು ನಡೆಸಿದರು.

ಜನರು ಹೀಗೆ ಬರಗಾಲದ ಪೀಡನೆಗೆ ಬಲಿಯಾಗಿ ವಿವಿಧ ಕ್ಲೇಶಗಳನ್ನು ಅನುಭವಿಸುತ್ತಿದ್ದರೂ, ಆಳುವವರು ತಮ್ಮ ಕಣ್ಣುಗಳನ್ನು ತೆರೆಯಲಿಲ್ಲ. ತಾವು ಆಳತಕ್ಕ ಪ್ರಜೆಗಳನ್ನು ಈ ವಿಪತ್ತಿನಿಂದ ಸಂರಕ್ಷಿಸುವದು ತಮ್ಮ ಕರ್ತವ್ಯವಾಗಿವೆಯೆಂಬುದು ಅವರಿಗೆ ಹೊಳೆಯಲಿಲ್ಲ. ಅಧಿಕಾರಿಗಳು ಉನ್ಮತ್ತರಾಗಿದ್ದರು; ಕಿವಿಗಳಿದ್ದ ಕೆಪ್ಪಂದಿರೂ ಕಣ್ಣುಗಳಿದ್ದ ಕುರುಡರೂ ನಾಲಿಗೆಗಳಿದ್ದ ಮೂಕರೂ ಅವರಾಗಿದ್ದರು. ಅವರು ತಮ್ಮ ಕರ್ತವ್ಯಗಳನ್ನು ಮರೆತುದಲ್ಲದೆ ವಿವಿಧ ಹಿಂಸೆಗಳಿಂದ ಜನರನ್ನು ಗೋಳಾಡಿಸತೊಡಗಿದರು. ಕ್ಷಾಮದ ಮೂಲಕ ಜನರು ಬಡತನದಲ್ಲಿ ನರಳುವ ದುರಂತ ಚಿತ್ರಗಳು ಅವರ ಕಣ್ಣುಗಳ ಮುಂದೆ ನರ್ತಿಸುತ್ತಿದ್ದರೂ ಅಧಿಕಾರಿಗಳು ಕರವಸೂಲಿಯ ಕೆಲಸಕ್ಕೆ ಕೈ ಹಚ್ಚಿದರು. ಜನರ ಸಂಪತ್ತು ಅಡಗಿದೆ; ಕೂಳಿಲ್ಲದೆ ನರಳುತ್ತಿದ್ದಾರೆ; ಅವರ ಸಂಕಟಗಳನ್ನು ನಿವಾರಿಸಲು ತಮ್ಮಿಂದಾಗದಿದ್ದರೆ ಹೋಗಲಿ, ಜನತೆಯನ್ನು ಹಿಂಸಿಸದೆ ಇರಬಹುದಾಗಿತ್ತು ಈ ಅಧಿಕಾರಿಗಳು; ಆದರೆ ಅವರು ಹಾಗೂ ಮಾಡಲಿಲ್ಲ. ತಮ್ಮ ಬೊಕ್ಕಸಗಳನ್ನು ತುಂಬಿಸಲು ಅಮಾನುಷಿಕ ಕೃತ್ಯಗಳನ್ನು ಜರುಗಿಸಲೂ ಅವರು ಹಿಂಜರಿಯಲಿಲ್ಲ. ಅವರು ತಮ್ಮ ಮೇಲೆ ಜನರಿಗೆ ಇದ್ದ ಅಲ್ಪಸ್ವಲ್ಪ ಪ್ರೀತಿ ವಿಶ್ವಾಸಗಳನ್ನು ಈ ಕಠೋರ ಕೃತ್ಯಗಳಿಂದ ಕಳೆದುಕೊಂಡರು. ಅವರು ತಮ್ಮನ್ನು ಹುಗಿಯಲಿರುವ ತಗ್ಗುಗಳನ್ನು ತಾವೇ ತೋಡುತ್ತಿರುವೆವೆಂಬುದನ್ನು ತಿಳಿದುಕೊಳ್ಳಲಿಲ್ಲ.

ರಾಮನಗರದ ಸುಭೇದಾರನ ಆಜ್ಞೆಯು ಅತ್ಯಂತ ಕ್ರೂರವೂ ಅಮಾನುಷಿಕವೂ ಆಗಿತ್ತು. "ಪ್ರಜೆಗಳ ಹೆಂಡಿರು-ಮಕ್ಕಳನ್ನು ಮಾರಿಯಾದರೂ ಕರವಸೂಲಿ ಮಾಡಬೇಕು." ಎಂಬ ಆಜ್ಞೆಯನ್ನು ಅವನು ಹೊರಡಿಸಿದ.

ಕರವಸೂಲಿಯ ಬಗ್ಗೆ ಯಾವ ಅಕ್ರಮ, ಅನ್ಯಾಯಗಳನ್ನು ಜರುಗಿಸಿದರೂ ಅವುಗಳು ಅಪರಾಧವಾಗಲಿಕ್ಕಿಲ್ಲ, ಎಂಬ ಭರವಸೆಯನ್ನು ಆತ ತನ್ನ ಕೈಕೆಳಗಿನ ಅಧಿಕಾರಿಗಳಿಗೆ ಕೊಟ್ಟ. ಸುಭೇದಾರನ ಈ ಪ್ರೋತ್ಸಾಹನವು ವಿಚಾರಿಸಲು ಅಶಕ್ಯವಾದ ಕ್ರೂರ ಕೃತ್ಯಗಳಿಗೆ ಕೈ ಹಾಕಲು ಅಧಿಕಾರಿಗಳನ್ನು ಪ್ರೇರಿಸಿತು. ತಮ್ಮ ವರ್ತನೆಗಳಿಂದ ತಾವು ನರಜೀವಿಗಳಲ್ಲವೆಂದೂ ರಾಕ್ಷಸರಾಗಿರುವೆವೆಂದೂ ಅವರು ಲೋಕಕ್ಕೆ ತೋರಿಸಿದರು. ಬಹು ಮಂದಿ ಹೆಣ್ಣುಮಕ್ಕಳನ್ನು ಸೆಳೆದು ತಂದು ಅವರನ್ನು ದೂರ ದೇಶಗಳಿಗೆ ಒಯ್ದು ವಿಕ್ರಯಿಸಿದರು. ಎಷ್ಟೋ ಜನರ ಕಣ್ಣೀರಿನ ಶಾಪಗಳನ್ನು ಸಂಪಾದಿಸಿಕೊಂಡರು. ಅವರ ಅಕ್ರಮಗಳಿಗೆ ಮೇರೆಯಿರಲಿಲ್ಲ. ಅವರ ಅನೀತಿಗಳಿಗೆ ಲೆಕ್ಕವಿಲ್ಲ. ಅವುಗಳನ್ನೆಲ್ಲಾ ವಿವರಿಸುತ್ತಾ ಹೋದರೆ ಅದೊಂದು ದೊಡ್ಡ ಮಹಾಭಾರತವೇ ಆಗಬಹುದು.

ಕ್ಷಾಮದಿಂದ, ಅಧಿಕಾರಿಗಳ ಹಿಂಸೆಗಳಿಂದ ಜನರೂ ನೊಂದರು, ಬೆಂದರು; ಬಡತನದ ಕಡಲಿನಲ್ಲಿ ಮುಳುಗಿ ವಿವಿಧ ಸಂಕಟಗಳನ್ನು ಅನುಭವಿಸಿದರು. ಅಧಿಕಾರಿಗಳ ದಯಾಶೂನ್ಯ ವರ್ತನೆಗಳು ಜನರಿಗೆ ಆಳುವವರಲ್ಲಿದ್ದ ವಿಶ್ವಾಸವು ಅಳಿಯುವಂತೆ ಮಾಡಿದವು. ಬಡತನದಲ್ಲಿ ಬೇಯುತಿದ್ದ ಜನರಾದರೂ ತಮ್ಮ ಹೊಟ್ಟೆಗಳನ್ನು ತುಂಬುವದಕ್ಕಾಗಿ ಕೆಲವು ದುಷ್ಕೃತ್ಯಗಳನ್ನು ಜರುಗಿಸದಿರಲಿಲ್ಲ. ಹಸಿವೆಯ ಶೂಲಿ ಹೆಚ್ಚಾಗಲು, ಜನರ ಯುಕ್ತಾಯುಕ್ತ ವಿವೇಚನೆಯ ಶಕ್ತಿಯು ಲೋಪವಾಗತೊಡಗಿತು. ತಮ್ಮ ಸಂಕಟಗಳು ಹೆಚ್ಚಲು ಅವರು ನ್ಯಾಯದ ಪರಿಧಿಯನ್ನು ಪರಿತ್ಯಜಿಸಿ ನಡೆಯತೊಡಗಿದರು. ಹಣವಿದ್ದವರನ್ನು ಜನರು ಸುಲಿಗೆ ಮಾಡತೊಡಗಿದರು. ಹಲವೆಡೆಗಳಲ್ಲಿ ಶಾಸಕರ ದವಸದ ಕಣಜಗಳನ್ನು ಲೂಟಿ ಮಾಡಿದರು. ಪುಂಡತನಗಳೂ ಕಳತನಗಳೂ ದೇಶದಲ್ಲಿ ಹೆಚ್ಚಿದವು.

ಈ ಅರಾಜಕತೆಗೂ, ಈ ಬಂಡುಗಳಿಗೂ ಕಾರಣಭೂತವಾದುದು ಬರಗಾಲದ ಮೂಲಕ ಜನರು ಅನುಭವಿಸಬೇಕಾಗಿ ಬಂದ ದಾರಿದ್ರ್ಯವಾಗಿದ್ದಿತು. ಒಂದು ವೇಳೆ ಅಧಿಕಾರಿಗಳು ಜನರಲ್ಲಿ ಸಹಾನುಭೂತಿಯನ್ನು ಪ್ರದರ್ಶಿಸಿ, ಅವರನ್ನು ಸಂರಕ್ಷಿಸುವ ಕೆಲಸಕ್ಕೆ ಕೈ ಹಾಕಿದ್ದರೆ, ಈ ಅರಾಜಕತೆಯೂ ಬಂಡುಗಳೂ ಉದ್ಭವಿಸುತ್ತಿರಲಿಲ್ಲ. ಹಸಿವೆಯ ಶೂಲಿಯು ಹೆಚ್ಚಾಗಲು ಜನರಲ್ಲಿ ವಿವೇಚನಾಶಕ್ತಿಯು ಉಳಿಯಲಿಲ್ಲ. ತಮ್ಮ ತುತ್ತಿನ ಚೀಲಗಳನ್ನು ತುಂಬಲು ಅವರು ಅನೀತಿಯ ಕೆಲಸಗಳಿಗೆ ಕೈ ಹಾಕಿದರು.

ಈ ಕ್ಷಾಮಕಾಲವು ಕ್ಲೇಶದಾಯಕವೂ ಪ್ರಾಣಹಾನಿಕಾರಕವೂ ಆಗಿದ್ದರೂ, ರಾಮನಗರದ ನಿವಾಸಿಗಳಿಗೆ ಇದು ಉಪಕಾರವೊಂದನ್ನು ಮಾಡದಿರಲಿಲ್ಲ. ಕ್ಷಾಮಕಾಲವು ಅಧಿಕಾರಿಗಳು ಹೇಗೆ ಜವಾಬುದಾರಿಯಿಲ್ಲದ ಸ್ವೇಚ್ಛಾವರ್ತಿಗಳಾಗಿರುತ್ತಾರೆಂಬ ನಗ್ನಸತ್ಯವು ಜನರಿಗೆ ಮನನವಾಗುವಂತೆ ಮಾಡಿತು. ಜನರು ತಮ್ಮ ಸಂಕಟಗಳು ಪರಿಹಾರವಾಗಬೇಕಾದರೆ ತಮ್ಮ ಬೇಡಿಕೆಗಳಿಗೆ ಕಿವಿಗೊಡತಕ್ಕ ಒಂದು ಪ್ರಭುತ್ವವಿರಬೇಕಾಗುವದೆಂಬದನ್ನು ತಿಳಿದುಕೊಂಡರು. 'ಸ್ವಾಧೀನಜೀವನ'ವೇ ಸಕಲ ಬೇನೆಗಳಿಗೂ ಮದ್ದು, ಎಂಬ ಸತ್ಯವು ಅವರಿಗೆ ಹೊಳೆದಿತು. ಈ ಸಂಕಟಗಳು ನಿವಾರಣೆಯಾಗಬೇಕಾದರೆ ಜನತೆಯ ಕ್ಷೇಮದ ಕಡೆಗೆ ದೃಷ್ಟಿಯನ್ನು ಮಡುಗುವ ಒಂದು ಪ್ರಭುತ್ವವು ಅವಶ್ಯಕವಾಗಿದೆಯೆಂದು ಬುದ್ಧಿಶಾಲಿಗಳು ಚಿಂತಿಸತೊಡಗಿದರು. ಧರ್ಮವನ್ನೂ ನ್ಯಾಯವನ್ನೂ ಪರಿತ್ಯಜಿಸಿ, ದಬ್ಬಾಳಿಕೆಯಿಂದ ಕುರುಡಾದ ಅಧಿಕಾರಿ ವೃಂದವು ಜನತೆಯನ್ನು ಕ್ಷಾಮದ ಕಾಳ್ಗಿಚ್ಚಿನಿಂದ ರಕ್ಷಿಸಲು ಪರ್ಯಾಪ್ತವಾಗದೆಂಬದು ವಿವೇಕಶಾಲಿಗಳಿಗೆ ಹೊಳೆಯದಿರಲಿಲ್ಲ. ಸ್ವಾಧೀನತೆಯನ್ನು ಸಂಪಾದಿಸಲಿರುವ ದಾರಿಗಳು ಯಾವವು? ಎಂದು ಅವರು ಆಲೋಚಿಸತೊಡಗಿದರು. ಬಡತನವು, ಸಹನಾತೀತವಾದ ಈ ದಾರಿದ್ರ್ಯವು ಪಠಾಣರ ಅಕ್ರಮದಾಳ್ವಿಕೆಯನ್ನು ಎದುರಿಸುವ ಮನೋಭಾವವು ಜನತೆಯಲ್ಲಿ ಮೂಡುವಂತೆ ಮಾಡಿತು.

ಪಠಾಣರ ಆಳ್ವಿಕೆಯಿಂದ ಅಸಂತುಷ್ಟರಾದ ವಿದ್ರೋಹಿಗಳಿಗೆ ಈ ಬರಗಾಲವು ಸಹಾಯ ಮಾಡಿತೆಂವೇ ಹೇಳಬಹುದು. ಜನರು ಬಡತನದ ಕೊನೆಯ ಮೆಟ್ಟಿಲಿಗಿಳಿದಿರಲು ನಿವಾರಣಾತೀತವಾದ ಈ ಅನರ್ಥಗಳಿಂದ ಪಾರಾಗುವ ದಾರಿ ಹೊಳೆಯದಿರಲು, ಕ್ರಾಂತಿಯೇ ಮೋಚನೆಗಿರುವ ದಾರಿಯೆಂಬ ವಿದ್ರೋಹಿಗಳ ವಚನವು ಜನರಿಗೆ ರುಚಿಸಿದುದರಲ್ಲಿ ಆಶ್ಚರ್ಯವಿಲ್ಲ. ಜೀವನ ನಿರ್ವಹಣಕ್ಕೆ ಆವಶ್ಯಕವೆನಿಸಿದ ಸಂಪತ್ತು ಅವರ ಬಳಿಯಲ್ಲಿದ್ದಿದ್ದರೆ ವಿದ್ರೋಹವನ್ನೆಬ್ಬಿಸಲು ಜನರು ಸ್ವಲ್ಪ ಹಿಂದುಮುಂದೆ ನೋಡುತ್ತಿದ್ದರು; ಆದರೆ ಈಗ ಸಂಪತ್ತಿಲ್ಲ; ಉಪವಾಸದಿಂದ ಸಾಯಬೇಕಾಗುವ ಪ್ರಸಂಗವು ಬಂದೊದಗಿತ್ತು. ಬಡತನದ ಅಗ್ನಿಕುಂಡದಲ್ಲಿ ಜನರು ನರಳುತ್ತಿದ್ದರು. ಈ ಸಂದರ್ಭದಲ್ಲಿ ಈ ವಿಪತ್ತಿನಿಂದ ಪಾರಾಗಲು ವಿದ್ರೋಹವಲ್ಲದೆ ಬೇರೆ ಯಾವ ಮಾರ್ಗವೂ ಇರಲಿಲ್ಲ. ಹೇಗಿದ್ದರೂ ಸಾಯಬೇಕಾಗಿದೆ, ಹಸಿವೆಯಿಂದ ನರಳಿ ಸಾಯುವದರ ಬದಲು ಪ್ರಭುತ್ವದವರೊಡನೆ ಕಾದಾಡಿ ಏಕೆ ಮಡಿಯ ಬಾರದೆಂಬ ವಿಚಾರವು ಜನರಲ್ಲಿ

ಹೊಳೆಯಲಾರಂಭಿಸಿತು. ವಿಚಾರಶಾಲಿಗಳು ನಾಯಿಗಳಂತೆ ಮಡಿಯುವುದರ ಬದಲು ಹುಲಿಗಳಂತೆ ಕಾದಾಡಿ ಮಡಿಯುವದು ಲೇಸೆಂದು ನುಡಿಯಲಾರಂಭಿಸಿದರು. ಈ ವಿಚಾರ ಸರಣಿಯು ಆಳ್ವಿಕೆಯನ್ನು ಎದುರಿಸಲು ಜನರಿಗೆ ಉತ್ತೇಜನವನ್ನು ಕೊಟ್ಟಿತು, ವಿದ್ರೋಹಿಗಳ ಸಂಖ್ಯೆಯು ಹೆಚ್ಚಿತು. ಸಂದರ್ಭ ದೊರೆತಾಗಲೆಲ್ಲ ಜನರು ಅಧಿಕಾರಿಗಳ ಸಂಗಡ ಕಾದಾಟಗಳನ್ನು ಜರುಗಿಸಲಾರಂಭಿಸಿದರು. ದೇಶದ ಶಾಂತತೆಯು ನಸಿಸಿ, ವಾತಾವರಣವು ಬಂಡಾಯಗಳಿಂದ ಕಲುಷಿತವಾಗಲಾರಂಭಿಸಿತು.

ಅಧಿಕಾರಿಗಳು ವಿವೇಕಶಾಲಿಗಳಾಗಿದ್ದಿದ್ದರೆ ಈ ಅನರ್ಥಗಳು ಬಂದೊದಗುತ್ತಿರಲಿಲ್ಲ. ಜನತೆಗೆ ಬಂದೊದಗಿದ ವಿಪತ್ತುಗಳನ್ನು ಪರಿಹರಿಸಲು ಅವರು ಉದ್ಯಮಿಸಿದ್ದಿದ್ದರೆ ನಾಡಿನಲ್ಲಿ ಗಲಭೆಗಳು ಆವಿರ್ಭವಿಸುತ್ತಿರಲಿಲ್ಲ; ಆದರೆ ದಬ್ಬಾಳಿಕೆಯಿಂದ ಉನ್ಮತ್ತರಾದ ಅಧಿಕಾರಿಗಳಿಗೆ ಕಣ್ಣು ಕಾಣಲಿಲ್ಲ. ಜನರ ನೆತ್ತರನ್ನು ಹೀರಿ, ಸುಲಿಗೆಗಳನ್ನು ನಡೆಸಿ, ರಾಜಭಂಡಾರಗಳನ್ನು ತುಂಬಿಸುವುದರಲ್ಲಿ ಅವರು ಉದ್ಯುಕ್ತರಾದರು. ಅವರು ಅನ್ನವಿಲ್ಲದೆ ಸಾಯುತ್ತಿದ್ದ ಪ್ರಜೆಗಳಿಗೆ ಮರುಕ ತೋರಿಸಲಿಲ್ಲ. ಅಧಿಕಾರಿಗಳ ಈ ದುಷ್ಪ್ರವೃತ್ತಿಯು ನಾಡಿನಲ್ಲಿ ವಿದ್ರೋಹದ ಭೀಷಣಾನಲವನ್ನು ಪ್ರಜ್ವಲಿಸುವಂತೆ ಮಾಡಿತು.

ಈ ದಾರುಣ ಪ್ರಸಂಗವು ಬಂದೊದಗಿದುದನ್ನು ಕಂಡು, ಮರುಗುವ ಅಧಿಕಾರಿಗಳು ಒಬ್ಬಿಬ್ಬರು ಇಲ್ಲದಿರಲಿಲ್ಲ. ಅವರಲ್ಲಿ ಒಬ್ಬನು ಮಣಿನಗರದ ಸರದಾರನಾದ ಉಸ್ಮಾನಖಾನನಾಗಿದ್ದನು. ಪ್ರಜೆಗಳ ಕ್ಷೇಮಚಿಂತನೆಯೇ ತನ್ನ ಧರ್ಮವೆಂದು ವಿಚಾರಿಸಿ ಅದರಂತೆ ಅವನು ಉದ್ಯಮಿಸುತ್ತಿದ್ದ. ಅವನು ಪ್ರಜಾವತ್ಸಲನಾಗಿದ್ದ ಮಾತ್ರದಿಂದ ಮಣಿನಗರಕ್ಕೆ ಯಾವ ಹೆಚ್ಚಿನ ಪ್ರಯೋಜನವು ಲಭಿಸಲಿಲ್ಲ. ಸುಭೇದಾರ ಯಾಕೂಬಖಾನನು ಕರವಸೂಲಿಯ ಬಗ್ಗೆ ಅಧಿಕಾರಿಗಳು ಯಾವ ಅತ್ಯಾಚಾರಗಳನ್ನು ಜರುಗಿಸಿದರೂ ಅದು ಒಂದು ಅಪರಾಧವೆಂದು ಪ್ರಭುತ್ವದವರು ಗಮನಿಸುವದಿಲ್ಲವೆಂದು ಉಸ್ಮಾನನಿಗೆ ತಿಳಿಸಿದ ಸಂಗತಿಯು ಓದುಗರ ನೆನಪಿನಲ್ಲಿರಬಹುದು. ಈ ರೀತಿಯ ಒಂದು ಆಜ್ಞೆಯನ್ನು ಸುಭೇದಾರನು ಹೊರಡಿಸಲು ಅವನ ಅಧೀನದಲ್ಲಿಯ ಒಬ್ಬ ಅಧಿಕಾರಿಯಾದ ಉಸ್ಮಾನನು ಪ್ರಜೆಗಳ ಹಿತವನ್ನು ಹಾರೈಸಿದರೂ, ಅವನು ತನ್ನ ಬಯಕೆಗೆ ಕಾರ್ಯರೂಪವನ್ನು ಕೊಡಲು ಹೇಗೆ ಶಕ್ತನಾಗುವನು? ಸುಭೇದಾರನ ನುಡಿಗಳನ್ನು ಮೀರಿ ನಡೆಯುವ ಧೈರ್ಯವು ಅವನಿಗಿರಲಿಲ್ಲ. ಅದ

ರಂತೆಯೇ ಅವನು ಜನರ ಮೇಲೆ ದಬ್ಬಾಳಿಕೆ ನಡೆಸಿ ತನ್ನ ಕರಗಳನ್ನು ಮಲಿನ ಪಡಿಸಿಕೊಳ್ಳಲು ಇಚ್ಛಿಸಲಿಲ್ಲ.

ನಿಜವನ್ನು ಹೇಳುವದಾದರೆ, ಈ ಪರಿಸ್ಥಿತಿಯು ಉಸ್ಮಾನನಿಗೆ ಬಂದೊದಗಿದ ಒಂದು ಧರ್ಮಸಂಕಟವಾಗಿದ್ದಿತು. ಅವನು ಈ ಬಿಕ್ಕಟ್ಟಿನಲ್ಲಿ ಹೇಗೆ ವರ್ತಿಸಬೇಕೆಂಬುವನ್ನು ತಿಳಿಯದೆ ಬಹು ತೊಂದರೆಗಳಿಗೆ ಒಳಗಾದನು. ಅವನು ಅಧಿಕಾರಿಯಹುದು; ಆದರೆ ಇತರ ಅಧಿಕಾರಿಗಳಂತೆ ಅವನು ತನ್ನ ಹೃದಯವನ್ನು ಕಳೆದುಕೊಂಡಿರಲಿಲ್ಲ. ಕ್ಷಾಮಕಾಲದಲ್ಲಿ ಜನತೆಯು ಕೂಳಿಲ್ಲದೆ ಹೇಗೆ ನರಳುತ್ತಿದೆಯೆಂಬುದನ್ನು ಅತನು ಚೆನ್ನಾಗರಿತಿದ್ದನು. ಕರವಸೂಲಿಗೆಂದು ಅವರ ಮೇಲೆ ಅಮಾನುಷಿಕ ಅತ್ಯಾಚಾರಗಳನ್ನು ಎಸಗಿ ಬಡಜನರ ನೆತ್ತರಿನಿಂದ ತನ್ನ ಕರಗಳನ್ನು ಮಲಿನಪಡಿಸಿಕೊಳ್ಳಲು ಅವನು ಬಯಸಲಿಲ್ಲ. ಅದರಂತೆಯೇ ಸ್ವಧರ್ಮೀಯರಾದ ಆಳರಸರ ಆಜ್ಞೆಗಳನ್ನು ಮೀರಿ ನಡೆಯಲು ಅವನಿಗೆ ಧೈರ್ಯವಿರಲಿಲ್ಲ. ರಾಜಭಕ್ತಿಯು ಅವನ ಅಂತರಂಗದಲ್ಲಿದ್ದಿತು. ಮುಸ್ಲೀಂ ಚಕ್ರಾಧಿಪತ್ಯಕ್ಕೆ ವಿರೋಧ ಮಾಡಕೂಡದೆಂದು ಅವನ ಧರ್ಮಾಭಿಮಾನವು ನುಡಿಯುತ್ತಿದ್ದಿತು; ಆದರೆ ಧರ್ಮಾಭಿಮಾನದಿಂದ ಕಣ್ಣು ಕುರುಡಾದ ತರುಣನು ಅವನಾಗಿರಲಿಲ್ಲ. ನಿರಪರಾಧಿ ಜನರ ಮರ್ದನೆಯನ್ನು ಅವನು ಹೇಸುತ್ತಿದ್ದನು

ಹೀಗೆ ಒಂದು ಗೊಂದಲಕ್ಕೆ ಕಟ್ಟು ಬಿದ್ದನು ಉಸ್ಮಾನ. ಏನು ಮಾಡಬೇಕೆಂಬುದು ಅವನ ಬುದ್ಧಿಗೆ ಹೊಳೆಯಲಿಲ್ಲ. ಬಹಳವಾಗಿ ಚಿಂತಿಸಿದ; ಮನಸ್ಸಿನಲ್ಲಿ ವಿಚಾರಗಳ ತುಮುಲ ಯುದ್ಧವು ಜರುಗಿತು ಯಾವದು ಉಚಿತ, ಯಾವ ದಾರಿಯನ್ನು ಅನುಸರಿಸಬೇಕೆಂದು ಅವನು ತರ್ಕಿಸಿದ; ಆದರೆ ಕತ್ತಲೆ. ಏನು ಮಾಡಬೇಕೆಂಬುದು ಅವನಿಗೆ ತಿಳಿಯಲಿಲ್ಲ.

ರೋಮನಗರದ ಸಂಸ್ಥಾನವಲ್ಲಿ ಉಸ್ಮಾನನಿಗೆ ಯೋಗ್ಯ ಸಲಹೆಯನ್ನು ನೀಡತಕ್ಕ, ಈ ಬಿಕ್ಕಟ್ಟಿನಲ್ಲಿ ಸರಿಯಾದ ದಾರಿಯನ್ನು ತೋರಿಸತಕ್ಕ ಒಬ್ಬ ಮಾನ್ಯನಿದ್ದನು. ಆತನೇ ಇಸ್ಲಾಂ ಧರ್ಮದ ತತ್ವಗಳನ್ನು ಮನನ ಮಾಡಿ ಆಚರಣೆಗೆ ತಂದ ಫಕೀರ ಮಹಮ್ಮದ ಹುಸ್ಸೇನನು. ತನ್ನನ್ನು ಈ ಸಂಕಟದಿಂದ ಪಾರು ಮಾಡಲು ಫಕೀರ ಹುಸ್ಸೇನನಲ್ಲದೆ ಇನ್ನಾರೂ ಶಕ್ತರಲ್ಲವೆಂದು ಉಸ್ಮಾನನು ತಿಳಿದಿದ್ದನು. ಆದುದರಿಂದ ಫಕೀರನಿದ್ದಲ್ಲಿಗೆ ಹೋಗಲು ಉಸ್ಮಾನನು ನಿಶ್ಚಯಿಸಿದನು. ಉಸ್ಮಾನನ ತಂದೆಯ ಅಭಿಮತವೂ ಅದೇ ಆಗಿದ್ದಿತು.

ಫಕೀರನ ಉಪದೇಶದಂತೆ ವರ್ತಿಸುವದು ಹಿತವೆಂದು ಆ ಮುದುಕನು ತಿಳಿದಿದ್ದನು. ತಂದೆಯ ಉಪದೇಶದಂತೆ ಉಸ್ಮಾನನು ಫಕೀರನನ್ನು ಕಾಣುವ ದಕ್ಕಾಗಿ ರಾಮನಗರಕ್ಕೆ ತೆರಳಿದ.

ಫಕೀರನು ಉಸ್ಮಾನನ್ನು ಬಹು ಆದರದಿಂದ ಬರಮಾಡಿಕೊಂಡನು. ಫಕೀರನ ಚರಣಗಳ ಬಳಿಯಲ್ಲಿ ಮಂಡಿಯೂರಿ ಆತನಿಗೆ ಉಸ್ಮಾನನು ತನ್ನ ಪ್ರಣಾಮಗಳನ್ನು ನಿವೇದಿಸಿದ. ಸ್ನೇಹದ ಬುಗ್ಗೆಯಂತಿದ್ದ ಫಕೀರನು ತನ್ನ ಚರಣತಲಗಳಲ್ಲಿ ಮಂಡಿಯೂರಿದ ಉಸ್ಮಾನನನ್ನು ಎತ್ತಿ ಹಿಡಿದ. ಆತನ ತುಟಿಗಳ ಮೇಲೆ ಒಂದು ಮಂದಸ್ಮಿತವೂ ಮೂಡಿತು. ಆತ ಉಸ್ಮಾನನನ್ನು ಹೀಗೆ ಪ್ರಶ್ನಿಸಿದ: "ಮಗೂ, ಈಗ ಈ ಮುದುಕನ ನೆನಪಾಯಿತೇ?"

"ಇಲ್ಲ ಸಾಹೇಬ! ನನಗೆ ಯಾವಾಗಲೂ ಬೆಳಕನ್ನು ತೋರಿಸುತ್ತಿರುವ ನಿಮ್ಮನ್ನು ಮರೆಯುವುದೇ? ಈಗಲೂ ನಿಮ್ಮ ಉಪದೇಶಗಳನ್ನು ಕಾಂಕ್ಷಿಸಿ ಇಲ್ಲಿಗೆ ಬಂದಿರುತ್ತೇನೆ. ನನಗೆ ಸರಿಯಾದ ಹಾದಿಯನ್ನು ತೋರಿಸಬೇಕು."

"ಮಗೂ, ನನ್ನಿಂದ ಯಾವ ಸಹಾಯವನ್ನು ಬಯಸುತ್ತಿರುವೆ?" ಒಂದು ಮಂದಸ್ಮಿತವು ಫಕೀರನ ತುಟಿಗಳ ಮೇಲೆ ಮೂಡಿತು.

"ಈ ಬಿಕ್ಕಟ್ಟಿನಿಂದ ಪಾರಾಗಲಿರುವ ದಾರಿಯನ್ನು ಕಾಣದೆ, ನಿಮ್ಮ ಸಲಹೆಯನ್ನು ಪಡೆಯುವುದಕ್ಕಾಗಿ ಇಲ್ಲಿಗೆ ಬಂದಿದ್ದೇನೆ."

"ಈಗ ನೀನು ಯಾವ ಗೊಂದಲದಲ್ಲಿ ಸಿಕ್ಕಿ ಬಿದ್ದಿರುವೆ?" ಯಾವ ಸಂಗತಿಯನ್ನೂ ತಾನು ಅರಿಯದವನಂತೆ ಫಕೀರನು ಉಸ್ಮಾನನ್ನು ಪ್ರಶ್ನಿಸಿದನು.

"ಸಾಹೇಬ! ಎಲ್ಲವನ್ನೂ ಬಲ್ಲ ತಾವು ಏಕೆ ಹೀಗೆ ನಟಿಸುವಿರಿ? ನನಗಾವರೋ ದಾರಿ ತೋಚುವುದಿಲ್ಲ. ಈ ಗೊಂದಲವು ನನ್ನ ಮನಃಶಾಂತಿಯನ್ನು ಅಪಹರಿಸಿದೆ. ಒಂದು ಧರ್ಮಸಂಕಟದಲ್ಲಿ ನಾನುಸಿಕ್ಕಿಬಿದ್ದಿರುತ್ತೇನೆ. ಕತ್ತಲೆಯಲ್ಲಿ ಅಲೆದಾಡುತ್ತಿರುವ ನನಗೆ ದಾರಿಯನ್ನು ತೋರಿಸಬೇಕು;" ದೈನ್ಯ ಸ್ವರದಲ್ಲಿ ಉಸ್ಮಾನನು ತನ್ನ ನುಡಿಗಳನ್ನು ಮುಂದುವರಿಸಿದನು: "ಇದುವರೆಗೆ ನೀವು ನನ್ನನ್ನು ಸಂಕಟಗಳಿಂದ ಹಿಡಿದು ಮೇಲಕ್ಕೆ ಎತ್ತಿದ್ದೀರಿ. ಅದರಂತೆಯೇ ಈ ಸಲ ಈ ಕುತ್ತಿನಿಂದ ಕಂದನನ್ನು ಪಾರು ಮಾಡಬೇಕೆಂದುಬೇಡುವೆ."

"ಮಗೂ, ಕಾತರಿಸಬೇಡ." ನಗುತ್ತಾ ಫಕೀರನು ಹೇಳಿದನು. "ನಿನ್ನ ಎದೆಯನ್ನು ಸುಡುತ್ತಿರವ ಚಿಂತೆಗಳೇನೆಂಬುದನ್ನು ನಾನು ಬಲ್ಲೆ."

"ಸಾಹೇಬ, ಸುತ್ತಲೂ ಕತ್ತಲೆ; ನನ್ನ ಆತ್ಮವು ಸಂಕೋಲೆಯಿಂದ ಬಿಗಿ

ಯಲ್ಪಟ್ಟಿದೆ. ಮಾಡಬೇಕಾದುದೇನು?" ಉಸ್ಮಾನನ ಎದೆಯಿಂದ ಒಂದು ಬಿಸಿಯುಸಿರು ಹೊರಟಿತು.

"ಕಂದಾ, ಸತ್ಯ ಮತ್ತು ನ್ಯಾಯಗಳನ್ನು ಅಲ್ಲಗಳೆಯಬೇಡ. ಮನುಷ್ಯ ಸ್ವಭಾವಕ್ಕೆ ಅನಯೋಜ್ಯವಲ್ಲದ ಕೆಲಸಗಳಲ್ಲಿ ಉದ್ಯುಕ್ತನಾಗದಿರು. ಹಾಗಾದರೆ ಯಾವ ಸಂಕಟವೂ ನಿನ್ನನ್ನು ಪೀಡಿಸದು. ಜಗತ್ತನ್ನು ನಿಯಂತ್ರಿಸತಕ್ಕ ಒಂದು ಶಕ್ತಿಯಿದೆ. ಅದು ನಿನ್ನನ್ನು ಕಾಯುವುದು."

"ಸಾಹೇಬ, ಇಸ್ಲಾಂ ಧರ್ಮದ ಅರಸನ ಕಟ್ಟಳೆಗಳನ್ನು ಅನುಸರಿಸುವುದು ನನ್ನ ಧರ್ಮವಲ್ಲವೇ?" ತನ್ನ ಕಣ್ಣುಗಳನ್ನು ಅಗಲಿಸಿ ಉಸ್ಮಾನನು ಪ್ರಶ್ನೆ ಹಾಕಿದನು.

ಫಕೀರನು ವಿಚಾರ ಮಗ್ನನಾದ. ಚಿಂತೆಯ ಗೆರೆಗಳು ಅವನ ವಿಶಾಲ ಲಲಾಟದ ಮೇಲೆ ಮೂಡಿದವು. ಮೋರೆಯನ್ನು ಒಂದು ಕಿರು ಮೋಡವು ಮುಸುಕಿತು. ಇವೆಲ್ಲಾ ಸ್ವಲ್ಪ ಸಮಯದ ವರೆಗೆ; ಅನಂತರ ಅವನ ಮೋರೆಯು ಪ್ರಕಾಶಮಾನವಾಯಿತು; ಕಣ್ಣುಗಳು ಮಿನುಗಿದವು. ಸೌಮ್ಯ ಸ್ವರದಲ್ಲಿ ಅವನು ಹೇಳಿದ: "ಅರಸನ ಕಟ್ಟಳೆಗಳನ್ನು ಅನುಸರಿಸ ಬೇಕಾದುದು ಅಗತ್ಯ; ಆದರೆ ಅರಸನ ಕಟ್ಟಳೆಗಳು ದೇವರ ಮುಂದೆ ಅಪರಾಧಗಳಾಗಿರಕೂಡದು. ಆಳುವವರ ಆಜ್ಞೆಗಳು ಸತ್ಯ-ನ್ಯಾಯಗಳಿಗೆ ವಿಪರೀತವಾಗಿವೆಯೋ? ಎಂದು ಆಲೋಚಿಸಿ ನೋಡತಕ್ಕದ್ದು. ಅರಸನ ಆಜ್ಞೆಗಳು ಸತ್ಯ ಮತ್ತು ನ್ಯಾಯಗಳಿಗೆ ವಿರೋಧವಾಗಿದ್ದರೆ, ಅವುಗಳನ್ನು ಅನುಸರಿಸುವುದು ದೇವರ ಮುಂದೆ ಮಹದಪರಾಧವಾಗಿ ಪರಿಣಮಿಸುತ್ತದೆ. ಅಂಥ ಸಂದರ್ಭಗಳು ಬಂದೊದಗಿದಾಗ ಅರಸನ ಆಜ್ಞೆಗಳನ್ನು ಅನುಸರಿಸದಿರುವುದೇ ಲೇಸು. ಅರಸನೆಂಬುವವನು ದೇವರಂತೆ ಸರ್ವಶಕ್ತನಲ್ಲ; ಅನಂತ ಜ್ಞಾನ ಸಂಪನ್ನನಲ್ಲ. ಅವನ ತಿಳುವಿಗೆ ಮಿತಿಯಿದೆ; ಅವನ ಶಕ್ತಿಗೆ ಒಂದು ಪರಿಧಿಯಿದೆ. ಅರಸನು ಒಬ್ಬ ನರಜೀವಿಯಿರುವದರಿಂದ ಮನುಷ್ಯನು ಮಾಡಬಹುದಾದ ತಪ್ಪನ್ನು ಮಾಡಿಯೇ ಮಾಡುತ್ತಾನೆ. ಅರಸನ ಆಜ್ಞೆಯು ಅನ್ಯಾಯವಾದುದು, ಅಧರ್ಮವಾದುದು ಎಂದು ನಮಗೆ ಹೊಳೆದರೆ ಅದನ್ನು ಎಂದಿಗೂ ಅನುಸರಿಸಕೂಡದು."

"ಸಾಹೇಬ, ಹಾಗಾದರೆ ಕರವಸೂಲಿಯ ಬಗ್ಗೆ ಸುಭೇದಾರನು ಹೊರಡಿಸಿದ ಆಜ್ಞೆಯನ್ನು ನಾನು ಅನುಸರಿಸಬೇಕಾಗಿಲ್ಲವೆಂದಾಗಿದೆಯೇ ತಮ್ಮ ಅಭಿಪ್ರಾಯವು?"

"ಕಂದಾ, ದೇವರು ನಮಗೆ ಆಲೋಚನಾ ಶಕ್ತಿಯನ್ನು ಕೊಟ್ಟಿರುತ್ತಾನೆ. ಪ್ರತಿಯೊಂದು ಕೆಲಸವನ್ನು ಮಾಡುವಾಗಲೂ ನಾವು ಆಳವಾಗಿ, ಗಾಢವಾಗಿ ಚಿಂತಿಸಬೇಕಾಗಿದೆ. ಚಿಂತಿಸದೆ ಮಾಡುವ ಕೆಲಸಗಳು ಹಲವು ಅನರ್ಥಗಳಿಗೆ ಕಾರಣಭೂತವಾಗುವದರಲ್ಲಿ ಸಂದೇಹವಿಲ್ಲ. ಸದ್ಯದಲ್ಲಿ ದೇಶದ ಅವಸ್ಥೆಯು ಹೇಗಿದೆಯೆಂಬುದನ್ನು ಆಲೋಚಿಸು. ಕರವಸೂಲಿಯು ಪ್ರಜೆಗಳಿಗೆ ಒಂದು ಭಾರವಾಗಬಾರದು; ಅದು ಅವರನ್ನು ಉಪವಾಸ ಬೀಳುವಂತೆ ಮಾಡ ಕೂಡದು."

"ಈಗ ಬರಗಾಲದ ಬೇಸಿಯಿಂದ ಜನರು ಹೊಟ್ಟೆಗೆ ಇಲ್ಲದೆ ನರಳುತ್ತಿದ್ದಾರೆ. ಕರ ಕೊಡಲು ಅವರಿಗೆ ಯಾವ ನಿವೃತ್ತಿಯೂ ಇರುವದಿಲ್ಲ. ಅವರ ಹೆಂಡಿರು-ಮಕ್ಕಳನ್ನು ಮಾರಿಯಾದರೂ ಕರವಸೂಲಿ ಮಾಡಬೇಕೆಂದು ಸುಬೇದಾರನು ಆಜ್ಞಾಪಿಸಿದ್ದಾನೆ ಈ ಅಮಾನುಷಿಕ ಕೃತ್ಯವನ್ನು ಜರುಗಿಸಲು ನನ್ನ ಮನಸ್ಸು ಹಿಂಜರಿಯುತ್ತದೆ.

"ಉಸ್ಮಾನ, ನಾವು ಮಾಡತಕ್ಕ ಕೆಲಸಗಳು ಮನುಷ್ಯೋಚಿತವಾಗಿರಬೇಕು. ಅಧರ್ಮ ಮತ್ತು ಅನ್ಯಾಯಗಳಿಂದ ಪರಿಪೂರ್ಣವಾದ ದಾರಿಯನ್ನು ಅವಲಂಬಿಸಿದರೆ ದೇವರು ನಮ್ಮನ್ನು ಕ್ಷಮಿಸಲಾರ. ಸಾಧಾರಣವಾಗಿ ನಮ್ಮ ಜನರು ಇಸ್ಲಾಂ ಧರ್ಮದವರಲ್ಲದ ವಿಧರ್ಮೀಯರನ್ನು ಹಿಂಸಿಸುವದು ಪಾಪಕರವಲ್ಲವೆಂದು ಬಗೆದಿದ್ದಾರೆ; ಇದು ಶುದ್ಧ ಅವಿವೇಕವಾಗಿದೆ. ನಮ್ಮಂತೆಯೇ ಅವರೂ ನರಜೀವಿಗಳಾಗಿರುತ್ತಾರೆಂಬುದನ್ನೂ ಅಲ್ಲಾನು ನಮ್ಮನ್ನು ಕಾಪಾಡುವಂತೆ ಅವರನ್ನೂ ಕಾಯುತ್ತಿದ್ದಾನೆಂಬುದನ್ನೂ ನಾವು ತಿಳಿದುಕೊಳ್ಳಬೇಕಾಗಿದೆ. ಅವರನ್ನು ಹಿಂಸಿಸುವದು ದೈವದ್ರೋಹವಾಗುತ್ತದೆ. ತನ್ನ ದಯಾಪೀಯೂಷವನ್ನು ಆ ಕರುಣಾಳು ಸರ್ವರ ಮೇಲೆಯೂ ವರ್ಷಿಸುತ್ತಿರುವಾಗ, ಎಲ್ಲರೂ ಅವನ ಪ್ರೇಮಕ್ಕೆ ಪಾತ್ರರಾಗಿರುವಾಗ ವಿಧರ್ಮೀಯರನ್ನು ಹಿಂಸಿಸುವದೆಂದರೆ, ಅದು ಜಗದೀಶ್ವರನಿಗೆ ನಾವು ಎರಡನ್ನು ಬಗೆದಂತಾಗುವದು. ಇದಕ್ಕಿಂತ ಮಿಗಿಲಾದ ಪಾಪಕೃತ್ಯವು ಬೇರೊಂದಿಲ್ಲ. ಆದುದರಿಂದ ನಾವು ಅನ್ಯಧರ್ಮೀಯರ ಮೇಲೆ ಪ್ರೇಮವನ್ನು ತೋರಿಸಬೇಕಲ್ಲದೆ ಅವರನ್ನು ಹಿಂಸಿಸಕೂಡದು. ಎರಡನೆಯದು ಅರಸನು ಪ್ರಜೆಗಳ ಹಿತಸಂರಕ್ಷಣೆಗಳಿಗಾಗಿ ಇದ್ದಾನೆಯೇ ಹೊರತು ಅರಸನಿಗೆ ಬೇಕಾಗಿಯಲ್ಲ ಪ್ರಜೆಗಳಿರುವದು ಆದುದರಿಂದ ಅರಸನಾದವನು ಪ್ರಜೆಗಳಿಗೆ ಹಾನಿಕರವಾದ ಯಾವ ಕೆಲಸವನ್ನೂ ಮಾಡ

ಕೂಡದು. ಪ್ರಜೆಗಳ ಮೇಲೆ ಅತ್ಯಾಚಾರಗಳನ್ನು ಜರುಗಿಸಲು ಅರಸನಾದವನಿಗೆ ಯಾವ ಅಧಿಕಾರವೂ ಇರುವದಿಲ್ಲ. ಪ್ರಜಾಹಿತಕ್ಕೆ ವಿಪರೀತವಾಗಿ ಅವನು ಯಾವುದಾದರೂ ಒಂದು ಕೃತ್ಯವನ್ನು ಜರುಗಿಸಿದರೆ ಅದು ಅವನು ಅರಸನಾಗಲು ಅಪಾತ್ರನೆಂಬುವದನ್ನು ಸೂಚಿಸುತ್ತದೆ. ಪ್ರಜೆಗಳ ಮೇಲೆ ಅಕ್ರಮಗಳನ್ನು ಜರುಗಿಸುತ್ತಿರುವ ಅರಸನ ಆಜ್ಞೆಗಳನ್ನು ಅನುಸರಿಸುವದು ನ್ಯಾಯವಿರುದ್ಧ ಕೆಲಸವಾಗಿರುತ್ತದೆ. ಅರಸನು ಇಸ್ಲಾಂ ಧರ್ಮಾವಲಂಬಿಯಾದ ಮಾತ್ರಕ್ಕೆ ಅವನು ಜರುಗಿಸುವ ಅಕೃತ್ಯಗಳ ಕಠೋರತೆಯು ಕಡಿಮೆಯಾಗುವದಿಲ್ಲ. ಈಶ್ವರನ ಮುಂದೆ ಅರಸನ ತಪ್ಪುಗಳು ಮನ್ನಿಸಲ್ಪಡುವದಿಲ್ಲ. ಆದುದರಿಂದ ಅನೀತಿಯಿಂದ ತುಂಬಿದ ಆಜ್ಞೆಗಳನ್ನು ಅನುಸರಿಸುವದೆಂದರೆ, ಅಧರ್ಮಕ್ಕೆ ಬೆಂಬಲವನ್ನು ಕೊಟ್ಟಂತಾಗುತ್ತದೆ. ನಾವು ಅಧರ್ಮಕ್ಕೆ ಬೆಂಬಲವಾಗಿ ನಿಲ್ಲಕೂಡದು. ಅನ್ಯಾಯದಿಂದ ದೂರ ನಿಲ್ಲಬೇಕು. ನಾನು ನಿನಗೆ ಹೇಳುವದಿಷ್ಟೆ, ಸುಭೇದಾರನ ಅನೀತಿಗಳನ್ನು ಹಿತೋಪದೇಶಗಳ ಮೂಲಕ ತಡೆಯಲು ನಿನಗೆ ಸಾಧ್ಯವಾಗದಿದ್ದರೆ, ನೀನು ಆ ಅಕ್ರಮದ ಕೆಲಸಗಳಿಂದ ದೂರ ನಿಲ್ಲು. ಆ ಹೀನ ಕೃತ್ಯಗಳಿಂದ ನಿನ್ನ ಕರಗಳನ್ನು ಮಲಿನಪಡಿಸಿಕೊಳ್ಳಬೇಡ."

"ಅರಸನ ಆಜ್ಞೆಗಳನ್ನು ಮನ್ನಿಸದಿರುವದು ರಾಜದ್ರೋಹವಾಗಿ ಪರಿಣಮಿಸುವದಿಲ್ಲವೇ?"

"ರಾಜದ್ರೋಹ! ಜನದ್ರೋಹವು ರಾಜದ್ರೋಹಕ್ಕಿಂತ ಭೀಷಣ ಪಾಪವಾಗಿದೆ. ಉಸ್ಮಾನ, ಜನರ ಇಂದಿನ ಅವಸ್ಥೆಯು ಹೇಗಿದೆಯೆಂದು ಒಮ್ಮೆ ವಿಚಾರಿಸು. ಬಡತನ, ಹೊಟ್ಟೆಗೆ ಅನ್ನವಿಲ್ಲದೆ ಇಲಿಗಳಂತೆ ಸಾಯುತ್ತಿದ್ದಾರೆ. ಅವರ ಗೋಳನ್ನು ಕೇಳತಕ್ಕವರಿಲ್ಲ; ಅವರ ದುಃಖಗಳನ್ನು ಶಮಿಸತಕ್ಕವರಿಲ್ಲ. ಮಾಡುವದೇನು? ಈ ವಿಪತ್ತನ್ನು ನಿವಾರಿಸಲೆತ್ನಿಸುವದು ಪುರುಷಧರ್ಮವಾಗಿದೆ. ಸಹಸ್ರಾರು ಮಂದಿ ಕೂಳಿಲ್ಲದೆ ನರಳುತ್ತಿರುವ ಈ ಸಂದರ್ಭದಲ್ಲಿ ಕರವಸೂಲಿಗೆಂದು ಅಕ್ರಮಗಳನ್ನು ಜರುಗಿಸುವದು ಒಂದು ಅಕ್ಷಮ್ಯ ಅಪರಾಧವೇ ಸರಿ. ಈಗ ಕರವಸೂಲಿಯ ಕೆಲಸದಿಂದ ವಿಮುಖನಾಗುವದು ರಾಜದ್ರೋಹವಲ್ಲ. ಅದು ನಿನ್ನ ಕರ್ತವ್ಯವಾಗಿರುತ್ತದೆ."

"ಸಾಹೇಬ, ನಿಮ್ಮ ಉಪದೇಶದಿಂದ ಈಗ ಕತ್ತಲಲ್ಲಿ ನನಗೆ ಒಂದು ದಾರಿಯು ಗೋಚರಿಸಿದಂತಾಯಿತು. ಸರದಾರ ಪದವಿಯನ್ನು ಉಪೇಕ್ಷಿಸಬೇಕೆಂದು ನೀವು ಹೇಳುತ್ತೀರಲ್ಲವೇ? ಅನಂತರ ನಾನು ಮಾಡಬೇಕಾದುದೇನು?"

"ಕಂದ, ನರಜೀವಿಗೆ ಒಂದು ಆತ್ಮವಿದೆ. ನಿನ್ನ ಆತ್ಮವು ಯಾವದು ಸರಿಯೆನುವುದೋ ಆ ಹಾದಿಯನ್ನು ಹಿಡಿಯುವದು ನಿನ್ನ ಕರ್ತವ್ಯ. ಇನ್ನೊಬ್ಬರನ್ನು ಮೆಚ್ಚಿಸಲು ಹೊರಡುವ ಮುನ್ನ ಆ ಕೆಲಸವನ್ನು ನಿನ್ನ ಆತ್ಮವು ಒಪ್ಪುವವೇ? ಎಂದು ಪರಿಶೋಧನೆ ಮಾಡುವದು ಅತ್ಯಾವಶ್ಯಕ. ಆತ್ಮವಂಚನೆಯು ದೈವವಂಚನೆಗೆ ತುಲ್ಯವಾದುದಾಗಿದೆ. ಈಗಿನ ಅನೀತಿಯ ಉದ್ಯೋಗವನ್ನು ನಡೆಸಲು ನಿನ್ನ ಆತ್ಮವು ಒಪ್ಪುವುದಿಲ್ಲ. ಆದುದರಿಂದ ನನ್ನ ಸಲಹೆಯನ್ನು ಪಡೆಯುವದಕ್ಕಾಗಿ ಇಲ್ಲಿಗೆ ನೀನು ಬಂದಿರುವೆ. ನಾನು ಹಾಗೆ ಉಪದೇಶಿಸಿದೆನೆಂಬ ಕಾರಣದಿಂದ ನೀನು ಪದವಿಯನ್ನು ದೂರ ಒಗೆಯಬೇಡ ಆ ಕೆಲಸವನ್ನು ನಿನ್ನ ಆತ್ಮವು ಒಪ್ಪುವುವೇ? ಎಂದು ಒಂದು ಪರಿಶೋಧನೆಯನ್ನು ನಡೆಸು. ಹಾಗೆಯೇ ಈ ಅನ್ಯಾಯದ ಆಜ್ಞೆಯನ್ನು ಅಂತ್ಯಗೊಳಿಸಲು ಹಿಂದುಗಳು ಹೂಡಿರುವ ವಿದ್ರೋಹವು ನಿನಗೆ ಸಮಂಜಸವೆನಿಸುವದಾದರೆ ನೀನು ಹಿಂದುಗಳ ಪಕ್ಷವನ್ನು ಹಿಡಿಯಬಹುದು."

"ಇಸ್ಲಾಂಧರ್ಮಾವಲಂಬಿಯಾದ ಒಬ್ಬ ಅರಸನಿಗೆ ವಿರೋಧವಾಗಿ ವಿದ್ರೋಹವನ್ನು ಹೂಡಿರುವ ಕಾಫರರ ಪಕ್ಷವನ್ನು ವಹಿಸುವದು ಸರಿಯೇ?" ಹೀಗೆ ಉಸ್ಮಾನನ ತುಟಿಗಳಿಂದ ಪ್ರಶ್ನೆಯು ಹೊರಬಿದ್ದಿತು.

"ಈ ಕುರಡು ಆಚಾರಗಳು ಧರ್ಮವಾಗಲಾರವು. ಒಬ್ಬ ಮುಸ್ಲೀಮನ ಹೊಟ್ಟೆಯಲ್ಲಿ ಹುಟ್ಟಿದ ಮಾತ್ರಕ್ಕೆ ಒಬ್ಬನು ಇಸ್ಲಾಂಧರ್ಮಾವಲಂಬಿಯಾಗಲಾರ. ನಾವು ಧರ್ಮದ ಹೆಸರಿನಲ್ಲಿ ಜರುಗಿಸುತ್ತಿರುವ ಆಚಾರಗಳು ನಿಜವಾದ ಧರ್ಮತತ್ವಗಳಿಗೆ ವಿಪರೀತವಾದವುಗಳಿರುತ್ತವೆ. ಯಾವನು ಸತ್ಯ ಮತ್ತು ನೀತಿಯ ಹಾದಿಯನ್ನು ಅವಲಂಬಿಸುತ್ತಾನೆಯೋ, ಯಾವಾತನು ಅನ್ಯರ ಸುಖದುಃಖಗಳು ತನ್ನವೆಂದು ಭಾವಿಸಿ ಅವರ ದುಃಖಪರಿಹಾರಕ್ಕಾಗಿ ಯತ್ನಿಸುತ್ತಾನೆಯೋ ಆತನೇ ನಿಜವಾದ ಧರ್ಮಿಷ್ಠನು. ಸತ್ಯ ಮತ್ತು ನ್ಯಾಯಗಳನ್ನು ಆಚರಿಸುದೇ ಉತ್ಕೃಷ್ಟ ಧರ್ಮವಾಗಿರುತ್ತದೆ. ಒಂದು ವೇಳೆ ಅವನು ಮುಸ್ಲೀಂ ಧರ್ಮಾವಲಂಬಿಗಳ ಕುಲದಲ್ಲಿ ಹುಟ್ಟದಿರಬಹುದು; ಅಂದ ಮಾತ್ರಕ್ಕೆ ಅವನನ್ನು ಹಿಂಸಿಸಬೇಕೆಂದಿಲ್ಲ. ಆತನು ಸತ್ಯ ಮತ್ತು ನ್ಯಾಯಗಳ ಹಾದಿಯನ್ನು ಅವಲಂಬಿಸಿದ್ದರೆ ಮುಸ್ಲೀಮರು ಆತನನ್ನು ಆದರಿಸಬೇಕಾಗಿದೆ. ಧರ್ಮವೆಂದರೆ, ಒಂದು ವರ್ಗದವರ ಆಚಾರಗಳು ಮಾತ್ರವೆಂದು ವಿಚಾರಿಸುವುದು ತಿಳಿಗೇಡಿತನವಾಗಿದೆ. ಧರ್ಮವೆಂಬುದು ಈ ವಿಶಾಲ ಜಗತ್ತಿನಷ್ಟು ದೊಡ್ಡದು;

ಮನುಷ್ಯನಾದವನು ಅದರ ಪರಿಧಿಯನ್ನು ನಿರ್ಣಯಿಸಲಾರ. ಅದು ಅಷ್ಟು ಬೃಹದಾಕಾರವುಳ್ಳದ್ದಾಗಿದೆ. ಕಂದಾ, ನಾನು ನಿನಗೆ ಹೇಳುತ್ತಿರುವದಿಷ್ಟೇ? ಸತ್ಯ ಮತ್ತು ನ್ಯಾಯಗಳನ್ನು ಅವಲಂಬಿಸಿದವನು ನಿನ್ನ ಬಾಂಧವನೆಂದು ತಿಳಿದುಕೋ. ಆತನ ಕೆಲಸಗಳಿಗೆ ಸಹಾಯ-ಸಲಕರಣೆಗಳನ್ನು ನೀಡು."

ಫಕೀರನ ಈ ಉಜ್ವಲ ಉಪದೇಶಗಳು ಉಸ್ಮಾನನ ಮನದಲ್ಲಿ ಹರಡಿದ್ದ ಅಂಧಕಾರವನ್ನು ಹೋಗಲಾಡಿಸಿದುವು. ಆತನ ಮನಸ್ಸು ತಿಳಿಯಾಯಿತು. ಭಕ್ತಿವಿಶ್ವಾಸಪೂರ್ವಕ ಸ್ವರದಲ್ಲಿ ಅವನು ಹೇಳಿದನು: "ಫಕೀರಸಾಹೇಬ, ನಿಮ್ಮ ಉಪದೇಶಗಳಿಂದ ನನ್ನ ಅಜ್ಞತೆಯು ದೂರವಾಯಿತು. ನನಗೆ ಸರಿಯಾದ ದಾರಿಯನ್ನು ತೋರಿದಿರಿ. ನೀವು ಮಾಡಿದ ಉಪಕಾರವನ್ನು ಮರೆಯಲಾರೆನು."

"ಮಗೂ, ದೇವರು ನಿನಗೆ ಒಳ್ಳೆಯದು ಮಾಡಲಿ. ಅನ್ಯರ ಕಷ್ಟಗಳು ನಿನ್ನವೆಂದು ತಿಳಿ. ದರಿದ್ರರನ್ನು ಪೀಡಿಸುವ ಕೆಲಸಕ್ಕೆ ನೀನು ಕೈಹಚ್ಚದಿರು. ಹಾಗಾದರೆ ನಿನಗೆ ಮಂಗಳವಾಗುವದು."

ಉಸ್ಮಾನನು ಫಕೀರನ ಉಪದೇಶಗಳಿಂದ ನವಚೈತನ್ಯವನ್ನು ಪಡೆದನು; ತನ್ನ ಜೀವನವನ್ನು ದೀನದರಿದ್ರರ ಸೇವೆಗೆ ವಿನಿಯೋಗಿಸಬೇಕೆಂದು ಸಂಕಲ್ಪಿಸಿದನು.

---

## ೧೦ ದೇಶದ್ರೋಹಿಗಳು ಒಂದು ಕೋಟೆಯನ್ನು ವಶಪಡಿಸಿಕೊಂಡರು.

ರಾಜದುರ್ಗದಲ್ಲಿ ಸೈನಿಕರೆಲ್ಲರೂ ಮಲಗಿದ್ದರು. ಶತ್ರುಗಳ ಆಕ್ರಮಣವಾಗಲೀ, ಇತರ ಯಾವ ಭಯವಾಗಲೀ ಇಲ್ಲದಿದ್ದುದರಿಂದ ಪಠಾಣ ದಂಡಾಳುಗಳು ಸವಿನಿದ್ದೆಯನ್ನು ಮೆಲ್ಲುತ್ತಿದ್ದರು. ದುರ್ಗದೊಳಗೆಲ್ಲ ಶಾಂತತೆಯು ಹರಡಿದ್ದಿತು. ಚಂದ್ರನು ಆಗಸದಲ್ಲಿ ಥಳಥಳಿಸುತ್ತಿದ್ದನು. ದೂರದಲ್ಲಿದ್ದ ಒಂದು ಗೂಬೆಯ ಸಪ್ಪಳವಲ್ಲದೆ ಇನ್ನಾವುದೂ ಅಲ್ಲಿನ ವಾತಾವರಣದ ಶಾಂತತೆಯನ್ನು ಭಂಜಿಸುತ್ತಿರಲಿಲ್ಲ.

ಪಾಳಯದಲ್ಲಿ ಎಲ್ಲರೂ ಮಲಗಿ ನಿದ್ರಾಂಗನೆಯ ಕೃಪೆಗೆ ಪಾತ್ರರಾಗಿದ್ದರು. ಯಾರಿಗೂ ಆ ರಾತ್ರಿ ಅವಿಚಾರಿತವಾಗಿ ಒಂದು ವಿಪತ್ತು ಬಂದೊದಗುವದೆಂಬುದರ ಪರಿಜ್ಞಾನವಿರಲಿಲ್ಲ. ದುರ್ಗದ ಸರದಾರನು ತನ್ನ ವಸತಿ

ಯಲ್ಲಿ ನಿದ್ರಿಸುತ್ತಿದ್ದನು. ಅವನಿಗೆ ಆ ರಾತ್ರಿ ಸುಖನಿದ್ದೆಯುಂಟಾಗಲಿಲ್ಲ ಯಾವುದೋ ಒಂದು ಭಯಂಕರ ಸ್ವಪ್ನವನ್ನು ಅವನು ಕಂಡನು. ಆ ಕನಸು ತನ್ನನ್ನು ಹತ್ತೆಂಟು ಮಂದಿ ಹಿಂದುಗಳು ಬಂದು ಸೇರಿ, ವಧಿಸಲು ಯತ್ನಿಸು ತ್ತಿದ್ದ ಒಂದು ಚಿತ್ರವಾಗಿದ್ದಿತು. ಭೀತಿಯಿಂದ ಅವನು ಕನಸಿನಲ್ಲಿಯೇ ಚೀರಿ ದನು. ಪಕ್ಕದ ಮಂಚದ ಮೇಲೆ ಪವಡಿಸಿದ್ದ ಬೀಬಿಯು ಅವನ ಚೀರಾಟ ದಿಂದ ಎಚ್ಚತ್ತಳು. ದೀಪದ ಬೆಳಕಿನಲ್ಲಿ ಆಕೆ ತನ್ನ ಗಂಡನನ್ನು ನೋಡಿದಳು. ಆತನು ಕನವರಿಸುತ್ತಿದ್ದುದು ಅವಳಿಗೆ ಗೋಚರಿಸಿತು. ಅವನು ಆಗಾಗ ಹಲ್ಲು ಕಡಿಯುತ್ತಿದ್ದನು. ಬೀಬಿ ಅವನನ್ನು ಮೈ ಮುಟ್ಟಿ ಎಬ್ಬಿಸಿದಳು. ಅವನು ತನ್ನ ಕಣ್ಣುಗಳನ್ನು ಬಿಚ್ಚಿದ; ಆ ಮೇಲೆ ಅರ್ಧ ಎಚ್ಚರ ಹೊಂದಿದವ ನಂತೆ ಮಾತಾಡಿದ: "ಈಗ ನಾವಿರುವನೆಲ್ಲಿ?"

"ಏನಾಗಿವೆ ನಿಮಗೆ?"

"ಊಹೂಂ." ಸರದಾರನು ಪೂರ್ತಿ ಪ್ರಜ್ಞೆಯನ್ನು ಹೊಂದಿದ ಮೇಲೆ ಹೇಳಿದ.

"ಏನಾಗಿವೆ? ನಿದ್ದೆಯಲ್ಲಿ ನೀವು ಮಾಡುವ ಚೀರಾಟ-ರಂಪಗಳನ್ನು ನೋಡುವಾಗ ನನಗೆ ಬಹಳ ಅಂಜಿಕೆಯಾಗುತ್ತದೆ."

"ಒಂದು ಭಯಂಕರ ಕನಸನ್ನು ಕಂಡೆ" ತನ್ನಾಕೆಯನ್ನು ಸಂತೈಸಲೆತ್ನಿ ಸುತ್ತ ಖಾನನು ನುಡಿದ.

"ಏನದು?" ಎಂದು ಆಕೆ ಪ್ರಶ್ನಿಸಿದಳು.

"ಏನೂ ಇಲ್ಲ. ನಾನು ಒಂದು ದಾರಿಯನ್ನು ಹಿಡಿದು ಹೋಗುತ್ತಿದ್ದಾಗ ಹತ್ತೆಂಟು ಮಂದಿ ಕಾಫರರು ಬಂದು ನನ್ನನ್ನು ನಾಲ್ಕು ಪಾರ್ಶ್ವಗಳಿಂದಲೂ ಆವರಿಸಿದ ಸ್ವಪ್ನವದು. ಅವರು ನನ್ನ ಕೈಕಾಲುಗಳನ್ನು ಬಿಗಿದು ಕೊಲ್ಲಲು ಹೊರಟರು. ಆಗ ನಾನು ಹೆದರಿಕೆಯಿಂದ ಚೀರಿದೆ!"

"ಯಾ ಅಲ್ಲಾ!" ಅವಳು ನಡುಗಿದಳು.

"ಅಯ್ಯೋ! ಹುಚ್ಚಿ! ಏಕೆ ಇಷ್ಟೊಂದು ಬೆದರುತ್ತಿರುವೆ?"

"ಅದೊಂದು ವಿಪತ್ತನ್ನು ಸೂಚಿಸುತ್ತದೆ" ಒಂದು ದೀರ್ಘ ಶ್ವಾಸವನ್ನು ಬಿಟ್ಟಳು ಆಕೆ.

ಆಕೆಯ ಬೆನ್ನನ್ನು ಸವರುತ್ತ ಖಾನನು ನುಡಿದ: "ಲೇ, ಕನಸಿನಲ್ಲಿ ಕಂಡದುವೆಲ್ಲವೂ ನಿಜವಾಗಲಾರವು. ನೀನು ಬಹಳ ಹೇಡಿಯಿರುವೆ."

"ಆದರೂ...."

ಇಬ್ಬರೂ ಮಾತಾಡಲಿಲ್ಲ ಒಬ್ಬರ ಮೋರೆಯನ್ನೊಬ್ಬರು ನೋಡುತ್ತ ಕುಳಿತರು. ಆಕೆಯ ಎದೆಯಲ್ಲಿ ಯಾವುದೋ ಒಂದು ಭೀತಿಯು ಅಂಕುರಿಸಿತು. ಖಾನನು ಅವಳನ್ನಪ್ಪಿಕೊಂಡು ತನ್ನ ಹಾಸಿಗೆಯ ಮೇಲೆ ಕುಳಿತನು.

ಹೊರಗಿನಿಂದ ಒಂದು ಕೋಲಾಹಲವು ಕೇಳಿಸಿತು. "ಏನದು?" ಎಂದ ವಳು ಪ್ರಶ್ನಿಸಿದಳು.

"ಹೊರಗೆ ಬೀದಿಯಲ್ಲಿರುವ ಯಾಚಕರ ಕೋಲಾಹಲವಾಗಿರಲಿಕ್ಕೆ ಸಾಕು" ಹೀಗೆ ಅವನು ಹೇಳಿದ. ಅವಳ ದೇಹವು ಪುನಃ ಒಮ್ಮೆ ಕಂಪಿಸಿತು.

ಪುನಃ ಹೊರಗೆ ಒಂದು ಭಯಂಕರ ಶಬ್ದ. ಇದೇನೆಂದು ಖಾನನು ಆಲೋಚಿಸತೊಡಗಿದ. ಕೆಳಗೆ ಮನೆಯ ಕದಗಳನ್ನು ತಟ್ಟುವ ಸಪ್ಪಳವು ಕೇಳಿಸಿತು. ಹೊರಗಿನಿಂದ "ಸರದಾರ ಸಾಹೇಬ!" ಎಂದು ಕೂಗುತ್ತಿದ್ದುದೂ ಕೇಳಿಸಿತು. ಖಾನನು ಹೊರಗೆ ಯಾರೋ ತನ್ನನ್ನು ಕರೆಯುತ್ತಿರುವರೆಂದು ತಿಳಿದ. ಅವನು ತನ್ನ ಸೇವಕನಾದ ಅಬ್ದುಲ್ಲನನ್ನು ಕೂಗಿದನು. ಕೆಳಗಿನ ಮನೆಯಲ್ಲಿ ನಿದ್ರಿಸುತ್ತಿದ್ದ ಅಬ್ದುಲ್ಲನು ಎಚ್ಚತ್ತು ತನ್ನ ಕಣ್ಣುಗಳನ್ನು ಉಜ್ಜುತ್ತ ಮಹಡಿ ಹತ್ತಿದನು. ಖಾನನು ಅಬ್ದುಲ್ಲನಿಗೆ ಹೇಳಿದ: "ಕೆಳಮನೆಯ ಕದಗಳನ್ನು ತಟ್ಟುತ್ತಿರುವವರು ಯಾರೆಂಬವನ್ನು ತಿಳಿದು ಬಾ."

"ಅಪ್ಪಣೆ." ಎಂದು ಹೇಳಿ, ಅಬ್ದುಲ್ಲ ಕೆಳಗಿಳಿದ.

"ಎರಡು ನಿಮಿಷಗಳು ಕಳೆದವು. ಅಷ್ಟರಲ್ಲಿ ಬೆವರು ಸುರಿಯುತ್ತಿದ್ದ ಒಬ್ಬ ಪಠಾಣ ಸೈನಿಕನೊಡನೆ ಅಬ್ದುಲ್ಲನು ಪುನಃ ಮೇಲಕ್ಕೆ ಬಂದನು. ಬೆವರ ಒರಿಸಿಕೊಂಡು ತನ್ನ ಮುಂದೆ ನಿಂತಿದ್ದ ಸೈನಿಕನನ್ನು ನೋಡುತ್ತ ಖಾನನು ಹೇಳಿದನು: "ಏನು? ಕಾಸೀಮ! ಈ ರಾತ್ರಿ ಹೊತ್ತಿನಲ್ಲಿ ಬಂದುದೇಕೆ?"

"ಸರದಾರ ಸಾಹೇಬ, ಒಂದು ದೊಡ್ಡ ಅನಾಹುತ ಜರುಗಿಹೋಯಿತು!"

"ಏನದು?" ಸ್ತಂಭಿತನಾದ ಖಾನನು ಪ್ರಶ್ನಿಸಿದ.

"ರಾತ್ರಿ ನಾವೆಲ್ಲರೂ ನಿದ್ರಿಸುತ್ತಿದ್ದ ವೇಳೆಯಲ್ಲಿ ವಿದ್ರೋಹಿಗಳು ಕೋಟೆಯೊಳಗೆ ಪ್ರವೇಶಿಸಿದರು!"

"ಹೇಗೆ?"

"ಹೇಗೆಂಬುದನ್ನು ನಾವು ತಿಳಿಯೆವು. ಮೂನ್ನೂರು ಮಂದಿ ಕೋಟೆಯೊಳಗೆ ಪ್ರವೇಶಿಸಿದ್ದರು. ಅವರು ನಾಲ್ಕು ಪಾರ್ಶ್ವಗಳಿಂದಲೂ ನಮ್ಮನ್ನು

ಆವರಿಸಿದರು. ಅವರೊಡನೆ ಕಾದಾಡಲು ಆವಶ್ಯಕವಾದ ಆಯುಧಗಳನ್ನು ತೆಗೆದುಕೊಳ್ಳಲು ಆಯುಧಶಾಲೆಗೆ ಹೋದೆವು; ಆದರೆ ಅಲ್ಲಿ ಸರ್ವನಾಶವಾಗಿ ಹೋಗಿದ್ದಿತು!"

"ಏನಾಯಿತೆಂಬವನ್ನು ಬೇಗನೆ ಉಸುರು" ಖಾನನು ಸಿಟ್ಟಿನಿಂದಂದನು.

"ಆಯುಧಶಾಲೆಗೆ ಕಿಚ್ಚನ್ನು ಮಡುಗಿದರು" ಕಾಸೀಮನ ಕೊರಳಿನಿಂದ ಕಂಪಿಸುತ್ತಿದ್ದ ಸ್ವರವು ಹೊರಟಿತು.

"ಹೇಗೆ? ನೀವೆಲ್ಲ ಕುರಿಕಾಯುತ್ತಿದ್ದಿರೋ?" ಖಾನನು ಸಿಟ್ಟಿನಿಂದ ಗರ್ಜಿಸಿದನು.

"ಸರದಾರ ಸಾಹೇಬ, ಕೋಪಗೊಳ್ಳುವದರಿಂದ ಪ್ರಯೋಜನವಿಲ್ಲ. ನಿತ್ಯದಂತೆ ಕೋಟೆಯ ಬಾಗಿಲುಗಳನ್ನು ಭದ್ರಪಡಿಸಿ ನಾವು ಪಾಳಯದಲ್ಲಿ ನಿದ್ರಿಸುತ್ತಿದ್ದೆವು. ಪಹರೆಯುವರು ಕೋಟೆಯ ಹೆಬ್ಬಾಗಿಲುಗಳ ಬಳಿಯಲ್ಲಿ ನಿದ್ರಿಸುತ್ತಿದ್ದರು. ಎರಡು ಜಾವವು ಕಳೆದಿರಬಹುದು. ಆ ಸಮಯದಲ್ಲಿ ಪಹರೆಗಾರರು ಓಡಿ ಬಂದು, ಶತ್ರುಗಳು ಕೋಟೆಯೊಳಗೆ ನುಗ್ಗಿದ್ದಾರೆಂದು ಹೇಳಿದರು. ನಾವೆಲ್ಲರೂ ಆಯುಧಗಳನ್ನು ತೆಗೆದುಕೊಳ್ಳಲು ಆಯುಧಶಾಲೆಗೆ ಹೋದಾಗ ಅದು ಧಗಧಗನೆ ಉರಿಯುತ್ತಿದ್ದಿತು ಗೋಚರಿಸಿತು. ಆಯುಧ ಶಾಲೆಗೆ ಕಿಚ್ಚನ್ನು ಹಾಕಿದವರು ಯಾರೆಂಬದು ನಮಗೆ ತಿಳಿಯದು. ಈ ವಾರ್ತೆಯನ್ನು ತಮಗೆ ಅರಹುವದಕ್ಕಾಗಿ ಇಲ್ಲಿಗೆ ಬಂದೆ. ಇತರರು ಶತ್ರುಗಳನ್ನು ಎದುರಿಸುತ್ತಲಿದ್ದಾರೆ."

"ಅವರು ಯಾವ ರೀತಿಯಲ್ಲಿ ಕೋಟೆಯೊಳಗೆ ಪ್ರವೇಶಿಸಿದರು?" ಹೀಗೆ ಖಾನನು ಪ್ರಶ್ನಿಸಿದ.

"ನಮಗೆ ತಿಳಿಯದು" ಎಂಬ ಉತ್ತರವು ಕಾಸೀಮನಿಂದ ಬಂದಿತು.

"ನೀವು ಕತ್ತೆಗಳು" ಖಾನನು ಒದರಿದ.

ಭಟನು ಮಾತಾಡಲಿಲ್ಲ. ತನ್ನ ತುಟಿಗಳನ್ನು ಬಿಚ್ಚಲಿಲ್ಲ.

ಖಾನನು ತನ್ನ ಉಡಿಗೆ-ತೊಡಿಗೆಗಳನ್ನು ತೆಗೆದು ಧರಿಸಿದ. ಕತ್ತಿಯನ್ನು ಕೈಯಲ್ಲಿ ಹಿಡಿದುದಾಯಿತು. ಅವನು ಹೊರಗೆ ತೆರಳಲು ಹೊರಟದುದನ್ನು ಕಾಣುತ್ತಲೆ ಬೀಬಿ ಹೇಳಿದಳು: "ಈ ರಾತ್ರಿ ಹೋಗಬೇಡಿರಿ."

"ಹುಚ್ಚೀ! ಹೆದರಬೇಡ. ದುರ್ಗದೊಳಗೆ ಎಂಟುನೂರಕ್ಕಿಂತ ಹೆಚ್ಚು ಮಂದಿ ಪಠಾಣರಿದ್ದಾರೆ. ಆದುದರಿಂದ ಭಯಕ್ಕೆ ಯಾವ ಅವಕಾಶವೂ ಇಲ್ಲ."

"ನನಗೇಕೋ ಹೆದರಿಕೆಯಾಗುತ್ತದೆ."

"ಇಲ್ಲ, ಈಗ ಬರುತ್ತೇನೆ."

ಖಾನನು ಬೀಬಿಯನ್ನು ಮುದ್ದಿಟ್ಟು ಕಾಸೀಮನ ಸಂಗಡ ಹೊರಕ್ಕೆ ತೆರಳಿದನು. ಬೀಬಿಯು ಮ್ಲಾನಭಾವದಿಂದ ವಿಚಾರಮಗ್ನಳಾಗಿ ಹಾಸಿಗೆಯಮೇಲೆ ಕುಳಿತಳು.

ತನ್ನ ಮಹಲನ್ನು ಪರಿತ್ಯಜಿಸಿ ಖಾನನು ಹೊರಗೆ ಬಂದನು. ಕೋಟೆಯ ಹೆಬ್ಬಾಗಿಲಿನ ಕಡೆಯಿಂದ ಭಯಂಕರ ಕೋಲಾಹಲವು ಕೇಳಿಬರುತ್ತಿದ್ದಿತು. ಅವನು ಧೃತಗತಿಯಲ್ಲಿ ತನ್ನ ಕುದುರೆಯ ಲಾಯಕ್ಕೆ ಹೋದನು. ತಾಸದಾರನನ್ನು ಕರೆದು ಎಬ್ಬಿಸುವ ಕೆಲಸಕ್ಕೆ ಅವನು ಕೈ ಹಾಕಲಿಲ್ಲ. ಹಾಗೆ ವರ್ತಿಸುವದಾದರೆ ಹೆಚ್ಚು ವಿಳಂಬವಾಗುವದೆಂದು ಖಾನನು ಅರಿತಿದ್ದನು. ಆದುದರಿಂದ ಲಾಯದೊಳಗೆ ಕಟ್ಟಿ ಹಾಕಿದ್ದ ಕುದುರೆಯನ್ನು ಬಿಚ್ಚಿ ಹೊರಕ್ಕೆ ತಂದನು. ಕುದುರೆಗೆ ಜೀನು ಹಾಕಿದುದಾಯಿತು. ಅವನು ಕುದುರೆಯಮೇಲೇರಿ, ಕರದಲ್ಲಿ ಹಿಡಿದ ಖಡ್ಗವನ್ನು ಝಳಪಿಸುತ್ತಾ ಕೋಟೆಯ ಹೆಬ್ಬಾಗಿಲ ಕಡೆಗೆ ತೆರಳಿದನು.

ಅಲ್ಲಿ ಭಯಂಕರವಾದ ಕಾಳಗವು ಜರುಗುತ್ತಿದ್ದಿತು. ಮುಂಸೇರುತ್ತಿದ್ದ ಶತ್ರುಗಳನ್ನು ತಡೆಯಲು ಪಠಾಣರು ಯತ್ನಿಸುತ್ತಿದ್ದರು. ಶತ್ರುಗಳಾದರೂ ಹಿಂಜರಿಯುತಕ್ಕವರಿರಲಿಲ್ಲ. ಒಂದು ಅಂಗುಲ ನೆಲವನ್ನು ಸಹ ಬಿಟ್ಟುಕೊಡದೆ ಕಲಿತನದಿಂದ ಹೋರಾಡುತ್ತಿದ್ದರು.

ತಮ್ಮ ಸರದಾರನು ಬಂದುದನ್ನು ಕಾಣಲು ಪಠಾಣರ ಉತ್ಸಾಹವು ಹೆಚ್ಚಿತು. ಅವರು ಕತ್ತಿಗಳನ್ನು ಹಿರಿಯುತ್ತಾ ಹೆಜ್ಜೆಗಳನ್ನು ಮುಂದಿಡಲು ಪ್ರಯತ್ನಿಸಿದರು. ಅವರ 'ಅಲ್ಲಾಹೋ ಅಕ್ಬರ್' "ಎಂಬ ಗರ್ಜನೆಯು ಬಾನಿನಲ್ಲಿ ವ್ಯಾಪಿಸಿತು. ಖಾನನು ತನ್ನ ಕುದುರೆಯನ್ನು ಮುಂದಕ್ಕೆ ದೂಡುತ್ತಾ ಪಠಾಣರಿಗೆ ಹುರುಪನ್ನು ನೀಡಿದನು. "ಸಾಗಿರಿ ಮುಂದಕ್ಕೆ. ಅವರನ್ನು ಹಿಂದಕ್ಕಟ್ಟಿರಿ." ಎಂಬ ರವವು ಅವನ ಕಂಠದಿಂದ ಹೊರಟಿತು. ತಮ್ಮ ಸರದಾರನು ಶತ್ರುಗಳ ಮಧ್ಯದಲ್ಲಿ ನುಗ್ಗಲು ಪ್ರಯತ್ನಿಸುತ್ತಿದ್ದುದನ್ನು ಕಾಣಲು, ಪಠಾಣ ಸೈನಿಕರ ಧೈರ್ಯವು ಹೆಚ್ಚಿತು. ಅವರು ಶತ್ರುಗಳನ್ನು ಹಿಂದಕ್ಕೆ ದೂಡಲು ಪ್ರಯತ್ನಿಸತೊಡಗಿದರು.

ಆದರೆ ಕೋಟೆಯೊಳಗೆ ಪ್ರವೇಶಿಸಿದ ಶತ್ರುಗಳು ಏನೂ ಕಡಿಮೆಯವರಿದ್ದಿಲ್ಲ. ಅವರೂ ಪ್ರಚಂಡ ವೀರರಿದ್ದರು. ತಮ್ಮ ಮೇಲೆ ಸಾಗಿ ಬರುತ್ತಲಿದ್ದ

ಪಠಾಣರನ್ನು ನೋಡಿ ಹೆದರದೆ ಅವರನ್ನು ತಡೆಗಟ್ಟತೊಡಗಿದರು. ಕತ್ತಿಗಳ ಸಂಘರ್ಷಣಗಳಿಂದ ಹುಟ್ಟಿದ ಖಣಖಣ ನಿನಾದಗಳೂ, ಸಿಂಹನಾದಗಳೂ, ಗಾಯವೆಡೆದವರ ಆರ್ತನಾದಗಳೂ, ನಭೋವಲಯದಲ್ಲಿ ಹರಡಿದವು.

“ವೀರರೆ! ಭಯಪಡಬೇಡಿರಿ. ನಾಡಿನ ಹೆಂಗಸರ ಮಾನವನ್ನು ರಕ್ಷಿಸುವ ಭಾರವು ನಿಮ್ಮ ಹೆಗಲುಗಳ ಮೇಲೆ ಬಿದ್ದಿದೆಯೆಂಬುದನ್ನು ನೆನಪಿನಲ್ಲಿಡಿರಿ.” ಕತ್ತಿಯನ್ನು ಝಳಪಿಸುತ್ತಿದ್ದ ಒಬ್ಬ ಸಂನ್ಯಾಸಿಯು ಹೀಗೆ ನುಡಿಯುತ್ತಿದ್ದನು.

ಸಂನ್ಯಾಸಿಗಳ ನುಡಿಗಳನ್ನು ಕೇಳಲು ವಿದ್ರೋಹಿಗಳ ಉತ್ಸಾಹವು ಹೆಚ್ಚಿತು. ಅವರು ಪಠಾಣರ ಮೇಲೆ ಏರಿ ಹೋಗಹತ್ತಿದರು. ಎರಡು ಪಕ್ಷದವರೂ ಭಯಂಕರವಾಗಿ ಕಾದಾಡುವದರಲ್ಲಿ ಉದ್ಯುಕ್ತರಾದರು. ಅನೇಕರು ಖಡ್ಗಗಳಿಗೆ ಆಹುತಿಯಾಗಿ ನೆಲದ ಮೇಲೆ ಪತಿಪತೊಡಗಿದರು.

ಹೋರಾಟವು ಮುಂದುವರಿಯಿತು. ಎರಡು ಪಕ್ಷದವರೂ ಹಿಮ್ಮೆಟ್ಟಲಿಲ್ಲ. ಪಠಾಣರು ಒಂದಂಗುಲ ನೆಲವನ್ನು ಸಹಾ ವಿದ್ರೋಹಿಗಳಿಗೆ ಬಿಟ್ಟುಕೊಡಲಿಲ್ಲ. ರಕ್ತಪಾತವಾಯಿತು; ಅನೇಕ ಜೀವಕುಸುಮಗಳು ಬಾಡತೊಡಗಿದವು. ಈ ನೆತ್ತರಿನ ಪ್ರವಾಹವು ಸಂನ್ಯಾಸಿಯ ಮನಸ್ಸನ್ನು ಅಳುಕುವಂತೆ ಮಾಡಿತು. ಅವನು ಮುಂದೆ ಬಂದು ಸರದಾರನಿಗೆ ಹೇಳಿದ: “ವ್ಯರ್ಥವಾಗಿ ಈ ನೆತ್ತರಿನ ಪ್ರವಾಹವನ್ನು ಹರಿಸುವದರಿಂದ ಯಾವ ಪ್ರಯೋಜನವೂ ಇಲ್ಲ. ನೀವು ಕೋಟೆಯನ್ನು ನಮಗೆ ಒಪ್ಪಿಸಿರಿ. ಕೋಟೆಯೊಳಗಿನ ಪ್ರತಿಯೊಬ್ಬ ಪಠಾಣನ ಜೀವವು ಸುರಕ್ಷಿತವಾಗಿರುವದೆಂದು ನಾನು ಭರವಸೆಯನ್ನು ಕೊಡುತ್ತೇನೆ.”

“ಲೋ ಬದ್ಮಾಷ್!” ಕೆಂಡವನ್ನು ತನ್ನ ಕಣ್ಣುಗಳಿಂದ ಕಾರುತ್ತ ಖಾನನು ಗರ್ಜಿಸಿದ. ಈ ಮಾತನ್ನು ಯಾರಿಗುಸುರುತ್ತಿರುವೆ? ನಿಮ್ಮ ಎದೆಗಳಲ್ಲಿ ಪೌರುಷವಿದ್ದರೆ ಕೋಟೆಯನ್ನು ವಶಪಡಿಸಿಕೊಳ್ಳಿರಿ. ನಾವೇನೂ ಹೇಡಿಗಳಲ್ಲ. ನಮ್ಮ ಧಮನಿಗಳಲ್ಲಿ ನೆತ್ತರಿರುವತನಕ ಹೋರಾಡುತ್ತೇವೆ ”

“ಖಾನಸಾಹೇಬ, ಚಿಂತೆಯಿಲ್ಲ; ನಮ್ಮ ಆಯುಧಗಳು ಎಷ್ಟು ಹರಿತವಾಗಿವೆಯೆಂಬುದನ್ನು ನೀವು ನೋಡಬಹುದು.” ತೇಜಸ್ವಿಯಾದ ಒಬ್ಬ ತರುಣನು ಮುಂದೆ ಬಂದು ನುಡಿದನು.

“ನೋಡು, ಈ ಪ್ರಹಾರವು ಹೇಗಿದೆಯೆಂದು” ತರುಣನ ಮೇಲೆ ಖಾನನು ತನ್ನ ಕತ್ತಿಯನ್ನು ಬೀಸಿದನು.

ತರುಣನು ತನ್ನ ಗುರಾಣಿಯಿಂದ ಖಾನನ ಖಡ್ಗಪ್ರಹಾರವನ್ನು ತಡೆ

ದನು; ಅಷ್ಟರಲ್ಲಿಯೆ ತನ್ನ ಕರವಾಳವನ್ನು ಝಳಪಿಸುತ್ತಾ ಖಾನನ ಮೇಲೆ ಏರಿ ಹೋದನು. ಖಾನನು ತನ್ನ ಗುರಾಣಿಯಿಂದ ಆ ಖಡ್ಗಪ್ರಹಾರವನ್ನು ತಡೆಯಲು ಯತ್ನಿಸಿದನು; ಆದರೆ ಆ ಯತ್ನವು ಯಶಸ್ವಿಯಾಗಲಿಲ್ಲ. ಅಷ್ಟರಲ್ಲಿಯೆ ಒಂದು ಅವನ ಭುಜದ ಮೇಲೆ ಪತಿಸಿತು. ಸರದಾರನು ಕುದುರೆಯ ಮೇಲಿಂದ ಕೆಳಕ್ಕೆ ಉರು ಳಿದನು; ತಮ್ಮ ನಾಯಕನು ನೆಲಕ್ಕೆ ಉರುಳಿದನೆಂಬುದನ್ನು ತಿಳಿಯಲು, ಪಠಾಣರ ಸೇನೆಯು ಅಲ್ಲೋಲ ಕಲ್ಲೋಲವಾಗತೊಡಗಿತು. ಅವರು ತಮಗೆ ಸೋಲಾಗುವದೆಂಬುದನ್ನು ತಿಳಿದರು.

ಪಠಾಣರು ಯುದ್ಧವನ್ನು ಬಿಟ್ಟು ಹಿಮ್ಮೆಟ್ಟತೊಡಗಿದರು. ವಿದ್ರೋಹಿ ಗಳು ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡರು. ಮುಂದೆ ಕೆಲವು ತಾಸುಗಳ ವರೆಗೆ ಕಾಳಗವು ನಡೆಯಿತು. ಬೆಳಗಾಗುವ ಮುನ್ನ ಪಠಾಣ ದಂಡಾಳುಗಳು ಪರಾಜಿತರಾದರು. ವಿದ್ರೋಹಿಗಳು ಕೋಟೆಯನ್ನು ತಮ್ಮ ವಶಪಡಿಸಿಕೊಂಡರು.

ಗಾಯ ಪಡೆದವರಿಗೆ ಚಿಕಿತ್ಸೆಯಾಗಬೇಕೆಂದು ಸಂನ್ಯಾಸಿಯ ಆಜ್ಞೆಯಾ ಯಿತು. ಆಗ ಒಬ್ಬ ವಿದ್ರೋಹಿಯು ಹೀಗೆ ಹೇಳಿದ: —"ಸ್ವಾಮಿ, ಇವರು ದುಷ್ಟರು; ನಮ್ಮ ಜನರಿಗೆ ಬೇಕಾದ ಹಾಗೆ ಹಿಂಸೆ ಕೊಟ್ಟಿದ್ದಾರೆ. ಇವರಿಗೇಕೆ ಚಿಕಿತ್ಸೆ? ಈ ಮುಂದೆ ಹೀಗೆ ಸಾಯುವದೇ ಒಳ್ಳೆಯದು."

"ಇವರು ತಮ್ಮ ಜೀವನಗಳಲ್ಲಿ ಅನೇಕ ಅಕೃತ್ಯಗಳನ್ನು ಜರುಗಿಸಿದ್ದರೂ ಇವರೆಲ್ಲರೂ ಮನುಷ್ಯರಾಗಿದ್ದಾರೆಂಬುದನ್ನು ನಾವು ಮರೆಯಕೂಡದು." ಸಂನ್ಯಾಸಿಯ ಗಂಭೀರವಾಣಿಯು ಹೊರಟಿತು. "ನಿಜ. ಈ ಮುಂದಿ ನಮ್ಮ ಜನ ರಿಗೆ ಬೇಕಾದ ಹಾಗೆ ಹಿಂಸೆ ಕೊಟ್ಟಿದ್ದಾರೆ. ಆದರೂ ಇವರು ಗಾಯಪಡೆದು, ಗತಿಶೂನ್ಯರಾಗಿ ಹೀಗೆ ಬಿದ್ದಿರುವಾಗ ಅವರಿಗೆ ಶುಶ್ರೂಷೆ ಮಾಡದಿರುವದು ನಮ್ಮ ಧರ್ಮವಲ್ಲ. ಅವರು ನಮ್ಮ ಶತ್ರುಗಳಾಗಿದ್ದರೂ, ನಾವು ಅವರನ್ನು ಈ ಸಂದರ್ಭದಲ್ಲಿ ಉಪಚರಿಸಬೇಕು."

ಈ ಸಂದರ್ಭದಲ್ಲಿ ಒಬ್ಬ ತೇಜಸ್ವಿಯಾದ ತರುಣನು ಸಂನ್ಯಾಸಿಯ ಹತ್ತರ ಬಂದು ನಿಂತುಕೊಂಡನು. ಅವನ ಬೆನ್ನು ತಟ್ಟುತ್ತಾ ಸಂನ್ಯಾಸಿಯು ಹೇಳಿದ: "ಕುಮಾರ, ನೀನು ತೋರಿಸಿದ ಸಾಹಸವು ಅಮೋಘವಾದದ್ದು."

"ಗುರುದೇವ, ನಾನು ನನ್ನ ಕೆಲಸವನ್ನು ಮಾತ್ರ ಮಾಡಿದೆ." ಹೀಗೆ ಕುಮಾರನು ವಿನಯದಿಂದ ಉಸುರಿದ. ಆತನು ಕುಮಾರ ಅಮರಸಿಂಹನಾಗಿ ದ್ದನು. ಸಂನ್ಯಾಸಿಯು ಮಣಿನಗರದ ಸ್ವಾತಂತ್ರ್ಯಕ್ಕಾಗಿ ತನ್ನ ಜೀವನವನ್ನು

ಧಾರೆಯೆರೆದ ಜ್ಞಾನಾನಂದನಾಗಿದ್ದನು.

"ಕುಮಾರ, ನಮ್ಮ ನಾಡಿನ ಭವಿಷ್ಯವು ನಿನ್ನನ್ನು ಅವಲಂಬಿಸಿದೆ. ನನ್ನ ತಂತ್ರವನ್ನು ಪ್ರಯೋಗಿಸುವ ಎದೆಗಾರಿಕೆಯು ನಿಮ್ಮ ಪೈಕಿ ನಿನಗಲ್ಲದೆ ಬೇರೆ ಯಾರಿಗೂ ಇರಲಿಲ್ಲ. ಪಠಾಣರ ವೇಷವನ್ನು ಧರಿಸಿ, ಶತ್ರುಗಳ ಕೋಟೆಯೊಳಗೆ ಪ್ರವೇಶಿಸಿ ಕಾರ್ಯವನ್ನು ಸಾಧಿಸಲು ನಿನಗಿರುವ ಧೈರ್ಯವನ್ನು ನೆನೆಯು ವಾಗ ನನ್ನ ಎದೆಯು ಸಂತೋಷದಿಂದ ಅರಳುತ್ತಲಿದೆ."

ಜ್ಞಾನಾನಂದನು ಹೀಗೆ ಮಾತಾಡಲು ಕಾರಣವಿದ್ದಿತು. ವಿದ್ರೋಹಿಗಳ ಸಂಖ್ಯೆಯು ಹೆಚ್ಚಿ, ಅವರ ದಳವು ಪ್ರಬಲವಾಗಲು. ಯಾವುದಾದರೂ ಒಂದು ಕೋಟೆಯನ್ನು ಆಕ್ರಮಿಸಿ, ಅದನ್ನು ವಶಪಡಿಸಿಕೊಳ್ಳಬೇಕೆಂಬ ಅವರ ಹಂಬಲವು ಹೆಚ್ಚಿತು. ಅವರು ರಾಜದುರ್ಗವನ್ನು ಆಕ್ರಮಿಸಿ ಅದನ್ನು ವಶಪಡಿಸಿ ಕೊಳ್ಳಬೇಕೆಂದು ನಿರ್ಧರಿಸಿದರು; ಆದರೆ ಕೋಟೆಯನ್ನು ಹೇಗೆ ವಶಪಡಿಸಿ ಕೊಳ್ಳುವುದೆಂಬುದು ಅವರಿಗೆ ಒಂದು ಪ್ರಧಾನ ಸಮಸ್ಯೆಯಾಗಿ ಪರಿಣಮಿಸಿತು. ಎಂಟು ನೂರು ಮಂದಿಯುಳ್ಳ ಪಠಾಣರ ಸೇನಾಬಲವಿರುವ ಕೋಟೆಯನ್ನು ಯುದ್ಧದಿಂದ ವಶಪಡಿಸಿಕೊಳ್ಳುವದೆಂದರೆ ಅದು ಸಾಧ್ಯವಾಗದ ಕೆಲಸವು.

ಕೋಟೆಯನ್ನು ತಂತ್ರದಿಂದ ವಶಪಡಿಸಿಕೊಳ್ಳಬೇಕೆಂಬುದು ಜ್ಞಾನಾನಂದನ ಅಭಿಪ್ರಾಯವಾಗಿದ್ದಿತು. ವ್ಯರ್ಥವಾಗಿ ಪ್ರಾಣಹಾನಿಯನ್ನುಂಟು ಮಾಡುವದನ್ನು ಅವನು ಒಪ್ಪುತ್ತಿರಲಿಲ್ಲ. ತಂತ್ರಪ್ರಯೋಗಗಳಿಂದ ಸುಲಭದಲ್ಲಿ ಕೆಲಸವನ್ನು ಸಾಧಿಸಬೇಕೆಂಬುದು ಅವನ ವಿಚಾರವಾಗಿದ್ದಿತು. ಅವನ ತೀಕ್ಷ್ಣ ಬುದ್ಧಿಗೆ ಕಾರ್ಯಸಾಧನೆಗಿರುವ ತಂತ್ರವು ಬಹು ಸುಲಭದಲ್ಲಿ ಗೋಚರಿಸಿತು; ಆದರೆ ಅವನ ಹಂಚಿಕೆಗೆ ಕಾರ್ಯರೂಪವನ್ನು ಕೊಡುವದು ಅತ್ಯಂತ ಪ್ರಯಾಸವಾದುದಾಗಿದ್ದಿತು.

ತನ್ನ ದಳದವರಿಗೆ ಜ್ಞಾನಾನಂದನು ಸೂಚಿಸಿದ ಹಂಚಿಕೆಯಿದು: ಕೆಲ ಮಂದಿ ವಿದ್ರೋಹಿಗಳು ಪಠಾಣರ ವೇಷಗಳನ್ನು ಧರಿಸಿ ರಾಜದುರ್ಗ ಕೋಟೆಯೊಳಗೆ ಪ್ರವೇಶಿಸತಕ್ಕದ್ದು. ಅಲ್ಲಿನ ಸರದಾರನ ಕೃಪೆಯನ್ನು ಸಂಪಾದಿಸಿ ಪಠಾಣ ಸೇನೆಯಲ್ಲಿ ಉದ್ಯೋಗಗಳನ್ನು ಪಡೆಯಬೇಕು. ಕೋಟೆಯೊಳಗಿನ ಎಲ್ಲ ರಹಸ್ಯಗಳನ್ನು ತಿಳಿದು, ರಾತ್ರಿ ಹೊತ್ತು ಕೋಟೆಯ ಬಾಗಿಲುಗಳನ್ನು ತೆರೆದು ವಿದ್ರೋಹಿಗಳನ್ನು ಒಳಗೆ ಬಿಡತಕ್ಕದ್ದು. ಇವಾಗಿದ್ದವು ಜ್ಞಾನಾನಂದನ ಹಂಚಿಕೆಗಳು.

ಜ್ಞಾನಾನಂದನ ಹಂಚಿಕೆಯು ತೋರಿಕೆಗೆ ಬಹು ಸುಲಭವಾಗಿ ಕಂಡು ಬಂದರೂ ಅದಕ್ಕೆ ಕಾರ್ಯರೂಪವನ್ನು ಈಯುವದು ಅತ್ಯಂತ ಪ್ರಯಾಸವಾದ ಕೆಲಸವಾಗಿದ್ದಿತು. ಪಠಾಣರ ದುರ್ಗದೊಳಗೆ ವೇಷವನ್ನು ಮರೆಮಾಜಿ ನುಗ್ಗುವದೆಂದರೆ, ಮೃತ್ಯುವಿನ ಗವಿಯನ್ನು ನುಗ್ಗಿದಂತೆಯೇ ಸರಿ ಎಂದು ಎಲ್ಲರೂ ಅರಿತಿದ್ದರು. ತಾವು ವಿದ್ರೋಹಿಗಳೆಂಬುದು ಪಠಾಣರಿಗೆ ತಿಳಿದರೆ ತಮ್ಮ ಜೀವನದ ನಾಟಕಗಳು ಸಮಾಪ್ತಿಯನ್ನು ಹೊಂದುವವು ಎಂಬುದನ್ನು ವಿದ್ರೋಹಿಗಳು ಬಲ್ಲವರಿದ್ದರು. ಆದುದರಿಂದ ಅವರು ಜ್ಞಾನಾನಂದನ ಹಂಚಿಕೆಯನ್ನು ನಡೆಸಲು ತುಸ ಹಿಂದು ಮುಂದು ನೋಡಿದರು.

ಈ ಸಂದರ್ಭದಲ್ಲಿ ಜ್ಞಾನಾನಂದನ ಹಂಚಿಕೆಯನ್ನು ತಾನು ಸಾಧಿಸುವೆನೆಂದು ಕುಮಾರ ಅಮರಸಿಂಹನು ಅಂದನು. ಅವನ ಧೈರ್ಯವು ಎಲ್ಲರನ್ನೂ ಬೆರಗುಗೊಳಿಸಿತು. ಅವನು ಎರಡು ಮಂದಿ ಸಂಗಾತಿಗಳೊಡನೆ ರಾಜದುರ್ಗದ ಪಠಾಣ ಪಾಳಯಕ್ಕೆ ಹೋಗಲು ಒಪ್ಪಿದನು. ತನ್ನ ಪ್ರೀತಿಯ ಶಿಷ್ಯನ ಎವೆಗಾರಿಕೆಯನ್ನು ಜ್ಞಾನಾನಂದನು ಹೊಗಳಿದನು.

ಕುಮಾರನು ತನ್ನ ಎರಡು ಮಂದಿ ಗೆಳೆಯರೊಡನೆ ಪಠಾಣ ವೇಷವನ್ನು ಧರಿಸಿ ರಾಜದುರ್ಗ ಕೋಟೆಯೊಳಗೆ ಪ್ರವೇಶಿಸಿದನು. ತನ್ನ ವೇಷವನ್ನು ಮಾರ್ಪಡಿಸುವದರಲ್ಲಿ ಕುಮಾರನು ಅತ್ಯಂತ ನಿಪುಣನಾಗಿದ್ದುದರಿಂದ ಅವನನ್ನು ಗುರತಿಸಲು ಪಠಾಣರಿಗೆ ಸಾಧ್ಯವಾಗಲಿಲ್ಲ. ಕುಮಾರನು ರಾಜದು:ರ್ಗದ ಸರದಾರನ ಪರಿಚಯವನ್ನು ಸಂಪಾದಿಸಿದನು. ಕುಮಾರನಿಗೂ ಅವನ ಗೆಳೆಯರಿಗೂ ಮಾತಾಡಲು ಪರ್ಶಿಯನ ಭಾಷೆಯು ಚೆನ್ನಾಗಿ ಬರುತ್ತಿದ್ದಿತು. ಅವನು ರಾಜದುರ್ಗದ ಸರದಾರನನ್ನು ಕಂಡು ಹೀಗೆ ಹೇಳಿದನು: "ನಾವು ಕೆಲಸವನ್ನು ಹುಡುಕುತ್ತ ಕಾಬೂಲಿನಿಂದ ಬಂದವರಾಗಿರುತ್ತೇವೆ. ತಮ್ಮ ದಂಡಿನಲ್ಲಿ ನಮ್ಮಗಳಿಗೆ ಕೆಲಸಗಳನ್ನು ದಯಪಾಲಿಸಬೇಕು."

ಕುಮಾರನ ಮಾತುಗಳೂ ಮೈಕಟ್ಟೂ ಸರದಾರನನ್ನು ಆಕರ್ಷಿಸಿದುವು. ಅಮರಸಿಂಹನ ವೇಷವು ಅವನೊಬ್ಬ ಬಲಶಾಲಿಯೆಂಬುದನ್ನು ಸೂಚಿಸತಕ್ಕುದಾಗಿದ್ದಿತು. ಗಾಂಭೀರ್ಯ ಮನೋವೃತ್ತಿಯಿಂದ ಕೂಡಿದ್ದ ಈ ತರುಣರಿಗೆ ಕೆಲಸಗಳನ್ನು ಕೊಡಲು ಸರದಾರನು ಒಪ್ಪಿದನು. ಆ ಮೂವರೂ ಪಠಾಣ ಸೇನೆಯಲ್ಲಿ ದಂಡಾಳುಗಳಾಗಿ ಸೇರಿದರು.

ಪಠಾಣರ ದಳದ ಪರಿಚಯವನ್ನು ಕುಮಾರನು ಸಂಪಾದಿಸಿದ. ಅವರ

ಆಯುಧಗಳು, ಸೈನಿಕ-ಸರಂಜಾಮುಗಳು ಈ ರಹಸ್ಯಗಳನ್ನೆಲ್ಲ ಆತ ಬಹು ಬೇಗನೆ ಅರಿತುಕೊಂಡ. ಪಠಾಣರು ಅಪ್ರತಿಮ ಧೈರ್ಯಶಾಲಿಗಳಾಗಿದ್ದರೂ ಅವರಲ್ಲಿ ನೈತಿಕ ಬಲವಿಲ್ಲದಿದ್ದುದರಿಂದ ಅವರ ಸತ್ವವು ಕಡಿಮೆಯಾಗಹತ್ತಿದೆ ಯೆಂಬುದು ಕುಮಾರನಿಗೆ ಹೊಳೆಯದಿರಲಿಲ್ಲ. ಅಂತು ರಾಜದುರ್ಗದ ನೈಜ ಪರಿಸ್ಥಿತಿಗಳ ಪರಿಚಯವು ಅವನಿಗಾಯಿತು. ಪಠಾಣರ ಬಲವೆಷ್ಟೆಂಬುದು ಅವನಿಗೆ ತಿಳಿದಿತು. ತಾನು ಅರಿತ ಸಂಗತಿಗಳನ್ನು ತನ್ನ ಸಂಗಡಿಗರಿಗೆ ಅವನು ಅರುಹಿದ. ರಾಜದುರ್ಗ ಕೋಟೆಯೊಳಗಿನ ಸಂಗತಿಗಳು ವಿದ್ರೋಹಿಗಳಿಗೆ ವಿದಿತ ವಾಗಲು ಅವರು ಕೋಟೆಯನ್ನು ಹೇಗೆ ವಶಮಾಡಿಕೊಳ್ಳಬೇಕೆಂಬುದನ್ನು ಚಿಂತಿಸತೊಡಗಿದರು. ಈ ಸಂದರ್ಭದಲ್ಲಿ ಯಾವುದಾದರೂ ಒಂದು ಸ್ಥಳವಲ್ಲಿ ತಮ್ಮ ಅಧಿಕಾರವನ್ನು ಭದ್ರಪಡಿಸುವದು ಅವರಿಗೆ ಅತ್ಯಾವಶ್ಯಕವೆಂದು ತೋರ ತೊಡಗಿತು. ನಾಡಿನಲ್ಲೆಲ್ಲ ಗೊಂದಲಗಳನ್ನೆಬ್ಬಿಸುತ್ತ ನಡೆಯುವದರಿಂದ ತಮ್ಮ ಕಾರ್ಯಸಾಧನೆಯಾಗುವದೆಂದು ವಿದ್ರೋಹಿಗಳಾಗಲೀ ಜ್ಞಾನಾನಂದ ನಾಗಲೀ ತಿಳಿದುಕೊಂಡಿರಲಿಲ್ಲ. ಯಾವುದಾದರೂ ಒಂದು ಮೂಲೆಯಲ್ಲಿ ತಮ್ಮ ಶಾಸನವನ್ನು ಸ್ಥಾಪಿಸಬೇಕು; ಹಾಗಾದರೆ ಮಾತ್ರ ಜನತೆಯ ಒಲವು-ಬಲಗಳು ಲಭ್ಯವಾಗುವೆಂಬುದರ ಅರಿವು ಅವರಿಗಿದ್ದಿತು. ಜನರು ತಮ್ಮ ಕೊಡೆಯ ನೆರಳಿನಲ್ಲಿ ಬಂದು ಸೇರಬೇಕು; ಹಾಗಾದರೆ ಮಾತ್ರ ತಮ್ಮ ನಾಡಿನ ಸ್ವಾತಂತ್ರ್ಯವನ್ನು ಮರಳಿ ಪಡೆಯಲು ಸಾಧ್ಯವಾಗುವದು. ಹೀಗೆ ಅವರು ಚಿಂತಿಸುತ್ತಿದ್ದರು. ಈ ವಿಚಾರದಿಂದಲೇ ಜ್ಞಾನಾನಂದನು ರಾಜದುರ್ಗವನ್ನು ವಶಪಡಿಸಿಕೊಳ್ಳಬೇಕೆಂಬ ಹಂಚಿಕೆಯನ್ನು ಹೂಡಿದ್ದನು.

ಕುಮಾರನಿಂದ ರಾಜದುರ್ಗದ ಸ್ಥಿತಿಗತಿಗಳು ತಿಳಿದು ಬರಲು, ಜ್ಞಾನಾನಂದನಿಗೆ ಇನ್ನು ತಡಮಾಡುವದು ಸರಿಯಲ್ಲವೆಂದೆನಿಸಿತು. ವಿದ್ರೋಹಿಗಳೆಲ್ಲಿ ಒಂದುಗೂಡಬೇಕೆಂದು ಆತನು ಅಪ್ಪಣೆಯನ್ನು ಹೊರಡಿಸಿದ. ಯಾವ ದಿನ ಕೋಟೆಯನ್ನು ಆಕ್ರಮಿಸಬೇಕೆಂಬುದನ್ನು ನಿಶ್ಚಯಿಸಿದುದೂ ಆಯಿತು. ಗೂಢ ಚಾರರು ಈ ವಾರ್ತೆಯನ್ನು ಕುಮಾರನಿಗೆ ಉಸುರಲು ರಾಜದುರ್ಗಕ್ಕೆ ತೆರಳಿ ದರು. ಜ್ಞಾನಾನಂದನಿಂದ ಕುಮಾರನಿಗೆ ಈ ಆದೇಶ ದೊರಕಿತು: "ನಡುರಾತ್ರಿ ಯಲ್ಲಿ ಪಠಾಣರು ನಿದ್ರಿಸುವಾಗ ಕೋಟೆಯ ಬಾಗಿಲನ್ನು ತೆರೆಯತಕ್ಕದ್ದು. ಆಯುಧ-ಸರಂಜಾಮುಗಳನ್ನು ಭದ್ರಪಡಿಸಿಟ್ಟ ಮನೆಗೆ ಬೆಂಕಿ ಹಚ್ಚಬೇಕು."

ಈ ಆಜ್ಞೆಯನ್ನು ಕುಮಾರ ಅಮರಸಿಂಹನೂ ಆತನ ಸಂಗಡಿಗರೂ

ಅಕ್ಷರಶಃ ನೆರವೇರಿಸಿದರು. ಪಠಾಣರಾದರೋ ಆಕಸ್ಮಿಕವಾಗಿ ಹೀಗೊಂದು ಕಾರಸ್ಥಾನವು ನಡೆಯುತ್ತಲಿದೆಯೆಂಬುದನ್ನು ಸಪ್ನೇಪಿ ವಿಚಾರಿಸಿರಲಿಲ್ಲ. ಎಲ್ಲರೂ ರಾತ್ರಿ ಮಲಗಿ ನಿದ್ರಾಂಗನೆಯ ಕೃಪಾಕಟಾಕ್ಷವೀಕ್ಷಣಕ್ಕೆ ಪಾತ್ರೀಭವಿಸಿದ್ದರು. ಈ ಸಂದರ್ಭದಲ್ಲಿ ಆಯುಧಶಾಲೆಗೆ ಬೆಂಕಿ ಹತ್ತಿತು. ಶತ್ರುಗಳು ಕೋಟೆಯೊಳಗೆ ಪ್ರವೇಶಿಸಿದರು. ಪಠಾಣರು ತಮಗೆ ಬಂದೊದಗಿದ ವಿಪತ್ತನ್ನು ದರ್ಶಿಸಿ ದಿಂಙ್ಮೂಢರಾಗಿ ಹೋದರು. ಕಾದಾಡಲು ಸರಿಯಾದ ಆಯುಧಗಳು ಸಿಗಲಿಲ್ಲ. ಕೋಟೆಯೊಳಗೆ ಶತ್ರುಗಳು ಪ್ರವೇಶಿಸಿದ್ದುದರಿಂದ ಅವರನ್ನು ತಡೆಗಟ್ಟುವದು ಹೇಗೆಂಬುದು ತಿಳಿಯಲಿಲ್ಲ. ಅವರನ್ನು ನಾಲ್ಕು ಕಡೆಗಳಿಂದಲೂ ವಿದ್ರೋಹಿಗಳು ಆವರಿಸಿದ್ದರಿಂದ ಪಾರಾಗಲು ಧಾರಿದೊರಕಲಿಲ್ಲ.

ಈ ರೀತಿಯ ತಂತ್ರಯುದ್ಧದಲ್ಲಿ ಪಠಾಣರಗೆ ಜಯಸಿಗುವಂತಿರಲಿಲ್ಲ. ವಿದ್ರೋಹಿಗಳಿಗೆ ಜನರ ಬೆಂಬಲವಿದ್ದಿತು. ರಾಜದುರ್ಗದ ಸುತ್ತಲಿನ ಹಳ್ಳಿಪಳ್ಳಿಗಳಲ್ಲಿ ನೆಲೆಸಿದ್ದ ಒಕ್ಕಲಿಗರು ತಮ್ಮ ಸಕಲ ವಿಪತ್ತುಗಳಿಗೂ ಪಠಾಣರೇ ಕಾರಣಭೂತರೆಂದು ಬಗೆದಿದ್ದುದರಿಂದ ಅವರು ಸ್ವಾಭಾವಿಕವಾಗಿಯೇ ವಿ-ದ್ರೋಹಿಗಳಿಗೆ ಸಹಾಯ ಮಾಡಿದರು; ಇದಲ್ಲದೆ ವಿದ್ರೋಹಿಗಳು ಪಠಾಣರಿಗೆ ವಿರುದ್ಧವಾಗಿ ಬೇಕಾದಷ್ಟು ಪ್ರಚಾರಗಳನ್ನು ಮಾಡಿ ಜನರ ಮನಸ್ಸುಗಳಲ್ಲಿ ಪಠಾಣರ ಬಗ್ಗೆ ವಿದ್ವೇಷ ಹುಟ್ಟುವಂತೆ ಮಾಡಿದ್ದರು. ಈ ಕಾರಣಗಳಿಂದ ಪಠಾಣರಿಗೆ ಜನರ ಸಹಾಯವು ಲಭ್ಯವಾಗಲಿಲ್ಲ; ಅದು ಮಾತ್ರವಲ್ಲ, ಪಠಾಣರ ಆಳ್ವಿಕೆಯನ್ನು ಸಮಾಪ್ತಿಗೊಳಿಸುವದರಲ್ಲಿ ಜನರು ವಿದ್ರೋಹಿಗಳಿಗೆ ಸಹಾಯವನ್ನು ಮಾಡಿದರು.

ರಾಜದುರ್ಗದಲ್ಲಿ ಈ ಎರಡು ಪಕ್ಷಗಳೂ ಪರಸ್ಪರ ಹೋರಾಡಿದ ಸಂಗತಿಗಳು ನಮಗೆ ತಿಳಿದೇ ಇವೆ. ಸರದಾರನು ಕುಮಾರನ ಖಡ್ಗಕ್ಕೆ ಆಹುತಿಯಾಗಿ ನೆಲಕ್ಕೆ ಬೀಳಲು ಪಠಾಣರ ಧೈರ್ಯವು ಅಳಿದಿತು. ಅವರು ವಿದ್ರೋಹಿಗಳಿಂದ ಕೋಟೆಯನ್ನು ಸಂರಕ್ಷಿಸಿಕೊಳ್ಳಲು ಶಕ್ತರಾಗಲಿಲ್ಲ. ಅವರು ತಮ್ಮ ಜೀವದಾಸೆಯಿಂದ ಕೋಟೆಯನ್ನು ಬಿಟ್ಟು ಓಡಿದರು.

ರಾಜದುರ್ಗವು ಜ್ಞಾನಾನಂದನ ನಿರೀಕ್ಷಣೆಯಂತೆ ಹೆಚ್ಚಿನ ತೊಂದರೆಗಳಿಲ್ಲದೆ ವಿದ್ರೋಹಿಗಳ ಕರಗತವಾಯಿತು. ಅಲ್ಲಿ ವಿದ್ರೋಹಿಗಳ ಬಾವುಟವು ಹಾರಾಡತೊಡಗಿತು.

ರಾಜದುರ್ಗದ ಪಠಾಣ ನಿವಾಸಿಗಳು ಕೋಟೆಯು ವಿದ್ರೋಹಿಗಳ ವಶ

ವಾಯಿತೆಂಬುದನ್ನು ತಿಳಿಯಲು ಗಾಬರಿಗೊಂಡಿದ್ದರು. ಆ ರೀತಿ ಭಯಪೀಡಿತ ರಾಗಲು ಕಾರಣಗಳು ಇಲ್ಲದಿರಲಿಲ್ಲ. ಪಠಾಣರ ಆಳ್ವಿಕೆಯಲ್ಲಿ ಹಿಂದುಗಳ ಮೇಲೆ ಭಯಂಕರ ಅತ್ಯಾಚಾರಗಳು ಜರುಗಿದ್ದವು. ಹಿಂದುಗಳಾಗಿ ಹುಟ್ಟಿದ ತಪ್ಪಿಗೆ ಜನರು ಚಿತ್ರ ಹಿಂಸೆಗಳಿಗೆ ಗುರಿಯಾಗಿದ್ದರು. ಈ ಅತ್ಯಾಚಾರಗಳಿಗೆ ಒಂದು ಪ್ರತೀಕಾರವಾಗಿ ವಿಜಯಶಾಲಿಗಳಾದ ವಿದ್ರೋಹಿಗಳು ತಮ್ಮನ್ನು ಹಿಂಸಿಸಲು ಉದ್ಯುಕ್ತರಾಗುವರೆಂಬುದು ಪಠಾಣನಿವಾಸಿಗಳ ಭಾವನೆಯಾಗಿದ್ದಿತು. ಅಂದರತೆಯೇ ಬಂಡುಗಾರರು ತಮ್ಮ ಹೆಂಗಸರನ್ನು ಅಪಮಾನಿಸಲು ಹಿಂಜರಿಯಲಾರರೆಂದು ಅವರು ಬಗೆದಿದ್ದರು; ಆದರೆ ಅವರ ಈ ತಿಳುವಳಿಕೆಗಳನ್ನು ವಿಜಯಶಾಲಿಗಳಾದ ವಿದ್ರೋಹಿಗಳ ವರ್ತನೆಗಳು ಹೋಗಲಾಡಿಸಿದುವು. ಅನ್ಯಧರ್ಮಾವಲಂಬಿಗಳೆಂಬ ಕಾರಣದಿಂದ ವಿದ್ರೋಹಿಗಳು ಪಠಾಣರನ್ನು ಹಿಂಸಿಸಲು ಹೊರಡಲಿಲ್ಲ. ಕೋಟೆಯು ವಿದ್ರೋಹಿಗಳ ವಶವಾದ ಮರುದಿನವೇ ಜ್ಞಾನಾನಂದನು ಹೀಗೆ ಡಂಗುರ ಹೊಡೆಸಿದನು: "ಧರ್ಮದ ಹೆಸರು ಹೇಳಿ, ಅನ್ಯಾಯಗಳನ್ನು ಆಚರಿಸಲು ವಿದ್ರೋಹಿಗಳು ಬಯಸುವದಿಲ್ಲ: ನಮ್ಮ ಆಳ್ವಿಕೆಯಲ್ಲಿ ಹಿಂದುಗಳಿಗಿರುವಷ್ಟೇ ಸ್ವಾತಂತ್ರ್ಯವು ಪಠಾಣರಿಗೂ ಇದ್ದೇ ಇರುತ್ತದೆ. ಸತ್ಯ ಮತ್ತು ನ್ಯಾಯ ಇವುಗಳನ್ನು ಹಿಡಿದು ಪ್ರವರ್ತಿಸುತ್ತಿರುವ ತನಕ ಯಾರೂ ಪ್ರಜೆಗಳನ್ನು ತಡೆಯರು. ಪ್ರತಿಯೊಬ್ಬ ಮಹಿಳೆಯ ಮಾನವನ್ನು ಹೊಸ ಆಳ್ವಿಕೆಯು ಸುರಕ್ಷಿತವಾಗಿ ಕಾಯುವದು.

ಈ ರೀತಿ ಡಂಗುರ ಸಾರಿದುದು ಮಾತ್ರವಲ್ಲ, ತಮ್ಮ ನುಡಿಗಳಂತೆ ವಿದ್ರೋಹಿಗಳು ಅಕ್ಷರಶಃ ವರ್ತಿಸಿದರು. ಅನ್ಯರನ್ನು ಹಿಂಸೆಗೆ ಗುರಿಮಾಡುವದು ಸರಿಯಲ್ಲ. ಅನ್ಯರ ದುಃಖಪರಿಹಾರವಾಗಿದೆ ತಮ್ಮ ಉದ್ದೇಶವೆಂಬುದನ್ನು ತಮ್ಮ ಕೃತಿಗಳ ಮೂಲಕ ತೋರಿಸಿಕೊಟ್ಟರು. ಅವರು ಇಸ್ಲಾಂಧರ್ಮಾವಲಂಬಿಗಳ ಪ್ರಾರ್ಥನೆಗಳನ್ನು ಗೌರವದ ದೃಷ್ಟಿಯಿಂದ ನೋಡಿದರು. ಅವರ ಮತ-ವಿಶ್ವಾಸಗಳಿಗೆ ನೋವನ್ನುಂಟು ಮಾಡತಕ್ಕ ಯಾವ ಕೆಲಸವನ್ನೂ ಆಚರಿಸಲಿಲ್ಲ. ಯಾವನಾದರೂ ಒಬ್ಬ ಹಿಂದೂ ಪ್ರಜೆಯು ಮುಸ್ಲೀಮರನ್ನು ಅವಿವೇಕದಿಂದ ಪಿಡಿಸ ಹೊರಟರೆ ಆತನಿಗೆ ಯೋಗ್ಯ ದಂಡನೆಗಳನ್ನು ವಿಧಿಸುತ್ತಿದ್ದರು.

ವಿದ್ರೋಹಿಗಳ ಈ ವರ್ತನೆಗಳು ಪಠಾಣರಲ್ಲಿ ನೆಲೆಸಿದ್ದ ತಪ್ಪುತಿಳುವಳಿಕೆಗಳನ್ನು ಹೋಗಲಾಡಿಸಿದವು. ತಮ್ಮ ಪ್ರಾರ್ಥನಾಲಯಗಳನ್ನೂ ಮತವಿಶ್ವಾಸ

ಗಳನ್ನೂ ಗೌರವಿಸುತ್ತಲಿರುವ ವಿದ್ರೋಹಿಗಳನ್ನು ಸಂಶಯದೃಷ್ಟಿಯಿಂದ ನೋ
ಡುವದು ಎಷ್ಟು ದೊಡ್ಡ ಅವಿವೇಕವೆಂಬುದು ಅವರಿಗೀಗ ತಿಳಿದಿತು. ಪಠಾಣ
ಶಾಸನಕ್ಕೂ ವಿದ್ರೋಹಿಗಳ ಶಾಸನಕ್ಕೂ ಇದ್ದ ವಿಭಿನ್ನತೆಯ ಅರಿವು ಅವರಿಗಾ
ಯಿತು. ತಾವೂ ಹಿಂದುಗಳೂ ಸಹೋದರರಂತೆ ಒಂದೇ ನಾಡಿನಲ್ಲಿ ಜೀವಿಸಲು
ಸಾಧ್ಯವಿದೆಯೆಂಬುದನ್ನು ರಾಜದುರ್ಗ ಪಠಾಣರು ಅರಿತುಕೊಂಡರು. ಅಂತು
ಶ್ಯಾನಾನಂದನ ಮುಂದಾಳುತನದಲ್ಲಿ ರಾಜದುರ್ಗದಲ್ಲಿ ಸಂಸ್ಥಾಪಿತವಾದ
ವಿದ್ರೋಹಿಗಳ ಶಾಸನವು ಜನಪ್ರಿಯವಾಯಿತೆಂದು ಹೇಳಬಹುದು.

---

## ೧೧ ಅಧಿಕಾರತ್ಯಾಗ.

ತನ್ನ ಅರಮನೆಯ ಹಜಾರದಲ್ಲಿ ಹುಕ್ಕವನ್ನು ಸೇದುತ್ತ ಸುಭೇದಾರ
ಮೊಕೂಬಖಾನನು ಆಸೀನನಾಗಿದ್ದ. ಅವನ ಮೋರೆಯಿಂದ ಚಿಂತೆಯ ಕಿಡಿ
ಗಳು ಸ್ಫುರಿಯುತ್ತಿದ್ದವು. ಆಗಾಗ ಅವನ ನಾಸಿಕರಂಧ್ರಗಳಿಂದ ದೀರ್ಘನಿಶ್ವಾ
ಸವೊಂದು ಹೊರಡುತ್ತಲಿದ್ದಿತು. ತನ್ನ ಎಡಗೈಯನ್ನು ಹಣೆಯ ಮೇಲೆ
ಮಡಗಿ ಅವನು ಏನನ್ನೋ ಆಲೋಚಿಸುತ್ತಿದ್ದ. ಹೀಗೆ ಆಲೋಚನಾಮಗ್ನ
ನಾದ ಖಾನನನ್ನು ಪಹರೆಯವನೊಬ್ಬನು ಬಂದು ಎಚ್ಚರಿಸಿದ. ಆತ ಖಾನನಿಗೆ
ಹೀಗೆ ಉಸುರಿದ: "ದುರ್ಜಯಸಿಂಹರು ಹೊರಗೆ ಕಾದುನಿಂತಿದ್ದಾರೆ."

"ಒಳ್ಳೇದು, ಒಳಗೆ ಬರಹೇಳು" ಖಾನನ ಆಜ್ಞೆಯಾಯಿತು.

ಪಹರೆಯವನು ಹೊರ ತೆರಳಿದ. ಇನ್ನೆರಡು ನಿಮಿಷಗಳಲ್ಲಿ ದುರ್ಜ
ಯನು ಹಜಾರದೊಳಗೆ ಪ್ರವೇಶಿಸಿದ. ಆತನು ಮೂರು ಸಲ ನೆಲಮುಟ್ಟಿ ತನ್ನ
ಪ್ರಣಾಮಗಳನ್ನು ಖಾನನಿಗೆ ನಿವೇದಿಸಿದ. ಖಾನನು ತಿರಸ್ಕಾರ ದೃಷ್ಟಿಯಲ್ಲಿ
ತನ್ನ ಕಣ್ಣುಗಳನ್ನು ದುರ್ಜಯನ ಕಡೆಗೆ ಹೊರಳಿಸಿದ. ದುರ್ಜಯನಿಗೆ
ಮಾತಾಡಲು ಧೈರ್ಯವಿರಲಿಲ್ಲ. ಆದುದರಿಂದ ಒಂದು ಶಿಲಾಬಿಂಬದಂತೆ
ಅವನು ಅಲ್ಲಿಯೇ ನಿಂತನು.

ಕೊನೆಗೆ ಸುಭೇದಾರನೇ ಸಂಭಾಷಣೆಯನ್ನು ಪ್ರಾರಂಭಿಸಿದ: "ಲೋ,
ದುರ್ಜಯ, ಆ ಕೆಟ್ಟವಾರ್ತೆಯನ್ನು ತರುವದಕ್ಕಾಗಿ ನೀನು ವಿದ್ರೋಹಿಗಳಿಗೆ
ಬೆನ್ನು ತೋರಿಸಿದೆಯಾ?"

ಅಂಜುತ್ತಾ ದುರ್ಜಯನು ಜವಾಬು ಹೇಳಿದ: "ಹೆದರಿಕೆಯಿಂದಲ್ಲ ನಾನು

ಹಿಂದಿರುಗಿ ಬಂದವದು."

"ಹಾಗಾದರಿನ್ನೇಕೆ?" "ತಮ್ಮನ್ನು ವಿಚಾರಿಸಿ...."

"ನನ್ನನ್ನು ವಿಚಾರಿಸಿಯೊ? ನನ್ನನ್ನು ನೋಡಿಕೊಳ್ಳಲು ನಾನು ಸಮರ್ಥ ನಿರುವೆನು."

"ಹಾಗಲ್ಲ ಖಾನಸಾಹೇಬ!" ತುಸ ಧೈರ್ಯವನ್ನು ತಂದುಕೊಂಡ ಮೇಲೆ ದುರ್ಜಯನು ತನ್ನ ತುಟಿಗಳನ್ನು ಬಿಚ್ಚಿದ. "ಆ ಹೆಣ್ಣುಮಗಳ ಸಂಗತಿಯು ಸಾಹೇಬರ ನೆನಪಿನಲ್ಲಿರಬಹುದು. ಆ ಹಕ್ಕಿಯನ್ನು ಹಿಡಿದು ಕೊಡುವದಾಗಿ ನಾನು ತಮಗೆ ಮಾತು ಕೊಟ್ಟಿದ್ದೆ. ಅದನ್ನು ನೆರವೇರಿಸಲು ನಾನು ಹಿಂದಿರುಗಿ ದ್ದೇನೆ. ಇಲ್ಲದಿದ್ದರೆ ಕಾದಾಡಿ ಸಾಯುತ್ತಿದ್ದೆ. ತಮ್ಮ ಉಪ್ಪುತಿಂದುದನ್ನು ಮರೆತಿಲ್ಲವೆಂಬುದನ್ನು ತೋರಿಸುತ್ತಿದೆ."

"ಇರಲಿ, ದುರ್ಜಯ" ಖಾನನ ಕೊರಳಿಂದ ತುಸ ಸೌಮ್ಯವಾದ ಸ್ವರವು ಹೊರಬಿದ್ದಿತು. "ಆ ಅರಗಿಳಿಯ ವಿಷಯವೇನಾಯಿತು?"

"ಪಕ್ಕಿಯು ಪಂಜರದೊಳಗೆ ಬಿದ್ದಿತು." ದುರ್ಜಯನು ಅಭಿಮಾನದಿಂದ ಹೇಳಿದ.

"ಯಾವಾಗ?" "ಈ ದಿನ ಬೆಳಿಗ್ಗೆ"

"ಎಲ್ಲಿಯಾದರೂ ಗೂಡಿನಿಂದ ತಪ್ಪಿಸಿಕೊಂಡು ಹೋಗಬಹುದು. ಎಲ್ಲಿ ರಿಸಿರುವೆ?"

"ನನ್ನ ನಿಲಯದಲ್ಲಿ ಭದ್ರವಾಗಿದೆ. ಆ ಗಿಳಿಯು ಪಂಜರದಿಂದ ತಪ್ಪಿಸಿ ಕೊಳ್ಳಲಾರದು."

"ಶಹಬಾಸ್! ನೀನು ಒಳ್ಳೆಯ ಜಾಣನಿರುವೆ. ಬಾರಣ್ಣಾ, ಹೀಗೆ ಕುಳಿತು ಕೋ" ಎಂದು ತನ್ನ ಗಾದಿಯ ಪಕ್ಕದಲ್ಲಿ ಕುಳಿತುಕೊಳ್ಳಲು ಖಾನನು ದುರ್ಜ ಯನನ್ನು ಒತ್ತಾಯ ಪಡಿಸಿದನು.

"ಒಲ್ಲೆ ಖಾನಸಾಹೇಬ!" ದುರ್ಜಯನು ಹಿಂದಕ್ಕೆ ಸರಿದ.

"ಪರವಾ ಇಲ್ಲ ಬಾ!" ಖಾನನು ತಾನೇ ಎದ್ದು ದುರ್ಜಯನ ಕೈಹಿಡಿದು ತನ್ನ ಗಾದಿಯ ಪಕ್ಕದಲ್ಲಿ ಕುಳ್ಳಿರಿಸಿದ. ಅದಲ್ಲದೆ ಹುಕ್ಕಾದಿಂದ ದುರ್ಜಯ ನನ್ನು ಸತ್ಕರಿಸಿದ. ಆತನ ನಿರ್ಬಂಧದ ಮೂಲಕ ದುರ್ಜಯನು ಹುಕ್ಕ ಸೇದ ತೊಡಗಿದ. ದುರ್ಜಯನ ಬೆನ್ನ ಮೇಲೆ ತನ್ನ ಕೈಯಾಡಿಸುತ್ತಾ ಯಾಕೂಬನು ಆಪ್ತಮಿತ್ರನಂತೆ ಮಾತಾಡತೊಡಗಿದ.

"ಅವಳು ಹೇಗಿದ್ದಾಳೆ? ಆಕೆಯನ್ನು ನೀನು ಹೇಗೆ ಅಧೀನಪಡಿಸಿಕೊಂಡೆ?"

"ಚಿನ್ನದ ಹಾಗಿದ್ದಾಳೆ. ಕೆಲವು ಮಂದಿಯನ್ನು ನಿಶ್ಚಯಿಸಿದ್ದೆ. ಅವಳು ದೇವಾಲಯದಿಂದ ಹಿಂದಿರುಗುವಾಗ ಜನರು ಹೊಂಚು ಹಾಕುತ್ತಲಿದ್ದರು. ಅವಳು ಹಿಂದಿರುಗಿ ಬರುತ್ತಿದ್ದಾಗ, ಈ ಜನರು ಅವಳನ್ನು ಹಿಡಿದು ಪಲ್ಲಕ್ಕಿಯಲ್ಲಿರಿಸಿ ನನ್ನಲ್ಲಿಗೆ ತಂದರು."

"ಬೇಷ್! ಬಹು ಚಲೋದಾಯ್ತು. ಇಂದು ಸಂಜೆಗೇ ನಾನು ನಿನ್ನಲ್ಲಿಗೆ ಬರುವೆ."

"ಸಾಹೇಬ! ಇಷ್ಟೆಲ್ಲ ಪ್ರಯತ್ನ ಮಾಡಿದ ಮೇಲೆ ಹಕ್ಕಿ ಪಂಜರದೊಳಗೆ ಬಿದ್ದಿತು. ದುಡುಕಿದರೆ ಜೇನು ಸಹಾ ಕಹಿಯಾಗುವದುಂಟು. ಆಕೆ ಬೆದರಿದ್ದಾಳೆ; ಹಳಹಳಿಸುತ್ತಿದ್ದಾಳೆ. ಈ ಸಂದರ್ಭದಲ್ಲಿ ತಾವು ಅವಸರಪಡುವದಾದರೆ ಕೆಲಸವು ಕೆಟ್ಟು ಹೋಗಬಹುದು. ಎರಡು ಮೂರು ದಿನಗಳು ಕಳೆಯಲಿ! ಆಗ ಆಕೆಯ ಮನಸ್ಸು ಶಾಂತವಾಗುವದು; ಅಂಜಿಕೆಯೂ ತೀರುವದು. ಬಲಾತ್ಕಾರದಿಂದ ರಸವು ಕೆಡಬಹುದು. ಆದುದರಿಂದ ಆಕೆ ಒಲಿಯುವ ತನಕ ಕಾದಿರುವದು ಲೇಸು."

"ದುರ್ಜಯ ನಿನಗಿಂತ ಬೇರೆ ಆಪ್ತರಿಲ್ಲೆನಗೆ." ತುಸ ಆಲೋಚಿಸಿದ ಮೇಲೆ ಖಾನನು ಹೇಳಿದ: "ಆದರೆ ನೋಡು, ಆ ಹಕ್ಕಿಯು ಗೂಡಿನಿಂದ ತಪ್ಪಿಸಿಕೊಳ್ಳಕೂಡದು. ಅಷ್ಟೆ ನನಗೆ ಬೇಕಾದುದು."

"ಇಲ್ಲ,-ಇಲ್ಲ, ಅದನ್ನು ನಾನು ಜಾಗ್ರತೆಯಿಂದ ನೋಡಿಕೊಳ್ಳುವೆ. ಆಕೆ ನನ್ನ ಬಂಧನದಿಂದ ಪಾರಾಗುವಂತಿಲ್ಲ."

"ಒಳ್ಳೆಯದು."

ಪಹರೆಯುವನು ಪುನಃ ಬಂದು ಖಾನನಿಗೆ ವಂದಿಸಿದ. ಸುಭೇದಾರನು ತಲೆಯೆತ್ತಿ ಹೇಳಿದ "ಏನು?"

"ಉಸ್ಮಾನಖಾನರು ಬಂದಿದ್ದಾರೆ."

"ಒಳ್ಳೆಯದು, ಒಳಗೆ ಬರಹೇಳು." ಎಂಬ ಅಪ್ಪಣೆಯು ಹೊರಟಿತು ಸುಭೇದಾರನಿಂದ. ಪಹರೆಯುವನು ಹೊರಗೆ ತೆರಳಿದ ಮೇಲೆ ಆತ ತನ್ನ ವದನವನ್ನು ದುರ್ಜಯನ ಕಡೆಗೆ ತಿರುಗಿಸಿದ: "ದುರ್ಜಯ ಒಳ್ಳೆಯದು; ಸದ್ಯಕ್ಕೆ ಹೋಗು. ನಾಳೆ ಬೆಳಗಿನ ಹೊತ್ತು ಬಾ. ಆ ಮೇಲೆ ಮಾತಾಡುವಾ."

"ಒಳ್ಳೆಯದು." ದುರ್ಜಯ ಕುಳಿತಲ್ಲಿಂದ ಎದ್ದುನಿಂತ: "ಸುಭೇದಾರ

ಸಾಹೇಬ! ತಾವು ನನ್ನನ್ನು ಮರೆಯಕೂಡದು"

"ಛೇ! ಎಲ್ಲಾದರೂ ಉಂಟೇ?"

"ನನಗೆ ಸರದಾರ ಪದವಿಯನ್ನು ದಯಪಾಲಿಸಬೇಕು." ದುರ್ಜಯನು ಅಂಗಲಾಚಿ ಯಾಚಿಸಿದ.

"ನಿನಗೆ ಯೋಗ್ಯವಾದ ಒಂದು ಉದ್ಯೋಗವನ್ನು ಕೊಡಬೇಕೆಂದಿದ್ದೇನೆ. ಸರದಾರ ಪದವಿಯು ಈ ವರುಷ ನಿನಗೆ ಖಂಡಿತವಾಗಿಯೂ ಲಭಿಸುವದು."

ಸುಭೇದಾರನ ನುಡಿಗಳನ್ನು ಕೇಳಲು ದುರ್ಜಯನ ಎದೆಯು ಹಿಗ್ಗಿತು. ಭಾಗ್ಯದೇವತೆಯು ಕೊಡೆಯನ್ನು ತನ್ನ ತಲೆಯ ಮೇಲೆ ಹಿಡಿದಳೆಂದು ಅವನು ಭಾವಿಸಿದನು. ಅವನು ಹೇಳಿದ. "ಸುಭೇದಾರಸಾಹೇಬ, ವಂದನೆಗಳು!"

"ಒಳ್ಳೆಯದು, ಈಗ ಹೋಗು."

ಪುನಃ ತನ್ನ ಪ್ರಣಾಮಗಳನ್ನು ನಿವೇದಿಸಿದ ಅನಂತರ ದುರ್ಜಯನು ಹೊರಕ್ಕೆ ತೆರಳಿದ. ಇನ್ನೊಂದು ನಿಮಿಷದಲ್ಲಿ ಉಸ್ಮಾನಖಾನನು ಒಳಗೆ ಪ್ರವೇಶಿಸಿದ. ಉಸ್ಮಾನನು ತನ್ನ ವಂದನೆಗಳನ್ನು ಸುಭೇದಾರನಿಗೆ ಅರ್ಪಿಸಿದ. ಅದನ್ನು ಸುಭೇದಾರನು ಸ್ವೀಕರಿಸಿದುದೂ ಆಯಿತು. ಸುಭೇದಾರನ ಅಪ್ಪಣೆಯಂತೆ ಉಸ್ಮಾನನು ಒಂದು ಗಾದಿಯ ಮೇಲೆ ಆಸೀನನಾದ.

ಸುಭೇದಾರನೇ ಸಂಭಾಷಣೆಯನ್ನು ಪ್ರಾರಂಭಿಸಿದ. "ಇತರ ಎಲ್ಲಾ ತಾಲೂಕುಗಳ ಕರವಸೂಲಿಯ ಕೆಲಸಗಳು ಪೂರ್ತಿಯಾದವು; ಆದರೆ ಇನ್ನೂ ನಿಮ್ಮ ತಾಲೂಕಿನದು ಪೂರ್ತಿಯಾಗಲಿಲ್ಲವಲ್ಲ?"

"ಈ ವರುಷ ನನ್ನ ತಾಲೂಕಿನಲ್ಲಿ ಕರವಸೂಲಿಯಾಗುವಂತಿಲ್ಲ!" ಇದಾಗಿದ್ದಿತು ಉಸ್ಮಾನನ ಜವಾಬು.

"ಅಂದರೆ? ಯಾವ ವಿಧದಲ್ಲಿಯಾದರೂ ತೆರಿಗೆಗಳನ್ನು ವಸೂಲಿ ಮಾಡಬೇಕೆಂದು ಈ ಮುನ್ನ ನಾನು ನಿಮಗೆ ತಿಳಿಸಲಿಲ್ಲವೆ?" ತುಸ ದರ್ಪದಿಂದ ಸುಭೇದಾರನು ಪ್ರಶ್ನಿಸಿದ.

"ನಿಜ. ಸುಭೇದಾರಸಾಹೇಬ, ಕರವಸೂಲಿ ಮಾಡಬೇಕು! ಬರಗಾಲ ಬಂದುದರಿಂದ ಬೇಸಾಯವು ಒಣಗಿದೆ. ಕೃಷಿಗಾರರಿಗೆ ತಿನ್ನಲು ಕೂಳು ಸಹ ಇಲ್ಲದಿರುವ ಈ ಸಂದರ್ಭದಲ್ಲಿ ಯಾವ ವಿಧದಿಂದಲಾದರೂ ಕರವಸೂಲಿ ಮಾಡಬೇಕೆಂದು ನೀವು ಹೇಳುತ್ತಿದ್ದೀರಿ; ಆದರೆ ಹೇಗೆ? ಅವರೂ ನಮ್ಮಂತೆ ನರಜೀವಿಗಳಲ್ಲವೆ? ಜನರಿಗೆ ಈ ಭಯಂಕರ ವಿಪತ್ತು ಒಂದೊದಗಿದ ಸಂದರ್ಭ

ದಲ್ಲಿ ಅವರಿಗ ಸಹಾಯ-ಸಲಕರಣೆಗಳನ್ನು ನೀಡುವದು ನಮ್ಮ ಕರ್ತವ್ಯ ವಾಗಿದೆ. ಜನರ ಕ್ಷೇಮವನ್ನು ಚಿಂತಿಸದೆ, ಕರವಸೂಲಿಗೆಂದು ಜನರಿಗೆ ಚಿತ್ರ ಹಿಂಸೆಗಳನ್ನು ಕೊಡುವದು ಮನುಷ್ಯೋಚಿತವಾದುದೆ?"

"ಈ ತತ್ವಗಳನ್ನು ನನಗೆ ಕೇಳಬೇಕಾಗಿಲ್ಲ." ಸುಭೇದಾರನು ಕೋಪ ದಿಂದ ಗರ್ಜಿಸಿದನು.

"ನೀವು ಕೇಳಬೇಕೆಂದು ನಾನು ಹೇಳುವದೂ ಇಲ್ಲ; ಆದರೆ ನಾನು ವ್ಯಾಗೀಯ ರೀತಿಯಲ್ಲಿ ವರ್ತಿಸಲು ಸಿದ್ಧನಿಲ್ಲ. ಇದು ವರೆಗೆ ನಿಷ್ಠೆಯಿಂದ ಸಮ್ರಾಟರನ್ನು ಸೇವಿಸಿದೆ; ಆದರೆ ರಾಜನಿಷ್ಠೆಗೆಂದು ನನ್ನ ಆತ್ಮವನ್ನು ಕಲಂಕ ಪಡಿಸಿಕೊಳ್ಳಲಾರೆ. ಇತರ ಎಲ್ಲ ವಸ್ತುಗಳಿಗಿಂತ ನನಗೆ ಅಮೂಲ್ಯವಾದುದು ನನ್ನ ಆತ್ಮವಾಗಿದೆ."

"ಅಂದರೆ?" ಸುಭೇದಾರನು ತನ್ನ ಕಣ್ಣುಗಳನ್ನು ಅರಳಿಸಿದ.

"ಅಂದರೆ, ಸುಭೇದಾರ ಸಾಹೇಬ, ನಾನು ಬಿಚ್ಚಿ ಹೇಳುತ್ತೇನೆ. ನನ್ನ ಎದೆಯಲ್ಲಿರುವದನ್ನೆಲ್ಲ ಬಿಚ್ಚಿ ಹೇಳಲು ನನಗೆ ತುಂಬಾ ನೋವಿದೆ; ಆದರೆ ಮಾಡುವದೇನು? ಇಷ್ಟು ದಿನಗಳ ತನಕ ಅದನ್ನು ಸಹಿಸಿದೆ; ಇನ್ನು ಅದು ಸಾಧ್ಯವಾಗದು. ಈ ಎಲ್ಲ ಅಕ್ರಮಗಳನ್ನು ನೋಡುತ್ತ, ಅವು ಅನ್ಯಾಯವೆಂಬು ದನ್ನು ತಿಳಿದೂ ಅವುಗಳಲ್ಲಿ ಭಾಗವಹಿಸಲು ನನಗೆ ಸಾಧ್ಯವಿಲ್ಲ. ಸಾಹೇಬ, ಸಿಟ್ಟಾಗಬೇಡಿರಿ; ನನ್ನ ಮನದಲ್ಲಿರುವದೇನೆಂಬುದನ್ನು ಬಿಚ್ಚಿ ಹೇಳುತ್ತೇನೆ: ಪಠಾಣರ ಇಂದಿನ ಆಳ್ವಿಕೆಯು ಧಾರ್ಮಿಕವಾದುದಲ್ಲ. ಅದಕ್ಕೆ ಸತ್ಯ ಮತ್ತು ನ್ಯಾಯಗಳ ಬೆಂಬಲವಿಲ್ಲ. ಈ ಆಳ್ವಿಕೆಯಿಂದ ಪ್ರಜೆಗಳು ಕಷ್ಟಪಡುವುದಲ್ಲದೆ ಪರಿಶುದ್ಧ ಪೈಗಂಬರರು ಸ್ಥಾಪಿಸಿದ ಇಸ್ಲಾಂ ಧರ್ಮಕ್ಕೂ ಕಲಂಕವಾಗತೊಡಗಿದೆ. ತಮ್ಮ ತತ್ವಗಳನ್ನು ಮರೆತು ಪಠಾಣರು ಸುಲಿಗೆಗಾರರಾಗತೊಡಗಿದ್ದಾರೆ. ಮನುಷ್ಯರಲ್ಲಿ ಅತ್ಯಾವಶ್ಯಕವಾಗಿ ಇರಬೇಕಾದ ದಯೆಯಾಗಲೀ ಸಹನೆಯಾಗ ಲೀ ನಮ್ಮಲಿಲ್ಲ. ನಮ್ಮ ತಪ್ಪುಗಳನ್ನು ತಿದ್ದಿಕೊಳ್ಳುವ ಹಂಬಲವೂ ನಮಗಿಲ್ಲ ದಾಗಿದೆ. ಹೀಗಿರುವ ಒಂದು ಆಳ್ವಿಕೆಯಲ್ಲಿ ಅಧಿಕಾರಿಯಾಗಿರಲು ನಾನು ಒಪ್ಪುವದಿಲ್ಲ. ನನ್ನ ಸರದಾರ ಪದವಿಯು ನನಗೆ ಗೌರವವನ್ನೋ ಕೀರ್ತಿ ಯನ್ನೋ ತರುವಂತಿಲ್ಲ. ಲಜ್ಜೆ ಮತ್ತು ಕಲಂಕಗಳ ಒಂದು ಮಾಲೆಯಾಗಿ ಅದು ನನ್ನ ಹೆಗಲ ಮೇಲೆ ಕುಳಿತಿದೆ. ಇನ್ನು ಮೇಲೆ ಈ ಹೊರೆಯನ್ನು ಹೊರಲು ನನ್ನಿಂದ ಸಾಧ್ಯವಾಗದು. ಆದುದರಿಂದ ಸುಭೇದಾರಸಾಹೇಬ, ಈ

ಸರದಾರ ಪದವಿಯನ್ನು ನನ್ನ ತೆಗಲ ಮೇಲಿಂದ ತೆಗೆಯಿರಿ. ಅದನ್ನು ದೂರ ಚೆಲ್ಲಲೋಸುಗ ನಾನು ಬಂದಿರುವೆನು."

"ಉಸ್ಮಾನಖಾನ, ನಿಮಗೇನಾಗಿದೆ? ಪರಿಶುದ್ಧ ಪೈಗಂಬರರ ಅನುಯಾಯಿಗಳ ಆಳ್ವಿಕೆಯು ಅಧರ್ಮವಾಗುವುದೆಂತು? ಮುಲ್ಲಾ-ಮೌಲವಿಗಳು ನಮ್ಮ ಶಾಸನವನ್ನು ಧರ್ಮಾನುಶ್ರುತವೆಂದು ಹೇಳುತ್ತಿದ್ದಾರೆ. ಕಾಫರರನ್ನು ದಂಡಿಸಲು ಪರಿಶುದ್ಧ ಖುರಾಣದಲ್ಲಿ ಹೇಳಿದೆ." ಮೊದಲಿಗಿಂತ ತೀಕ್ಷ್ಣವಾದ ಸ್ವರದಲ್ಲಿ ಸುಭೇದಾರನು ಹೇಳಿದನು.

"ಸುಭೇದಾರ ಸಾಹೇಬ, ನೀವು ತಿಳಿದವರು. ಪ್ರಜೆಗಳ ಹಿತಚಿಂತನೆಯಾಗಿದೆ ಆಳುವವರ ಧರ್ಮವು. ಕುರಡು ನಂಬಿಕೆಗಳಿಂದ ನಾವು ಹಿಂದುಗಳನ್ನು ಹಿಂಸಿಸಲುದ್ಯುಕ್ತರಾದರೆ, ಅದರಿಂದ ತೀರದ ಪಾಪವಲ್ಲದೆ ಬೇರೊಂದು ಸಿಗಲಾರದು. ಜಗತ್ತನ್ನು ನಿಯಂತ್ರಿಸುತ್ತಿರುವ ದಯಾಮಯನಾದ ಖುದಾನ ಕಣ್ಣುಗಳಿಗೆ ನಾವು ಕಾಫರರೆಂದು ನಿಂದಿಸುತ್ತಿರುವ ಆ ಜನರೂ ಸಮಾನ ಮನುಷ್ಯರಾಗಿ ಗೋಚರಿಸುತ್ತಾರೆ. ಹಿಂದುಗಳಿಗೂ ಸತ್ಯ ಮತ್ತು ನ್ಯಾಯಗಳು ಮಾನ್ಯವಾದವುಗಳಾಗಿರುತ್ತವೆ. ಅವರು ನಮ್ಮ ಹಾದಿಯನ್ನು ಹಿಡಿದಿಲ್ಲವೆಂಬ ಏಕ ಕಾರಣದಿಂದ ಅವರನ್ನು ಪೀಡಿಸುವದು, ಹಿಂಸಿಸುವದು ಇವುಗಳು ನ್ಯಾಯವಾದವುಗಳಲ್ಲ. ದಯಾಬುದ್ಧಿಯಿಂದ ನಾವು ಅವರೊಡನೆ ವರ್ತಿಸಬೇಕು. ಹಾಗಾದರೆ ಈ ದೇಶದಲ್ಲಿ ನಮ್ಮ ಆಳ್ವಿಕೆಯು ಶಾಶ್ವತವಾಗುವದು; ಇಸ್ಲಾಂ ಸಂಸ್ಕೃತಿಯು ಬೆಳಗುವದು; ಅದಲ್ಲದೆ ನಾವು ಅವರನ್ನು ಪೀಡಿಸಲು ಹೊರಟರೆ, ಪರಿಶುದ್ಧ ಇಸ್ಲಾಂ ಧರ್ಮವನ್ನು ನಾವು ಮಲಿನಪಡಿಸಿದಂತಾಗುವದು. ಸಾಹೇಬ, ಒಂದು ಪ್ರಾಂತದ ಜವಾಬುದಾರಿಕೆಯನ್ನು ಹೊತ್ತವರು ನೀವಿರುತ್ತೀರಿ. ಬರಗಾಲದಿಂದ ಜನರು ನರಳುತ್ತಿದ್ದಾರೆ. ಹಸಿದ ಹೊಟ್ಟೆಗಳಿಂದ ಹೊರಟ ಕೂಗುಗಳು ಬಾನನ್ನು ಸೀಳುತ್ತಲಿದೆ. ಈ ವಿಪತ್ಕಾಲದಲ್ಲಿ ಬರಗಾಲದ ಪಿಡುಗುಬೇನೆಯಿಂದ ಜನರನ್ನು ರಕ್ಷಿಸುವದು ನಿಮ್ಮ ಕರ್ತವ್ಯವಲ್ಲವೇ?"

"ಉಸ್ಮಾನಖಾನ, ಸಾಕುಮಾಡಿರಿ ನಿಮ್ಮ ಉಪದೇಶಗಳನ್ನು!" ಸುಭೇದಾರನು ಸಿಟ್ಟಿನಿಂದ ಗರ್ಜಿಸಿದನು. "ನಾನು ಮಾಡಬೇಕೆಂದುದೇನೆಂಬುದನ್ನು ನಾ ಬಲ್ಲೆ. ಆ ಬಗ್ಗೆ ನಿಮ್ಮ ಉಪದೇಶ ಬೇಕಾಗಿಲ್ಲ."

"ಸಾಹೇಬ, ನಾನು ನುಡಿಯುವದು ನಿಮಗೆ ರುಚಿಸಲಾರದು; ಆದರೆ ಹಿಂದುಸ್ತಾನದಲ್ಲಿ ರಾಜ್ಯವನ್ನು ಕಟ್ಟಿರುವ ಪಠಾಣರ ಹಿತವನ್ನು ಚಿಂತಿಸಿ,

ನನ್ನ ಪ್ರೀತಿಯ ಇಸ್ಲಾಂ ಧರ್ಮದ ಅಭ್ಯುದಯವನ್ನು ಕಾಂಕ್ಷಿಸಿ ಈ ಮಾತನ್ನು ನುಡಿದಿರುತ್ತೇನೆ. ಕೇವಲ ರಾಕ್ಷಸೀ ಸ್ವಭಾವವನ್ನು ಪ್ರಕಟಿಸುತ್ತಿರುವ ಹೀನ ಕೃತ್ಯಗಳನ್ನೆಲ್ಲ ಇಸ್ಲಾಂ ಧರ್ಮವು ಉಪ್ಘೋಷಿಸುತ್ತಿರುವದು. ಆ ಕೆಲಸಗಳು ಇಸ್ಲಾಮಿಗೆ ಕಲಂಕಗಳನ್ನು ತರುತ್ತಿವೆ. ಇಲ್ಲಿ ನಮ್ಮ ಜನರು ಪಶುಗಳಂತೆ ವರ್ತಿಸುತ್ತಿದ್ದಾರೆ. ಹೆಂಗಸರ ಮಾನವನ್ನು ಸೂರೆ ಮಾಡಲು ಹಿಂಜರಿಯುವದಿಲ್ಲ. ಹಿಂದುಗಳ ಮನೆ-ಮಾರುಗಳನ್ನು ಲೂಟಿ ಮಾಡುತ್ತಿದ್ದಾರೆ. ಇವುಗಳೆಲ್ಲ ಧರ್ಮರಕ್ಷಣೆಯ ಸಲುವಾಗಿಯೇ? ಅನ್ಯಮತದ ಹೆಂಗಸರಾದರೇನು? ಅವರನ್ನು ಗೌರವಿಸಬೇಕಾದುದು ಪರಿಶುದ್ಧ ಪೈಗಂಬರರ ಅನುಯಾಯಿಗಳ ಕರ್ತವ್ಯವಲ್ಲವೆ?"

"ನಮ್ಮ ಖುರಾನನ್ನೂ ಧರ್ಮವನ್ನೂ ಅವರು ಒಪ್ಪುವದಿಲ್ಲ. ಆದುದರಿಂದ ಅವರು ಧರ್ಮಲಂಡರಿರುತ್ತಾರೆ. ಕಾಫರರನ್ನು ದಂಡಿಸುವದು ಇಸ್ಲಾಂ ಧರ್ಮಾವಲಂಬಿಗಳ ಕರ್ತವ್ಯವೆಂದು ಮೌಲವಿಗಳು ಉಸುರುತ್ತಿದ್ದಾರೆ. ಆ ಜನರನ್ನು ಹೇಗೆ ಹಿಂಸಿಸಿದರೂ ಅದರಲ್ಲಿ ಪಾಪವಿಲ್ಲ." ಪಠಾಣರ ಆಳ್ವಿಕೆಯಲ್ಲಿ ಜರುಗಿದ ಅತ್ಯಾಚಾರಗಳನ್ನು ನ್ಯಾಯೀಕರಿಸಲು ಪ್ರಯತ್ನಿಸುತ್ತ ಸುಭೇದಾರನು ಮಾತಾಡಿದನು.

"ಈ ಅವಿವೇಕವಾಗಿದೆ ಸಕಲ ಅನರ್ಥಗಳಿಗೂ ಮೂಲ ಕಾರಣವು. ಪರಿಶುದ್ಧನಾದ ದೇವರು ಕೊಟ್ಟ ಬುದ್ಧಿಯನ್ನು ಉಪಯೋಗಿಸದೆ ತಾವು ಹಿಡಿದ ದಾರಿ ಮಾತ್ರ ಸರಿಯಾದುದೆಂದೂ ಇತರ ಎಲ್ಲ ದಾರಿಗಳು ತಪ್ಪೆಂದೂ ಮೌಲವಿಗಳು ವಾದಿಸುತ್ತಿದ್ದಾರೆ. ಲೋಕದ ಸ್ವಭಾವವೇನೆಂಬುದು ಅವರಿಗೆ ತಿಳಿಯದು. ಒಂದು ಸ್ಥಳವನ್ನು ಸೇರಲು ಹಲವು ದಾರಿಗಳಿರುತ್ತವೆ. ಒಬ್ಬೊಬ್ಬರಿಗೆ ಒಂದೊಂದು ರಸವು ರುಚಿಕರವೆನಿಸುತ್ತದೆ. ಅವರವರಿಗೆ ಹಿತಕರವೆನಿಸಿದ ದಾರಿಗಳನ್ನು ಅವರವರು ಅವಲಂಬಿಸಲಿ. ನಾವು ಹಿಡಿದ ಪಥದಲ್ಲಿಯೇ ಇತರರೆಲ್ಲರೂ ಸಂಚರಿಸಬೇಕೆಂವೆನುವುದು ಅವಿವೇಕವಲ್ಲವೆ? ಈ ಊರಿನ ಪಂಡಿತರಲ್ಲೆಲ್ಲ ಅಗ್ರೇಸರರು ಫಕೀರ ಹುಸ್ಸೇನರಿರುತ್ತಾರೆ. ಅವರು ಧರ್ಮದ ಹೆಸರಿನಲ್ಲಿ ಈಗ ಜರುಗುತ್ತಲಿರುವ ಅನ್ಯಾಯಗಳನ್ನು ಒಪ್ಪುತ್ತಲಿಲ್ಲ. ಎರಡು ಧರ್ಮದವರೂ ಪರಸ್ಪರ ಸೌಹಾರ್ದದಿಂದ ವರ್ತಿಸುವದರಲ್ಲಿ ಕಲ್ಯಾಣವಿದೆಯೆಂದು ಅವರು ಸಾರುತ್ತಲಿದ್ದಾರೆ. ಆದುದರಿಂದ ಸಾಹೇಬ, ಕೊನೆಯದಾಗಿ ಒಂದು ಮಾತನ್ನು ಹೇಳುತ್ತೇನೆ. ಈಗಣ ಅನೀತಿಯ ಆಳ್ವಿಕೆಯನ್ನು ನಾವು

ಪರತ್ಯಜಿಸಬೇಕು. ಬರಗಾಲದಿಂದ ನೊಂದ ಜನರ ದುಃಖಪರಿಹಾರವಾಗಲಿ; ಜನರ ಕ್ಷೇಮಚಿಂತನೆಗಾಗಿ ನಮ್ಮ ಆಳ್ವಿಕೆಯು ಉದ್ಯಮಿಸಲಿ."

"ಉಸ್ಮಾನಖಾನ, ನಿಮ್ಮ ನುಡಿಗಳನ್ನು ಕೇಳುವಾಗ ನನಗೆ ಆಶ್ಚರ್ಯ ವಾಗುತ್ತಿದೆ. ಕರವಸೂಲಿಯ ಕೆಲಸದಲ್ಲಿ ಆಲಸತೆಯನ್ನು ತೋರಿಸಿ, ಆ ಮೇಲೆ ಅಧಿಕಪ್ರಸಂಗ ಮಾತಾಡಲು ನೀವು ಎಲ್ಲಿಂದ ಕಲಿತಿರಿ? ಈ ನಿಮ್ಮ ಮಾತ ಗಳನ್ನು ಕೇಳುವಾಗ ನಿಮ್ಮ ಮೆದುಳಿಗೆ ಸುಖವಿಲ್ಲದ ಹಾಗೆ ತೋರುತ್ತದೆ!"

"ಸಾಹೇಬ, ನೀವು ಏನುಬೇಕಾದರೂ ಹೇಳಿರಿ; ನಿಮ್ಮನ್ನು ಇಂದಿನ ದುಷ್ಪ್ರವೃತ್ತಿಯಿಂದ ಎಚ್ಚರಿಸುವದು ಆವಶ್ಯಕವೆಂದು ತೋರಿತು. ಆದುದ ರಿಂದ ಇಷ್ಟು ಮಾತಾಡಿದೆ. ಅವು ನಿಮಗೆ ರುಚಿಸದಿದ್ದರೆ ಬೇಡ. ಆದರೂ ಒಂದು ಮಾತನ್ನು ಹೇಳುವದು ನನಗೆ ಆವಶ್ಯಕವಾಗಿ ತೋರುತ್ತದೆ. ಈ ಅತ್ಯಾಚಾರಗಳ ಪ್ರಹಸನದಲ್ಲಿ ಇನ್ನು ಮೇಲೆ ಭಾಗವಹಿಸಲು ನನ್ನಿಂದಾಗ ದು; ನನ್ನ ಕರಗಳನ್ನು ಮಲಿನಪಡಿಸಿಕೊಳ್ಳಲಾರೆನು. ನಿಮ್ಮ ಈ ಸರದಾರ ಪದವಿಯೂ ನನಗೆ ಬೇಕಿಲ್ಲ. ಧರ್ಮಾಂಧತೆಯಿಂದ, ಅಧಿಕಾರ ದುಷ್ಪ್ರವೃತ್ತಿ ಯಿಂದ ಪರಿಪೂರ್ಣವಾದ ಒಂದು ಆಡಳಿತದಲ್ಲಿ ನಾನಿರಲಾರೆ. ಹಾಗೆ ಒಬ್ಬ ಅಧಿಕಾರಿಯಾಗಿರುವದು ನನ್ನ ಆತ್ಮದೊಡನೆ, ದಯಾಮಯನಾದ ಖುದಾ ನೊಡನೆ ಆಚರಿಸತಕ್ಕ ಒಂದು ಅಕ್ಷಮ್ಯ ಅಪರಾಧವೆನಿಸುತ್ತದೆ. ನೀವು ನನ್ನ ನ್ನು ಹುಚ್ಚನೆಂದೋ ಮೆದುಳು ಕೆಡಿಸಿಕೊಂಡವನೆಂದೋ ಕರೆಯಿರಿ. ಯಾವ ತೆಗಳಿಕೆಯನ್ನು ಹೊರಲೂ ನಾನು ಸಿದ್ಧನಿರುವೆ; ಆದರೆ ಈ ಪಾಪದ ಮೂಟೆ ಯನ್ನು ಹೊರಲಾರೆನು." ಹೀಗೆ ಉಸ್ಮಾನನು ತನ್ನ ಮಾತುಗಳನ್ನು ಮುಗಿಸಿ ದನು. ಉಸ್ಮಾನನು ಮನಬಿಚ್ಚಿ ಆಡಿದ ಮಾತುಗಳನ್ನು ನೆನೆಯುತ್ತ ಸುಭೇ ದಾರನು ಕ್ಷಣ ಹೊತ್ತು ಕುಳಿತಿದ್ದ. ಯಾವ ಮುಚ್ಚುಮರೆಯೂ ಇಲ್ಲದೆ ಉಸ್ಮಾನನು ಆಡಿದ ಮಾತುಗಳು ಸುಭೇದಾರನನ್ನು ವಿಸ್ಮಯ ಕಡಲಿನಲ್ಲಿ ಕೆಡವಿದವು. ಇಂದಿನ ತನಕ ಇಷ್ಟು ಸ್ಪಷ್ಟವಾಗಿ, ಇಷ್ಟು ದಿಟ್ಟತನದಿಂದ ಸುಭೇ ದಾರನ ಸಂಗಡ ಯಾರೂ ಮಾತಾಡಿರಲಿಲ್ಲ. ಆದುದರಿಂದ ಸುಭೇದಾರನು ಉಸ್ಮಾನನ ಮೆದುಳು ಕೆಟ್ಟಿರಬಹುದೆಂದು ವಿಚಾರಿಸಿದನು. ಉಸ್ಮಾನನ ವಿಚಾರಗಳನ್ನು ಸುಭೇದಾರನು ಗ್ರಹಿಸಲಿಲ್ಲ. ಉಸ್ಮಾನನಾಡುವುದೆಲ್ಲ ಅಸಂಗತ ವಾದುದೆಂದು ಸುಭೇದಾರನ ಅಭಿಪ್ರಾಯವಾಗಿದ್ದಿತು. ಸುಭೇದಾರನು ಹೀಗೆ ಹೇಳಿದನು: "ಉಸ್ಮಾನಖಾನ, ನಿಮ್ಮ ಮಾತುಗಳನ್ನು ಕೇಳುವಾಗ ನಿಮಗೆ

ಈ ದಿನ ಮನಸ್ಸಿಗೆ ಆರೋಗ್ಯವಿಲ್ಲವೆಂಬುದು ವ್ಯಕ್ತವಾಗುತ್ತದೆ. ಆದುದರಿಂದ ತುಸ ವಿಶ್ರಾಂತಿಯನ್ನು ತೆಗೆದುಕೊಂಡು ನಾಳೆ ಬನ್ನಿರಿ."

"ಸಾಹೇಬ, ನನಗೆ ವಿಶ್ರಾಂತಿ ಬೇಕಿಲ್ಲ; ಈ ಪಾಪದ ಹಗ್ಗಗಳಿಂದ ಬಿಡುಗಡೆ ಹೊಂದುವ ತನಕ ನನಗೆ ವಿಶ್ರಾಂತಿ ದೊರಕದು. ಈ ಅಕ್ರಮದ ಹೊರೆಯನ್ನು ಹೊತ್ತುದರಿಂದ ನಾನು ಕತ್ತೆಯಂತಿದ್ದೇನೆ. ನನ್ನ ಎದೆಯು ಮಲಿನವಾಗುತ್ತಲಿದೆ. ಮನದಲ್ಲಿ ಇರುಳು ಕವಿಯುತ್ತಲಿದೆ; ಈ ಹಗ್ಗದಿಂದ ನನ್ನ ಕೊರಳು ಬಿಗಿಯಲ್ಪಟ್ಟಿದೆ. ಆದುದರಿಂದ ಸಾಹೇಬ, ಈ ಕಟ್ಟನ್ನು ಸಡಿಲಿಸಿರಿ. ಸರದಾರ ಪದವಿಯು ನನಗೆ ಬೇಕಾಗಿಲ್ಲ. ಉದ್ಯೋಗದಾಶೆಯಿಂದ ಅಧಃಪತನದ ಹಾದಿಯನ್ನು ಹಿಡಿಯಲಾರೆ. ಒಬ್ಬ ಸಾಮಾನ್ಯ ಮನುಷ್ಯನಂತೆ ಜೀವಿಸಲು ನಾನು ಅಗ್ರಹಿಸುತ್ತಿದ್ದೇನೆ. ಉದ್ಯೋಗ ಸ್ವೀಕಾರದಿಂದ ಊರ ಜನರ ಸಂಕಟಗಳನ್ನು ಪರಿಹರಿಸಬಹುದೆಂದು ಬಗೆದಿದ್ದೆ; ಆದರೆ ಅದು ಸಾಧ್ಯವಾಗಲಿಲ್ಲ ಜನರ ಕೊರಳನ್ನು ಹಿಚುಕುವ ಕೆಲಸವು ನನ್ನಿಂದಾಗದು. ಸಾಹೇಬ, ನೀವು ಕೊಟ್ಟ ಮುದ್ರೆಯ ಉಂಗುರವಿದೆ; ಖಡ್ಗವಿದೆ. ಇವುಗಳನ್ನು ಹಿಂದಿರುಗಿ ತೆಗೆದುಕೊಳ್ಳಿರಿ. ಇದು ಮಾತ್ರವಾಗಿದೆ ನನ್ನ ಬಿನ್ನಹ. ಆಡಳಿತದಿಂದ ನಾನೊಬ್ಬನು ಹೊರಗೆ ತೆರಳಿದರೆ ಯಾವ ಕೊರತೆಯೂ ಆಗುವಂತಿಲ್ಲ. ಅಧಿಕಾರವನ್ನು ಹಂಬಲಿಸತಕ್ಕವರು ಅನೇಕ ಮಂದಿ ಇದ್ದಾರೆ; ನಿಮ್ಮ ಆಜ್ಞೆಗಳನ್ನು ಕಣ್ಮುಚ್ಚಿ ಅನುಸರಿಸಲು ಬಹು ಮಂದಿ ಇದ್ದಾರೆ. ಈ ಸರದಾರ ಪದವಿಯನ್ನು ಅವರಿಗೆ ಕೊಡಿ."

ಸುಭೇದಾರನು ಮಾತಾಡಲಿಲ್ಲ. ಉಸ್ಮಾನನ ಮೋರೆಯನ್ನು ನೋಡುತ್ತಾ ಮೌನವನ್ನು ಅವಲಂಬಿಸಿದ. ಉಸ್ಮಾನನು ತನ್ನ ಬೆರಳಮೇಲಿದ್ದ ಉಂಗುರವನ್ನೂ ಸೊಂಟದಲ್ಲಿ ನೇತಾಡುತ್ತಿದ್ದ ಖಡ್ಗವನ್ನೂ ತೆಗೆದು ಅವುಗಳನ್ನು ಸುಭೇದಾರನ ಗಾದಿಯ ಮುಂದೆ ಮಡಗಿದನು. ಆಗ ಉಸ್ಮಾನನ ತುಟಿಗಳಿಂದ ಈ ನುಡಿಗಳು ಉದುರಿದವು: "ಸಾಹೇಬ, ನೀವು ಕೊಟ್ಟ ಈ ಎರಡು ವಸ್ತುಗಳನ್ನು ಹಿಂದಿರುಗಿ ಕೊಟ್ಟಿರುವೆನು. ಇನ್ನು ಹೋಗುವದಕ್ಕೆ ಅಪ್ಪಣೆಯಾಗಲಿ. ನಮ್ಮಿಬ್ಬರ ದಾರಿಗಳೂ ಬೇರೆ ಬೇರೆಯಾಗಿವೆ. ಶುಷ್ಕ ತರ್ಕಗಳಿಂದ ಯಾವ ಪ್ರಯೋಜನವೂ ಆಗದು."

"ಉಸ್ಮಾನಖಾನ, ನೀವು ದುಡುಕಬೇಡಿರಿ. ಇನ್ನೊಮ್ಮೆ ಆಲೋಚಿಸಿರಿ ಭಾಸುರವಾದ ಭವಿಷ್ಯವು ನಿಮ್ಮ ಉದ್ಯೋಗಜೀವನದಲ್ಲಿ ಅಡಗಿದೆ."

"ಬೇಕಾಗಿಲ್ಲ; ಸಾಹೇಬ, ನನಗೆ ಆ ಆಶಾದಾಯಕ ಸ್ಥಾನ-ಮಾನಗಳು ಬೇಕಾಗಿಲ್ಲ! ಒಬ್ಬ ಸಾಧಾರಣ ಮನುಷ್ಯನ ಬಾಳುವೆಯೇ ನನಗೆ ಸಾಕು!" ಉಸ್ಮಾನನ ಕೊರಳಿನಿಂದ ಈ ನಿಶ್ಚಲ ಸ್ವರವು ಹೊರಟಿತು.

"ನಿಮ್ಮನ್ನು ನೀವೇ ಕೆಡಿಸಿಕೊಳ್ಳುತ್ತಿರುವಿರಿ." ಸುಭೇದಾರನು ಉಸುರಿದ.

"ಹಾಗೆ ತೋರುವದು ನಿಮ್ಮ ದೃಷ್ಟಿಯಲ್ಲಾಗಿದೆ ನನ್ನ ದೃಷ್ಟಿಯಲ್ಲಲ್ಲ." ಉಸ್ಮಾನನ ಮರುನುಡಿಯು ಬಂದಿತು.

ಅನಂತರ ಹೆಚ್ಚು ಹೊತ್ತು ಉಸ್ಮಾನನು ಅಲ್ಲಿ ನಿಲ್ಲಲಿಲ್ಲ. "ಪ್ರೀತಿಯಿರಲಿ; ಸಾಹೇಬ, ಈಗ ನಾನು ಹೋಗುವೆ." ಎಂದು ನುಡಿದು, ಉಸ್ಮಾನನು ಸುಭೇದಾರನ ವಸತಿಯಿಂದ ಹೊರಬಿದ್ದನು.

ಉಸ್ಮಾನನು ನುಡಿದ ಕೊನೆಯ ಮಾತಿಗೆ ಸುಭೇದಾರನು ಯಾವ ಜವಾಬನ್ನೂ ಹೇಳಲಿಲ್ಲ. ಅವನು ಮೌನದಿಂದ ತನ್ನ ಹುಕ್ಕವನ್ನು ಸೇದತೊಡಗಿದ.

---

## ೧೨ ನಿಮಗೆ ನಾನು ಬೇಕಾಗಿಲ್ಲ!

ದುರ್ಜಯಸಿಂಹನು ಹಾಸಿಗೆಯ ಮೇಲೆ ಒರಗಿದ್ದ. ನಿರುಪಮೆಯು ವೀಳ್ಯವೆಲೆಗೆ ಸುಣ್ಣವನ್ನು ಹಚ್ಚುತ್ತಿದ್ದಳು. ದುರ್ಜಯನ ಮೆದುಳಿನಲ್ಲಿ ಯಾವನೋ ಒಂದು ವಿಚಾರವು ತೇಲುತ್ತಿದ್ದಿತು. ನಿರುಪಮೆಯು ಚಿತ್ತವಾದರೂ ಪ್ರಸನ್ನವಾಗಿರಲಿಲ್ಲ. ಆಕೆಯ ಮನವನ್ನು ಯಾವುವೋ ಒಂದು ಕಾರ್ಮುಗಿಲು ಆವರಿಸಿದ್ದಿತು. ಪತಿ-ಪತ್ನಿಯ ವಿಚಾರಗಳು ಪರಸ್ಪರ ವಿರುದ್ಧವಾದ ಹಾದಿಗಳಲ್ಲಿ ಸಂಚರಿಸುತ್ತಿದ್ದವು. ಆತನ ವಿಚಾರಗಳು ಪಾಪಸ್ಪರ್ಶನದಿಂದ ಮಲಿನತೆಯನ್ನು ಹೊಂದಿದ್ದವು; ಆದರೆ ಅವಳದು ಪರಿಶುದ್ಧ ಚಿಂತನೆಗಳಾಗಿದ್ದವು. ಸಂಕಟಗಳ ತೆಕ್ಕೆಯಲ್ಲಿ ಬಿದ್ದವರ ಕ್ಲೇಶಗಳನ್ನು ಪರಿಹರಿಸುವದು ಹೇಗೆಂದು ನಿರುಪಮೆಯ ಮನವು ಚಿಂತಿಸುತ್ತಿದ್ದಿತು.

ವೀಳ್ಯವೆಲೆಗೆ ಸುಣ್ಣವನ್ನು ಹಚ್ಚಿದುದಾಯಿತು. ಅದನ್ನು ಆತ ಸ್ವೀಕರಿಸಿದ. ವೀಳ್ಯವೆಲೆಯನ್ನು ಜಗಿಯುತ್ತಾ ದುರ್ಜಯನೆಂದನು: "ನಿರುಪಮಾ, ನಾನು ಒಬ್ಬ ಸರದಾರನಾದರೆ ನೀನು ಹರುಷಪಡುವದಿಲ್ಲವೇ?"

"ನೀವು ಸರದಾರರಾಗಬೇಕೆಂದಿಲ್ಲ; ದೇವರು ನಿಮಗೆ ಒಳ್ಳೆಯ ಹಾದಿಯನ್ನು ತೋರಿಸಿದರೆ ಸಾಕು."

"ಅಂದರೆ?'' ದುರ್ಜಯನು ಮಡದಿಯ ಮೋರೆಯನ್ನು [illegible].

"ಊಹೂಂ, ಏನೂ ಇಲ್ಲ."

"ಏಕೆ? ನಿರುಪಮಾ, ನಿನ್ನ ಮನದಲ್ಲಿರುವುದೇನೆಂದು ನನಗೆ ಉಸುರ ಬಾರದೇ?"

"ನನ್ನ ನುಡಿಯು ನಿಮಗೆ ರುಚಿಸದು. ಆ ಮೇಲೇಕೆ ಆ ಸಂಗತಿಯ ಸ್ಸತ್ತಿ ಜಗಳವಾಡುವದು? ನಾನು ಹೇಳಿದಂತೆ ನೀವು ನಡೆಯುವಹಾಗಿಲ್ಲ.' ಇಳಿಧ್ವನಿಯಲ್ಲಿ ನಿರುಪಮೆ ಹೇಳಿದಳು.

"ನೀನು ಹೇಳಿದ ಯಾವ ನುಡಿಯನ್ನು ನಾನು ತಿರಸ್ಕರಿಸಿದೆ? ನನ್ನ ಮೇಲೆ ತಪ್ಪು ಹೊರಿಸಲು ನಿನಗೆ ಯಾವುದಾದರೂ ಒಂದು ಕಾರಣ ಸಿಗಬೇಕು. ನಾನು ಇಷ್ಟೆಲ್ಲ ಪ್ರಯತ್ನಿಸುತ್ತಿರುವದು, ಹೆಣಗುತ್ತಿರುವದು ಇವೆಲ್ಲಾ ಯಾರಿಗೆ ಬೇಕಾಗಿವೆಯೆಂಬುದನ್ನು ಬಲ್ಲೆಯಾ?"

"ತಿಳಿಯದು." ನಿರುಪಮೆ ತಲೆಯಲ್ಲಾಡಿಸಿದಳು.

"ನಿನಗಾಗಿ!-ನಿರುಪಮಾ, ನಿನಗೆ ಬೇಕಾಗಿ. ನಿನ್ನನ್ನು ನೆನೆದು ಹೀಗೆ ನುಡಿಯುತ್ತಿದ್ದೇನೆ." ಒಂದು ದೀರ್ಘಶ್ವಾಸವನ್ನು ಬಿಟ್ಟು ದುರ್ಜಯನು ಹೇಳಿದನು.

"ನನಗಾಗಿಯೇ? ಅದ. ಬೇಕಾಗಿಲ್ಲ. ಅಧಿಕಾರ-ಸಂಪತ್ತುಗಳು ನನಗೆ ಅವಶ್ಯವಿಲ್ಲ. ನಿಮ್ಮ ಪ್ರೀತಿ-ನೆಮ್ಮದಿ ಇವು ದೊರಕಿದರೆ ನನಗೆ ಸಾಕು. ಬಡತನ ವಾದರೇನು? ಪ್ರೀತಿ-ಮಮತೆಗಳ ತಿಳಿನೀರು ಹರಿಯುತ್ತಿದ್ದರೆ, ಬಡತನವೇ ಸ್ವರ್ಗವಾಗುವದು. ಅಧಿಕಾರದ ವ್ಯಾಮೋಹದಿಂದ ನೀವು ನಡೆಯುತ್ತಿರುವ ಕೆಲಸಗಳು ನನ್ನ ಎದೆಯನ್ನು ತಿವಿಯುತ್ತಲಿವೆ; ಸುಡುತ್ತಲಿವೆ. ದೇವರ ದಯ ದಿಂದ ನಮಗೆ ಹೊಟ್ಟೆಗೂ, ಬಟ್ಟೆಗೂ ಕಡಿಮೆಯಿಲ್ಲ. ನನ್ನ ಅಂತರಾತ್ಮವು ಹೇಳುತ್ತಲಿದೆ; ನೀವು ಈಗ ಅವಲಂಬಿಸಿರುವ ದಾರಿಯಿಂದ ಶ್ರೇಯಸ್ಸು ದೊರಕ ದೆಂದು."

"ನಿರುಪಮಾ, ಈ ವೇದಾಂತವನ್ನು ಎಲ್ಲಿಂದ ಕಲಿತೆ?" ದುರ್ಜಯನು ಹಾಸಿಗೆಯ ಮೇಲೆ ಎದ್ದು ಕುಳಿತು ಹೇಳಿದ. "ನಾವು ಇಲಿಗಳಂತೆ ಕತ್ತಲಲ್ಲಿ ಜೀವಿಸುವದರಿಂದ ಯಾವ ಪ್ರಯೋಜನವಿದೆ? ಕೀರ್ತಿಯನ್ನು, ಅಧಿಕಾರವನ್ನು ಸಂಪಾದಿಸಬೇಕು. ಶಕ್ತಿಯಿಲ್ಲದೆ ಹೋದರೆ ಯಾರು ನನ್ನನ್ನು ಗೌರವಿಸು ವರು? ನಿನ್ನನ್ನು ಯಾರು ಬಹುಮಾನಿಸುವರು? ಬೀದಿ ನಾಯಿಗಳಂತೆ ಹೆಸರು

ಬೆಳಕಿಗೆ ಬರವೆ,-ಬೆಳಕಿಗೆ ಬರದೆ ಜೀವಿಸುವದರಿಂದ ಯಾವ ಪ್ರಯೋಜನವಿದೆ? ಒಳ್ಳೆಯದು, ಕೆಟ್ಟದು ಇವುಗಳನ್ನು ಬೇರೆಬೇರೆಯಾಗಿ ವಿಂಗಡಿಸಿದವರು ಯಾರು? ಯಾವುದರಿಂದ ಸಂಪತ್ತು ದೊರಕುವದೋ ಅದೇ ಒಳ್ಳೆಯ ದಾರಿ; ನಿರುಪಮಾ, ಕಾಲವು ಬದಲಾಯಿಸಿವೆ. ನಾವು ಬೆಳಕಿಗೆ ಬರಬೇಕಾದರೆ ಹಳೆಯ ಪದ್ಧತಿಗಳನ್ನು ಬದಲಾಯಿಸಬೇಕು. ಹಣ ಮತ್ತು ಅರಸರ ಬೆಂಬಲಗಳಿಲ್ಲದೆ ಹೋದರೆ ನಮ್ಮನ್ನು ಕೇಳುವವರಾರು?"

"ನಿಮ್ಮ ಸಂಗಡ ತರ್ಕಿಸಲು ನಾನು ಶಕ್ತಳಲ್ಲ." ತನ್ನ ಕಣ್ಣುಗಳನ್ನು ಅಗಲಿಸಿ ಹೇಳಿದಳು ನಿರುಪಮಾ. ಒಂದು ಬಗೆಯ ಕಾಂತಿಯು ಆಕೆಯ ಕಣ್ಣು ಗಳಿಂದ ಸ್ಫುರಿಸುತ್ತಿದ್ದಿತು. "ಆದರೂ ಸತ್ಯ ಮತ್ತು ಧರ್ಮಗಳನ್ನು ದೂರ ಚಲ್ಲುವದು ಉಚಿತವೇ? ಅಧಿಕಾರ ಮತ್ತು ಸಂಪತ್ತು ಇವುಗಳೇನು ಶಾಶ್ವತ ವಾದವುಗಳಲ್ಲ. ಈ ಸಿರಿಯ ಹಕ್ಕಿಯನ್ನು ಹಿಡಿಯುವ ಹಂಬಲದಲ್ಲಿ ಆಚರಿ ಸಿದ ಪಾಪಕರ್ಮಗಳ ಹೊರೆಯನ್ನು ಹೊರಬೇಕಾಗಿ ಬರುವದೆಂಬುದನ್ನೊಮ್ಮೆ ಆಲೋಚಿಸಿರಿ."

"ಪಾಪ!-ಈ ಜಗತ್ತಿನಲ್ಲಿ ಜೀವಿಸುವದೇ ಒಂದು ಪಾಪವಾಗಿದೆ! ಹಾವು ಕಪ್ಪೆಯನ್ನು ನುಂಗುತ್ತವೆ. ನರಿಯು ಕೋಳಿಮರಿಯನ್ನು ಕಡಿಯುತ್ತದೆ. ಅದ ರಂತೆಯೇ ಮನುಷ್ಯನಾದವನು ಈ ಜಗತ್ತಿನಲ್ಲಿ ಜೀವಿಸಬೇಕಾದರೆ ಪ ಾಪವನ್ನು ಆಚರಿಸಬೇಕಾಗುತ್ತದೆ. ಇನ್ನೊಬ್ಬನಿಗೆ ಕೆಡಕು ಮಾಡದೆ ಜೀವಿಸಲು ಸಾಧ್ಯ ವಾಗದು; ಆದರೆ ನಾವು ಏಳಿಗೆಯನ್ನು ಹೊಂದಬೇಕಾದರೆ ಪಾಪ-ಪುಣ್ಯಗಳ ಗೊಡವೆಯನ್ನು ಬಿಡಬೇಕಾಗುತ್ತದೆ. ಪಾಪ-ಪುಣ್ಯಗಳನ್ನು ನೆನೆಯ ಹೊರಟರೆ ಕುನ್ನಿಗಳ ಬದುಕು ನಮ್ಮದಾಗುತ್ತದೆ."

"ಈ ನುಡಿಗಳು ನನ್ನ ಎದೆಗೆ ನೋವನ್ನುಂಟುಮಾಡುತ್ತಲಿವೆ. ನಿಮ್ಮ ಅಧಿಕಾರ ಹಂಬಲದ ಪರಿಣಾಮವಾಗಿ ನಿಷ್ಕಲಂಕವಾದ ಒಂದು ಜೀವನದ ಹೂ ಮಲಿನತೆಯನ್ನು ಪಡೆಯಬೇಕಾಗಿ ಬಂದಿದೆ. ನಿಮ್ಮೊಬ್ಬರ ವ್ಯಾಮೋಹ ವನ್ನು ಪೂರೈಸಲು ನಿರಪರಾಧಿಯಾದ ಇನ್ನೊಂದು ಜೀವವು ನೋವನ್ನು ಅನುಭವಿಸಬೇಕಾಗಿ ಬರುವದು ಪರಿತಾಪಕರ. ಸಂಪತ್ತು ಮತ್ತು ಅಧಿಕಾರ ಗಳಿಗೆ ಬೇಕಾಗಿ ಪ್ರಯತ್ನಿಸಕೂಡದೆಂದು ನಾನನ್ನುವದಿಲ್ಲ; ಆದರೆ ಆ ಲಾಲಸೆ ಯಿಂದ ನಿಷ್ಕಲಂಕವಾದ ಒಂದು ಹೂವನ್ನು ಕೆಸರಿನ ಹೊಂಡದಲ್ಲಿ ಚಲ್ಲು ವದು ಮನುಷ್ಯೋಚಿತವಲ್ಲ." ತೀಕ್ಷ್ಣಸ್ವರದಲ್ಲಿ ನಿರುಪಮೆಯು ನುಡಿದಳು.

"ನಿರುಪಮಾ, ನೀನನ್ನುತ್ತಿರುವದೇನು? ನಾನು ಯಾವ ನಿಷ್ಕಲಂಕ ಜೀವವನ್ನೂ ಕೆಸರಿನ ಹೊಂಡದಲ್ಲಿ ದೂಡಲು ಉದ್ಯುಕ್ತನಾಗಿಲ್ಲ. ಕನಸನ್ನು ಕಂಡುದುದರಿಂದ ನೀನು ಹೀಗೆ ಅನ್ನುತ್ತಲಿಲ್ಲವಷ್ಟೇ? ನಾನು ಅಷ್ಟು ನೀಚನಲ್ಲ" ಏನನ್ನೂ ಅರಿಯುವವನಂತೆ ವಿಸ್ಮಯವನ್ನು ಚಲ್ಲುತ್ತಾ ದುರ್ಜಯನಂದನು.

"ಏಕೆ ನನ್ನೊಡನೆ ಸುಳ್ಳಾಡುವಿರಿ? ಸರದಾರ ಪದವಿಯನ್ನು ಕಾಂಕ್ಷಿಸಿ ಆ ಭೂತಕ್ಕೆ ಒಂದು ನಿರ್ಮಲ ಜೀವವನ್ನು ಬಲಿಕೊಡಲು ನೀವು ಸಿದ್ಧರಾಗಿರುವಿರೆಂಬದನ್ನು ನಾ ಬಲ್ಲೆ. ಬೆಳ್ಳಗಿರುವದೆಲ್ಲಾ ಹಾಲೆಂದು ತಿಳಿದುಕೊಳ್ಳುವಷ್ಟು ಬುದ್ಧಿಯಿಲ್ಲದವಳು ನಾನಲ್ಲ." ಗಂಭೀರ ಧ್ವನಿಯಲ್ಲಿ ನಿರುಪಮೆಯು ಅಂದಳು.

"ನೀನು ನನ್ನ ಸಂಗಡ ಕಲಹಿಸಲು ಪಣತೊಟ್ಟ ಹಾಗಿದೆ. ತಪ್ಪುತಿಳುವಳಿಕೆಯಿಂದ ಏನೋ ಅಸಂಬದ್ಧ ಮಾತುಗಳನ್ನು ಆಡುತ್ತಲಿರುವೆ. ಸರದಾರ ಪದವಿಯನ್ನು ಸಂಪಾದಿಸಲು ನಾನು ಯಾರನ್ನೂ ಬಲಿ ಕೊಡಲು ಹೊರಟಿಲ್ಲ." ತಾಳ್ಮೆಯ ಸ್ವರದಲ್ಲಿ ದುರ್ಜಯ ನುಡಿದನು ಸಂಭಾಷಣೆಯನ್ನು ಬೇರೆ ಕಡೆಗೆ ತಿರುಗಿಸಲು ಅವನು ಪ್ರಯತ್ನಿಸಿದ; ಆದರೆ ಆ ಯತ್ನವು ಸಫಲವಾಗಲಿಲ್ಲ.

"ಅಂಗೈ ಹುಣ್ಣಿಗೆ ಕನ್ನಡಿ ಬೇಕಾಗಿಲ್ಲ. ಏನನ್ನೂ ಅರಿಯದ ಮೂಢ ಹೆಂಗಸು ನಾನಲ್ಲ. ನನಗೂ ಮೆದುಳಿವೆ, ಕಣ್ಣುಗಳಿವೆ, ನೋಡಬಲ್ಲೆ; ನೋಡಿದುದನ್ನೂ ತಿಳಿದುಕೊಳ್ಳಬಲ್ಲೆ. ಆ ಮನೆಯಲ್ಲಿ ಕೊಳೆಯುತ್ತಿರುವಾಕೆ ಯಾರೆಂಬುದು ನನಗೆ ಗೊತ್ತಿದೆ."

"ಯಾವ ಮನೆಯಲ್ಲಿ?" ದಿಗಿಲಿನಿಂದ ದುರ್ಜಯನು ಪ್ರಶ್ನಿಸಿದ. ಅವನ ಮೋರೆಯು ಬಿಳುಪು ಬಣ್ಣವನ್ನು ತಳೆದಿತು.

"ಏಕೆ ಈ ನಟನೆ?" ಒಂದು ಮಂದಸ್ಮಿತವು ನಿರುಪಮೆಯ ತುಟಿಗಳ ಮೇಲೆ ಮೂಡಿತು; ಆದರೆ ಅದು ಹರುಷವನ್ನೋ ಸ್ನೇಹವನ್ನೋ ಸೂಚಿಸತಕ್ಕದಾಗಿರಲಿಲ್ಲ. ತಿರಸ್ಕಾರದ ಬಣ್ಣವು ಆ ಎಳೆ ನಗೆಯಲ್ಲಿ ಮಿನುಗುತ್ತಿದ್ದಿತು. ಅವಳು ತನ್ನ ಮಾತುಗಳನ್ನು ಮುಂದುವರಿಸಿದಳು: "ಆ ಮನೆಯಲ್ಲಿ ಕೊಳೆಯುತ್ತಿರುವಾಕೆಯನ್ನು ಏಕೆ ಬಂಧನದಲ್ಲಿಟ್ಟಿರುವಿರೆಂಬದನ್ನು ನಾನು ಅರಿತಿರುವೆ. ಈ ದುರ್ಬುದ್ಧಿ ನಿಮ್ಮಿಂದ ದೂರವಾಗಲಿ ಎಂದು ಸದಾ ಪ್ರಾರ್ಥಿಸುತ್ತಲಿದ್ದೇನೆ. ನಿಮ್ಮ ಮನದಲ್ಲಿರುವ ವಿಚಾರವೇನೆಂಬುದು ನನಗೆ ಗೊತ್ತಿದೆ. ನಿಷ್ಕಲಂಕಳಾದ ಆ ಸಾಧ್ವಿಯನ್ನು ಆ ಭೂತಕ್ಕೆ ನಿವೇದಿಸಬೇಕು; ಈ ಬಲಿಯಿಂದ ಸಂತೃಪ್ತಿಯನ್ನು ಪಡೆದ ಆ ದೆವ್ವವು ನಿಮಗೆ ಸರದಾರ ಪದವಿಯನ್ನು

ವಯುಪಾಲಿಸಬೇಕು. ಎಷ್ಟು ಮಂದಿ ವೀರರು ಹೆಂಗಸರ ಶೀಲವನ್ನು ಕಾಯುವದಕ್ಕಾಗಿ ಪ್ರಾಣತ್ಯಾಗವನ್ನು ಮಾಡಿರುವರು! ಪ್ರತಿಯೊಬ್ಬ ಆರ್ಯನು ಮಹಿಳೆಯರ ಸತೀತ್ವವನ್ನು ಕಾಯುವದು ತನ್ನ ಕರ್ತವ್ಯವೆಂದು ಭಾವಿಸುತ್ತಾನೆ; ಆದರೆ ನೀವು! ಅದನ್ನು ನೆನೆಯುವಾಗ ನನ್ನ ಎದೆಯು ಬಿರಿದಂತಾಗುತ್ತದೆ. ಸೆರಗೊಡ್ಡಿ ಬೇಡುತ್ತೇನೆ; ಆ ಹೀನ ಕೆಲಸವನ್ನು ಬಿಟ್ಟು ಬಿಡಿರಿ."

"ನಿರುಪಮಾ, ನನ್ನನ್ನು ಹೀಯಾಳಿಸದಿರು. ಇವೆಲ್ಲಾ ಯಾರಿಗೆಬೇಕಾಗಿ ಯೆಂಬುವದನ್ನು ಬಲ್ಲೆಯಾ?" ಮೃದುಸ್ವರದಲ್ಲಿ ದುರ್ಜಯನಂದನು.

"ಪುನಃ ಅದೇ ಪಲ್ಲವಿ! ಯಾರಿಗೆ ಬೇಕಾಗಿ? ದುರಾಗ್ರಹದಿಂದ, ಅಧಿಕಾರ ಲಾಲಸೆಯಿಂದ!" ಕೋಪ ಸಮ್ಮಿಶ್ರ ವಾಣಿಯಲ್ಲಿ ನಿರುಪಮೆಯು ಹೇಳಿದಳು. "ಒಟ್ಟಿಗೆ ಹೇಳುವದಾದರೆ ಇವೆಲ್ಲ ನನ್ನ ದುರ್ದೈವ! ಇಲ್ಲದಿದ್ದರೆ ನಿಮಗೇಕೆ ಈ ದುರ್ಬುದ್ಧಿಯು ಹುಟ್ಟುತ್ತಿದ್ದಿತು?"

"ಪತಿಯೇ ಹೆಂಗಸಿಗೆ ದೇವರೆಂದು ಶಾಸ್ತ್ರಗಳು ಹೇಳುತ್ತಲಿವೆ. ಪತಿಯನ್ನು ಅನುಸರಿಸುವದು ಆರ್ಯ ಲಲನೆಗೆ ಭೂಷಣವಂತೆ. ನೀನಾದರೋ ನನ್ನನ್ನು ನಿಂದಿಸಲುದ್ಯುಕ್ತಳಾಗಿರುವೆ. ಇದು ಪಾಪಕರವಲ್ಲವೇ?" ಶಾಸ್ತ್ರದ ನುಡಿಗಳನ್ನು ಉಪಯೋಗಿಸಿ ದುರ್ಜಯನು ನಿರುಪಮೆಯ ಬಾಯಿಗೆ ಬೀಗ ಹಾಕಲು ಪ್ರಯತ್ನಿಸಿದನು.

ನಿರುಪಮೆಯು ಅಷ್ಟು ಸುಲಭದಲ್ಲಿ ಬಿಟ್ಟುಕೊಡುವವಳಾಗಿರಲಿಲ್ಲ. ಆಕೆ ದುರ್ಜಯನ ನುಡಿಗೆ ಪ್ರತಿಹೇಳಲು ಉದ್ಯುಕ್ತಳಾದಳು. "ನಿಮ್ಮಂಥವರು ಹೇಳುವದು ಹೀಗೆಯೇ! ಶಾಸ್ತ್ರಗಳಲ್ಲಿ ಹೇಳಿದಂತೆ ನೀವು ಆಚರಿಸುತ್ತಿರುವಿರೆ? ನಾನು ನಿಮ್ಮನ್ನು ಪ್ರೀತಿಸುತ್ತಿರುವೆ, ಗೌರವಿಸುತ್ತಿರುವೆ; ಹೃದಯದೇಗುಲದಲ್ಲಿ ನಿಮ್ಮ ಬಿಂಬವನ್ನು ಪೂಜಿಸುತ್ತಿರುವೆ, ಅಂದ ಮಾತ್ರಕ್ಕೆ ನಿಮ್ಮ ಪಾಪಕೃತ್ಯಗಳಿಗೆ ನಾನು ಬೆಂಬಲವನ್ನು ನೀಡಲಾರೆನು. ನಾನೂ ನರಜೀವಿ; ನನಗೆ ಆತ್ಮವಿದೆ; ಆಲೋಚಿಸುವ ಶಕ್ತಿಯಿದೆ. ಈ ಹೀನ ಕೆಲಸದಿಂದ ನಿಮ್ಮನ್ನು ದೂರವಿರಿಸುವದು ನನ್ನ ಕರ್ತವ್ಯ. ನಿಮ್ಮ ಜೀವನದ ಪಾಲುಗಾರಳು ನಾನಿರುವದರಿಂದ ನಿಮ್ಮ ಕೆಲಸಗಳಲ್ಲಿ ಸಲಹೆಗಳನ್ನು ನೀಡಲು ನನಗೆ ಅಧಿಕಾರವಿದೆ. ಆದುದರಿಂದ ನನ್ನ ಮಾತು ಕೇಳಿರಿ; ನನ್ನ ಬಗ್ಗೆ ನಿಮ್ಮ ಹೃದಯದಲ್ಲಿ ಪ್ರೀತಿ ಇದ್ದರೆ ನನ್ನ ನುಡಿಗೆ ಕಿವಿಗೊಡಿರಿ. ಈ ಜಗತ್ತಿನಲ್ಲಿ ನಾವಿರುವದು ಕೆಲವು ದಿನಗಳತನಕ ಮಾತ್ರ. ಅಂದಮೇಲೆ ನಮ್ಮ ಸಮಯವನ್ನು ಅಭ್ಯುನ್ನತಿಯನ್ನು ಪಡೆಯ

ಲೋಭಸುಗ ಉಪಯೋಗಿಸಬೇಕು. ಅದಲ್ಲದೆ ನಮ್ಮ ಆತ್ಮಗಳಿಗೆ ಕಪ್ಪುಬಣ್ಣ ವನ್ನು ಬಳಿಯಲು ಈ ವೇಳೆಯನ್ನು ವಿನಿಯೋಗಿಸುವದರಿಂದ ಯಾವ ಫಲ ವಿದೆ? ಅಧಃಪತನವನ್ನು ಹೊಂದುವದಲ್ಲದೆ ಬೇರೆ ಗತಿಯಿಲ್ಲ. ದೇವರು ನಿಮಗೆ ಬುದ್ಧಿಯನ್ನೂ ವಿವೇಕವನ್ನೂ ಕೊಟ್ಟಿರುತ್ತಾನೆ. ಆಲೋಚಿಸಿರಿ, ನಿಮ್ಮ ಈ ಕೆಲಸಕ್ಕೆ ನಿಮ್ಮ ಅಂತರಾತ್ಮನ ಒಪ್ಪಿಗೆಯಿದೆಯೇ? ಸಿರಿಯನ್ನು ಹಂಬಲಿಸಿ ನಿಮ್ಮ ಆತ್ಮವನ್ನು ಮಲಿನ ಪಡಿಸಿಕೊಳ್ಳುವದರಲ್ಲಿ ನೀವು ಉದ್ಯುಕ್ತರಾಗಿರು ತ್ತೀರಿ; ಆದರೆ ಮನುಷ್ಯನು ಸಿರಿಯಿಂದ ಮಾತ್ರ ಸಂತೃಪ್ತಿಯನ್ನು ಹೊಂದು ತ್ತಾನೆಯೇ? ಜೀವನದಲ್ಲಿ ನಮಗೆ ಸುಖ ಸಂತೃಪ್ತಿಗಳ ಕೆನೆವಾಲು ದೊರಕಬೇ ಕಾದರೆ ಹೃದಯಗಳು ತಿಳಿವಾಗಿರಬೇಕು; ಬುದ್ಧಿಯು ಪರಿಪಕ್ವವಾಗಿರಬೇಕು. ಅದಿಲ್ಲದೆ ಹೋದರೆ ಬೇರೆ ಸಂಪತ್ತು ದೊರಕಿದರೂ ಸುಖ ಸಿಗದು. ಹೃದಯವು ತಿಳಿಯಾಗಿದ್ದರೆ, ಬಡತನದ ಬಾಳುವೆಯಲ್ಲಿಯೇ ಸುಖ-ಸಂತೃಪ್ತಿಗಳ ದರುಶನ ವಾಗಬಹುದು."

ಈ ನುಡಿಗಳು ದುರ್ಜಯನ ಅಂತರಂಗದಲ್ಲಿ ಪ್ರವೇಶಿಸಿದವು. ತನ್ನ ಮಡ ದಿಯ ತುಟಿಗಳಿಂದ ಉದುರಿದ ಸರಳ ಮಾತುಗಳಲ್ಲಿ ಆಳವಾದ ಒಂದು ವಿಚಾ ರವು ಹೊಳೆಯುತ್ತಿರುವದು ಅವನ ಸೂಕ್ಷ್ಮ ಚಕ್ಷುಸ್ಸುಗಳಿಗೆ ಗೋಚರಿಸದಿರಲಿಲ್ಲ. ಆತನ ಅಂತರಾತ್ಮವು ದುರ್ಜಯನನ್ನು "ನೀನು ಮಾಡುವದು ತಪ್ಪೆಂ"ದು ಎಚ್ಚರಿಸಿತು; ಆದರೆ ಆತನ ಎದೆಯಲ್ಲಿದ್ದ ಮೋಹ, ಆಶೆ ಇವುಗಳು ಆ ಕೆಸರಿನ ಹೊಂಡದಲ್ಲಿ ಮುಂದೆ ಹೆಜ್ಜೆಗಳನ್ನಿಡಲು ದುರ್ಜಯನನ್ನು ಒತ್ತಾಯ ಪಡಿಸಿ ದವು. ಮನುಷ್ಯಜೀವಿಯು ಈ ಮೋಹಕ್ಕೆ ದಾಸನು. ತಾನು ಮಾಡುವದು ತಪ್ಪೆಂಬುದನ್ನು ಅವನು ತಿಳಿದಿದ್ದರೂ, ಮೋಹಕ್ಕೆ ಅಧೀನನಾಗಿ ಕೆಟ್ಟುದನ್ನು ಆಚರಿಸುತ್ತಾನೆ. ಈ ವ್ಯಾಮೋಹದ ರಜ್ಜುವು ಕೆಲವರ ಕಾಲುಗಳ ಕಟ್ಟು ಗಳನ್ನು ತುಸ ಸಡಿಲಿಸಿರುತ್ತದೆ. ಇನ್ನು ಕೆಲವರ ಕಾಲುಗಳ ಕಟ್ಟುಗಳು ಬಿಗಿ ಯಾಗಿರುತ್ತದೆ. ದುರ್ಜಯನ ಮನವಾದರೋ ತನ್ನ ಸ್ವಾಧೀನತೆಯನ್ನು ಕಳೆದುಕೊಂಡಿದ್ದಿತು. ನಿರುಪಮೆಯ ನುಡಿಗಳು ಅವನ ಅಂತರಾತ್ಮನನ್ನು ಜಾಗ್ರತಗೊಳಿಸಿದವೆಂಬುದು ನಿಜ; ಆದರೆ ಆ ಅಂತರಾತ್ಮನಿಂದ ಹೊರಟ ಪ್ರಭಾಕಿರಣಗಳು ಮನಸ್ಸನ್ನು ಆವರಿಸಿದ್ದ ತಿಮಿರವನ್ನು ಇಲ್ಲದಾಗಿಸಲಿಲ್ಲ.

"ನಿರುಪಮಾ!" ಕೊನೆಗೆ ಅವನು ತನ್ನ ತುಟಿಗಳನ್ನು ಬಿಚ್ಚಿದ. "ನಿನ್ನ ಮಾತುಗಳು ನಿಜವಲ್ಲವೆಂದು ನಾನು ಹೇಳುವದಿಲ್ಲ. ನಾನು ಆಚರಿಸುತ್ತಿರು

ವದು ಪಾಪವೆಂದು ಹಲವು ಸಾರೆ ನನಗೆ ಅನಿಸುತ್ತಲಿದೆ; ಆದರೆ ನೋಡು. ನಿರ್ಮಲವಾದ ಒಂದು ಬಾಳುವೆಯನ್ನು ಅನುಸರಿಸಬೇಕಾದರೆ ನಾವು ಸಂನ್ಯಾಸಿಗಳಾಗಬೇಕು. ಈ ಲೌಕಿಕ ಜೀವನದಲ್ಲಿ ಈ ತಪ್ಪುಗಳು ಸಾಧಾರಣವಾಗಿ ಸಂಭವಿಸುತ್ತವೆ. ಅವು ಅನಿವಾರ್ಯ; ಒಮ್ಮೆ ಅಧಿಕಾರವು ಕರಗತವಾದರೆ ಈ ತಪ್ಪುಗಳನ್ನು ನಿವಾರಿಸಬಹುದು. ಸಾಧಾರಣವಾದ ಸಂಗತಿಯಲ್ಲಿ ನೀನು ಹೀಗೆ ತಲೆ ಹುಣ್ಣು ಮಾಡಬೇಕಾದ ಆವಶ್ಯಕತೆಯಿಲ್ಲ." ಈ ವಾದದಿಂದ ಮರ್ಜಯನು ನಿರುಪಮೆಯ ವಾದಸರಣಿಯನ್ನು ಬೇರೆ ಕಡೆಗೆ ತಿರುಗಿಸಲು ಪ್ರಯತ್ನಿಸಿದ.

"ಆದರೆ ಇದು ಒಂದು ಸಾಮಾನ್ಯ ಸಂಗತಿಯಲ್ಲ. ನಿಮ್ಮ ಆಚರಣೆಯಿಂದ ಒಂದು ಪರಿಶುದ್ಧ ಪುಷ್ಪವು ಕಲಂಕಿತವಾಗುತ್ತದೆ. ಆಕೆಯ ಬಿಸಿಯುಸಿರಿನ ತಾಪದಿಂದ ನಮ್ಮ ಕುಟುಂಬವು ಭಸ್ಮವಾಗಬಹುದು; ಸಾಧ್ವಿಯೊಬ್ಬಳ ಕಣ್ಣೀರು ನಮ್ಮನ್ನು ನರಕಕ್ಕೆ ಸೆಳೆಯಬಹುದು."

"ಈಗ ಯತ್ನವಿಲ್ಲ. ಆಗಲೇ ಹೇಳಿದೆ; ಈ ಸಂಗತಿಯನ್ನು ನೆನೆದು ನಿನ್ನ ಮೆದುಳನ್ನು ಹುಣ್ಣು ಮಾಡಿಕೊಳ್ಳಬೇಡವೆಂದು. ಅವಳನ್ನು ಬಂಧನದಿಂದ ಬಿಡಿಸುವನೆಂದರೆ ನನ್ನ ಚಿತೆಯನ್ನು ನಾನೇ ಸಿದ್ಧಪಡಿಸಿದ ಹಾಗೆ!"

"ಅದೇಕೆ? ಅವಳನ್ನು ಬಂಧನದಿಂದ ಪಾರುಮಾಡಿದರೇನಾಗುವದು?" ಉತ್ಸುಕತೆಯಿಂದ ನಿರುಪಮೆಯು ಪ್ರಶ್ನಿಸಿದಳು.

"ಈ ಸಂಗತಿಯು ಸುಭೇದಾರನಿಗೆ ತಿಳಿದಿದೆ; ಅವಳನ್ನು ಬಂಧನದಿಂದ ಪಾರು ಮಾಡಿದರೆ ಸುಭೇದಾರನ ಕೋಪಕ್ಕೆ ಗುರಿಯಾಗಬೇಕಾಗುವದು. ಸುಭೇದಾರನು ಮುಳಿದರೆ ಉಳಿಗಾಲವೆಲ್ಲಿಯದು?"

"ಊರನ್ನು ಬಿಟ್ಟು ಅನ್ಯನಾಡಿಗೆ ಹೋದರಾಗದೆ?" ನಿರುಪಮೆ ಕೇಳಿದಳು.

ಮರ್ಜಯನು ತನ್ನ ತುಟಿಗಳನ್ನು ಬಿಚ್ಚಲಿಲ್ಲ.

"ನನ್ನ ಬೇಡಿಕೆಯನ್ನು ನೀವು ಮನ್ನಿಸಲಾರಿರಿ. ನಿಮ್ಮ ಹೃದಯದಲ್ಲಿರುವ ಪ್ರೀತಿಯ ನೀರು ಉದ್ಯೋಗವ್ಯಾಮೋಹವೆಂಬ ಬೆಂಕಿಯ ತಾಪದಿಂದ ಬತ್ತಿಹೋಗಿದೆ; ಕರುಣೆಯಿಲ್ಲದೆ ಎದೆಯು ಕಲ್ಲಾಗಿದೆ. ನಿಮ್ಮ ಮಾತುಗಳಿಂದ ನಿಮ್ಮ ಅಂತರಂಗವೇನೆಂಬುದು ನನಗೆ ತಿಳಿದಿತು. ನಿಮಗೆ ನಾನು ಬೇಕಾಗಿಲ್ಲ. ನಿಮಗೆ ಬೇಕಾದುದು ಸರದಾರ ಪದವಿ, ಅಧಿಕಾರ, ದರ್ಪ ಮತ್ತು ಸಂಪತ್ತುಗಳು! ಪ್ರೀತಿಗಿಂತ ಹೆಚ್ಚಿನ ಮಹತ್ವವನ್ನು ನೀವು ಈ ಹಂಬಲಗಳಿಗೆ ಕೊಟ್ಟಿರು

ಸ್ತೀರಿ. ಈಗ ನೀವು ಇವೆರಡರಲ್ಲಿ ಯಾವುದಾದರೂ ಒಂದನ್ನು ಆರಿಸಬೇಕು!"

"ಅಂದರೆ?" ದುರ್ಜಯನು ತನ್ನ ಕಣ್ಣುಗಳನ್ನು ಮಡದಿಯ ಕಡೆಗೆ ಹೊರಳಿಸಿದ.

"ನಿಮಗೆ ಬೇಕಾದುದಾವುದು? ನಾನು ನಿಮಗೆ ಬೇಕೋ; ಅಥವಾ ಅಧಿಕಾರ-ಸಂಪತ್ತುಗಳು ಬೇಕಾಗಿವೆಯೋ? ಪ್ರೀತಿಯನ್ನಾರಿಸುವಿರೋ ಅಥವಾ ದುರ್ಮೋಹವನ್ನು ಆರಿಸುವಿರೋ?" ನಿರುಪಮೆಯು ತನ್ನ ಹೊಳೆಯುತ್ತಿರುವ ಕಣ್ಣುಗಳನ್ನು ದುರ್ಜಯನ ಕಡೆಗೆ ಚಲಿಸಿದಳು.

"ನಿರುಪಮಾ, ಸಾಕು ನಿನ್ನ ಉಪಹಾಸ! ನನ್ನ ಪ್ರೀತಿಯಲ್ಲಿಯೂ ನಿನಗೆ ಸಂದೇಹವೇ? ನಿನ್ನ ನ್ನೈಶ್ವರ ಮಟ್ಟಿಗೆ ಪ್ರೀತಿಸುತ್ತಿರುವೆನೆಂಬುದನ್ನು ಬಲ್ಲೆಯಾ?"

"ಇದು ಉಪಹಾಸವಲ್ಲ; ನಿಮ್ಮ ಪ್ರೀತಿಯನ್ನು ಈಗ ಒರೆಗಲ್ಲಿಗೆ ಹಚ್ಚಬೇಕಾಗಿದೆ!" "ನಿರುಪಮಾ!"

"ಅದನ್ನೇ ಹೇಳುವದು; ಈ ಎರಡರಲ್ಲಿ ನೀವು ಯಾವುದಾದರೂ ಒಂದನ್ನು ನಿರ್ಧರಿಸುವದು ಅತ್ಯಾವಶ್ಯಕವಾಗಿದೆ. ಅದು ಆದಷ್ಟು ಜಾಗ್ರತೆಯಿಂದಾಗಬೇಕು. ನಿಮ್ಮ ಇದುವರೆಗಿನ ವರ್ತನೆಗಳು ನಾನು ನಿಮಗೆ ಬೇಕಾಗಿಲ್ಲವೆಂಬುದನ್ನು ಬಿಚ್ಚಿ ನುಡಿಯುತ್ತಲಿವೆ. ಇನ್ನು ಮೇಲೆ ಈ ನರಕಯಾತನೆಗಳನ್ನು-ಈ ಮಾನಸಿಕ ಹಿಂಸೆಗಳನ್ನು-ಸಹಿಸುವದು ನನ್ನಿಂದಾಗದು ಇದುವರೆಗಿನ ವರ್ತನೆಗಳು ನಾನು ನಿಮಗೆ ಬೇಕಾಗಿಲ್ಲವೆಂಬುದನ್ನು ಸ್ಪಷ್ಟಗೊಳಿಸಿವೆ. ಇನ್ನು ನಾನು ನಿಮಗೆ ಬೇಕಾಗಿದ್ದರೆ ಅದನ್ನು ನಿಮ್ಮ ಕೆಲಸಗಳ ಮೂಲಕ ತೋರಿಸಿಕೊಡಬೇಕು."

"ನಿರುಪಮಾ, ಹಾಗನ್ನದಿರು; ನೀನಲ್ಲದೆ ಬೇರೆ ಯಾರು ನನಗಿರುವರು?"

"ನಿಮ್ಮ ಸರದಾರ ಪದವಿ!" ತಿರಸ್ಕಾರ ಸ್ವರದಲ್ಲಿ ನಿರುಪಮೆ ಹೇಳಿದಳು.

ದುರ್ಜಯನು ಮೌನವನ್ನವಲಂಬಿಸಿದ.

---

## ೧೩ ವಿಪತ್ಪರಿಹಾರ.

ಇದುವರೆಗೆ ಮುಚ್ಚಿದ್ದ ಕದಗಳು ತೆರೆಯಲ್ಪಟ್ಟವು. ಕಾರಾಗಾರದ ನೆಲವಲ್ಲಿ ಮಲಗಿದ್ದ ಹೇಮಾ ಎದ್ದು ಕುಳಿತಳು; ಒಮ್ಮಿಂದೊಮ್ಮೆ ಬಾಗಿಲುಗಳು ಬಿಚ್ಚಲ್ಪಟ್ಟುದುದನ್ನು ದರ್ಶಿಸಿ ವಿಸ್ಮಯವನ್ನು ಹೊಂದಿದಳು. ನೆಲದ ಮೇಲೆ ಬಿದ್ದುಕೊಂಡಿದ್ದಲ್ಲಿಂದ ಎದ್ದು ಕುಳಿತಳು.

ಹೊರಗ ಬೆಳಕಿಲ್ಲ, ಕತ್ತಲೆ. ಇರುಳಿನಲ್ಲಿ ಅನಿರೀಕ್ಷಿತವಾಗಿ ಕದಗಳು ತೆರೆಯಲ್ಪಟ್ಟುದುದನ್ನು ನೋಡಿ ಅವಳ ಎದೆಯಲ್ಲಿ ಅಂಜಿಕೆ ಹುಟ್ಟದಿರಲಿಲ್ಲ. ಮುಂದೇನಾಗುವುದೆಂಬದನ್ನು ತಿಳಿಯಲು ಕಣ್ಣುಗಳನ್ನು ಅಗಲಿಸಿದಳು; ಕಿವಿಗಳನ್ನು ನಿಗುರಿಸಿದಳು.

ಕೇಳಿ ಬಂದಿತು ಹೆಜ್ಜೆಗಳ ಸಪ್ಪಳ; ದೃಗ್ಗೋಚರವಾದುವು ಕದಗಳ ಬಳಿಯಲ್ಲಿ ಮೂರು ಪುರುಷಾಕೃತಿಗಳು; ಕಿವಿಗಳಲ್ಲಿ ಪತಿಸಿದವು ಅಸ್ಪಷ್ಟವಾದ ನುಡಿಗಳು; ದೀಪವೊಂದು ಗೋಚರಿಸಿತು ಕದಗಳ ಸನಿಯದಲ್ಲಿ. ಹೇಮಳ ಎದೆಯು ನಡುಗಿತು, ಬಿಸಿಯುಸಿರು ಹೊರಬಿದ್ದಿತು. ಹೇಮಳನ್ನು ಆವರಿಸಿದುವು ಚಿಂತೆಗಳು.

ತನ್ನ ಸತ್ವಪರೀಕ್ಷೆಯ ಸಮಯ ಬಂದೊದಗಿದೆಯೆಂಬುದನ್ನು ಆಕೆಯು ತಿಳಿಯದಿರಲಿಲ್ಲ. ಆಕೆಯಲ್ಲಿದ್ದ ದಿವ್ಯತೆಯನ್ನು, ಪರಿಶುದ್ಧತೆಯನ್ನು ಕಾಯಲಿರುವ ಮುಹೂರ್ತವು ಸನ್ನಿಹಿತವಾಗಿದ್ದಿತು. ಇದುವರೆಗೆ ಆಕೆಯು ಎದುರು ನೋಡುತ್ತಲಿದ್ದ ಆ ಸಮಯವು ಸಂಪ್ರಾಪ್ತವಾಗಿದ್ದಿತು.

ತನ್ನ ಮಡಿಲಿನಲ್ಲಿ ಆಕೆ ಕರವನ್ನು ಚಲಿಸಿದಳು; ಕಠಾರಿಯು ಕೈಗೆ ಸಿಕ್ಕಿತು. ಅದನ್ನು ತೆಗೆದುಕೊಂಡು, ಅದರ ಮೇಲೆ ಒಂದು ಚುಂಬನದ ಮುದ್ರೆಯನ್ನು ಒತ್ತಿದಳು. ಈ ನುಡಿಗಳು ಆಕೆಯ ವದನಮಲ್ಲಿಗೆಯಿಂದ ಹೊರಬಿದ್ದವು: “ನನ್ನ ಶೀಲವನ್ನು ಕಾಯುವ ಕೆಲಸ ನಿನ್ನದು; ನನ್ನ ಸತ್ವವನ್ನು ಪರೀಕ್ಷಿಸಲು ಬರುತ್ತಿರುವವರ ನೆತ್ತರಿನಿಂದ ನಿನ್ನ ದಾಹವು ಅಡಗಲಿ; ಅದು ಸಾಧ್ಯವಾಗದಿದ್ದರೆ ನನ್ನ ಗುಂಡಿಗೆಯ ಬಿಸಿರಕ್ತವು ನಿನ್ನ ಪಿಪಾಸೆಯನ್ನು ಇಲ್ಲದಾಗಿಸಲಿ!”

ಅವರು ಒಳಗೆ ಪ್ರವೇಶಿಸಿದರು; ಆಕೆಯು ಎದ್ದು ನಿಂತಳು. ಅವರು ಆಕೆಯನ್ನು ನೋಡುತ್ತ ನಿಂತಿದ್ದರು. ಯಾರ ತುಟಿಗಳಿಂದಲೂ ನುಡಿಗಳು ಹೊರಡಲಿಲ್ಲ. ನಿರವತೆಯು ಅಲ್ಲಿ ವ್ಯಾಪಿಸಿತು.

ಅವರು ಮೂರು ಮಂದಿ. ಒಬ್ಬನು ಗೌರವಶಾಲಿ; ಇನ್ನೊಬ್ಬ ಪಠಾಣನು. ಅವನ ಅಂಗಾಂಗಗಳು ದರ್ಪವನ್ನು ಸೂಚಿಸುತ್ತಿದ್ದವು. ಮೊಗದಿಂದ ಉಗ್ರತೆಯು ಸ್ಫುರಿಸುತ್ತಿದ್ದಿತು. ಮೃಗೀಯಸ್ವಭಾವವನ್ನು ಆ ಕಣ್ಣುಗಳು ಹೊರಚೆಲ್ಲಿದವು. ಎರಡನೆಯ ಮನುಷ್ಯನೂ ಪಠಾಣನೇ ಆಗಿದ್ದ; ಆದರೆ ಮೊದಲನೆಯವನ ದರ್ಪ ಆತನಲ್ಲಿ ಕಾಣದು. ಕಣ್ಣುಗಳಲ್ಲಿ ಕ್ರೂರತೆಯು ನೆಲಸಿದ್ದಿತು.

ತುರಾರನೆಯುವನು ಒಬ್ಬ ಹಿಂದೂ. ಅವನಲ್ಲಿ ದರ್ಪವಿರಲಿಲ್ಲ. ಗಾಂಭೀರ್ಯ ವಿರಲಿಲ್ಲ; ಕಣ್ಣುಗಳಲ್ಲಿ ಕಾಪಟ್ಯವು ತುಳುಕುತ್ತಿದ್ದಿತು.

ಮೂರು ಮಂದಿಯೂ ಗೊಂಬೆಗಳಂತೆ ನಿಂತರು; ನಿರವತೆಯು ಗಾಳಿಯಲ್ಲಿ ಬೆರತಿತು; ಆದರೆ ಇದು ಒಂದು ನಿಮಿಷದತನಕ; ಆ ಮೇಲೆ ಮೊದಲನೆಯವನು ಒಂದು ಹೆಜ್ಜೆಯನ್ನು ಮುಂದೆ ಮಡಗಿದ. ಹೇಮಾ ಎರಡು ಹೆಜ್ಜೆಗಳಷ್ಟು ಹಿಂದಕ್ಕೆ ಸರಿದಳು. ಅವನು ಅವಳ ಮೋರೆಯನ್ನು ನೋಡಿದ; ಆ ಹೆಂಗಸು ತನ್ನ ಶಿರವನ್ನು ತಗ್ಗಿಸಿದಳು. ಪುನಃ ಅವನು ಎರಡು ಹೆಜ್ಜೆ ಮುಂದಕ್ಕೆ; ಅವಳು ಸರಿದಳು ಇನ್ನೆರಡು ಹೆಜ್ಜೆಗಳಷ್ಟು ದೂರ. ಪುನಃ ನಿಶಬ್ದತೆ, ಮೌನ. ತನ್ನ ಕೆಲಸವನ್ನು ಹೇಗೆ ಪ್ರಾರಂಭಿಸಬೇಕೆಂದು ಅವನು ಆಲೋಚಿಸ ಹತ್ತಿದ. ಅವನನ್ನು ತಡೆಯುವದು ಹೇಗೆಂದು ಅವಳು ಚಿಂತಿಸಿದಳು. ಪೈಶಾಚಿಕವಾದ ಸಂತೋಷವು ಅವನ ಕಣ್ಣುಗಳಲ್ಲಿ ಮಿನುಗಿತು. ತನ್ನ ಶೀಲವನ್ನು ಕಾಯ್ದುಕೊಳ್ಳುವದು ಹೇಗೆಂಬ ಚಿಂತೆಯು ಅವಳ ಚಿತ್ತವನ್ನು ಮುಸುಕಿತು.

"ಸುಂದರೀ, ನನ್ನ ಕಣ್ಮಣಿಯೇ!" ತನ್ನ ಪ್ರೇಮಾಲಾಪವನ್ನು ಅವನು ಪ್ರಾರಂಭಿಸಿದ.

"ಎಚ್ಚರಿಕೆ!" ಈ ಒಂದು ನುಡಿಯಿಂದ ಹೇಮಾ ತನ್ನ ನಿಶ್ಚಯವನ್ನು ಸೂಚಿಸಿದಳು.

"ಮುನದನ್ನೇ ಬಾ!" ಲಜ್ಜೆಯನ್ನು ತೊರೆದು ಅವನು ಹೇಳಿದ.

"ಸಾಹೇಬ," ತೀಕ್ಷ್ಣಸ್ವರದಲ್ಲಿ ಅವಳಂದಳು. "ಇದು ನಿಮಗೆ ಭೂಷಣವಲ್ಲ!"

"ಹಾ! ಹಾ! ನನ್ನ ಎದೆಯ ರಾಣಿಯು ನೀನು!" ಅವನ ಕರ್ಕಶ ಸ್ವರವು ಹೊರಟಿತು.

"ನಿಮ್ಮ ರಾಣಿಪದವು ಬೇಕಿಲ್ಲ; ನನ್ನನ್ನು ಹಿಂಸಿಸಬೇಡಿರಿ. ನನ್ನ ಸತ್ವ ಪರೀಕ್ಷೆಗೆ ಹೊರಡುವವರಿಂದ ಒಳ್ಳೆಯದಾಗದು."

"ಹಾ! ನಿನ್ನ ವೇದಾಂತ ಬೇಡ; ನಿನ್ನ ಪ್ರೇಮವನ್ನು ಬಯಸಿ ಬಂದಿರುವೆ. ಜಾಣಳಂತೆ ವರ್ತಿಸು. ಬಡ ಕಾಫರನ ಕೈ ಹಿಡಿಯುವದರಿಂದ ನಿನಗೇನು ಸಿಗುತ್ತದೆ ಹೇಳು? ನಾನು ಈ ಸಂಸ್ಥಾನಕ್ಕೆ ಒಡೆಯ; ನನ್ನ ಕೈ ಹಿಡಿಯುವದರಿಂದ ನೀನು ನನ್ನ ಒಹತಿಯಾಗುವೆ. ಚಿನ್ನಾಭರಣಗಳು ನಿನ್ನ ಕಾಲ

ಬಳಿಯಲ್ಲಿ ಹೊರಳುತ್ತವೆ. ನಿನ್ನನ್ನು ಸೇವಿಸಲು ಅನೇಕಮಂದಿ ದಾಸಿಯರು ಉದ್ಯುಕ್ತರಾಗುತ್ತಾರೆ. ನನ್ನ ತೊಡೆಗಳನ್ನು ನೀನು ಅಲಂಕರಿಸುವೆ."

ಹೇಮಳ ಕಣ್ಣುಗಳು ಬೆಂಕಿಯಂತೆ ಪ್ರಜ್ವಲಿಸಿದವು. ಮೋರೆಯು ಕೆಂಬಣ್ಣವನ್ನು ತಳೆದಿತು. ಮೈ ಮೇಲಿನ ರೋಮುಗಳು ಎದ್ದು ನಿಂತವು.

"ಮನದನ್ನೇ, ಜಾಣೆಯಂತೆ ವರ್ತಿಸು. ನಿನಗಾಗಿ ಈ ಎದೆಯು ತಪಿಸುತ್ತಲಿದೆ. ಇತರ ಕಾಫರ ಹೆಂಗಸರಂತೆ ಹುಚ್ಚಳಾಗದಿರು. ನಿನಗೆ ಸುಖವನ್ನು ನೀಡುವೆ. ನಿನ್ನ ಬಾಳನ್ನು ಪ್ರೀತಿಯ ಜೇನಿನಲ್ಲಿ ಮುಳುಗಿಸುವೆ. ನಿನ್ನ ನುಡಿಯನ್ನು ಮೀರಿ ನಡೆಯುವದಿಲ್ಲ."

"ಸರಿಯಿರಿ ಹಿಂದಕ್ಕೆ!" ಹೇಮಾ ಗರ್ಜಿಸಿದಳು. "ಸಾಹೇಬ, ನೀವೂ ಮನುಷ್ಯರಿರುವಿರೆಂದು ನಾನು ಭಾವಿಸುತ್ತೇನೆ. ನಿಮಗೂ ಅಕ್ಕತಂಗಿಯರೂ ಮಡದಿ ಮಕ್ಕಳೂ ಇರಬಹುದು. ನಿಮ್ಮ ತಂಗಿಯನ್ನು ಬೇರೊಬ್ಬನು ಪೀಡಿಸ ಬಂದರೆ ಹೇಗೆ ಅನಿಸಬಹುದು? ನಿಮ್ಮ ಪೈಗಂಬರರು ಅನ್ಯ ಹೆಂಗಸರನ್ನು ಪೀಡಿಸಬಾರದೆಂದು ನುಡಿದಿದ್ದಾರಂತೆ. ಅವರ ಅನುಯಾಯಿಗಳೆಂದೆನಿಸಿದ ನೀವು ಹೀಗೆ ಅನ್ಯಾಯ ಮಾಡಲು ಹೊರಟರೆ ಹೇಗೆ?"

"ಅಹಾ! ಆ ತತ್ವವು ನನಗೆ ಬೇಕಿಲ್ಲ!-ಬಾ!" ಅವನು ಎರಡು ಹೆಜ್ಜೆಗಳನ್ನು ಮುಂದಕ್ಕೆ ಮಡಗಿದನು.

ತನ್ನ ಹೆಜ್ಜೆಗಳನ್ನು ಹಿಂದಕ್ಕಿಡುತ್ತಾ ಹೇಮಾ ಹೇಳಿದಳು: "ಸಾಹೇಬ, ನೀವು ಒಂದು ಸಂಸ್ಥಾನವನ್ನು ಆಳತಕ್ಕವರು. ಲಕ್ಷಾಂತರ ಮಂದಿಯ ಜೀವಗಳು ನಿಮ್ಮ ಕೈಯಲ್ಲಿವೆ. ಈ ಸಂಸ್ಥಾನದಲ್ಲಿ ಸತ್ಯ, ನ್ಯಾಯ, ಸದಾಚಾರಗಳನ್ನು ಸಂರಕ್ಷಿಸುವ ಕೆಲಸ ನಿಮ್ಮದು. ಪ್ರಜೆಗಳು ದಾರಿತಪ್ಪಿ ನಡೆದರೆ ಅವರನ್ನು ದಂಡಿಸುವ ಕೆಲಸ ನಿಮ್ಮದಾಗಿದೆ. ಒಂದು ಸಂಸ್ಥಾನವನ್ನು ಆಳತಕ್ಕ ನೀವೇ ಸದಾಚಾರವನ್ನು ದೂರ ಒಗೆದು, ಅನ್ಯ ಹೆಂಗಸರನ್ನು ಬಲಾತ್ಕರಿಸಲು ಹೊರಟರೆ ಹೇಗೆ? ಸಾಹೇಬ, ನೀವು ವಿವೇಕಶಾಲಿಗಳಿರುತ್ತೀರೆಂದು ನನ್ನ ಭಾವನೆಯಾಗಿದೆ. ನನ್ನನ್ನು ನಿಮ್ಮ ತಂಗಿಯೆಂದು ಭಾವಿಸಿರಿ. ಒಂದು ಸಂಸ್ಥಾನವನ್ನು ಆಳತಕ್ಕ ನಿಮಗೆ ಸಂಸ್ಥಾನದ ಮಹಿಳೆಯರೆಲ್ಲರೂ ಸೋದರೀ ಸಮಾನರಲ್ಲವೆ? ಅವರ ಸತೀತ್ವವನ್ನು ಕಾಯುವ ಹೊಣೆಯು ನಿಮ್ಮದಲ್ಲವೆ? ನಾನು ನಿಮ್ಮನ್ನು ಸೋದರನೆಂದು ಭಾವಿಸಿದ್ದೇನೆ. ಅಂಗಲಾಚಿ ಬೇಡಿಕೊಳ್ಳುತ್ತೇನೆ. ನನ್ನ ಸತೀತ್ವವನ್ನು ರಕ್ಷಿಸಿರಿ; ಪಾಪಾಚರಣೆಯಲ್ಲಿ ಉದ್ಯುಕ್ತರಾಗಬೇಡಿರಿ.

ಈ ಜಗತ್ತಿನಲ್ಲಿ ದೇವರೆಂಬುವವನೊಬ್ಬನು ಇದ್ದಾನೆ. ನೀವು ಒಂದು ಸಂಸ್ಥಾನದ ಸುಭೇದಾರರಾಗಿರುವದರಿಂದ ನಿಮ್ಮ ಪಾಪಾಚರಣೆಯನ್ನು ತಡೆಗಟ್ಟಲು ಜನರಿರಲಿಕ್ಕಿಲ್ಲ; ಆದರೆ ಪ್ರಪಂಚವನ್ನು ನಿಯಂತ್ರಿಸುತ್ತಿರುವ ಒಂದು ಶಕ್ತಿಯಿವೆಯಲ್ಲ; ಅದು ನಿಮ್ಮ ಪಾಪಾಚರಣೆಯನ್ನು ಮೆಚ್ಚುವುದೇ? ನೀವು ಪುರುಷರಿರುವಿರಿ; ನಾನು ಹೆಂಗಸು. ನೀವು ಪಶುಗಳಂತೆ ವರ್ತಿಸಲು ಹೊರಟರೆ ಅದನ್ನು ತಡೆಯುವದು ಹೇಗೆ?"

"ಸುಂದರೀ, ಸಾಕು ಮಾಡು ನಿನ್ನ ಮಾತುಗಳನ್ನು. ನೀನೇ ಒಪ್ಪುವುದೊಳ್ಳೆಯದು. ಅನಾವಶ್ಯಕವಾಗಿ ಕಷ್ಟಗಳಿಗೆ ಗುರಿಯಾಗಬೇಡ." ಸುಭೇದಾರನ ದರ್ಪೋಕ್ತಿಯು ಹೊರಟಿತು.

ಇದುವರೆಗೆ ಮೌನವನ್ನು ತಾಳಿದ್ದ ಹಿಂದುವು ಈಗ ಮುಂದೆ ಬಂದನು ಅವನು ಒಬ್ಬ ವ್ಯವಹಾರಕುಶಲನಂತೆ ಹೇಮಳಿಗೆ ಬುದ್ಧಿ ಹೇಳತೊಡಗಿದ: "ನೀನು ಹೀಗೆ ಹಟ ಹಿಡಿಯುವದರಿಂದ ಯಾವ ಪ್ರಯೋಜನವೂ ಇಲ್ಲ. ಸಾಹೇಬರು ಬಹಳ ಒಳ್ಳೆಯ ಮನುಷ್ಯರು. ಅವರ ಕೃಪೆಯನ್ನು ಸಂಪಾದಿಸಿದರೆ ನಿನ್ನ ಜೀವನವು ಸಾರ್ಥಕವಾದಂತಾಗುವದು. ನಿನ್ನ ಎಲ್ಲ ಅಭೀಷ್ಟಗಳನ್ನು ಅವರು ನೆರವೇರಿಸುವರು. ಆದುದರಿಂದ ಹಟಮಾರಿಯಾಗಬೇಡ. ವಿವೇಕವುಳ್ಳವಳಂತೆ ವರ್ತಿಸು. ಹಟ ಹಿಡಿಯುವದರಿಂದ ನಿನಗೆ ಕೆಡುಕಲ್ಲದೆ ಒಳಿತಾಗಲಾರದು."

"ನಿಜ-ನಿಜ, ದುರ್ಜಯನು ಹೇಳುತ್ತಿರುವದು ದಿಟ. ಅವನ ಮಾತುಗಳನ್ನು ನೀನು ನಡೆಸುವುದಾದರೆ ನಿನ್ನ ಭಾಗ್ಯಕ್ಕೆ ಮಿತಿಯಿಲ್ಲ. ಈ ಸಂಸ್ಥಾನದ ಜನರಿಗೆ ನಿನ್ನ ನುಡಿಯು ವೇದವಾಕ್ಯವಾಗುವದು." ಸುಭೇದಾರನ ಬಾಯಿಯಿಂದ ಈ ಮಾತುಗಳು ಉದುರಿದವು.

ದುರ್ಜಯನ ಕಡೆಗೆ ಕೆಂಡಗಳಂತಿದ್ದ ತನ್ನ ಕಣ್ಣುಗಳನ್ನು ಹೊರಳಿಸುತ್ತ ಹೇಮಾ ಹೆಣ್ಣು ಹುಲಿಯಂತೆ ಗರ್ಜಿಸಿದಳು. "ನಿನ್ನನ್ನು ನೋಡಿದರೆ ಒಬ್ಬ ಹಿಂದುವಿನಂತಿದ್ದಿ. ನಿನ್ನ ಪೈಶಾಚಿಕತೆಗೆ ಒಂದು ಮಿತಿಯಿಲ್ಲವೇ? ಈ ಹುಲಿಗೆ ಆಹಾರವಾಗಿ ಕೊಡಲು ನನ್ನನ್ನು ಬಂಧಿಸಿ ಇಲ್ಲಿಗೆ ತಂದಿರುವೆ. ಈಗ ಪಾಪವನ್ನಾಚರಿಸೆಂದು ನನಗೆ ಉಪದೇಶಿಸುತ್ತಿರುವೆ. ನಿನ್ನ ಜನ್ಮ ಹಾಳಾಗಲಿ!"

ಇವಳು ಒಳ್ಳೆಯ ಮಾತಿಗೆ ಮಣಿಯುವವಳಲ್ಲ" ಸುಭೇದಾರನು ಹೇಮಳ ಹತ್ತಿರಕ್ಕೆ ಸರಿಯತೊಡಗಿದನು.

ಗೋಡೆಯ ಸನಿಯಕ್ಕೆ ಸರಿದು ನಿಂತು ಹೇಮಾ ಅಂದಳು: "ಜೋಕೆ, ಎಚ್ಚರಿಕೆ! ನನ್ನನ್ನು ಸ್ಪರ್ಶಿಸಬೇಡಿರಿ!"

"ನಿನ್ನನ್ನು ಮುಟ್ಟಿದರೇನು ಮಾಡುವೆ?" ನಸುನಗುತ್ತ ಸುಭೇದಾರನು ಹೇಮಳ ಹತ್ತಿರಕ್ಕೆ ಬಂದನು.

"ಇದರಿಂದ ನಿಮಗೆ ಒಳಿತಾಗದು."

"ಒಳಿತನ್ನೇ ಅಪೇಕ್ಷಿಸಿ ನಿನ್ನನ್ನು ಕಾಂಕ್ಷಿಸುತ್ತಿರುವೆ" ಸುಭೇದಾರನ ಎವೆಯಿಂದ ನಗುವು ಹರಿದಿತು. ಅವನು ತನ್ನ ಕರವನ್ನು ಚಾಚಿ ಹೇಮಳ ತೋಳನ್ನು ಹಿಡಿಯಲು ಪ್ರಯತ್ನಿಸಿದ.

"ಜೋಕೆ!"

ಆಕೆಯು ತನ್ನ ಎಡಗೈಯಲ್ಲಿ ಅಡಗಿಸಿದ್ದ ಕಠಾರಿಯನ್ನು ಬೆಳಕಿಗೆ ತಂದಳು. ಅದು ಮಿಂಚಿನಂತೆ ಗಾಳಿಯಲ್ಲಿ ಸರಿದಿತು. ಇನ್ನೊಂದು ನಿಮಿಷದಲ್ಲಿಯೇ ಆ ಆಯುಧವು ಸುಭೇದಾರನ ತೋಳಿನಲ್ಲಿ ಪ್ರವೇಶಿಸಿತು. ಸುಭೇದಾರನ ಎವೆಯನ್ನು ಸೀಳಬೇಕೆಂದು ಬಯಸಿ, ಹೇಮಾ ಆ ಕಠಾರಿಯನ್ನು ಪ್ರಯೋಗಿಸಿದ್ದಳು; ಆದರೆ ಅವಳ ಗುರಿಯು ತಪ್ಪಿತು. ಅವನ ವಕ್ಷಸ್ಥಳವನ್ನು ಸೀಳುವದರ ಬದಲು, ಅದು ಅವನ ತೋಳನ್ನು ಸೀಳಿತು.

"ಹಾಯ್!" ಎಂದು ಒದರುತ್ತ ಅವನು ತನ್ನ ಹೆಜ್ಜೆಗಳನ್ನು ಹಿಂದಕ್ಕೆ ಸರಿಸಿದ. ಅವನ ತೋಳಿನಲ್ಲಿ ನಾಟಿದ್ದ ಕಠಾರಿಯನ್ನು ಕಿತ್ತಿ, ಪುನಃ ತನ್ನ ಕೈಯಲ್ಲಿ ಹಿಡಿದುಕೊಳ್ಳಲು ಹೇಮಳಿಗೆ ಸಾಧ್ಯವಾಗಲಿಲ್ಲ. ಅವನು ತನ್ನ ತೋಳೊಳಗೆ ನಾಟಿದ್ದ ಕಠಾರಿಯನ್ನು ಕೀಳಲು ಪ್ರಯತ್ನಿಸುತ್ತ ಹೀಗೆ ಗರ್ಜಿಸಿದ: "ದುರ್ಜಯ, ಏನು ನೋಡುತ್ತಿರುವೆ? ಅಬ್ದುಲ್, ಏನು ಮಾಡುತ್ತಿರುವೆ? ಈ ಪಿಶಾಚಿಯು ನನ್ನ ಜೀವವನ್ನು ತೆಗೆಯಲು ಪ್ರಯತ್ನಿಸಿತು. ಆಕೆಯ ಕೈ ಕಾಲುಗಳನ್ನು ಹಿಡಿದು ಕಟ್ಟಿರಿ; ಅಲ್ಲಾಡಲು ಸಾಧ್ಯವಾಗದಂತೆ ಬಿಗಿಯಿರಿ. ಆಕೆಯ ಹಟವು ಎಲ್ಲಿಯವರೆಗೆಂಬೊಮ್ಮೆ ನೋಡುವೆನು. ಸಿಹಿಮಾತಿಗೆ ಮಣಿಯುವವಳಲ್ಲ."

ಸುಭೇದಾರನ ಮಾತುಗಳನ್ನು ಕೇಳುತ್ತಲೆ, ದುರ್ಜಯ-ಅಬ್ದುಲ್ಲ ಇವರಿಬ್ಬರೂ ಏಕಕಾಲದಲ್ಲಿ ಹೇಮಳಿದ್ದಲ್ಲಿಗೆ ಸರಿದರು. ಅವಳಿಗೆ ಅಲ್ಲಿಂದ ಪಾರಾಗಲು ಸಾಧ್ಯವಿರಲಿಲ್ಲ. ಆಕೆಯ ಕೈಯಲ್ಲಿದ್ದ ಆಯುಧವೂ ಕಳೆದುಹೋಯಿತು. ಇಬ್ಬರು ಗಂಡಸರನ್ನು ಎದುರಿಸುವದು ಹೇಗೆ?-ಆಕೆಯ ಎದೆಯಲ್ಲಿ ಹುಟ್ಟಿದ

ಶೋಕಕ್ಕೆ ಮಿತಿಯಿಲ್ಲ. ದೇಹದಲ್ಲಿದ್ದ ನೆತ್ತರೆಲ್ಲ ಹೆಪ್ಪುಗಟ್ಟಿದಂತಾಯಿತು. ಗಂಡಸರಿಬ್ಬರೂ ತೀರ ಸನಿಯಕ್ಕೆ ಬಂದರು. ಆಗ ಹೇಮಾ ತನ್ನ ಮುಷ್ಟಿಯನ್ನು ಗಟ್ಟಿ ಹಿಡಿದು, ಅಬ್ದುಲ್ಲನ ಮೋರೆಯ ಮೇಲೆ ಒಂದು ಗುದ್ದು ಹಾಕಿದಳು. ಆ ಪ್ರಹಾರವು ಅವನ ಮೂಗಿಗೆ ತಗಲಿತು. ಮೂಗು ಬಿರಿದುದರಿಂದ ರಕ್ತವು ಧಾರಾಕಾರವಾಗಿ ಹರಿಯತೊಡಗಿತು. "ಅಯ್ಯೋ!" ಎಂಬ ಕ್ರಂದನವು ಅವನ ಕೊರಳಿನಿಂದ ಹೊರಟಿತು.

ದೂರ ಸರಿದು ನಿಂತಿದ್ದ ಸುಭೇದಾರನು ಹೇಳಿದ: "ದುರ್ಜಯ, ಏನು ನೋಡುತ್ತಿರುವೆ? ಮೊದಲು ಆ ಕದಗಳನ್ನು ಮುಚ್ಚು. ಹೊರಗಿನಿಂದ ಜನರು ಬಂದಾರು. ಈ ಗಲಭೆಯು ಹೊರಗಿನವರ ಮನವನ್ನು ಸೆಳೆದೀತು."

ಸುಭೇದಾರನ ನುಡಿಗಳನ್ನು ದುರ್ಜಯನು ಅನುಸರಿಸಿದ. ಕದಗಳನ್ನು ಮುಚ್ಚಿದುದಾಯಿತು. ಮೂವರೂ ಒಂದುಗೂಡಿ ಹೇಮಳನ್ನು ಬಂಧಿಸುವ ಕೆಲಸವನ್ನು ಪ್ರಾರಂಭಿಸಿದರು. ಆಕೆ ಅಬಲೆ; ಮೂವರೂ ಒಂದುಗೂಡಿ ಬಂದರೆ ಅವರನ್ನು ಆಕೆ ಹೇಗೆ ತಡೆದಾಳು? ಹುಲಿಯನ್ನು ಕಂಡ ಹರಿಣದಂತೆ ಆಕೆಯು ಕೋಣೆಯ ಒಂದು ತುದಿಯಿಂದ ಇನ್ನೊಂದು ತುದಿಗೆ ಓಡಿದಳು, ಚಿಮ್ಮಿದಳು; ಆದರೆ ಓಡುವುದೆಲ್ಲಿಗೆ? ನೆಗೆಯುವುದೆಲ್ಲಿಗೆ? ಈ ಹುಲಿಗಳ ಬಾಯಿಗಳಿಗೆ ಬೀಳುವದಲ್ಲವೆ ಪಾರಾಗಲು ಶಕ್ಯವಿಲ್ಲ. ಮಾನವನ್ನು ಕಾಯ್ದುಕೊಳ್ಳಲು ನಿರುಪಮೆ ಕೊಟ್ಟಿದ್ದ ಕಠಾರಿಯೂ ಆಕೆಯನ್ನು ಬಿಟ್ಟು ತೊಲಗಿದ್ದಿತು.

ಅವರು ಮೂರು ಪಾರ್ಶ್ವಗಳಿಂದಲೂ ಬಂದು ಮುತ್ತಿದರು. ಅವರ ಕರಗಳಿಗೆ ಬೀಳವೆ ಬೇರೆ ಗತ್ಯಂತರವಿರಲಿಲ್ಲ. ಓಡಾಡಿ ದೇಹವು ಬಳಲಿದೆ; ಮೈ ಬೆವರಿದೆ; ಎದೆಯು ನಡುಗುತ್ತಲಿವೆ; ಬಿಸಿಯುಸಿರು ಹೊರಸೂಸುತ್ತಲಿದೆ. ತನ್ನ ಶೀಲವನ್ನು ಕಾಯ್ದುಕೊಳ್ಳಲು, ತನ್ನ ಆತ್ಮವನ್ನು ರಕ್ಷಿಸಿಕೊಳ್ಳಲು ಹೇಮಾ ಹೆಣಗುತ್ತಿದ್ದಳು; ಆದರೆ ಶೂನ್ಯತೆ!-ಶೂನ್ಯತೆಯು ಮಾತ್ರ ಆಕೆಯ ಕಣ್ಣುಗಳ ಮುಂದೆ ನರ್ತಿಸುತ್ತಲಿದ್ದಿತು. ಯಾಮಿನಿಯು ಆಕೆಯನ್ನು ನುಂಗಲು ಬಾಯ್ದೆರೆದು ನಿಂತಿದ್ದಿತು. ವಿಧಿಯ ಲೀಲಾವನೋದದ ವೈಚಿತ್ರ್ಯವನ್ನು ಅರಿತವರಾರಿಹರು?

ಅಬ್ದುಲ್ಲನು ಬಂದು ಆಕೆಯ ಕೈಗಳನ್ನು ಹಿಡಿದ. ಆ ಕೋಮಲ ಕರಪಲ್ಲವಗಳನ್ನು ದುರ್ಜಯನು ಹಗ್ಗದಿಂದ ಬಂಧಿಸಿದ. ರಜ್ಜುವು ಆಕೆಯ ಕಾಲುಗಳನ್ನು ಬಿಗಿದಿದ್ದಿತು.

"ಇನ್ನೇನು ಮಾಡುವೆ? ನನ್ನ ಸವಿಮಾತುಗಳನ್ನು ನೀನು ಅನುಸರಿಸಿದ್ದರೆ ಈ ತೊಂದರೆಗೆ ನೀನು ಒಳಗಾಗುತ್ತಿರಲಿಲ್ಲ." ಸುಭೇದಾರನು ಪೈಶಾಚಿಕ ಒಂದು ನಗೆಯನ್ನು ಹೊರಚೆಲ್ಲಿದ.

ಅವಳೇನು ಉತ್ತರ ಕೊಡುವಳು? ಎದೆಯಲ್ಲಿ ಕಿಚ್ಚು ಉರಿದಿತು, ಎದೆಯೊಳಗಿನ ಅಗ್ನಿಜ್ವಾಲೆಯನ್ನು ಶಾಂತಗೊಳಿಸಲು ಕಣ್ಣುಗಳಿಂದ ಅಶ್ರುಪ್ರವಾಹವು ಹೊರಟಿತು. ಮರುಕವನ್ನು ಸೂಚಿಸತಕ್ಕವರಿಲ್ಲ, ಆಕೆಯ ಸಂಕಟವನ್ನರಿಯುವವರಿಲ್ಲ. ಶೂನ್ಯತೆಯು ಆಕೆಯ ಮುಂದೆ ನರ್ತಿಸಿತು.

ಸುಭೇದಾರನು ಆಕೆಯ ಹತ್ತಿರಕ್ಕೆ ಬಂದ. ಹೇಮಾ ಸಹಾಯಹೀನಳಾಗಿ ನೆಲದ ಮೇಲೆ ಬಿದ್ದಳು. ತನ್ನ ಮೃಗೀಯ ವಾಸನೆಯನ್ನು ತೃಪ್ತಿಗೊಳಿಸಲಿರುವ ಸಮಯ ಬಂದಿತೆಂದು ಆ ನರಪಶುವಿನ ಎದೆಯು ಹಿಗ್ಗಿತು.

ಆದರೆ!........

ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ. ಹೊರಗೆ ಒಂದೇಸವನೆ ಕದಗಳನ್ನು ತಟ್ಟುವ ಸದ್ದು ಸುಭೇದಾರನ ಕಿವಿಗಳಲ್ಲಿ ಪತಿಸಿತು. ತನ್ನ ಕಿವಿಗಳನ್ನು ಸಿಗುರಿಸಿ ಅವನು ಆ ಸಪ್ಪಳವನ್ನು ಆಲಿಸಿದ. ಪುನಃ ಕದಗಳನ್ನು ಬಡಿಯುತ್ತಿದ್ದ ಶಬ್ದ.

"ದುರ್ಜಯ, ಏನದು?"

"ಯಾರೋ ಕದಗಳನ್ನು ತಟ್ಟುತ್ತಿರುವರು."

"ಯಾರಿರಬಹುದು?"

"ನನಗೆ ತಿಳಿಯದು." ಇದಾಗಿದ್ದಿತು ದುರ್ಜಯನ ಜವಾಬು.

"ಸಾಹೇಬ, ಯಾರಾದರೇನು? ನಮಗೇಕೆ ಅಂಜಿಕೆ?" ಹೀಗೆಂದ ಅಬ್ದುಲ್ಲ.

"ಮಾತಾಡಬೇಡ." ಸುಭೇದಾರನ ಆಜ್ಞೆಯಾಯಿತು.

ಹೊರಗಿನಿಂದ ಈ ಸ್ವರವು ಕೇಳ ಬಂದಿತು: "ಮನೆಯೊಳಗೆ ಯಾರು?"

"ಯಾರಾದರೇನು?" ಎಂದ ದುರ್ಜಯ.

"ಕದಗಳನ್ನು ತೆರೆಯಿರಿ."

"ಇಲ್ಲ ತೆರೆಯಲಾರೆವು." ಕದಗಳನ್ನು ತಟ್ಟುತ್ತಿದ್ದ ವ್ಯಕ್ತಿಗಳಿಗೆ ಪುನಃ ದುರ್ಜಯನೇ ಜವಾಬು ಹೇಳಿದ.

ಕದಗಳನ್ನು ಒಡೆಯುವ ಸಪ್ಪಳ. ಸುಭೇದಾರನ ಎದೆಯು ನಡುಗಿತು. ದುರ್ಜಯನ ಮೋರೆಯು ಬಿಳುಪೇರಿತು. ಅಬ್ದುಲ್ಲನ ಬುದ್ಧಿಯು ಮಂಕಾ

ಉತು. ಹೇಮನ ಎದೆಯಲ್ಲಿ ಹೊಸ ಆಶೆಯು ಅಂಕುರಿಸಿತು.

ಕೆಲವು ನಿಮಿಷಗಳು ಗತಿಸಿದವು.

ಕದಗಳು ಮುರಿದು ಬಿದ್ದವು. ಎರಡು ವ್ಯಕ್ತಿಗಳು ಮನೆಯೊಳಗೆ ಪ್ರವೇಶಿಸಿದವು. ಅವರು ಯಾರೆಂಬುದನ್ನು ತಿಳಿಯಲು ಸುಭೇದಾರನು ಆ ಕಡೆಗೆ ತನ್ನ ಕಣ್ಣುಗಳನ್ನು ಹೊರಳಿಸಿದ. ಅವರನ್ನು ಕಾಣಲು ಸುಭೇದಾರನಿಗೆ ಅಲ್ಲಿ ನಿಲ್ಲಲು ಸಾಧ್ಯವಾಗಲಿಲ್ಲ. ದೇಹವು ಕಂಪಿಸಿತು; ಮೈ ಬೆವರಿತು; ಅವನು ನೆಲದ ಮೇಲೆ ಉರುಳಿದ.

ಬಾಗಿಲು ಮುರಿದ, ಮನೆಯೊಳಗೆ ಪ್ರವೇಶಿಸಿದವರು ಫಕೀರ ಹುಸ್ಸೇನ ಮತ್ತು ಉಸ್ಮಾನಖಾನ ಇವರಾಗಿದ್ದರು. ಅವರನ್ನು ಕಾಣಲು, ಅಬ್ದುಲ್ಲನು ಮೂಲೆಯಲ್ಲಿ ಅಡಗಲು ಪ್ರಯತ್ನಿಸಿದ. ದುರ್ಜಯನು ಹೊರಗೆ ಓಡಿ ಹೋಗಲು ಯತ್ನಿಸಿದ. ಸುಭೇದಾರನು ತನ್ನ ಮೋರೆಯನ್ನು ಮರೆಮಾಜಲು ಸೆಣಸಾಡಿದ.

"ನಿಲ್ಲಲ್ಲಿ." ಉಸ್ಮಾನನ ಗಂಭೀರ ಸ್ವರವು ಹೊರಟಿತು. ಆ ನುಡಿಯನ್ನು ಕೇಳುತ್ತಲೆ ದುರ್ಜಯನು ಸಿಡಿಲು ಬಡಿದವನಂತೆ ನಿಂತನು. ದುರ್ಜಯನಿಗೆ ಮಾತಾಡುವ ಚೈತನ್ಯವಿಲ್ಲದಾಯಿತು.

ಫಕ್ಕೀರ ಹುಸ್ಸೇನನು ಎರಡು ಹೆಜ್ಜೆಗಳಷ್ಟು ಮುಂದೆ ಬಂದನು. ಅವನು ಸುಭೇದಾರನ ಮೋರೆಯನ್ನು ದಿಟ್ಟಿಸಿ ನೋಡುತ್ತಾ ಪ್ರಶ್ನಿಸಿದ: "ಸುಭೇದಾರನ ಕೆಲಸವೇನು? ಊರ ಹೆಂಗಸರ ಮಾನವನ್ನು ಸುಲಿಯುವದೇ?"

ಸುಭೇದಾರನ ತುಟಿಗಳಿಂದ ನುಡಿಗಳು ಉದುರಲಿಲ್ಲ.

"ಯಾಕೂಬ!" ತನ್ನ ಗೌರವಸ್ವರವನ್ನು ಫಕೀರನು ಮುಂದುವರಿಸಿದ. "ನಿನಗೆ ಒಬ್ಬ ಸುಭೇದಾರನಾಗುವ ಯೋಗ್ಯತೆಯಿಲ್ಲ. ಒಂದು ಪ್ರಾಂತದ ಪ್ರಜೆಗಳನ್ನು ಪರಿಪಾಲಿಸುವ ಯೋಗ್ಯತೆ ನಿನಗಿಲ್ಲ. ಜನರ ಸುಖ-ದುಃಖಗಳೇ ನಿನ್ನ ಸುಖದುಃಖಗಳಾಗಿರಬೇಕು; ಆದರೆ ನೀನು ಜನರನ್ನು ಹಿಂಸಿಸಲು ಹೊರಟಿರುವೆ. ಇಸ್ಲಾಂ ಧರ್ಮವು ನಿನ್ನಂಥ ದುಷ್ಪ್ರವೃತ್ತ ಅಧಿಕಾರಿಗಳಿಂದ ಕಲಂಕವನ್ನು ಹೊಂದುತ್ತಲಿದೆ. ದೇಶದ ಜನರು ನಿನ್ನ ಸುಖ-ಸಂತೃಪ್ತಿಗಳಿಗೆ ಬೇಕಾಗಿಯಲ್ಲ ಜೀವಿಸುತ್ತಿರುವದು. ಜನರ ಸುಖ-ಸಂತೃಪ್ತಿಗಳಿಗಾಗಿ ಯತ್ನಿಸುವದು ನಿನ್ನ ಪಾವನ ಕರ್ತವ್ಯವಾಗಿದೆ ಕಾಫರರೆಂದು ನಾವು ಕರೆಯುತ್ತಿರುವ ಜನರೂ ಮನುಷ್ಯರಿರುತ್ತಾರೆ. ಅವರೂ ಸತ್ಯ-ನ್ಯಾಯಗಳನ್ನು ಮಾನಿ

ಸುತ್ತಾರೆ. ನಮ್ಮಂತೆಯೇ ಅವರಿಗೂ ದೇವರ ಮೇಲೆ ನಂಬಿಕೆಯಿದೆ. ಅವರ ಹೆಂಗಸರನ್ನು ಅವಮಾನಿಸುವದು ಸರಿಯಲ್ಲ. ನೀನು ಪಶುವಿರುತ್ತಿ. ಇಲ್ಲದಿದ್ದರೆ ಈ ಪಾಪ ಕೃತ್ಯಕ್ಕೆ ಕೈಹಾಕುತ್ತಿರಲಿಲ್ಲ. ಎಚ್ಚರಿಕೆ! ಈ ಹೀನ ಕೆಲಸಗಳನ್ನು ನೀನು ಮಾಡುವ ಸುದ್ದಿಯು ನನ್ನ ಕಿವಿಗೆ ಬಿದ್ದರೆ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ! ನಿನ್ನಂಥ ಅಧಿಕಾರಿಯು ಅತ್ಯಾಚಾರವನ್ನು ಜರುಗಿಸಲು ಹೋರಟರೆ ನೀನು ಮಾತ್ರವಲ್ಲ ಅಧಃಪತನವನ್ನು ಹೊಂದುತ್ತಿರುವದು; ನಿನ್ನ ಕೃತ್ಯದಿಂದ ಭಾರತ ವರ್ಷದ ಇಸ್ಲಾಂ ಧರ್ಮಕ್ಕೇ ಕಲಂಕಹತ್ತುವದು. ಇಸ್ಲಾಂ ಧರ್ಮವು ಕ್ಷೀಣಗತಿಯನ್ನು ಹೊಂದಬೇಕಾಗಿ ಬಂದೀತು. ಹಿಂದುಗಳನ್ನು ನಾವು ಕಾಫರರೆಂಬ ಕೀಳು ಭಾವನೆಯಿಂದ ವೀಕ್ಷಿಸಿದರೆ ಪರಿಣಾಮವು ಒಳಿತಾಗದು. ಅವರನ್ನು ನಮ್ಮ ಬಾಂಧವರೆಂದು ತಿಳಿದುಕೊಳ್ಳಬೇಕು.

ಉಸ್ಮಾನನು ದುರ್ಜಯನ ಕಡೆಗೆ ತಿರುಗಿದನು. ಅವನು ದುರ್ಜಯನ ಕೈಹಿಡಿದುಕೊಂಡು ಹೇಳಿದ: "ಬದ್ಮಾಷ್! ನೀನಂತೂ ಹಿಂದುಗಳ ಹೊಟ್ಟೆಯಲ್ಲಿ ಹುಟ್ಟಿರುವೆ. ಆದರೆ ನೀನು ಈ ಸೋದರಿಯ ಮಾನವನ್ನು ಅಪಹರಿಸುವ ಕೆಲಸದಲ್ಲಿ ಸಹಾಯ ಮಾಡುವದನ್ನು ಕಾಣುವಾಗ ನನಗೆ ಆಶ್ಚರ್ಯವಾಗುತ್ತದೆ. ನಾನು ಹೇಳುವದನ್ನು ನೆನಪಿನಲ್ಲಿಡು. ಇನ್ನು ಮೇಲೆ ನೀನು ಈ ತರದ ಹೀನ ಕೆಲಸಗಳಿಗೆ ಕೈಹಾಕಿದರೆ, ನಿನ್ನ ದೇಹದ ಮೇಲೆ ಶಿರಸ್ಸು ಉಳಿಯಲಿಕ್ಕಿಲ್ಲ!"

"ಯಾಕೂಬ!" ಫಕೀರನ ಗಂಭೀರ ಕಂಠವಾಣಿಯು ಹೊರಟಿತು. "ಏಕೆ, ತುಟಿಗಳನ್ನು ಬಿಚ್ಚದೆ ಮೌನವನ್ನು ಅವಲಂಬಿಸಿರುವೆ? ನಿನ್ನ ಹೀನ ಕೆಲಸವನ್ನು ತಡೆಗಟ್ಟಲು ನಾವು ಬಂದುದರಿಂದ ನಿನಗೆ ಸಿಟ್ಟು ಬಂದಿತೇ? ಯಾಕೂಬ, ನಾನು ಹೇಳುವದನ್ನು ಕೇಳು:-ನಾವು ಮನುಷ್ಯರು; ನಮ್ಮಲ್ಲಿರುವ ಮನುಷ್ಯತ್ವವನ್ನು ಸಂರಕ್ಷಿಸಿಕೊಳ್ಳಲು ನಾವು ಯತ್ನಿಸಬೇಕು. ಈ ನಿನ್ನ ಮೃಗೀಯ ಸ್ವಭಾವಪ್ರಕಟನದಿಂದ ನೀನು ನಿನ್ನ ಆತ್ಮವನ್ನೇ ಕೊಲ್ಲುತ್ತಿರುವೆ; ಇಸ್ಲಾಂ ಧರ್ಮವು ಕಲಂಕವನ್ನು ಹೊಂದದೆ ಪರಿಶುದ್ಧವಾಗಿರಬೇಕಾದರೆ ಇಸ್ಲಾಂ ಧರ್ಮಾವಲಂಬಿಗಳ ನಡೆ-ನುಡಿಗಳು ನಿರ್ಮಲವಾಗಿರುವದು ಅತ್ಯಾವಶ್ಯಕವಾಗಿದೆ."

ಯಾಕೂಬನು ಮಾತಾಡಲಿಲ್ಲ. ಫಕೀರನು ಸುಭೇದಾರನ ಸಂಗಡ ಹೆಚ್ಚಿಗೆವ ಾತಾಡುವದರಿಂದ ಪ್ರಯೋಜನವಿಲ್ಲವೆಂದು ತಿಳಿದಿದ್ದ. ಆದುದರಿಂದ

ಅವನು ತನ್ನ ದೃಷ್ಟಿಯನ್ನು ಹೇಮಳ ಕಡೆಗೆ ತಿರುಗಿಸಿದ. ಅವಳ ಕೈ-ಕಾಲುಗಳು ಬಂಧಿಸಲ್ಪಟ್ಟಿರುವದು ಅವರಿಗೆ ಗೋಚರಿಸಿತು. ಉಸ್ಮಾನನು ಹೇಮಳ ಸನಿಯಕ್ಕೆ ತೆರಳಿ ಆ ಕಟ್ಟುಗಳನ್ನು ಬಿಚ್ಚಿದನು. ಫಕೀರನು ತನ್ನ ಕರುಣಾಮಯ ನೋಟವನ್ನು ಅವಳ ಕಡೆಗೆ ಚೆಲ್ಲಿ ಹೀಗೆ ನುಡಿದ: "ತಂಗೀ, ಹೆದರಬೇಡ; ನಿನಗೆ ಯಾವ ವಿಪತ್ತೂ ಬರದು. ಈ ದುರ್ಜನರು ಏನನ್ನೂ ಮಾಡಲಾರರು. ನೀನು ನನ್ನೊಡನೆ ಬಾ."

ಹೇಮಳು ಮಾತಾಡಲಿಲ್ಲ. ಅವಳು ಫಕೀರನನ್ನು ಅನುಸರಿಸಿದಳು. ಫಕೀರನು ಉಸ್ಮಾನನೊಡನೆ ಹೇಮಳನ್ನು ಕರೆದುಕೊಂಡು ಆ ವಸತಿಯಿಂದ ಹೊರಬಿದ್ದನು. ಆ ವಸತಿಯಿಂದ ಹೊರಬೀಳುವ ಮುನ್ನ ಉಸ್ಮಾನನು ಸುಭೇದಾರನಿಗೆ ಹೀಗೆಂದನು:-"ಸಲಾಂ, ಸುಭೇದಾರ ಸಾಹೇಬ! ಇನ್ನೊಮ್ಮೆ ನಾವು ಭೇಟಿಯಾಗುವಾ."

ಸುಭೇದಾರನು ಮಾತಾಡಲಿಲ್ಲ; ನೆಲದಿಂದ ತನ್ನ ಕಣ್ಣುಗಳನ್ನು ಮೇಲಕ್ಕೆ ಎತ್ತಲಿಲ್ಲ. ಅವನ ಮೋರೆಯು ಬಿಳುಪೇರಿದ್ದಿತು.

---

## ೧೮ ನಿರುಪಮೆಯ ಗೃಹಪರಿತ್ಯಾಗ.

ದುರ್ಜಯನು ಚಿಂತಾಮಗ್ನನಾಗಿ ತನ್ನ ಶಯ್ಯಾಗಾರದಲ್ಲಿ ಕುಳಿತಿದ್ದ. ಅವನ ಮೋರೆಯ ಮೇಲೆ ಸಂತಸದ ಕಳೆಯಿರಲಿಲ್ಲ. ಮುಖವು ಬಾಡಿ ಹೋಗಿದ್ದಿತು. ಅವನ ತಲೆಯು ಭಾರವಾಗಿದ್ದಿತು. ಹಿಂದಿನ ದಿನದ ಹಂಚಿಕೆಯು ಯಶಸ್ವಿಯಾಗದುದೇ ಅವನ ಚಿಂತೆಗೆ ಕಾರಣವು. ಭೂಲೋಕದ ಇಂದ್ರನಂತಿದ್ದ ಸುಭೇದಾರನ ಪ್ರೀತ್ಯರ್ಥವಾಗಿ ನಡೆದ ಪೂಜೆಯ ನಡುವೆ ಆ ತಲೆತಿರುಕ ಫಕೀರನು ಬಂದು ಆತಂಕಪಡಿಸಿದ್ದನು. ಇಲ್ಲದಿದ್ದರೆ, ತನ್ನ ಕಾರ್ಯಸಾಧನೆಯಾಗುತ್ತಿದ್ದಿತು; ಆದರೆ ಹಾಳು ಫಕೀರನಿಂದ ಅವನ ಕೆಲಸವು ಹಾಳಾಗಿದ್ದಿತು. ಹೀಗೆಲ್ಲ ಆಗಿದ್ದುವು ದುರ್ಜಯನ ಚಿಂತೆಗಳು.

ಕದಗಳ ಸಪ್ಪಳವಾಯಿತು. ದುರ್ಜಯನು ತಲೆಯೆತ್ತಿ ನೋಡಿದ. ನಿರುಪಮೆ. ಆಕೆಯು ಶಯ್ಯಾಗಾರವೊಳ ಪ್ರವೇಶಿಸಿದುದನ್ನು ಅವನು ನೋಡಿದ. ನಿರುಪಮೆಯನ್ನು ಕಾಣಲು ದುರ್ಜಯನ ದಿಗಿಲು ಹೆಚ್ಚಿತು. ಕೆಟ್ಟ ಕೆಲಸವನ್ನು ಗೈದ ಗಂಡಸು ತನ್ನ ಮೋರೆಯನ್ನು ಸಾಧ್ವಿಯಾದ ತನ್ನ ಮಡದಿಗೆ ತೋರಿ

ಸಲು ಹಿಂಜರಿಯುತ್ತಾನೆ. ಅವಳೊಡನೆ ಮನಬಿಚ್ಚಿ ಮಾತಾಡುವ ಎದೆಗಾರಿಕೆ ಅವನಿಗಿರುವದಿಲ್ಲ.

ನಿರುಪಮೆಯು ಒಳಗೆ ಬಂದಳು; ಆದರೆ ದುರ್ಜಯನು ತನ್ನ ತಲೆಯನ್ನು ಮೇಲಕ್ಕೆತ್ತಲಿಲ್ಲ. ಒಂದು ಎಳೆ ನಗೆಯನ್ನು ಚೆಲ್ಲಿದ ಮೇಲೆ ನಿರುಪಮೆಯು ಪ್ರಶ್ನಿಸಿದಳು: "ಏನು ಆಲೋಚಿಸುತ್ತಿರುವಿರಿ?"

"ಊಹೂಂ, ಏನೂ ಇಲ್ಲ" ಹೀಗೆ ದುರ್ಜಯನ ಉತ್ತರ ಬಂದಿತು.

"ನಿನ್ನೆ ದಿನ ನೀವು ಅಭಿನಯಿಸಿದ ನಾಟಕವು ವಿಫಲವಾದುದಾಗಿರಬಹುದು ಈ ಆಲೋಚನೆಯ ವಿಷಯವು."

ಮಾತಿಲ್ಲ.

"ಸತ್ಯದ ದಾರಿಯಲ್ಲಿ ಸಂಚರಿಸುವವರನ್ನು ಧರ್ಮವು ಸಂರಕ್ಷಿಸುತ್ತದೆ."

"ಸಾಕು ಮಾಡು ನಿನ್ನ ವ್ಯಾಖ್ಯಾನವನ್ನು!" ದುರ್ಜಯನು ಗರ್ಜಿಸಿದ.

"ನನ್ನ ವ್ಯಾಖ್ಯಾನವನ್ನು ಸಾಕು ಮಾಡಬೇಕೆಂದಿರುತ್ತೇನೆ" ನಿರುಪಮೆಯು ಮಾರುತ್ತರವನ್ನು ಕೊಟ್ಟಳು.

"ಅಂದರೆ?" ದುರ್ಜಯನ್ನು ತನ್ನ ಕಣ್ಣುಗಳನ್ನು ಅಗಲಿಸಿದ.

"ಇಲ್ಲಿರಲು ನನಗೆ ಸಾಧ್ಯವಿಲ್ಲ."

"ಹಾಗಾದರೆ ಇನ್ನೆಲ್ಲಿರುವೆ?"

"ಎಲ್ಲಿಯಾದರೂ."

"ಅಂದರೆ?"

"ಜಗತ್ತು ವಿಶಾಲವಾಗಿದೆ."

"ನಿನ್ನನ್ನು ಸಲಹುವವರು ಯಾರು?"

"ನನ್ನನ್ನು ನೋಡಿಕೊಳ್ಳಲು ನಾನು ಸಮರ್ಥಳಿದ್ದೇನೆ. ನನ್ನನ್ನು ಸಲಹಲು ಇನ್ನೊಬ್ಬರು ಬೇಕಾಗಿಲ್ಲ."

"ನಿರುಪಮಾ, ಹುಚ್ಚು ಹಿಡಿದಿದೆ ನಿನಗೆ."

"ನನಗಲ್ಲ, ನಿಮಗೆ." "ಅದೇಕೆ?"

"ಇಲ್ಲವಿದ್ದರೆ, ಉದ್ಯೋಗದ ಹಂಬಲದಿಂದ ನಿರಪರಾಧಿನಿಯಾದ ಕನ್ಯೆಯನ್ನು ಬಲಿಕೊಡಲು ನೀವು ಉದ್ಯುಕ್ತರಾಗುತ್ತಿದ್ದಿರೆ?"

"ಕಳೆದುದನ್ನು ಚಿಂತಿಸಿ ಫಲವೇನು? ಆ ಸಂಗತಿಯನ್ನು ಮರೆತುಬಿಡು." ಗೊಂದಲದಿಂದ ಪಾರಾಗಲು ಯತ್ನಿಸುತ್ತ ದುರ್ಜಯನು ಹೇಳಿದನು.

"ಮರೆತು ಬಿಡುವವೇ? ಅದು ಸಾಧ್ಯವಾಗದ ಮಾತು. ನಾನೆಷ್ಟಿಸ ಎಷ್ಟರೆ ಆ ಮಾನಿನಿಯ ಶೀಲವು ನಷ್ಟವಾಗುತ್ತಿದ್ದಿತು."

"ನೀನೇನು ಪ್ರಯತ್ನ ಮಾಡಿದೆ?" ಏನನ್ನೂ ತಿಳಿಯದೇ ದುರ್ಜಯನು ನಿರುಪಮೆಯ ಮೋರೆಯನ್ನು ನೋಡಿದನು.

"ಅವಳು ಅಂದರೆ ಹೇಮಾ, ನಿಮ್ಮ ಬಂಧನಕ್ಕೆ ಒಳಗಾದ ವಾರ್ತೆಯನ್ನು ಫಕೀರ ಹುಸ್ಸೇನರಿಗೆ ಅರುಹಿದವಳು ನಾನು. ಸುಭೇದಾರನು ಆಕೆಯ ಮಾನವನ್ನು ಹಾನಿ ಮಾಡಲು ಬರುವನೆಂಬ ಸೂಚನೆಯನ್ನು ಫಕೀರರಿಗೆ ನೀಡಿದವಳು ನಾನು!"

"ನೀನು!" ತನ್ನ ಕಣ್ಣುಗಳ ತೆರೆದ ರೆಪ್ಪೆಗಳನ್ನು ದುರ್ಜಯ ಮುಚ್ಚಲಿಲ್ಲ.

"ಅಹುದು ನಾನೇ; ಹೇಮಳು ಸುಭೇದಾರನಿಗೆ ಬಲಿಯಾಗದಂತೆ ನೋಡಿ ಅವಳನ್ನು ರಕ್ಷಿಸಿದವಳು ನಾನು." ನಿರ್ಭೀತಿಯ ಸ್ವರದಲ್ಲಿ ನುಡಿದಳು.

"ನಿರುಪಮಾ, ನೀನು ನನ್ನ ಕೆಲಸವನ್ನು ಕೆಡಿಸಿದೆ." ನಿರಾಶೆಯ ಧ್ವನಿಯಲ್ಲಿ ದುರ್ಜಯನಂದನು.

"ಒಬ್ಬ ಮಾನಿನಿಯ ಶೀಲವು ನಿಮ್ಮ ಉದ್ಯೋಗ ವ್ಯಾಮೋಹಕ್ಕಿಂತ ಮಿಗಿಲಾದುದು."

"ಅನಾವಶ್ಯಕವಾಗಿ ನೀನೇಕೆ ನನ್ನ ಕೆಲಸಗಳಲ್ಲಿ ಕೈಹಾಕುತ್ತಿರುವೆ? ಇನ್ನು ಮುಂದೆ ಹಾಗೆ ಮಾಡಕೂಡದು."

"ಅದೇ ಈ ದಿನ ಇತ್ಯರ್ಥವಾಗಬೇಕು. ನಾನಂತು ನಿಮ್ಮ ದಾರಿಯಲ್ಲಿರುವ ಒಂದು ಮುಳ್ಳಾಗಲು ಬಯಸುವದಿಲ್ಲ. ಆದುದರಿಂದ ಅಪ್ಪಣೆ ಕೊಡಿ."

"ಯಾವುದಕ್ಕೆ?"

"ಇಲ್ಲಿಂದ ಹೋಗಲಿಕ್ಕೆ."

"ಇಲ್ಲಿಂದೇಕೆ ಹೋಗುವೆ? ಇಲ್ಲಿ ನಿನಗೇನು ಕಡಿಮೆಯಾಗಿದೆ?"

"ಎಲ್ಲವನ್ನೂ ತಿಳಿದ ಮೇಲೆ ನೀವು ಹೀಗೇಕೆ ಪ್ರಶ್ನಿಸುತ್ತಿರುವಿರಿ? ಆ ದಿನ ನನ್ನ ಮಾತು ಕೇಳಿದ್ದರೆ ಈ ಪ್ರಶ್ನೆಯೇ ಹುಟ್ಟುತ್ತಿರಲಿಲ್ಲ. ನಾನು ಯಾವುದನ್ನೂ ಆಗ್ರಹಿಸುತ್ತಿರಲಿಲ್ಲ ನಾನು ಯಾವುದನ್ನು ಆಗ್ರಹಿಸುತ್ತಿರುವೆನೋ ಅದು ನಿಮ್ಮ ಬಳಿಯಲಿಲ್ಲ. ಒಂದು ಯಂತ್ರದಂತೆ ಜೀವಿಸಲು ನನ್ನಿಂದ ಸಾಧ್ಯವಾಗದು. ನನಗೂ ಒಂದು ಹೃದಯವಿದೆ; ಒಂದು ಆತ್ಮವಿದೆ. ನನ್ನ ಹೃದಯದಂತರಾಳದಿಂದ ಹರಿದು ಬರುತ್ತಿರುವ ಸ್ವರವನ್ನು ಕೇಳಲಿರುವ ಶಕ್ತಿ

ನಿಮಗಿಲ್ಲ. ನನ್ನ ಅಂತರಾತ್ಮನ ಅಭಿಲಾಷೆಗಳಿಗೆ ಇಲ್ಲಿ ಎಡೆಯಿಲ್ಲ. ಗೂಡಿ ನಲ್ಲಿರುವ ಹಕ್ಕಿಯಂತಿದ್ದೇನೆ ನಾನು; ಈ ಸೆರೆಯಲ್ಲಿ ಕೊಳೆಯಲು ನನ್ನಿಂದ ಸಾಧ್ಯವಾಗದು. ಇಲ್ಲಿ ಎಲ್ಲಿ ನೋಡಿದರೂ ಕತ್ತಲೆ; ನನಗೆ ಬೆಳಕು ಬೇಕು! ಬೆಳಕಿರುವಲ್ಲಿಗೆ ಹೋಗಲೆಣಿಸುತ್ತಿದ್ದೇನೆ."

"ನಿರುಪಮಾ, ನಿನಗೆ ಹುಚ್ಚು ಹಿಡಿದಿಲ್ಲವಷ್ಟೆ? ಎಲ್ಲಿಗೆ ಹೋಗುವದು? ಕೈಹಿಡಿದ ಪತಿಯನ್ನು ಪರಿತ್ಯಜಿಸಿ ಆರ್ಯಮಹಿಳೆಯು ಹೋಗುವದಾದರೂ ಎಲ್ಲಿಗೆ?" ಏನೂ ತೋಚದೆ ದುರ್ಜಯನು ನುಡಿದನು.

"ನಿಜ, ನಾನು ಆರ್ಯಮಹಿಳೆ; ನನ್ನ ಹೃದಯದಲ್ಲಿ ನಿಮ್ಮ ವಿಗ್ರಹ ವನ್ನು ಪೂಜಿಸುತ್ತಿದ್ದೇನೆ; ಆದರೆ ನೀವು ಅನುಸರಿಸುತ್ತಿರುವ ಜಮುಕು ನನಗೆ ಸಮ್ಮತವಾದುದಲ್ಲ. ಆ ಸಂಗತಿಯನ್ನು ನಾನು ಮೊದಲೆ ನಿಮಗೆ ಉಸುರಿರು ತ್ತೇನೆ. ನೀವು ಕೆಸರನ್ನು ಬಿಟ್ಟು ಈಚೆಗೆ ಬರುವಂತಿಲ್ಲ. ನಾನು ನಿಮ್ಮ ಸಂ- ಗಡ ಕೆಸರಿನಲ್ಲಿ ಹೊರಳಾಡಬೇಕೆ? ಆದಾಗದು." ನಿರುಪಮಾ ಒಂದು ನಿರ್ಧ ರಕ್ಕೆ ತಲುಪಿದಂತೆ ಮಾತಾಡಿದಳು.

"ನಿರುಪಮಾ, ಹಟ ಹಿಡಿಯಬೇಡ. ನಿನ್ನಲ್ಲಿ ನನಗೆ ಪ್ರೇಮವಿಲ್ಲವೆಂದು ವಿಚಾರಿಸಿದೆಯಾ?"

"ಇಲ್ಲವೆಂದು ಯಾರು ಹೇಳಿದರು? ಆದರೆ ನನಗಿಂತ ಹೆಚ್ಚು ಪ್ರೀತಿ ಯುಳ್ಳದ್ದು ನಿಮ್ಮ ಉದ್ಯೋಗವಾಗಿದೆ. ಆ ಹಂಬಲದಿಂದ ನೀವು ನನ್ನ ನುಡಿ ಯನ್ನು ಮನ್ನಿಸಲಿಲ್ಲ, ಒಳ್ಳೇದು ನಿಮ್ಮ ಉದ್ಯೋಗದ ಹುಚ್ಚು ತೀರಲಿ! ಈ ಹುಚ್ಚು ಬಿಟ್ಟಮೇಲೆ ನಾನಾಗಿಯೇ ನಿಮ್ಮ ಬಳಿಗೆ ಬರುವೆ. ಅಂದು ನನ್ನ ನುಡಿಯನ್ನು ಆಲಿಸಿದ್ದರೆ ಈ ಅಪಮಾನವನ್ನು ಹೊಂದಬೇಕಾಗುತ್ತಿದ್ದಿತೆ?" ಒಂದು ಬಿಸಿಯುಸಿರನ್ನು ಬಿಟ್ಟ ಮೇಲೆ ನಿರುಪಮೆಯು ಅಂದಳು.

"ನೀನು ಹೋಗುವದಾದರೂ ಎಲ್ಲಿಗೆ?" ಈ ಪ್ರಶ್ನೆಯು ಹೊರಟಿತು ದುರ್ಜಯನ ತುಟಿಗಳಿಂದ.

"ಲೋಕವು ವಿಶಾಲವಾದುದಾಗಿದೆ."

"ನಿನ್ನ ಮಾತುಗಳು ನನಗೆ ತಿಳಿಯವು"

"ನನ್ನ ಮಾತುಗಳು ತಿಳಿಯುವದಾದರೂ ಹೇಗೆ? ತಿಳಿದಿದ್ದರೆ ಹೀಗೆ ವರ್ತಿಸುತ್ತಿದ್ದಿರೇ? ಹಿರಿಯರ ಸತ್ಕೀರ್ತಿಗಾದರೂ ಕಲಂಕ ತಗಲದಂತೆ ನೋಡಿ ಕೊಳ್ಳಬೇಡವೆ?"

"ಸಾಕು ಮಾಡು ನಿನ್ನ ವೇದಾಂತ! ನಾನು ಮಾಡಬೇಕಾದುದೇನೆಂಬು ವರ ಪರಿಜ್ಞಾನ ನನಗಿದೆ!" ಎಂದು ದುರ್ಜಯನು ಸಿಟ್ಟಿನಿಂದ ಹೇಳಿದನು.

"ಆದುದರಿಂದಲೇ ನಾನು ಅಂದದ್ದು, ನಾನು ನಿಮಗೆ ಬೇಡವಾಗಿದ್ದೇನೆ. ನನಗೆ ಹೋಗಲು ಅಪ್ಪಣೆ ಕೊಡಿ ಎಂದು."

ನಿರುಪಮೆಯು ತನ್ನ ಪತಿಯ ಮಾರ್ನುಡಿಯನ್ನು ಕಾಯಲಿಲ್ಲ. ಅವಳು ಆ ಕೋಣೆಯಿಂದ ಹೊರಬಿದ್ದಳು. ತನ್ನ ಮಡದಿಯು ಹೀಗೆ ತೆರಳಿದುದನ್ನು ನೋಡಿ ದುರ್ಜಯನು ಸಂಭ್ರಮಪೀಡಿತನಾದನು. ಅವನು ಎದ್ದು ನಿಂತು: "ನಿರುಪಮಾ! ನಿರುಪಮಾ!" ಎಂದು ಕೂಗಿದನು.

ಆದರೆ ನಿರುಪಮೆಯ ಕಂಠಸ್ವರವು ಕೇಳಿ ಬರಲಿಲ್ಲ. ದುರ್ಜಯನ ಕಂಠ ನಾದದ ಪ್ರತಿಧ್ವನಿಯು ಅಲ್ಲಿ ತುಂಬಿತು. ದುರ್ಜಯನು ನಿರುಪಮೆಯು ತಾನು ನುಡಿದಂತೆ ಆಚರಿಸುವಳೆಂದು ಭಾವಿಸಿರಲಿಲ್ಲ. ಆಕೆಯು ಗೃಹವನ್ನು ಪರಿತ್ಯಜಿಸಿ ದೂರ ಹೋಗಬಹುದೆಂದು ಬಗೆದಿರಲಿಲ್ಲ.

ಅವನು ಹೊರಗೆ ಬಂದು ನೋಡಿದ; ಆದರೆ ಮನೆಯಲ್ಲಿ ನಿರುಪಮೆ ಯಿರಲಿಲ್ಲ. ಆಕೆಯು ಮನೆಯನ್ನು ಬಿಟ್ಟು ಹೋಗಿದ್ದಳು. ಅವಳು ತಾನು ಆಡಿದಂತೆ ವರ್ತಿಸಿದಳೆಂಬುದು ದುರ್ಜಯನಿಗೆ ಮನನವಾಯಿತು. ಅವಳ ನ್ನೊಮ್ಮೆ ಕಾಣಸಿಕ್ಕಿದ್ದರೆ ದುರ್ಜಯನು ತಡೆದು ನಿಲ್ಲಿಸುತ್ತಿದ್ದ, ಆದರೆ ಅವಳು ಮನೆಯನ್ನು ಬಿಟ್ಟು ಹೋಗಿದ್ದಳು.

ಂ ಂ ಂ

ಹೇಮಾ ತನ್ನ ಮನೆಯ ಹೂಮೋಟದಲ್ಲಿ ಅಲೆಯುತ್ತಿದ್ದಳು. ತಾನು ನೆಟ್ಟು ಬೆಳಸಿದ ಹೂಗಿಡಗಳನ್ನು ಅವಳು ನೋಡದೆ ಎರಡು ಮೂರು ದಿನ ಗಳಾಗಿದ್ದವು. ಈ ದಿನ ಅವುಗಳಿಗೆಲ್ಲ ನೀರೆರೆದು ಶುಶ್ರೂಷೆಯನ್ನು ಮಾಡಿದಳು; ಆ ಕೂಸುಗಳನ್ನು ಪೋಷಿಸಿದಳು.

ಹೇಮಾ ಹೂಗಿಡಗಳಿಗೆ ನೀರೆರೆಯುತ್ತಿದ್ದಾಗ ದಾಸಿಯೊಬ್ಬಳು ಓಡಿ ಬಂದಳು. ದಾಸಿಯು ಹೇಮಳಿಗೆ ಅಂದಳು: "ಯಾರೋ ಅಪರಿಚಿತ ಹೆಂಗ ಸೊಬ್ಬಳು ಬಂದಿರುವಳು; ನಿಮ್ಮನ್ನು ನೋಡಬೇಕಂತೆ."

ತನ[illegible]ನ್ನು ಕಾಣಲು ಮಹಿಳೆಯೊಬ್ಬಳು ಬಂದಿರುವಳೆಂಬುದನ್ನು ತಿಳಿಯು ತ್ತ[illegible] ತನ್ನ ಕೆ[illegible]ವನ್ನು ನಿಲ್ಲಿಸಿದಳು. ಅವಳು ದಾಸಿಯ ಕಡೆಗೆ ತನ್ನ ದೃ[illegible] ಹೊರ[illegible] ಅಂದಳು: "ಒಳ್ಳೆಯದು, ಅವರನ್ನು ನಾನು ಹೋಗಿ

ಕಾಣುವೆನು."

ಹೇಮಾ ಮನೆಯ ಮೊಗಶಾಲೆಯ ಕಡೆಗೆ ಗಮಿಸಿದಳು. ಅಲ್ಲಿ ತನ್ನನ್ನು ಓರ್ವ ತರುಣಿಯು ಕಾದು ನಿಂತಿರುವದು ಹೇಮಳಿಗೆ ದೃಗ್ಗೋಚರವಾಯಿತು. ಆ ಹೆಂಗಸು ಚಲುವೆ; ಸ್ಫುರದ್ರೂಪಿಣಿ. ಅವಳ ಮೋರೆಯಿಂದ ಒಂದು ಬಗೆಯ ಕಾಂತಿಯು ಉಕ್ಕಿ ಹರಿಯುತ್ತಿದ್ದಿತು. ಹೇಮಳಿಗೆ ಆ ಹೆಂಗಸಿನ ಗುರುತು ಹತ್ತದೆ ಇರಲಿಲ್ಲ. ಹೇಮಾ ಓಡಿ ಹೋಗಿ ಅವಳನ್ನು ಅಪ್ಪಿಕೊಂಡು ಹೀಗೆ ನುಡಿದಳು. "ಅಕ್ಕಾ, ನಿನ್ನ ಉಪಕಾರವನ್ನು ಆವ ಪರಿಯಲ್ಲಿ ತೀರಿಸಲಿ?"

"ನನ್ನ ಕರ್ತವ್ಯವನ್ನು ನಾನು ಮಾಡಿದೆ." ಎಂದಳು ಬಂದಿದ್ದಾಕೆ. ಅವಳು ಬೇರೆ ಯಾರೂ ಆಗಿರಲಿಲ್ಲ. ಈ ಮೊದಲೇ ನಮಗೆ ಪರಿಚಿತಳಾದ ನಿರುಪಮೆಯಾಗಿದ್ದಳು.

"ಅಕ್ಕಾ, ನೀನು ಸಹಾಯ ಮಾಡದಿದ್ದರೆ ನನ್ನ ಅವಸ್ಥೆಯೇನಾಗುತ್ತಿದ್ದಿತೋ?" ಹೇಮಳ ಕಣ್ಣುಗಳಲ್ಲಿ ಬಾಷ್ಪಬಿಂದುಗಳು ತುಂಬಿದವು.

"ಹೇಮಾ, ಆ ಬಗ್ಗೆ ನೀನು ಚಿಂತಿಸಬೇಡ. ನನ್ನಿಂದಾಗುವ ಸಹಾಯವನ್ನು ನೀಡಲು ಸಾಧ್ಯವಾದುದಕ್ಕೆ ನಾನು ಸಂತೋಷಿಸುತ್ತೇನೆ." ಹೇಮಳನ್ನು ಸಂತಯಿಸಲು ಪ್ರಯತ್ನಿಸುತ್ತಾ ನಿರುಪಮೆ ನುಡಿದಳು.

ಈ ಸಂದರ್ಭದಲ್ಲಿ ಒಬ್ಬಳು ಮುದುಕಿ, ಹೇಮಳ ಅತ್ತೆ ಮನೆಯೊಳಗಿನಿಂದ ಹೊರಗೆ ಬಂದಳು. ಅವಳ ವಯಸ್ಸು ೫೦ ಆಗಿರಬಹುದು ಗಂಭೀರತೆಯಿಂದ ಕೂಡಿದ ಮುಖಭಾವ, ಶಾಂತಿಯಿಂದ ತುಂಬಿದ ಕಣ್ಣುಗಳು. ಅತ್ತೆಯನ್ನು ಕಾಣಲು, ಹೇಮಾ ಎದ್ದು ನಿಂತು ಹೇಳಿದಳು: "ನಾನು ಹೇಳಿದ ನಿರುಪಮೆಯು ಇವಳೇ. ಈಕೆಯ ಸಹಾಯವು ದೊರಕದಿದ್ದರೆ ನನಗೆ ಹಿಂದಿರುಗಿ ಬರಲು ಸಾಧ್ಯವಾಗುತ್ತಿರಲಿಲ್ಲ."

"ನಿರುಪಮಾ, ನಿನ್ನ ಸಂಗತಿಗಳನ್ನು ಹೇಮಾ ಉಸುರಿದಳು. ನನ್ನ ಮುದ್ದು ಹೇಮಳನ್ನು ರಕ್ಷಿಸಿದುದಕ್ಕೆ ನಿನಗೆ ವಂದಿಸುತ್ತೇನೆ. ನಿನ್ನ ಉಪಕಾರದ ಹೊರೆಯನ್ನು ಹೇಗೆ ತೀರಿಸಬೇಕೆಂಬುದು ನನಗೆ ತಿಳಿಯದು."

ನಿರುಪಮೆಯು ಕುಳಿತಲ್ಲಿಂದ ಎದ್ದು ನಿಂತು ಮುದುಕಿಗೆ ವಂದಿಸಿದಳು. "ನಾವೆಲ್ಲರೂ ಮನುಷ್ಯರು. ಒಬ್ಬರಿಗೆ ವಿಪತ್ತು ಬಂದಾಗ ಇನ್ನೊಬ್ಬರು ಸಹಾಯ ಮಾಡಬೇಕಾದುದು ನಮ್ಮ ಕರ್ತವ್ಯ. ನೀವು ನನ್ನನ್ನು ಇಷ್ಟು ಹೊಗಳಬೇಕಾಗಿಲ್ಲ."

"ನಿರುಪಮಾ, ನೀನು ಇಲ್ಲಿಯೇ ಇರಬೇಕು. ಬಡವರಾದ ನನ್ನ ಆತಿಥ್ಯ ವನ್ನು ಸ್ವೀಕರಿಸಬೇಕು." ಹೀಗೆ ಮುದುಕಿಯು ಅಪೇಕ್ಷಿಸಿದಳು.

ಮುದುಕಿಯ ಬಿನ್ನಹವನ್ನು ಸ್ವೀಕರಿಸಬೇಕೆಂದು ಹೇಮಾ ನಿರುಪಮೆ ಯನ್ನು ಒತ್ತಾಯಪಡಿಸಿದಳು. ಆ ಬಿನ್ನಹವನ್ನು ಸ್ವೀಕರಿಸದೆ ನಿರುಪಮೆಗೆ ಬೇರೆ ನಿರ್ವಾಹವಿರಲಿಲ್ಲ.

ಮುದುಕಿಯು ಮನೆಯೊಳಗೆ ತೆರಳಿದಳು. ಆಕೆಯು ಒಳಗೆ ಹೋದ ಅನಂತರ ನಿರುಪಮೆಯು ಹೇಮುಳೊಡನೆ ಹೀಗೆ ನುಡಿದಳು: "ನಾನು ಆಕಾಶ ದಲ್ಲಿ ಹಾರಾಡುವ ಹಕ್ಕಿಯಂತಿರಬೇಕೆಂದಿದ್ದೇನೆ."

"ಅಂದರೆ?" ಹೇಮಾ ತನ್ನ ಕಣ್ಣುಗಳನ್ನು ದೊಡ್ಡದು ಮಾಡಿದಳು.

"ಗೂಡನ್ನು ಬಿಟ್ಟು ವಿಶಾಲ ಆಗಸದಲ್ಲಿ ಹಾರಾಡಬೇಕೆಂದಿದ್ದೇನೆ. ಕತ್ತಲೆ ಯಲ್ಲಿರಲು ಸಾಧ್ಯವಾಗುವಂತಿಲ್ಲ ಈ ಸಂಗತಿಯನ್ನು ಕುರಿತು ಇದುವರೆಗೆ ಆಲೋಚಿಸುತ್ತಿದ್ದೆ. ಈ ದಿನ ಕೊನೆಯ ಹೆಜ್ಜೆಯನ್ನು ಇಡಬೇಕಾಗಿದೆ."

"ನೀನು ಹೇಳುವದು ನನಗೆ ತಿಳಿಯುವದಿಲ್ಲ; ಬಿಚ್ಚಿ ಹೇಳು."

"ಹೇಮಾ, ಈಗ ನನ್ನ ಗೃಹವನ್ನು ಪರಿತ್ಯಜಿಸಿ ಬಂದಿದ್ದೇನೆ." ನಿರುಪಮೆ ನುಡಿದಳು. "ಅಲ್ಲಿರಲು ನನ್ನಿಂದ ಸಾಧ್ಯವಾಗದು. ಅಲ್ಲಿನ ವಾತಾವರಣವು ಮಲಿನವಾಗಿದೆ. ವಿಷಪೂರಿತವಾದ ಆ ಸ್ಥಳದಲ್ಲಿ ಜೀವಿಸಲು ನನಗೆ ಸಾಧ್ಯವಾ ಗದು."

"ಮನುಜನು ಎಷ್ಟು ನೀಚನಾದರೂ ನಿನ್ನ ಪತಿಯಲ್ಲವೆ?"

"ಅಲ್ಲವೆಂದು ನಾನು ಹೇಳಿದೆನೆ? ಅವರ ಬಿಂಬವನ್ನು ಯಾವಾಗಲೂ ಹೃದಯದಲ್ಲಿಟ್ಟು ಪೂಜಿಸುತ್ತಿದ್ದೇನೆ. ಅಂದ ಮಾತ್ರಕ್ಕೆ ನನ್ನ ಅಂತರಾತ್ಮ ನನ್ನು ಕೆಸರಿನಿಂದ ಮಲಿನಪಡಿಸಿಕೊಳ್ಳಬೇಕೆಂದಿದೆಯೇ? ನೋಡು, ಹೇಮಾ! ಅವರಿಗೆ ಸದ್ಬುದ್ಧಿಯನ್ನು ದೇವರು ದಯಪಾಲಿಸಲಿ ಎಂದು ಸದಾ ಪ್ರಾರ್ಥಿ ಸುತ್ತಲಿದ್ದೇನೆ. ಅವರ ಎದೆಯಲ್ಲಿ ಬೆಳಕು ಉದಯಿಸಲಿ!"

"ಹಾಗಾದರೆ ನೀನೇನು ಮಾಡಬೇಕೆಂದಿರುವೆ?"

"ಒಂದು ತೀರ್ಥಾಟನೆ!"

"ಒಬ್ಬೊಂಟಿಗಳಾಗಿ!" ಹೇಮಾ ವಿಸ್ಮಯವನ್ನು ಸೂಚಿಸಿದಳು.

"ಒಬ್ಬೊಂಟಿಗಳಾಗಿ ತೀರ್ಥಾಟನೆಯನ್ನು ಮಾಡಕೂಡದೇ?"

"ಅಶಾಂತತೆಯು ಹರಡಿರುವ ಈ ಕಾಲದಲ್ಲಿ ಸುರಕ್ಷಿತವಾಗಿ ತೀರ್ಥಾ

ಟನೆಯನ್ನು ಮಾಡಲು ಸಾಧ್ಯವಾಗುವದೇ?"

"ಆತ್ಮವಿಶ್ವಾಸವಿದೆ; ನನ್ನ ಮಾನವನ್ನು ಕಾಯ್ದುಕೊಳ್ಳಲು ನಾನು ಶಕ್ತಳಿರುವೆ" ಆತ್ಮವಿಶ್ವಾಸಪೂರ್ಣ ಸ್ವರದಲ್ಲಿ ನಿರುಪಮೆಯು ನುಡಿದಳು.

"ನೀನು ತೆರಳುವದೆಲ್ಲಿಗೆ?"

"ರೂಪನಗರದವರಿಗೆ ರಾಜದುರ್ಗಕ್ಕಿಂತ ಪವಿತ್ರವಾದ ಯಾತ್ರಾಸ್ಥಳವು ಬೇರೆ ಯಾವುದಿದೆ? ಸ್ವಾಧೀನ ಜೀವನದ ಭಾಸ್ಕರನು ಮೂಡಿದುದು ರಾಜದುರ್ಗದಲ್ಲಾಗಿದೆ. ಆದುದರಿಂದ ಅದಕ್ಕಿಂತ ಪರಿಪಾವನವಾದ ಸ್ಥಳವು ಬೊರೊಂದಿಲ್ಲ. ಅಲ್ಲಿ ಉದಿಸಿದ ಸ್ವಾತಂತ್ರ್ಯ ಲಕ್ಷ್ಮಿಯ ದರ್ಶನವನ್ನು ಪಡೆಯುವೆ. ನಾಡದೇವಿಗೆ ನನ್ನಿಂದ ಸಾಧ್ಯವಾಗುವ ಕಿರಿಯ ಕಾಣಿಕೆಯನ್ನು ಸಲ್ಲಿಸುವೆ."

"ವಿದ್ರೋಹಿಗಳನ್ನು ಸೇರುವುದು ನಿನ್ನ ಸ್ವಾಮಿಗೆ ಹಿತವೆನಿಸಬಹುದೇ?"

"ನನ್ನ ನಾಡದೇವಿಯನ್ನು ಆರಾಧಿಸುವ ಸ್ವಾತಂತ್ರ್ಯವು ನನಗಿಲ್ಲವೆ? ನನ್ನ ಎದೆಯು ಸ್ವಾಧೀನಜೀವನದ ಸುಧೆಯನ್ನು ಬಯಸುತ್ತಿದೆ; ಅದಕ್ಕಾಗಿ ನನ್ನಿಂದಾಗುವ ಪ್ರಯತ್ನವನ್ನು ಮಾಡಬೇಕೆಂದಿರುವೆ. ಆ ದಾರಿಯಲ್ಲಿ ಯಾವ ಕಷ್ಟಬಂದರೂ ಅನುಭವಿಸಲು ಸಿದ್ಧಳಿರುವೆನು."

"ಅಕ್ಕಾ, ನಿನ್ನ ಧೈರ್ಯವು ಅನುಪಮವಾದುದು. ಈ ಸ್ವಾತಂತ್ರ್ಯ ಯಜ್ಞದಲ್ಲಿ ಭಾಗವನ್ನು ವಹಿಸಬೇಕೆಂದು ನನಗೆ ಅನಿಸುತ್ತದೆ." ಚಿಂತೆಯಿಂದ ನುಡಿದಳು.

"ನೀನು ಚಿಂತಿಸಬೇಡ. ಈ ಮಹಾಸಾಧನೆಗೆ ಒಂದು ಅಮೂಲ್ಯ ಶಕ್ತಿಯನ್ನು ನೀನು ಕೊಟ್ಟಿರುವೆಯಲ್ಲ!"

ನಿರುಪಮೆಯ ನುಡಿಯನ್ನು ಕೇಳಲು, ಹೇಮಳ ಮೊಗಮಲ್ಲಿಗೆಯು ಅರಳಿತು.

---

## ೧೫ ದೇವಾಲಯದಲ್ಲಿ.

ಫಕೀರ ಹುಸೇನನು ತನ್ನ ನಿಲಯದಲ್ಲಿ ಕುಳಿತು ಪರಿಶುದ್ಧ ಖುರಾನನ್ನು ಪಾರಾಯಣ ಮಾಡುತ್ತಿದ್ದ. ತನ್ನ ವಿರಾಮ ವೇಳೆಯಲ್ಲಿ ಈಶ್ವರ ಚಿಂತನೆಯಲ್ಲಿ ವಿನಿಯೋಗಿಸುವದು ಅವನ ಅಭ್ಯಾಸವಾಗಿದ್ದಿತು. ಗಲಭೆ-

ಗೊಂದಲಗಳಿಂದ ದೂರವಿದ್ದು, ಶಾಂತಿಯ ವಾತಾವರಣವನ್ನು ಅವನು ಬಯ ಸುತ್ತಿದ್ದ. ಪಠಾಣರ ವ್ಯವಸ್ಥತೆಯಿಲ್ಲದ ಆಡಳಿತವು ಅವನನ್ನು ಅತ್ಯಧಿಕ ವಾಗಿ ಪೀಡಿಸುತಲಿದ್ದಿತು. ಆಗಿನ ಪರಿಸ್ಥಿತಿಗಳಲ್ಲಿ ಒಂದು ಪರಿವರ್ತನೆಯುಂ ಟಾಗಬೇಕೆಂಬುದು ಅವನ ಆಗ್ರಹವಾಗಿದ್ದಿತು; ಆದರೆ ವಿದ್ರೋಹದಿಂದ ದೇಶದ ಆಡಳಿತದಲ್ಲಿ ಒಂದು ಕ್ರಾಂತಿಯನ್ನುಂಟು ಮಾಡುವದು ಅವನಿಗೆ ಸಮಂಜಸ ವಾಗಿ ತೋರಲಿಲ್ಲ. ಬಲಪ್ರಯೋಗದಿಂದ ಹಾನಿಯಲ್ಲದೆ, ಗುಣವು ಲಭಿಸ ದೆಂಬುದು ಅವನ ಅಭಿಪ್ರಾಯವಾಗಿದ್ದಿತು. ಆದುದರಿಂದಲೇ ವಿದ್ರೋಹದ ಹಾದಿಯನ್ನು ಸ್ವೀಕರಿಸಲಾಗದೆಂದು ಅವನು ಜ್ಞಾನಾನಂದನ ಸಂಗಡ ವಾದಿ ಸಿದ್ದನು; ಆದರೆ ಜ್ಞಾನಾನಂದನ ಚಿಂತಾಗತಿಯು ಬೇರೆ ವಿಧವಾದುದೆಂಬುದು ವಾಚಕರಿಗೆ ತಿಳಿದೇ ಇದೆ.

ಫಕೀರ ಹುಸೇನನು ತನ್ನ ನಿಲಯದಲ್ಲಿ ಪರಿಶುದ್ಧ ಖುರಾಣವನ್ನು ಪಾರಾಯಣ ಮಾಡುತ್ತ ಕುಳಿತಿದ್ದ. ಬೀದಿಯಲ್ಲಿ ಆಯುಧಧಾರಿಗಳಾದ ನಾಲ್ವತ್ತು ಮಂದಿ ಪಠಾಣ ಸೈನಿಕರು ತೆರಳುತ್ತಿದ್ದುದು ಅವನಿಗೆ ಗೋಚರಿಸಿತು. ಅವರನ್ನು ಕಾಣಲು, ಅವರು ತೆರಳುತ್ತಿವೆಲ್ಲಿಗೆಂದು ಫಕೀರನು ತುಸ ಆಲೋಚಿ ಸಿದ. ಎಲ್ಲಿಯೋ ಒಂದು ಕಲಾಪವು ನಡೆಯುತ್ತಿರಬಹುದು; ಜನರನ್ನು ಸುಲಿಗೆ ಮಾಡಲು ಸುಭೇದಾರನು ಈ ಸೈನಿಕರನ್ನು ಕಳುಹಿಸಿರಬಹುದು. ಈ ವಿಚಾರಗಳು ಫಕೀರನ ಮೆದುಳಿನಲ್ಲಿ ತೇಲಿದವು. ಯಾವ ದಿನ ಅಧಿಕಾರಿಗಳ ಹೃದಯಗಳಲ್ಲಿ ಬೆಳಕುದಯಿಸುವದೋ, ಆ ದಿನವೇ ಸುದಿನವೆಂದು ಫಕೀರನು ಆಲೋಚಿಸಿದ. ಹಗಲು ಸುಲಿಗೆಗಳು!-ಇವುಗಳನ್ನು ಜರುಗಿಸುವುದಾಗಿದೆ ಅಧಿಕಾರಿಗಳ ಕೆಲಸ. ಹೀಗೆ ತಿರಸ್ಕಾರದಿಂದ ಫಕೀರನು ತನ್ನೊಳಗೆ ನುಡಿದು ಕೊಂಡನು.

ಸೈನಿಕರು ಹೋದರು. ಬೀದಿಯಲ್ಲಿ ನಿಶ್ಶಬ್ದತೆಯು ತುಂಬಿತು. ಫಕೀರ ನು ತನ್ನ ಗ್ರಂಥಪಾರಾಯಣವನ್ನು ಮುಂದುವರಿಸಿದ. ಆತನ ಚಿತ್ತವು ಈಶ್ವರಚಿಂತನೆಯಲ್ಲಿ ಮುಳುಗಿತು. ಆತ್ಮವು ವಿಚಾರ ಕಡಲಿನಲ್ಲಿ ತೇಲಿತು.

ಪುನಃ ಬೀದಿಯಲ್ಲಿ ಗಲಭೆ. ನಿರವತೆಯು ಮಾಯವಾಯಿತು. ಹೊರ ಗಿನ ಗದ್ದಲವು ಫಕೀರನನ್ನು ವಿಚಾರತಲ್ಲೀನತೆಯಿಂದ ಎಚ್ಚರಿಸಿತು. ಅವನು ತನ್ನ ದೃಷ್ಟಿಯನ್ನು ಬೀದಿಯ ಕಡೆಗೆ ಬೀರಿದ. ದೊಣ್ಣೆ, ಕತ್ತಿ ಮೊದಲಾದ ಆಯುಧಗಳನ್ನು ಹಿಡಿದುಕೊಂಡು ಜನರು ಬೀದಿಯಲ್ಲಿ ಓಡುತ್ತಿದ್ದ ದೃಶ್ಯವು

ಫಕೀರನಿಗೆ ಗೋಚರಿಸಿತು. ಅವರೆಲ್ಲರೂ ಹುಚ್ಚರಂತೆ ಕಾಣಲ್ಪಡುತ್ತಿದ್ದರು. ಪ್ರತಿಯೊಬ್ಬರ ಕಣ್ಣುಗಳಲ್ಲಿಯೂ ಕೋಪಜ್ವಾಲೆಗಳು ಹೊಳೆಯುತ್ತಿದ್ದವು. ಈ ಚಿತ್ರವನ್ನು ನೋಡುತ್ತಲೆ ಫಕೀರನ ಎದೆಯು ನಡುಗಿತು. ಯಾವುದೋ ಒಂದು ಅನಾಹುತವು ಜರುಗಲಿರುವದೆಂದು ಅವನಿಗೆ ಅನಿಸಿತು. ತಲೆಯಿಲ್ಲದವರು, ಯಾವುದೋ ಒಂದು ಗಂಡಾಂತರವನ್ನು ಎಬ್ಬಿಸಲಿಕ್ಕೆ ಹೊರಟಿರಲು ಸಾಕು! ಜನರಿಗೆ ಆಲೋಚಿಸುವ ಶಕ್ತಿಯಿಲ್ಲವೇ? ಹೀಗೆ ಫಕೀರನು ಆಲೋಚಿಸಿದನು.

ಹೊರಗೆ ಜರುಗುತ್ತಿರುವವೇನೆಂಬುದನ್ನು ತಿಳಿಯಲು ಗ್ರಂಥಪಾರಾಯಣವನ್ನು ನಿಲ್ಲಿಸಿದುದಾಯಿತು. ಅವನು ಗ್ರಂಥವನ್ನು ಮಡಗಿ ಮನೆಯಿಂದ ಹೊರಕ್ಕೆ ಬಂದನು. ಬೀದಿಯಲ್ಲಿ ಜನರು ಹುಚ್ಚರಂತೆ ಅತ್ತಲಿಂದಿತ್ತ ಓಡಾಡುತ್ತಿದ್ದರು, ಕೂಗುತ್ತಿದ್ದರು, ಕಿರಚುತ್ತಿದ್ದರು. ಫಕೀರನು ಅವರನ್ನು ನೋಡಿದ. ಅವರ ವರ್ತನೆಗಳನ್ನು ಅವನು ಅವಲೋಕಿಸಿದ. ಅವರು ಓಡುತ್ತಿದ್ದುದೆಲ್ಲಿಗೆಂಬುದು ಫಕೀರನಿಗೆ ತಿಳಿಯದು. ಆದುದರಿಂದ ಅವನು ಬೀದಿಯಲ್ಲಿ ಓಡುತ್ತಿದ್ದವರನ್ನು ಹೀಗೆ ಪ್ರಶ್ನಿಸಿದ: "ಅಣ್ಣಂದಿರಾ, ಏಕೆ ಗಲಭೆಯನ್ನು ಎಬ್ಬಿಸುತ್ತಿರುವಿರಿ? ಆಯುಧಗಳನ್ನು ಹಿಡಿದುಕೊಂಡು ನೀವು ಹೊರಟಿರುವುದೆಲ್ಲಿಗೆ?"

"ಫಕೀರಸಾಹೇಬ!" ಗುಂಪಿನಿಂದ ಒಂದು ಸ್ವರವು ಕೇಳಿಬಂದಿತು. "ನಾವು ರಾಮದೇವಾಲಯದ ಕಡೆಗೆ ಹೊರಟಿದ್ದೇವೆ. ಪಠಾಣ ಸೈನಿಕರು ರಾಮದೇವರ ವಿಗ್ರಹವನ್ನು ಒಡೆದು ಅಲ್ಲಿ ಮಸೀದಿ ಕಟ್ಟಲು ಹೊರಟಿದ್ದಾರೆ. ನಾವು ಅವರ ಉದ್ಯಮವನ್ನು ತಡೆಯಲು ಹೊರಟಿರುತ್ತೇವೆ."

"ಅಣ್ಣಂದಿರಾ, ನೀವು ಗುಲ್ಲನ್ನು ಎಬ್ಬಿಸುವಿರಾ?" ಫಕೀರನು ಪ್ರಶ್ನಿಸಿದ.

ನಮ್ಮ ದೇವರ ವಿಗ್ರಹವನ್ನು ನಾಶಮಾಡಲು ಪಠಾಣರು ಹೊರಟಿರುವಾಗ, ಅದನ್ನು ನೋಡಿಕೊಂಡು ಸುಮ್ಮನಿರಲು ಹೇಗೆ ಸಾಧ್ಯವಾದೀತು?" ಜನರು ಅಂದರು.

ಈ ನುಡಿಗಳನ್ನು ಕೇಳುತ್ತಲೆ ಫಕೀರನ ಚಿತ್ತವು ಅಸ್ವಾಸ್ಥ್ಯವನ್ನು ತಳೆದಿತು. ಕಲಹವನ್ನು ಜರುಗಿಸಲು ಜನರು ಸನ್ನದ್ಧರಾಗಿರುವದನ್ನು ನೋಡಲು ಆ ದಯಾಳುವಿನ ಮನವು ನೊಂದಿತು. ಜನರೊಡನೆ ಅವನು ಹೆಚ್ಚಿಗೆ ಮಾತಾಡಲಿಲ್ಲ. ಈ ಗಲಭೆಯನ್ನು ತಡೆಯಲು ನನ್ನಿಂದ ಸಾಧ್ಯವಾಗ

ಬಹುದೇ? ಎಂದು ಅವನು ಆಲೋಚಿಸಿದ. ಈ ರಕ್ತಪಾತವನ್ನು ಇಲ್ಲದಂತೆ ಮಾಡುವದು ಹೇಗೆಂಬದು ಫಕೀರನ ಚಿಂತನೆಯ ವಿಷಯವಾಯಿತು. ಜನರ ಸಂಗಡ ಮಾತಾಡುತ್ತ ಅವನು ನಿಲ್ಲಲಿಲ್ಲ. ರಾಮದೇವಾಲಯದ ಕಡೆಗೆ ಅವನು ಹೊರಟನು.

ದೇವಾಲಯದಲ್ಲಿ ಜನರು ನೆರೆದಿದ್ದರು. ಪಠಾಣ ಸೈನಿಕರು ನಿಂತಿದ್ದರು. ಜನರು ಕಿರುಚುತ್ತಿದ್ದರು. ಸೈನಿಕರು ಗರ್ಜಿಸುತ್ತಿದ್ದರು; ದಂಡಾಳುಗಳು ಜನರು ಚದರಿ ಹೋಗಬೇಕೆಂದು ಆಜ್ಞಾಪಿಸುತ್ತಿದ್ದರು. ಜನರು ಆಗುವದಿಲ್ಲ ವೆಂದು ಹೇಳಿ ದೇವಾಲಯದ ಮುಂದೆ ಹಟ ಹಿಡಿದು ಕುಳಿತಿದ್ದರು. ಒಂದು ಕಲಹಕ್ಕಿರುವ ಸನ್ನದ್ಧತೆಗಳೆಲ್ಲ ಅಲ್ಲಿ ಗೋಚರಿಸುತ್ತಿದ್ದವು. ಸುಮ್ಮನೆ ಹಿಂದಿ ರುಗಿ ಹೋಗತಕ್ಕವರಲ್ಲ ಸೈನಿಕರು; ತಮ್ಮ ದೇವಾಲಯವು ಹಾಳಾಗುವದನ್ನು ನೋಡಿ ಸುಮ್ಮನಿರತಕ್ಕವರಲ್ಲ ಜನರು. ಸೈನಿಕರು ದುರಾಗ್ರಹದಿಂದ ಜನರ ದೇವಾಲಯವನ್ನು ನೆಲಸಮ ಮಾಡಲು ಹೊರಟಿದ್ದರು; ಜನರು ಧರ್ಮಾಭಿ ಮಾನದಿಂದ ತಮ್ಮ ದೇವಾಲಯವನ್ನು ಕಾಯ್ದುಕೊಳ್ಳಲು ಸಿದ್ಧರಾಗಿದ್ದರು. ಸೈನಿಕರಿಗೆ ಅರಸನ ಬೆಂಬಲವಿದ್ದಿತು; ಜನರಿಗೆ ಆತ್ಮವಿಶ್ವಾಸವಿದ್ದಿತು. ಆವರು ಪಠಾಣರನ್ನು ಗುಡಿಯ ಕಡೆಗೆ ಒಂದಂಗುಲದಷ್ಟು ಚಲಿಸಲು ಬಿಡುವಂತಿರ ಲಿಲ್ಲ. ಅಂತು ಕೈಗೆ ಕೈ ಹತ್ತುವ ಲಕ್ಷಣಗಳು ಅಲ್ಲಿ ಗೋಚರಿಸುತ್ತಿದ್ದವು.

ಫಕೀರ ಹುಸ್ಸೇನನು ಎಲ್ಲವನ್ನೂ ನೋಡಿದ. ಅಲ್ಲಿಯ ಪ್ರಕ್ಷುಬ್ಧತೆಯ ವಾತಾವರಣವನ್ನು ಈಕ್ಷಿಸಿದ.

ದಂಡಾಳುಗಳ ಮುಂದಾಳು ಒದರುತ್ತಿರುವದು ಕೇಳಿಸಿತು. "ನೀವು ಹೀಗೆ ನಮ್ಮ ಕೆಲಸಗಳಿಗೆ ಅಡ್ಡಿ ಮಾಡಿದರೆ ನಿಮ್ಮನ್ನು ಕಡಿದು ತುಂಡರಿಸ ಬೇಕಾದೀತು! ಎಚ್ಚರಿಕೆ!"

"ನಮ್ಮ ದೇವಾಲಯವನ್ನು ಸ್ಪರ್ಶಿಸಲು ನಿಮ್ಮನ್ನು ಬಿಡತಕ್ಕವರಲ್ಲ!" ಜನರು ನಿಶ್ಚಯಸ್ವರದಲ್ಲಿ ಉತ್ತರವನ್ನು ಕೊಟ್ಟರು.

"ಕತ್ತಿಗಳಿಗೆ ಮರ್ಯಾದೆಯಿಂದ ಹೇಳಿದರೆ ಅವು ಕೇಳಲಾಪವೇ?" ದಂಡನಾಯಕನ ದರ್ಪಸ್ವರವು ಹೊರಟಿತು.

"ನಾವಲ್ಲ ಕತ್ತಿಗಳು; ನೀವು!" ಎಂದು ಕೂಗಿದರು ಜನರು.

"ಏನು ನೋಡುತ್ತಿರುವಿರಿ? ಈ ಪೋಕರಿಗಳನ್ನು ತುಂಡರಿಸಿರಿ." ದಂಡ ನಾಯಕನ ಆಜ್ಞೆಯಾಯಿತು.

ಜನರು ತಮ್ಮ ಕೈಗಳಲ್ಲಿದ್ದ ಕತ್ತಿ-ದೊಣ್ಣೆ ಇವುಗಳನ್ನು ಸರಿಪಡಿಸಿದರು; ಸೈನಿಕರು ತಮ್ಮ ಆಯುಧಗಳಿಗೆ ಕೈ ಹಾಕಿದರು. ಜನರೂ ತಮ್ಮ ಆಯುಧಗಳನ್ನು ಉಪಯೋಗಿಸಲು ಹಿಂದು ಮುಂದೆ ನೋಡಲಿಲ್ಲ.

ಈ ಸಂದರ್ಭದಲ್ಲಿ ಒಂದು ಸೌಮ್ಯ ಸ್ವರವು ಜನರ ಗುಂಪಿನಿಂದ ಕೇಳಿ ಬಂದಿತು. "ಒಳ್ಳೆಯ ಜನರೇ, ಗಲಭೆಯನ್ನು ಎಬ್ಬಿಸದಿರಿ: ಪ್ರಾಣಬಲಿಗೆ ಹೊರಡದಿರಿ; ದೇವರು ನಿಮಗೆ ಒಳ್ಳೆಯದು ಮಾಡಲಿ!"

"ನಮ್ಮ ದೇವಾಲಯವನ್ನ ನೆಲಸಮ ಮಾಡುವದನ್ನು ನೋಡುತ್ತ ನಾವು ಸುಮ್ಮನಿರಲಾರೆವು."

"ನಿಮ್ಮ ದೇವಾಲಯಕ್ಕೆ ಕೇಡು ಒದಗದಂತೆ ನೋಡಿಕೊಳ್ಳುವ ಕೆಲಸ ನನ್ನದು." ಮೊದಲಿನ ಕಂಠನಾದವೇ ಕೇಳಿಬಂದಿತು.

ಈ ಸಲ ಜನರು ಆ ಸ್ವರವು ಹೊರಟ ಕಡೆಗೆ ಉತ್ಸುಕತೆಯಿಂದ ನೋಡಿದರು. ಆ ನುಡಿಗಳನ್ನಾಡಿದವನು ಬೇರೆ ಯಾರೂ ಆಗಿರಲಿಲ್ಲ. ಆತನು ಫಕೀರ ಹುಸ್ಸೇನನಾಗಿದ್ದನು. ಅವನನ್ನು ಕಂಡು ಜನರು ಬೆರಗಾದರು.

ಫಕೀರನು ಮುಂದೆ ಬಂದು ಹೇಳಿದ:-"ಒಳ್ಳೆಯ ಜನರೆ, ಶಾಂತರಾಗಿರಿ. ನೆತ್ತರಿನ ನದಿಯನ್ನು ನಿಮ್ಮ ಗುಡಿಯ ಮುಂದೆ ಹರಿಸಬೇಡಿರಿ. ಪ್ರಾಣಬಲಿಗೆ ಹೊರಡದಿರಿ. ನರಹತ್ಯೆಯನ್ನು ನಡೆಸುವದರಿಂದ ಯಾವ ಪ್ರಯೋಜನವೂ ಆಗದು."

"ಆದರೆ ನಮ್ಮ ದೇವಾಲಯ!" ಜನರು ಏಕಕಂಠದಿಂದ ಕೂಗಿದರು.

"ನಿಮ್ಮ ದೇವಾಲಯಕ್ಕೆ ಕೇಡು ಆಗದು." ಫಕೀರನು ತನ್ನ ಶಾಂತಯುಕ್ತ ದೃಷ್ಟಿಯನ್ನು ಜನರ ಕಡೆಗೆ ಬೀರಿದನು. ದೇವಾಲಯಕ್ಕೆ "ಕೇಡಾಗದಂತೆ ನಾನು ನೋಡಿಕೊಳ್ಳುವೆ. ಅಣ್ಣಂದಿರಾ, ದೇವಾಲಯವನ್ನು ರಕ್ಷಿಸುವ ಕೆಲಸವು ನನ್ನದು."

ಫಕೀರನ ಆತ್ಮವಿಶ್ವಾಸಪೂರ್ಣವಾದ ನುಡಿಗಳನ್ನು ಜನರು ಕೇಳಿದರು. ರೂಪನಗರದಲ್ಲಿ ಫಕೀರನಿಗಿದ್ದ ಸ್ವಾಧೀನ ಶಕ್ತಿಯು ಅಪಾರವಾದುದಾಗಿದ್ದಿತು. ಹಿಂದುಗಳೂ ಮುಸ್ಲೀಮರೂ ಫಕೀರನನ್ನು ಅತ್ಯಂತ ಗೌರವದಿಂದ ಕಾಣುತ್ತಿದ್ದರು. ಫಕೀರನ ನುಡಿಗಳು ಜನರ ಮೇಲೆ ಪರಿಣಾಮವನ್ನುಂಟು ಮಾಡಿದವು. ಅವರು ಶಾಂತರಾದರು; ಹಾಗು ಶಾಂತಸ್ವರದಲ್ಲಿ "ಸಾಹೇಬ, ಸೈನಿಕರು ದೇವಾಲಯವನ್ನು ಕೆಡುಹದೆ ಹಿಂದಿರುಗಲಾರರು." ಎಂದರು.

"ಅವರು ದೇವಾಲಯವನ್ನು ಸ್ಪರ್ಶಿಸದಂತೆ ನೋಡಿಕೊಳ್ಳುವ ಕೆಲಸ ನನ್ನದು." ಫಕೀರನು ಜನರಿಗೆ ಭರವಸೆಯನ್ನು ನೀಡಿದನು.

ಜನರು ದೂರ ಸರಿದು ನಿಂತರು. ಫಕೀರನು ಗುಡಿಯ ಬಳಿಗೆ ಚಲಿಸಿ ಬಾಗಿಲುಗಳಿಗೆ ಅಡ್ಡವಾಗಿ ನಿಂತನು. ಅವನ ಮೋರೆಯಲ್ಲಿ ದೃಢತೆಯು ಮೂರ್ತಿಮತ್ತಾಗಿ ನೆಲೆಸಿದ್ದಿತು. ಕಣ್ಣುಗಳು ಮೊದಲಿಗಿಂತಲೂ ಉಜ್ವಲವಾಗಿ ಕಂಗೊಳಿಸಿದವು. ಮೋರೆಯ ಮೇಲೆ ಒಂದು ಅಪೂರ್ವ ತೇಜಸ್ಸು ಸುಳಿದಾಡಿತು.

ಸೈನಿಕರು ಬಾಗಿಲುಗಳ ಬಳಿಗೆ ಬಂದರು. ಫಕೀರನು ತನ್ನ ಸ್ಥಳದಿಂದ ಕದಲಲಿಲ್ಲ. ಅವನು ಅಲ್ಲಿಂದ ಕದಲದಿದ್ದರೆ ಸೈನಿಕರಿಗೆ ದೇವಾಲಯದ ಕದಗಳನ್ನು ಒಡೆಯಲು ಸಾಧ್ಯವಾಗುವಂತಿಲ್ಲ. ಇದನ್ನು ನೋಡಿ ದಂಡನಾಯಕನು ಹೇಳಿದನು: "ಫಕೀರಸಾಹೇಬ, ದಯವಿಟ್ಟು ದಾರಿ ಬಿಡಿ."

"ಏಕೆ?" ಎಂಬ ಒಂದು ಮಾತು ಹೊರಬಿದ್ದಿತು ಫಕೀರನ ತುಟಿಗಳಿಂದ.

"ಈ ಗುಡಿಯನ್ನು ನೆಲಸಮ ಮಾಡಿ, ಇಲ್ಲೊಂದು ಮಸೀದಿಯನ್ನು ಕಟ್ಟಲು ಸುಭೇದಾರರ ಅಪ್ಪಣೆಯಾಗಿದೆ."

"ಅನ್ಯ ಧರ್ಮದವರ ಗುಡಿ-ಗೋಪುರಗಳನ್ನು ಹಾಳು ಮಾಡಲು ನಿನ್ನ ಸುಭೇದಾರನಿಗೆ ಅಧಿಕಾರವನ್ನು ಕೊಟ್ಟವರು ಯಾರು?"

"ತಿಳಿಯದು. ಈ ಸಂಸ್ಥಾನವನ್ನು ಆಳತಕ್ಕವರು ಅವರು." ದಂಡನಾಯಕನು ಉತ್ತರ ಹೇಳಿದ.

"ಸುಭೇದಾರನು ಈ ಸಂಸ್ಥಾನವನ್ನು ಆಳತಕ್ಕವನೆಂದು ನಾನು ಒಪ್ಪಿಕೊಳ್ಳುವೆ. ತನ್ನ ಆಡಳಿತಕ್ಕೆ ಒಳಗಾದ ಜನರ ಗುಡಿ-ಗೋಪುರಗಳನ್ನು ಹಾಳು ಮಾಡುವದು ನ್ಯಾಯವಾದುದೇ? ಶಾಸನಧರ್ಮಕ್ಕೆ ಅನುಯೋಜ್ಯವಾದುದೇ?"

"ಕಾಫರರ ಗುಡಿಗಳನ್ನು ಹಾಳು ಮಾಡುವದು ಪುಣ್ಯ ಕೆಲಸವೆಂದು ಕಾಜಿಗಳು ಹೇಳುತ್ತಿದ್ದಾರೆ. ಈ ಕಟ್ಟಡವು ಒಂದು ಮಸೀದೆಯಾಗಿ ಪರಿಣಮಿಸುವದು." ದಂಡನಾಯಕನು ಹೇಳಿದನು. "ಫಕೀರಸಾಹೇಬ, ನೀವು ತಿಳಿದವರಿರುತ್ತೀರಿ. ಧರ್ಮಶಾಸ್ತ್ರಗಳನ್ನು ಅರಿತ ಜ್ಞಾನಿಗಳು ನೀವು. ನಿಮ್ಮಂಥವರು ಈ ಪುಣ್ಯ ಕೆಲಸಕ್ಕೆ ವಿಘ್ನವನ್ನುಂಟು ಮಾಡುವದನ್ನು ನೋಡಿ ನನಗೆ ಆಶ್ಚರ್ಯವಾಗುತ್ತದೆ."

"ಇದು ಪುಣ್ಯದ ಕೆಲಸವಲ್ಲ." ಗಂಭೀರಸ್ವರದಲ್ಲಿ ಫಕೀರನು ಹೇಳಿದ: "ಅನ್ಯ ಧರ್ಮದವರನ್ನು ಪೀಡಿಸಬೇಕೆಂದು ಖುರಾಣದಲ್ಲಿ ಹೇಳಿರುವದಿಲ್ಲ.

ಅವರ ದೇವಾಲಯಗಳನ್ನು ನೆಲಸಮ ಮಾಡುವದರಿಂದ ಪಾಪವಲ್ಲದೆ ಪುಣ್ಯವು ದೊರಕದು. ನಮ್ಮಂತೆಯೇ ಅವರಿಗೂ ದೇವರಿದ್ದಾನೆ. ಸತ್ಯವು ಅವರಿಗೂ ಮಾನ್ಯವಾಗಿದೆ. ಹೀಗಿರುವಾಗ ಅವರ ಗುಡಿಯನ್ನು ನೆಲಸಮ ಮಾಡಲು ಹೊರಡುವದು ಹುಚ್ಚುತನವಲ್ಲವೇ? ನಮ್ಮ ಮಸೀದೆಗಳನ್ನು ಕೆಡಿಸಲು ಅವರು ಬರುವದಿಲ್ಲ. ನಮ್ಮ ಧರ್ಮಾಚರಣೆಗಳಿಗೆ ಅವರು ವಿಘ್ನವನ್ನುಂಟು ಮಾಡುತ್ತಲಿಲ್ಲ. ಅಂದಮೇಲೆ ಅವರ ದೇವಾಲಯವನ್ನು ಕೆಡಿಸಲು ನಾವು ಹೊರಡುವದರಲ್ಲಿ ಯಾವ ನ್ಯಾಯವಿದೆ? ಕೇವಲ ಒಂದು ಧರ್ಮದ ಪ್ರಜೆಗಳನ್ನು ಮಾತ್ರ ಶಾಸಕರು ಪಾಲಿಸಿದರೆ ಸಾಲದು ಪ್ರಜೆಗಳು ಯಾವ ಧರ್ಮದವರೇ ಆಗಿರಲಿ, ಎಲ್ಲರನ್ನೂ ಒಂದೇ ರೀತಿಯಿಂದ ಪಾಲಿಸುವದು ಅಧಿಕಾರಿಗಳ ಕರ್ತವ್ಯವಾಗಿದೆ. ಅಧಿಕಾರಿಯಾದವನು ಮಸೀದೆಯನ್ನು ಗೌರವಿಸುವಂತೆ ದೇವಾಲಯವನ್ನು ಮನ್ನಿಸಲು ಕಲಿಯಲೇ ಬೇಕು. ಪ್ರಜೆಗಳನ್ನು ಭೇದಭಾವದಿಂದ ನೋಡಕೂಡದು. ಈ ಜ್ಞಾನವು ನಿನ್ನ ಸುಭೇದಾರನಿಗಿದ್ದಿದ್ದರೆ ಈ ಅನಾಹುತಗಳು ಜರುಗುತ್ತಲೇ ಇರಲಿಲ್ಲ. ನಿಮ್ಮ ಒಳ್ಳೆಯದಕ್ಕೆ ನಾನು ಹೇಳುತ್ತಿದ್ದೇನೆ. ಈ ದುರಾಗ್ರಹವನ್ನು ಬಿಟ್ಟುಬಿಡಿ. ವಿಶಾಲ ದೃಷ್ಟಿಯಿಂದ ಲೋಕವನ್ನು ನೋಡಲು ಕಲಿಯಬೇಕು. ಹಾಗಾದರೆ ಅಭ್ಯುದಯವಿದೆ."

"ಆದರೆ ಫಕೀರಸಾಹೇಬ." ದಂಡನಾಯಕನು ನುಡಿದನು: "ಗುಡಿಯಲ್ಲಿರುವ ವಿಗ್ರಹವನ್ನು ಭೇದಿಸಬೇಕೆಂದು ಸುಭೇದಾರನ ಅಪ್ಪಣೆಯಾಗಿದೆ. ಅದನ್ನು ಮೀರಿ ನಡೆಯುವಂತಿಲ್ಲ"

"ನಿಮಗೆ ನನ್ನ ಉಪದೇಶವನ್ನು ಅನುಸರಿಸಲು ಸಾಧ್ಯವಿಲ್ಲದಿದ್ದರೆ ನಾನು ಗುಡಿಯ ಕದಗಳನ್ನು ಬಿಟ್ಟು ತೆರಳಲಾರೆ."

"ಫಕೀರಸಾಹೇಬ, ನೀವು ಗುಡಿಯ ಬಾಗಿಲುಗಳನ್ನು ಬಿಡದಿದ್ದರೆ ಗುಡಿಯನ್ನು ಒಡೆಯಲು ನಮ್ಮಿಂದ ಸಾಧ್ಯವಾಗದು."

"ಗುಡಿಗೆ ಕೇಡೊದಗಬಾರದೆಂಬುದೇ ನನ್ನ ಇಚ್ಛೆಯಾಗಿದೆ."

"ಸಾಹೇಬ, ಇದು ನಿಮಗೆ ಅವಶ್ಯವಿಲ್ಲದ ಕೆಲಸ. ನಮ್ಮ ಕೆಲಸಕ್ಕೆ ವಿಘ್ನವನ್ನುಂಟು ಮಾಡುವುದರಿಂದ ನಿಮಗೆ ಯಾವ ಪ್ರಯೋಜನವಿದೆ? ನೀವು ತಿಳಿದವರು; ಹಟ ಹಿಡಿಯಬೇಡಿರಿ." ಫಕೀರನನ್ನು ಅವನ ಕೆಲಸದಿಂದ ನಿವೃತ್ತಿಗೊಳಿಸಲು ಪ್ರಯತ್ನಿಸುತ್ತ ದಂಡನಾಯಕನು ನುಡಿದನು.

"ದೇವರು ಮನುಷ್ಯರಿಗೆ ಬುದ್ಧಿಯನ್ನು ಕೊಟ್ಟಿರುತ್ತಾನೆ. ಈ ಗುಡಿಯು

ಇಲ್ಲಿದ್ದರೆ ಸುಭೇದಾರನಿಗೆ ಆಗುವ ನಷ್ಟವೇನು? ಗುಡಿಯನ್ನುಳಿಸುವದರಿಂದ ಹಿಂದೂ ಪ್ರಜೆಗಳ ಪ್ರೀತಿಯನ್ನು ಸಂಪಾದಿಸಬಹುದು. ಗುಡಿಯನ್ನು ನೆಲ ಸಮ ಮಾಡುವದರಿಂದ ಅವರ ವೈರವನ್ನು ಕಟ್ಟಿಕೊಳ್ಳಬೇಕಾಗುತ್ತದೆ. ರಾಜ್ಯ ವನ್ನು ಆಳುವವರು ಪ್ರಜೆಗಳ ಅಹಿತವನ್ನು ಸಂಪಾದಿಸುವದು ಒಳ್ಳೆಯದಲ್ಲ. ಆಡಳಿತಗಾರರ ಹಿತವನ್ನು ಕಾಂಕ್ಷಿಸಿ ನಾನು ಹೇಳುತಲಿದ್ದೇನೆ. ಗುಡಿಯನ್ನು ಧ್ವಂಸ ಮಾಡುವ ಕೆಲಸಕ್ಕೆ ಕೈಹಚ್ಚುವದರಿಂದ ಒಳಿತಾಗದು. ನನ್ನ ಮಾತು ಗಳನ್ನು ಮೀರಿ ನೀವು ಈ ಕೆಲಸಕ್ಕೆ ಹೊರಡಬಹುದು. ಆದುದರಿಂದ ನಾನು ಹೇಳುವದಿಷ್ಟೇ, ನಿಮ್ಮ ಮುಂದೆ ನಿಂತಿರುವ ಫಕೀರ ಹುಸ್ಸೇನನ ಪ್ರಾಣವನ್ನು ತೆಗೆದ ಮೇಲೆ ಈ ಗುಡಿಯನ್ನು ಹಾಳು ಮಾಡಿರಿ! ಪರಿಶುದ್ಧ ಇಸ್ಲಾಂ ಧರ್ಮದ ಹೆಸರಿನಲ್ಲಿ ಜರುಗಲಿರುವ ಈ ಅಕೃತ್ಯವನ್ನು ತಡೆಯುವದು ನನ್ನ ಕರ್ತವ್ಯ ವಾಗಿದೆ." ಈ ಮಾತುಗಳು ಫಕೀರ ಹುಸ್ಸೇನನ ತುಟಿಗಳಿಂದ ಹೊರಬಿದ್ದವು.

"ನೀವು ಕದಲದಿದ್ದರೆ ನಿಮ್ಮ ಮೇಲೆ ಕೈಮಾಡಬೇಕಾಗಿ ಬರುತ್ತದೆ. ಸುಲ್ತಾನರ ಪ್ರತಿನಿಧಿಗಳಾದ ಸುಭೇದಾರರ ಆಜ್ಞೆಯನ್ನು ನೆರವೇರಿಸುವದಕ್ಕೆ ವಿಘ್ನವನ್ನುಂಟು ಮಾಡತಕ್ಕವರು ರಾಜದ್ರೋಹಿಗಳೆಂದು ಗಣಿಸಲ್ಪಡುವರು" ಅಧಿಕಾರಯುಕ್ತವಾಣಿಯಲ್ಲಿ ದಂಡನಾಯಕನು ನುಡಿದನು.

"ಚಿಂತೆಯಿಲ್ಲ; ನನ್ನ ಕೆಲಸವು ರಾಜದ್ರೋಹವಾಗಬಹುವೆಂಬದರ ಅರಿವು ನನಗಿದೆ. ಸುಲ್ತಾನನ ಪ್ರತಿನಿಧಿಯ ಆಜ್ಞೆಗಿಂತಲೂ ಮಹತ್ತರವಾದುದಾಗಿದೆ ಸತ್ಯವು. ನನ್ನ ವರ್ತನೆಯ ಮೂಲಕ ನಾನು ಸುಭೇದಾರನ ಕೋಪಕ್ಕೆ ಗುರಿ ಯಾಗಬಹುದು; ಆದರೆ ಅದಕ್ಕೆ ನಾನು ಅಂಜುವದಿಲ್ಲ. ಸತ್ಯವನ್ನು ಮೀರಿ ನಡೆದು ಖುದಾನ ಕೋಪಕ್ಕೆ ಪಾತ್ರನಾಗಲು ಅಂಜುತ್ತಿದ್ದೇನೆ. ನನ್ನ ಅಂತರಾ ತ್ಮನು ನೀವು ಜರುಗಿಸಲು ಹೊರಟ ಕೆಲಸವು ಅನ್ಯಾಯವಾದುದೆಂದು ನುಡಿ ಯುತ್ತಲಿದ್ದಾನೆ. ನನ್ನ ಒಳಗಿನ ಪ್ರೇರಣೆಯ ಮೂಲಕ ಈ ಅಕ್ರಮವನ್ನು ತಡೆ ಗಟ್ಟಲು ಹೊರಟಿದ್ದೇನೆ ಬೇಕಾದರೆ ನನ್ನ ಪ್ರಾಣವನ್ನು ತೆಗೆಯಿರಿ; ಅದಕ್ಕೆ ನಾನು ಅಂಜುವದಿಲ್ಲ."

"ಫಕೀರ ಸಾಹೇಬ, ನಿಮ್ಮ ಮೇಲೆ ಕೈ ಮಾಡದೆ ಉಪಾಯವಿಲ್ಲ." ಪಠಾಣ ಸರದಾರನಂದನು.

"ನಿಮ್ಮ ಉಪಾಯವು ಅಪಾಯಕ್ಕಿರುವ ಹೆದ್ದಾರಿಯಾಗಿದೆ." ಒಂದು ಮೃದುಹಾಸವು ಫಕೀರನ ತುಟಿಗಳ ಮೇಲೆ ಮೂಡಿತು.

ಸರದಾರನು ದಂಡಾಳುಗಳ ಕಡೆಗೆ ತನ್ನ ದೃಷ್ಟಿಯನ್ನು ತಿರುಗಿಸಿದನು. ಅವರನ್ನು ನೋಡುತ್ತ ಅವನು ಹೀಗೆ ಹೇಳಿದನು: "ನಾವೆಲ್ಲರೂ ಸುಭೇದಾರನ ಆಜ್ಞೆಯಂತೆ ಈ ದೇವಾಲಯದಲ್ಲಿರುವ ವಿಗ್ರಹವನ್ನು ಒಡೆಯಲು ಬಂದಿರುತ್ತೇವೆ. ಫಕೀರಸಾಹೇಬರು ನಮ್ಮ ಕೆಲಸಕ್ಕೆ ವಿಘ್ನವಾಗಿ ನಿಂತಿದ್ದಾರೆ. ರಾಜಾಜ್ಞೆಗೆ ತಡೆಯನ್ನುಂಟು ಮಾಡವೆಂದು ನಾನು ಅವರೊಂದಿಗೆ ಅಪೇಕ್ಷಿಸಿದುದನ್ನು ನೀವೆಲ್ಲರೂ ತಿಳಿದಿರುತ್ತೀರಿ; ಆದರೆ ಅವರು ನನ್ನ ನುಡಿಯನ್ನು ಮಾನಿಸದೆ ತಮ್ಮ ಹಟವನ್ನು ಬಿಗಿಯಾಗಿ ಹಿಡಿದಿರುತ್ತಾರೆ. ಗುಡಿಯ ಬಾಗಿಲಿನಿಂದ ಅವರು ಕದಲುವಂತಿಲ್ಲ. ಫಕೀರ ಸಾಹೇಬರು ದೊಡ್ಡವರು, ಪೂಜಾರ್ಹರು ನಿಜ; ಆದರೆ ನಮಗೆ ಇವರಿಗಿಂತಲೂ ದೊಡ್ಡವರು ಸುಲ್ತಾನರು. ಅವರ ಆಜ್ಞೆಯನ್ನು ನಾವು ಮೀರಿ ನಡೆಯಕೂಡದು. ಅದುದರಿಂದ ದೇಗುಲದ ಕದಗಳ ಬಳಿಯಲ್ಲಿ ನಿಂತಿರುವ ಫಕೀರ ಸಾಹೇಬರನ್ನು ಬಲಪ್ರಯೋಗದಿಂದ ದೂರಕ್ಕೆ ಒಯ್ಯಬೇಕಾಗಿದೆ. ಅವರಿಗೆ ಹಿಂಸೆಯನ್ನು ಮಾಡಬಾರದು; ಆದರೆ ಅವರು ನಮ್ಮ ಕೆಲಸಗಳಿಗೆ ವಿಘ್ನವನ್ನು ಮಾಡದಂತೆ ದೂರ ಸೆಳೆದೊಯ್ಯಬೇಕು."

ಸರದಾರನು ಹೇಳಿದ ಮಾತುಗಳನ್ನು ಸೈನಿಕರು ಸಾವಧಾನ ಚಿತ್ತದಿಂದ ಕೇಳಿದರು. ಆ ಮೇಲೆ ಅವರು ತಮ್ಮ ಕಣ್ಣುಗಳನ್ನು ದೇಗುಲದ ಬಾಗಿಲ ಬಳಿಯಲ್ಲಿ ನಿಂತಿದ್ದ ಫಕೀರನ ಕಡೆಗೆ ತಿರುಗಿಸಿದರು. ಸೌಮ್ಯತೆಯನ್ನು ಸೂಚಿಸತಕ್ಕ ಕಣ್ಣುಗಳು; ನಿಷ್ಕಲಂಕವಾದ ವದನಮಂಡಲ; ಅಂತರಂಗದೊಳಗೆ ಪ್ರವೇಶಿಸತಕ್ಕ ಆ ನೋಟ ಇವುಗಳು ಸೈನಿಕರಿಗೆ ಗೋಚರಿಸಿದವು. ಫಕೀರನ ಸ್ಥೈರ್ಯ ಮತ್ತು ಮಾತುಗಳು ಸೈನಿಕರ ಅಂತರಂಗದೊಳಗೆ ಪ್ರವೇಶಿಸಿದ್ದವು. ಸರದಾರನ ನುಡಿಗಳನ್ನು ಅವರು ಕೇಳಿದ್ದರೂ ಏನು ಮಾಡಬೇಕೆಂಬುದನ್ನು ತಿಳಿಯದೆ ಅವರು ಶಿಲಾಗೊಂಬೆಗಳಂತೆ ನಿಂತಿದ್ದರು.

"ನಾನು ಹೇಳುತ್ತಿರುವದು ನಿಮಗೆ ಕೇಳಿಸುವದಿಲ್ಲವೇ?" ಸರದಾರನು ಒದರಿದ. "ನಾವಿಲ್ಲಿಗೆ ಬಂದಿರುವದು ರಾಜಾಜ್ಞೆಯನ್ನು ನೆರವೇರಿಸುವದಕ್ಕಾಗಿದೆ ಅದನ್ನು ನೆರವೇರಿಸುವದು ನಮ್ಮ ಕರ್ತವ್ಯವು. ರಾಜಾಜ್ಞೆಯನ್ನು ನೆರವೇರಿಸಲು ವಿಘ್ನತಂದ ಫಕೀರಸಾಹೇಬರನ್ನು ನೀವು ಬಂಧಿಸಬೇಕು. ಆ ಮೇಲೆ ಗುಡಿಯನ್ನೊಡೆದು ವಿಗ್ರಹವನ್ನು ಭೇದಿಸಬೇಕಾಗಿದೆ."

"ಫಕೀರ ಸಾಹೇಬರನ್ನು ಬಂಧಿಸಬೇಕೆ?" ಸೈನಿಕರು ಪ್ರಶ್ನಿಸಿದರು.

"ಅಹುದು. ಅವರು ರಾಜಾಜ್ಞೆಗೆ ವಿಘ್ನವನ್ನುಂಟುಮಾಡಿರುವದರಿಂದ ಅವರನ್ನು ಬಂಧಿಸಬೇಕಾಗಿವೆ." ಸರದಾರನು ಒತ್ತಿ ಹೇಳಿದ.

"ಸೈನಿಕರೇ!" ಈ ಸಲ ಮಾತಾಡತೊಡಗಿದವನು ಫಕೀರ ಹುಸ್ಸೇನ ನಾಗಿದ್ದನು. "ಗುಡಿಯನ್ನು ಹಾಳು ಮಾಡಲು ನೀವು ಬಂದಿರುತ್ತೀರಿ. ಹಿಂದು ಗಳು ನಮ್ಮಂತೆಯೇ ಮನುಷ್ಯರಿರುತ್ತಾರೆ. ಮನುಷ್ಯತ್ವವು ನಿಮ್ಮಲ್ಲಿದ್ದರೆ ಈ ಗುಡಿಯನ್ನುಳಿಸಿ; ಅಥವಾ ನಿಮ್ಮ ಎದೆಗಳು ಪೈಶಾಚಿಕವಾದವುಗಳಾಗಿದ್ದರೆ ಮೊದಲು ನನ್ನನ್ನು ತುಂಡರಿಸಿ, ಆ ಮೇಲೆ ಗುಡಿಯನ್ನು ಹಾಳು ಮಾಡಿ. ಈ ಎರಡು ಹಾದಿಗಳಲ್ಲಿ ಯಾವುದಾದರೂ ಒಂದನ್ನು ನೀವು ಸ್ವೀಕರಿಸಬೇಕಾಗಿವೆ. ನೀವು ನ್ಯಾಯ ಮಾರ್ಗವನ್ನು ಅವಲಂಬಿಸಿರಿ. ನಮಗೆ ಮಸೀದಿಗಳಲ್ಲಿ ಅಲ್ಲಾ ಹುವನ್ನು ಪ್ರಾರ್ಥಿಸಲು ಸ್ವಾತಂತ್ರ್ಯವಿರುವಂತೆಯೇ ಹಿಂದುಗಳಿಗೆ ಅವರ ಗುಡಿ ಗಳಲ್ಲಿ ಅವರ ದೇವರುಗಳನ್ನು ಪೂಜಿಸಲು ಸ್ವಾತಂತ್ರ್ಯವನ್ನು ನೀಡಬೇಕಾ ದುದು ಅತ್ಯಾವಶ್ಯಕವಾಗಿವೆ ಅವರ ಸ್ವಾತಂತ್ರ್ಯವನ್ನು ನಾವು ಹಾಳು ಮಾಡು ವುದಾದರೆ ಮಸೀದಿಯಲ್ಲಿ ಅಲ್ಲಾಹುವನ್ನು ಪ್ರಾರ್ಥಿಸಲು ನಮಗೆ ಯೋಗ್ಯತೆ ಯಿಲ್ಲ. ನಿಮಗೆ ಬುದ್ಧಿಯಿದೆ. ತುಸ ಆಲೋಚಿಸಿರಿ. ಆ ಮೇಲೆ ಪ್ರಯತ್ನಿಸಿರಿ."

ಫಕೀರನಾಡಿದ ಮಾತುಗಳು ಸೈನಿಕರ ಎದೆಗಳಿಗೆ ತಾಕಿದವು. ಅವರು ಆಲೋಚಿಸಿದರು; ಚಿಂತಿಸಿದರು. ಪ್ರತಿಯೊಬ್ಬರ ಎದೆಯಲ್ಲಿಯೂ ಈ ಮಾತು ಗಳು ಪ್ರತಿಧ್ವನಿಗೊಂಡವು. ಅವರು ಸೈನಿಕರು ನಿಜ. ಈ ಮುನ್ನ ಅವರು ಎಷ್ಟೋ ಭಯಂಕರ ಕೃತ್ಯಗಳನ್ನು ಜರುಗಿಸಿದ್ದರು; ಆದರೆ ಅವರ ಅಂತರಂಗ ಗಳಲ್ಲಿದ್ದ ಚೈತನ್ಯವು ಸಂಪೂರ್ಣವಾಗಿ ಅಳಿಸಿರಲಿಲ್ಲ. ಹೃದಯಗಳು ಕಲ್ಲುಗಳಾ ಗಿರಲಿಲ್ಲ.

"ಏನು ಮಾಡುತ್ತಿರುವಿರಿ? ಫಕೀರಸಾಹೇಬರನ್ನು ಬಂಧಿಸಿರಿ." ಸರದಾ ರನ ಆ ಆಜ್ಞೆಯು ಹೊರಟಿತು.

"ಇಲ್ಲ ಸಾಹೇಬ, ಈ ಕೆಲಸವು ನಮ್ಮಿಂದಾಗದು." ಈ ಮಾತುಗಳು ಸೈನಿಕರಿಂದ ಬಂದವು.

"ಏಕೆ? ಸುಲ್ತಾನರ ಪ್ರತಿನಿಧಿಗಳ ಆಜ್ಞೆಯನ್ನು ನೆರವೇರಿಸುವ ಹೊಣೆ ಯನ್ನು ಹೊತ್ತವರು ನಾವು."

"ನಿಜ ಸಾಹೇಬ; ಆದರೆ ಮಾಫ ಮಾಡಿ; ಈ ಕೆಲಸ ಮಾತ್ರ ನಮ್ಮಿಂ ದಾಗದು."

"ಫಕೀರ ಸಾಹೇಬರು ರಾಜಾಜ್ಞೆಗಿಂತ ಮಿಗಿಲಾದವರಲ್ಲ."

"ಫಕೀರ ಸಾಹೇಬರ ಮೇಲೆ ಕೈ ಮಾಡಲು ನಮ್ಮಿಂದಾಗದು. ಆ ಕೆಲಸವನ್ನು ಬಿಟ್ಟು ಇತರ ಯಾವ ಕೆಲಸವನ್ನು ಬೇಕಾದರೂ ನಾವು ಮಾಡುವೆವು."

"ರಾಜದಂಡನೆಯಾಗುವದು ಈ ಅಪ್ಪಣೆಯನ್ನು ಮೀರಿದರೆ!" ಸರದಾರನು ಸೈನಿಕರನ್ನು ಎಚ್ಚರಿಸಿದ.

"ಸಾಹೇಬ, ನೀವು ನಮ್ಮನ್ನು ಏನು ಬೇಕಾದರೂ ಮಾಡಿ; ಆದರೆ ನಾವು ಫಕೀರಸಾಹೇಬರನ್ನು ಸ್ಪರ್ಶಿಸಲಾರೆವು." ನಿಶ್ಚಲಸ್ವರದಿಂದ ಸೈನಿಕರು ಉಸುರಿದರು.

ಕಾದಾಡಲು ಸೈನಿಕರಿಗೆ ಅಂಜಿಕೆಯಿರಲಿಲ್ಲ; ವೀರಾವೇಶದಿಂದ ಜೀವದ ಹಂಗುದೊರೆದು ಕಾದಾಡತಕ್ಕವರು ಅವರು; ಆದರೆ "ನನ್ನನ್ನು ಬೇಕಾದರೆ ಕೊಲ್ಲಿರಿ" ಎಂದು ಸೌಮ್ಯ ಸ್ವರದಲ್ಲಿ ಉಸುರಿ, ಗುಡಿಯ ಕದಗಳ ಬಳಿಯಲ್ಲಿ ಕದಲದೆ ನಿಂತಿದ್ದ ಫಕೀರನಿಗೆ ಅವರು ಅಂಜಿದರು. ಅವನ ಸೌಮ್ಯತೆ, ದೃಢನಿಶ್ಚಯ, ನಿರ್ಭೀತಿ ಈ ಗುಣಗಳು ಸೈನಿಕರನ್ನು ಸೋಲಿಸಿದವು, ಇದಲ್ಲದೆ ಫಕೀರ ಹುಸ್ಸೇನನು ಒಬ್ಬ ಮಹಾತ್ಮನೆಂಬುದನ್ನು ಸೈನಿಕರು ಅರಿತಿದ್ದರು. ಅವನ ನಿರ್ಮಲ ಜೀವನದ ಪರಿಚಯವು ಅವರಿಗಿದ್ದಿತು. ಈ ಪವಿತ್ರ ಜೀವಿಗೆ ನೋವು ಮಾಡಹೊರಟರೆ, ಪರಿಣಾಮವು ಒಳಿತಾಗದೆಂಬ ಅಂಜಿಕೆಯು ಅವರಲ್ಲಿ ಹುಟ್ಟಿದುದರಲ್ಲೇನೂ ಆಶ್ಚರ್ಯವಿರಲಿಲ್ಲ. ಕಾರಣಗಳು ಏನೇ ಇರಲಿ, ಸೈನಿಕರು ತಮ್ಮ ನಾಯಕನ ಆಜ್ಞೆಯನ್ನು ಮಾತ್ರ ಅನುಸರಿಸಲಿಲ್ಲ. ಫಕೀರನ ದೇಹವನ್ನು ಸ್ಪರ್ಶಿಸಲು ಅವರು ಒಡಂಬಡಲಿಲ್ಲ. ಫಕೀರನನ್ನು ಬಂಧಿಸದೆ ಗುಡಿಯ ಕದಗಳನ್ನು ಮುರಿಯಲಾಗುವಂತಿಲ್ಲ. ಈ ಸಂದರ್ಭದಲ್ಲಿ ಏನು ಮಾಡಬೇಕೆಂಬುದು ನಾಯಕನಿಗೆ ತಿಳಿಯದೊಯಿತು.

ನಾಲ್ಕು ಪಾರ್ಶ್ವಗಳಲ್ಲಿಯೂ ಜನರು ನೆರೆದಿದ್ದರು. ಅವರು ಫಕೀರನ ಗುಂಟಾದ ಈ ನೈತಿಕ ವಿಜಯವನ್ನು ದರ್ಶಿಸಿ ಹರ್ಷಭರಿತರಾದರು. ಫಕೀರನ ನೈತಿಕ ಶಕ್ತಿಯು ಈ ವಿಜಯವನ್ನು ಸಂಪಾದಿಸಿದ್ದಿತೆಂದು ಹೇಳಿದರೆ ತಪ್ಪಾಗಲಾರದು. ಕಲಹವನ್ನು ನಿವಾರಿಸಲು ದೇಗುಲದ ಮುಂದೆ ಪ್ರಾಣವನ್ನು ಅರ್ಪಿಸಲು ಅವನು ಸಿದ್ಧನಾದನು. ಜನರ ಹಿತವನ್ನು ಚಿಂತಿಸಿ ಪ್ರಾಣಾರ್ಪಣೆಗೆ ಆ ತ್ಯಾಗಿಯು ಹೊರಟನು; ಆದರೆ ದಂಡಾಳುಗಳ ಶಸ್ತ್ರಗಳಿಗೆ ಫಕೀರನ ಕೂದಲು ಸಹ ಕೊಂಕಿಸುವ ಶಕ್ತಿಯಿರಲಿಲ್ಲ. ಫಕೀರನ ಆತ್ಮಚೈತನ್ಯವು ದಂಡಾಳುಗಳು

ತಮ್ಮ ಆಯುಧಗಳನ್ನು ಕೆಳಗಿಡುವಂತೆ ಮಾಡಿತು. ಫಕೀರನ ಎದೆಯಿಂದ ಹೊರಟ ನುಡಿಗಳು ಸೈನಿಕರ ಕಲ್ಲೆದೆಗಳಲ್ಲಿ ನಾಟಿದವು. ಅವರು ಶಸ್ತ್ರಸಂನ್ಯಾಸವನ್ನು ಆಚರಿಸಿದರು. ತಮ್ಮ ನಾಯಕನ ಆಜ್ಞೆಯನ್ನು ಮೀರಿ ನಡೆಯಲು ಅವರು ಧೈರ್ಯಪಟ್ಟರು. ದಂಡಾಳುಗಳ ಈ ವರ್ತನವು ಕೆಲವರಿಗೆ ಅಸ್ವಾಭಾವಿಕವಾಗಿ ತೋರಬಹುದು; ಆದರೆ ನಾವು ಜನಜೀವನವನ್ನು ನಿರೀಕ್ಷಿಸುವುದಾದರೆ ಮೇಲಿನ ಸಂಭವವು ಅಸ್ವಾಭಾವಿಕವಾದುದಲ್ಲವೆಂಬುದು ವ್ಯಕ್ತವಾಗುವದು. ಇತರರ ಮನಸ್ಸುಗಳನ್ನು ಆಕರ್ಷಿಸಿ, ಅವುಗಳಲ್ಲಿ ತಮ್ಮ ಭಾವಗಳನ್ನು ಮೂಡುವಂತೆ ಮಾಡುವ ಕೆಲವು ಮಂದಿ ಮಹಾಜೀವಿಗಳು ಈ ಲೋಕದಲ್ಲಿ ಇದ್ದೇ ಇರುತ್ತಾರೆ. ಈ ಮಹಾಜೀವಿಗಳ ಮನೋಭಾವಗಳನ್ನು ತಡೆಗಟ್ಟಲು ಸಾಧಾರಣರಿಂದ ಸಾಧ್ಯವಾಗದು. ಆ ಸಂದರ್ಭದಲ್ಲಿ ಸಾಧಾರಣರು ತಮ್ಮ ವ್ಯಕ್ತಿತ್ವಗಳನ್ನು ಮರೆತು ಈ ಮಹಾಪುರುಷರ ನುಡಿಗಳನ್ನು ತಿಳಿದೋ ತಿಳಿಯದೆಯೋ ಅನುಸರಿಸುವಂತೆ, ಫಕೀರನ ಮುಂದೆ ನಿಂತಿದ್ದ ಸೈನಿಕರೂ ಮಾಡಿದರು.

ಸೈನಿಕರು ತನ್ನ ಆಜ್ಞೆಯನ್ನು ಮಾನಿಸುವದಿಲ್ಲವೆಂಬುದನ್ನು ನಾಯಕನು ಮನಗಂಡನು. ಇನ್ನು ಅಲ್ಲಿ ನಿಂತ ಜನರ ಪರಿಹಾಸಗಳಿಗೆ ಪಾತ್ರನಾಗಲು ಅವನು ಇಷ್ಟ ಪಡದೆ, ಅವರೊಡನೆ ತಮ್ಮ ಪಾಳಯದ ಕಡೆಗೆ ಹೊರಟನು.

ಸೈನಿಕರು ದೇಗುಲವನ್ನು ನೆಲಸಮ ಮಾಡಲು ಶಕ್ತರಾಗದೆ ಹಿಂದಿರುಗಿದುದನ್ನು ನೋಡಿ ಜನರು ಆಹ್ಲಾದಭರಿತರಾದರು. ಫಕೀರ ಹುಸ್ಸೇನನ ಪರಿಶ್ರಮದ ಫಲವಾಗಿ ದೇಗುಲವು ಉಳಿದಿತು. ಅಲ್ಲಿ ನೆತ್ತರಿನ ಕಾಲುವೆಯು ಹರಿಯಲಿಲ್ಲ. ಸೈನಿಕರು ಪರಾಜಯವನ್ನು ಹೊಂದಿ ಹಿಂದಿರುಗಿದರು. ಈ ಸಂಭವವು ಪ್ರತಿಯೊಬ್ಬ ಹಿಂದುವಿನ ಎದೆಯನ್ನು ಅರಳುವಂತೆ ಮಾಡಿತು. ಹಿಂದುಗಳು ಬಂದು ಫಕೀರ ಹುಸ್ಸೇನನನ್ನು ವಂದಿಸಿದರು. ಫಕೀರ ಹುಸ್ಸೇನನು ಹಿಂದುಗಳಿಂದಲೂ ಮುಸ್ಲಿಮರಿಂದಲೂ ಗೌರವಿಸಲ್ಪಡುತ್ತಲಿದ್ದ ಒಬ್ಬ ಮಹನೀಯನೆಂಬುದು ಓದುಗರ ನೆನಪಿನಲ್ಲಿರಬಹುದು. ಅವನು ಜನರನ್ನು ಇವರು ಹಿಂದುಗಳು, ಇವರು ಪಠಾಣರು ಎಂಬ ಭೇದದೃಷ್ಟಿಯಿಂದ ನೋಡುತ್ತಿರಲಿಲ್ಲ. ಅವನು ಮನುಷ್ಯತ್ವವನ್ನೇ ಪ್ರೀತಿಸುತ್ತಿದ್ದ ಒಬ್ಬ ವ್ಯಕ್ತಿಯಾದುದರಿಂದ ಎಲ್ಲರೂ ಅವನ ಪ್ರೀತಿಗೆ ಒಳಗಾಗಿದ್ದರು. ಈ ವಿಶಾಲ ಮನಃಸ್ಥಿತಿಯಿಂದಲೇ ಆತನು ಹಿಂದುಗಳ ದೇವಾಲಯವನ್ನು ಉಳಿಸಲು ಹೊರಟಿದ್ದನು. ಅವನ ಈ ಪ್ರಯತ್ನವು ಹಿಂದೂ ಮುಸ್ಲೀಮ್ ಮೈತ್ರಿಯ ಒಂದು ಪ್ರತ್ಯಕ್ಷ ಪ್ರಮಾಣವು!

---

ನ್ಮೇಷದ ಸಲಿಲವನ್ನು ಪ್ರದಾನಮಾಡುತ್ತಿದ್ದವನು ಜ್ಞಾನಾನಂದನಾಗಿದ್ದನು. ಜ್ಞಾನಾನಂದನಿಗೆ ಲೌಕಿಕವಾದ ಯಾವ ಆಗ್ರಹಗಳಿಲ್ಲದಿದ್ದರೂ ವಿದ್ರೋಹಿಗಳಿಗೆ ಹೊಸದಾದ ಕರ್ಮಪಥವನ್ನು ತೋರಿ ಉದಯಹೊಂದಲಿರುವ ಸ್ವತಂತ್ರ ನಾಡಿಗೆ ಆತ ಜೀವನಾಡಿಯಂತಿದ್ದನೆಂದರೆ ಅತಿಶಯೋಕ್ತಿಯಾಗಲಾರದು.

ವಿದ್ರೋಹಿಗಳಲ್ಲಿ ಜ್ಞಾನಾನಂದನ ಅನಂತರ ಇದ್ದ ಕರ್ತೃತ್ವಶಾಲಿಗಳಲ್ಲಿ ಕುಮಾರ ಅಮರಸಿಂಹನು ಪ್ರಮುಖನಾಗಿದ್ದನು. ಸ್ವಾತಂತ್ರ್ಯಸಾಧನೆಯ ಸಂಗ್ರಾಮದಲ್ಲಿ ಕುಮಾರ ಅಮರಸಿಂಹನು ಜ್ಞಾನಾನಂದನ ಬಲಗೈಯಂತಿದ್ದನು. ಜ್ಞಾನಾನಂದನಲ್ಲಿ ಬುದ್ಧಿಬಲವಿದ್ದಿತು. ಕುಮಾರನಲ್ಲಿ ಕಾರ್ಯಸಾಧನೆಯ ಶಕ್ತಿಯಿದ್ದಿತು. ಹಂಚಿಕೆಗಳನ್ನು ತಯಾರಿಸುವ ಕೆಲಸ ಜ್ಞಾನಾನಂದನದು. ಕಾರ್ಯಸಾಧನೆಗಿರುವ ದಾರಿಯನ್ನು ಅವನು ತೋರಿಸುತ್ತಿದ್ದ. ಜ್ಞಾನಾನಂದನ ಹಂಚಿಕೆಗೆ ಕರ್ಮಪದ್ಧತಿಗೆ ರೂಪವನ್ನು ಕೊಡುವ ದಕ್ಷತೆ, ಧೀರತೆ, ದಾರ್ಢ್ಯ ಇವುಗಳು ಕುಮಾರನಲ್ಲಿದ್ದವು. ಎಂಥ ವಿಪತ್ತುಗಳ ಗುಹೆಯಲ್ಲೂ ನುಸುಳತಕ್ಕ ಎದೆಗಾರಿಕೆ ಅವನದು. ರಾಜದುರ್ಗವು ವಿದ್ರೋಹಿಗಳ ಕರಗತವಾದುದು ಜ್ಞಾನಾನಂದನ ಹಂಚಿಕೆಯಿಂದ; ಕುಮಾರನ ಪ್ರಯತ್ನದಿಂದ ಎಂಬುದು ಓದುಗರಿಗೆ ತಿಳಿದ ವಿಷಯವಾಗಿದೆ. ಜ್ಞಾನಾನಂದ ಮತ್ತು ಕುಮಾರ ಅಮರಸಿಂಹ ಇವರು ರೂಪನಗರದ ಸ್ವಾತಂತ್ರ್ಯಸಾಧನೆಯ ಇತಿಹಾಸದಲ್ಲಿ ನರ-ನಾರಾಯಣರಂತಿದ್ದರೆಂದು ಹೇಳಿದರೆ ತಪ್ಪಾಗಲಾರದು.

ಜ್ಞಾನಾನಂದನ ಬುದ್ಧಿಶಕ್ತಿ ಅಮರಸಿಂಹನ ಕಾರ್ಯದಕ್ಷತೆ ಇವುಗಳ ಮೂಲಕ ರಾಜದುರ್ಗವು ಸ್ವಾತಂತ್ರ್ಯ ಸಾಧಕರ ಕರಗತವಾಯಿತು. ಜ್ಞಾನಾನಂದನ ಕೌಶಲ್ಯವು ತೋರಿದ್ದುದು ಕೋಟೆಯನ್ನು ವಶಪಡಿಸಿಕೊಂಡುದುದರಲ್ಲಲ್ಲ; ವಿದ್ರೋಹಿಗಳ ಅಧಿಕಾರವನ್ನು ಕೋಟೆಯಲ್ಲಿ ಬಲಪಡಿಸುವದರಲ್ಲಾಗಿದ್ದಿತು. ಅವನಿಗೆ ಒಂದು ನಿಮಿಷದಷ್ಟು ವೇಳೆ ಸಹಾ ವಿರಾಮ ಸಿಗುತ್ತಿರಲಿಲ್ಲ. ತನ್ನ ಶರೀರಾರೋಗ್ಯದ ಕಡೆಗೆ ಜ್ಞಾನಾನಂದನು ಗಮನವನ್ನಿಡುತ್ತಿರಲಿಲ್ಲ. ರಾಜದುರ್ಗದಲ್ಲಿ ವಿದ್ರೋಹಿಗಳ ಬಲವನ್ನು ಹೆಚ್ಚಿಸುವ ಕೆಲಸದಲ್ಲಿ ಅವನು ನಿರತನಾದನು.

ರಾಜದುರ್ಗದ ಅಕ್ಕ ಪಕ್ಕದ ಹಳ್ಳಿಗಳಲ್ಲಿ ಜ್ಞಾನಾನಂದನು ಸಂಚಲಿಸುತ್ತಿದ್ದನು. ಬಡತನದ ಬೆಂಕಿಯಲ್ಲಿ ಬೇಯುತ್ತಿದ್ದ ಪ್ರಜೆಗಳನ್ನು ಕಂಡು ಅವರೊಡನೆ ಪ್ರೀತಿಯಿಂದ ಮಾತಾಡುತ್ತಿದ್ದನು. ಯಾರನ್ನು ಬೇಕಾದರೂ ಸೆಳೆ

ಯುವಷ್ಟು ಮೋಹಕವಾಗಿದ್ದಿತು ಜ್ಞಾನಾನಂದನ ಸ್ವರವು. ಕರುಣ-ಪ್ರೀತಿಗಳು ಅವನ ನುಡಿಗಳಲ್ಲಿ ಉಕ್ಕಿ ಹರಿಯುತ್ತಿದ್ದವು. ಅವನ ಮಾತುಗಳು ಕ್ರೋತೃ ಸ್ಪಂದದ ಹೃದಯವನ್ನು ಸ್ಪರ್ಶಿಸದೆ ಇರಲಾರವು. ಹೀಗೆ ಮಾಧುರ್ಯದಿಂದ ಕೂಡಿದ ಜ್ಞಾನಾನಂದನ ಕಂಠವು ಜನರ ಮನಗಳನ್ನು ಆಕರ್ಷಿಸಿತು. ಅವನ ಪ್ರೀತಿಯು ನುಡಿಗಳು ಅವರ ಎದೆಗಳನ್ನು ಮುಟ್ಟಿದವು. ಅವನ ಮಾತು ಗಳನ್ನು ಕೇಳುವದರಿಂದ ಅವರ ಎದೆಗಳು ಹಗುರವಾಗತೊಡಗಿದವು. ಹೆಚ್ಚಿನ ಶ್ರಮವಿಲ್ಲದೆ ಜ್ಞಾನಾನಂದನು ಜನರ ಆಪ್ತನಾದನು

ಜ್ಞಾನಾನಂದನು ಮಾತಾಡುವದರಲ್ಲಿ ಚತುರನು. ಜನರ ಸ್ಥಿತಿಗತಿ ಗಳನ್ನು ಅವನು ತಿಳಿದುಕೊಂಡನು. ಅವರು ಅನುಭವಿಸುತ್ತಿರುವ ಸಂಕಟ ಗಳ ಬಗ್ಗೆ ಪ್ರಾಮಾಣಿಕವಾದ ಸಹಾನುಭೂತಿಯನ್ನು ಸೂಚಿಸಿದನು. ಜನರು ಅನುಭವಿಸುತ್ತಲಿರುವ ದಾರುಣ ದಾರಿದ್ರ್ಯದ ಕಾರಣವು ಸರಕಾರದ ಅನ್ಯಾಯ ಸ್ಥಿತವಾದ ಆಡಳಿತವಾಗಿದೆಯೆಂಬುದನ್ನು ಜನರಿಗೆ ಅರುಹಲು ಅವನು ಮರೆ ಯಲಿಲ್ಲ. ಜನರ ಸ್ಥಿತಿಯು ಉತ್ತಮವಾಗಬೇಕಾದರೆ ಸಲೆನಿಂತಿದ್ದ ಆಡಳಿತದ ಉನ್ಮೂಲ ನಾಶನವಾಗಬೇಕೆಂದೂ, ಜನರು ಅಭ್ಯುದಯ ಕಾಂಕ್ಷಿಗಳಾಗಿದ್ದರೆ ಅನ್ಯಾಯ ತುಂಬಿತ ಮತ್ತು ದುರಾಚಾರ ಪರಿಪೂರ್ಣವಾದ ಸರಕಾರದ ಆಳ್ವಿಕೆಯನ್ನು ಅಡಿಮೇಲು ಮಾಡಬೇಕೆಂದೂ ಜ್ಞಾನಾನಂದನು ಜನರಿಗೆ ಉಪದೇಶಿಸಿದನು. ಕೇವಲ ಉಪದೇಶಿಸುವದು ಮಾತ್ರವಲ್ಲ, ಜ್ಞಾನಾನಂದನು ಜನರ ಸಂಗಡ ತರ್ಕಿ ಸಿದನು; ವಾದಿಸಿದನು. ವಿದ್ರೋಹಿಗಳಿಗೆ ಧನದ ಬಲವಿರಲಿಲ್ಲ; ಆದರೂ ಜನ ತೆಯ ಬಡತನವನ್ನು ನೀಗಿಸುವ ಕೆಲಸ ತಮ್ಮದೆಂದು ಅವನು ಜನರಿಗೆ ಭರ ವಸೆಯನ್ನು ನೀಡಿದನು.

ಜ್ಞಾನಾನಂದನ ವಿಚಾರಸರಣಿಯು ಜನರ ಚಿತ್ತಗಳಲ್ಲಿ ಪ್ರವೇಶಿಸಿತು. ಅವರು ಚಿಂತಿಸಿದರು; ಆಳವಾಗಿ ಆಲೋಚಿಸಿದರು. ತಮ್ಮ ಸ್ಥಿತಿಗತಿಗಳನ್ನು ಕುರಿತು ಪರ್ಯಾಲೋಚಿಸಿದರು. ಜ್ಞಾನಾನಂದನು ಹೇಳಿದ ಮಾತುಗಳಲ್ಲಿ ಸತ್ಯವಿದೆಯೆಂಬುದನ್ನು ಅವರು ಮನಗಂಡರು. ತಮ್ಮ ಜೀವನವು ಕೆಸರಿನ ಕೂಪವಾದ ಚಿತ್ರವೆಂದು ಜನರಿಗೆ ದೃಗ್ಗೋಚರವಾಯಿತು. ತಮ್ಮ ವಿಚಾರ ಆಚಾರಗಳನ್ನು ಆಡಳಿತದವರು ತಡೆಗಟ್ಟುತ್ತಿರುವದನ್ನು ಅವರು ನೋಡಿದರು. ಉಲ್ಲಾಸವಿಲ್ಲ; ಸ್ವಾತಂತ್ರ್ಯವಿಲ್ಲ! ಇರುಳಿನಲ್ಲಿ ತಾವು ನರಳುತ್ತಿರುವೆವೆಂಬು ದನ್ನು ಅವರು ಅರಿತರು. ಈ ದಾರುಣ ಸ್ಥಿತಿಯನ್ನು ಇಲ್ಲವಾಗಿಸುವದು ಹೇಗೆ?

ಸ್ವಾಧೀನತೆಯ ಬೆಳಕನ್ನು ಮರಳಿ ಪಡೆಯುವದು ಹೇಗೆ? ತಮ್ಮನ್ನಂಟಿಕೊಂಡಿರುವ ಜಡತನದ ಪಿಡುಗನ್ನು ನಿವಾರಿಸುವದು ಹೇಗೆ? ಈ ಎಲ್ಲ ಪ್ರಶ್ನೆಗಳಿಗಿದ್ದ ಉತ್ತರವು ಒಂದೇ ಒಂದು ಮಾತು ಮಾತ್ರವಾಗಿದ್ದಿತು; ಅದೆಂದರೆ "ವಿದ್ರೋಹವಲ್ಲದೆ ಬೇರೆ ದಾರಿಯಿಲ್ಲ!"

"ವಿದ್ರೋಹ!" ಈ ಶಬ್ದವು ಜನರ ಎದೆಗಳನ್ನು ನಡುಗಿಸಿತು. ಆಡಳಿತಗಾರರಿಗೆ ವಿರುದ್ಧವಾಗಿ ಬಂಡು ಮಾಡುವದೆಂದರೆ, ವಿಪತ್ತನ್ನು ಮೈ ಮೇಲೆ ಸೆಳೆದುಕೊಂಡ ಹಾಗೆಯೇ ಎಂದು ಜನರು ವಿಚಾರಿಸಿದ್ದರು. ಆಡಳಿತಗಾರರು ತಮಗೆ ನೀಡಬಹುದಾದ ವಿವಿಧ ಚಿತ್ರ ಹಿಂಸೆಗಳ ರೂಪಗಳು ಜನರ ಮನಗಳಲ್ಲಿ ಮೂಡಿದವು. ಭಯವು ಅವರ ನೆತ್ತರನ್ನು ಹೆಪ್ಪುಗಟ್ಟುವಂತೆ ಮಾಡಿತು. ತಾವು ಅನುಭವಿಸುತ್ತಿದ್ದ ದುರಿತಗಳ ಪರಿಹಾರವಾಗಬೇಕೆಂಬ ಬಯಕೆಯು ಜನರ ಎದೆಗಳಲ್ಲಿದ್ದಿತು. ಸ್ವಾತಂತ್ರ್ಯವನ್ನು ಸಂಪಾದಿಸಬೇಕೆಂಬ ಆಗ್ರಹವು ಅವರಿಗೆ ಇಲ್ಲನೆ ಇರಲಿಲ್ಲ; ಆದರೆ ಸ್ವಾತಂತ್ರ್ಯಕ್ಕೆ ಆವಶ್ಯಕವೆನಿಸಿದ ಬೆಲೆಯನ್ನು ನೀಡಲು ಮಾತ್ರ ಅವರು ಸಿದ್ಧರಾಗಿರಲಿಲ್ಲ. ಅಸಹನೀಯ ಸಂಕಟಗಳ ಹೊರೆಗಳು ಜನರ ಮಸ್ತಕಗಳ ಮೇಲಿದ್ದವು. ದಾಸ್ಯದ ಶೃಂಖಲೆಗಳು ಅವರ ಕೈ ಕಾಲುಗಳನ್ನು ಬಿಗಿದಿದ್ದವು. ತಮ್ಮನ್ನು ಆವರಿಸಿದ ಸಂಕೋಲೆಯನ್ನು, ತಾವು ಹೊತ್ತಿದ್ದ ಹೊರೆಗಳನ್ನು ದೂರ ಒಗೆಯಲು ಜನರು ಧೈರ್ಯಪಡಲಿಲ್ಲ. ಅಂಜಿಕೆ ಮತ್ತು ಸತ್ವಶೂನ್ಯತೆಗಳ ಮನೆಗಳಾಗಿದ್ದವು ಜನರ ಎದೆಗಳು. ಎದ್ದೇಳಲು, ತಮ್ಮಲ್ಲಿದ್ದ ಕ್ಷಾತ್ರ ತೇಜವನ್ನು ಹೊರಗೆ ಹರಡಲು ಜ್ಞಾನಾನಂದನು ಮಾಡಿದ ಉಪದೇಶವು ಜನರನ್ನು ದಿಗಿಲುಗೊಳಿಸಿದುದರಲ್ಲಿ ಆಶ್ಚರ್ಯವಿಲ್ಲ. ತಮ್ಮಲ್ಲಿದ್ದ ಚೈತನ್ಯದ ಅರಿವು ಜನರಿಗಿರಲಿಲ್ಲ; ಸ್ವಾಧೀನತೆಯನ್ನು ಪಡೆಯಬೇಕಾದರೆ ಆತ್ಮಾಭಿಮಾನವು ಅತ್ಯಾವಶ್ಯಕವಾಗಿದೆ. ಈ ಆತ್ಮಾಭಿಮಾನವೇ ಇಲ್ಲದೆ ಹೋದರೆ, ತನ್ನ ಶತ್ರುಗಳನ್ನು ಮನುಷ್ಯನು ಎದುರಿಸಲಾರನು. ದಾಸ್ಯದ ಕೆಸರಿನ ಕೂಪದಲ್ಲಿ ಅವನು ಕೊಳೆಯುವನಲ್ಲದೆ, ಇನ್ನೊಂದು ದಡವನ್ನು ಸೇರಲು ಅವನಿಗೆ ಸಾಧ್ಯವಾಗದು. ನಿದ್ರೆಯಿಂದ ಜಾಗೃತನಾಗಬೇಕು; ಸ್ವಾಭಿಮಾನವು ಹೃದಯದಲ್ಲಿ ಪ್ರಜ್ವಲಿಸಬೇಕು; ಸ್ವಾತಂತ್ರ್ಯದ ನೀರಡಿಕೆಯು ಅವನಿಗೆ ಉಂಟಾಗಬೇಕು. ಹಾಗಾದರೆ ಮಾತ್ರ ಸ್ವಾಧೀನತೆಯನ್ನು ಸಾಧಿಸಲು ಆತನು ಶಕ್ತನಾಗುವನು; ಆದರೆ ಜನರ ಎದೆಗಳಲ್ಲಿ ಆ ನೀರಡಿಕೆಯು ಹುಟ್ಟಿರಲಿಲ್ಲ; ಆತ್ಮಾಭಿಮಾನದ ಅಗ್ನಿಯು ಉರಿಯ ತೊಡಗಿರಲಿಲ್ಲ ಆದ್ದರಿಂದ

ರಿಂದ ಜ್ಞಾನಾನಂದನ 'ವಿದ್ರೋಹ'ವೆಂಬ ಮಂತ್ರವು ಜನರನ್ನು ದಿಗಿಲಿಗಿಕ್ಕಿತು!

ಜನರ ಈ ಹೇಡಿತನವನ್ನೂ ಸತ್ವಶೂನ್ಯತೆಯನ್ನೂ ಕಂಡು ಜ್ಞಾನಾನಂದನು ನಿರಾಶನಾಗಲಿಲ್ಲ. ಬಹು ಕಾಲದಿಂದ ದಾಸ್ಯದ ಕತ್ತಲೆಯಲ್ಲಿ ನರಳುತ್ತಿರುವವರಿಗೆ ಸ್ವಾತಂತ್ರ್ಯಭಾಸ್ಕರನ ಉಜ್ವಲೋಜ್ವಲ ರಶ್ಮಿಗಳು ಸಹಿಸಲಾಗದಷ್ಟು ತೀಕ್ಷ್ಣವಾಗಿ ತೋರುವುವೆಂಬುದನ್ನು ಜ್ಞಾನಾನಂದನು ಅರಿತಿದ್ದನು. ಕತ್ತಲೆಯಲ್ಲಿ ನರಳುತ್ತಿರುವವನ ಕಣ್ಣುಗಳು ತೀಕ್ಷ್ಣವಾದ ಪ್ರಕಾಶವನ್ನು ನೋಡಲಾರವು; ಆ ಬೆಳಕನ್ನು ನೋಡುವಾಗ ಅವರ ದೃಷ್ಟಿಗಳು ಕುರುಡಾದಂತಾಗುವವು; ಪರದಾಸ್ಯದಲ್ಲಿ ನರಳತಕ್ಕ ಜನರಲ್ಲಿ ಸತ್ವವಾಗಲೀ, ಕ್ಷಾತ್ರತೇಜವಾಗಲೀ ಇರಲಾರವು. ಆದುದರಿಂದ ಜನರಲ್ಲಿ ಧೈರ್ಯವೂ, ವಿದ್ರೋಹ ಮನಸ್ಥಿತಿಯೂ ಹುಟ್ಟಬೇಕಾದರೆ ಕಾಲವಿಲಂಬವಾಗುವದೆಂಬುದರ ಅರಿವು ಜ್ಞಾನಾನಂದನಿಗಿದ್ದಿತು. ಜನರ ಎದೆಗಳಲ್ಲಿ ಸ್ವಾತಂತ್ರ್ಯದ ಕಿಡಿಗಳು ಪ್ರಜ್ವಲಿಸಬೇಕಾದರೆ, ಅವರಲ್ಲಿ ಹರಡಿದ್ದ ದಾಸ ಮನೋಭಾವನೆಯು ಇಲ್ಲದಾಗಬೇಕೆಂಬುದನ್ನು ಅವನು ತಿಳಿದಿದ್ದನು. ಆದುದರಿಂದ ಅವನು ಜನಜಾಗೃತಿಗಾಗಿ ಹೆಣಗಿದನು. ಜ್ಞಾನಾನಂದನು ಜನರಿಗೆ ಹೀಗೆಂದು ಹೇಳಿದನು: "ನಿಮ್ಮ ಜೀವನವು ಸಂಕಟಪರಿಪೂರ್ಣವಾದುದೆಂಬುದು ನಿಮಗೆ ತಿಳಿದೇ ಇದೆ. ನೀವು ಕೆಸರಿನ ಹೊಂಡದಲ್ಲಿ ನರಳುತ್ತಿದ್ದೀರಿ. ಈ ಕುನ್ನಿ ಬದುಕನ್ನು ಪರಿತ್ಯಜಿಸಿ ಮನುಷ್ಯರಂತೆ ಬಾಳುವ ಧೈರ್ಯವು ನಿಮ್ಮಲ್ಲಿಲ್ಲ. ಜೀವನವನ್ನು ಇರುಳಿನಲ್ಲಿ ಸಾಗಿಸುವದರಿಂದ ಯಾವ ಅಭ್ಯುದಯವೂ ಉಂಟಾಗದು. ಪ್ರಯತ್ನಿಸಬೇಕು; ಮನುಷ್ಯರಂತೆ ಬಾಳಲು ಎದೆಗಾರಿಕೆಯುಳ್ಳವರಾಗಬೇಕು. ಈ ದಾರುಣ ಸ್ಥಿತಿಯನ್ನು ಹೋಗಲಾಡಿಸಲು ವಿದ್ರೋಹವಲ್ಲದೆ ಬೇರೆ ದಾರಿಯಿಲ್ಲ. ಸುಖ ಶಾಂತಿಗಳು ನಮ್ಮ ನಾಡಿನಲ್ಲಿ ನೆಲಿಸಬೇಕಾದರೆ, ಜನತೆಯು ತ್ಯಾಗಕ್ಕೆ ಸಿದ್ಧವಾಗತಕ್ಕದ್ದು. ತ್ಯಾಗಕ್ಕೂ ಪ್ರಯತ್ನಕ್ಕೂ ಸಿದ್ಧರಿಲ್ಲದವರು ಸುಖ ಶಾಂತಿಗಳಿಗಾಗಿ ಹಂಬಲಿಸುವದು ವ್ಯರ್ಥವಾಗಿದೆ. ಆದುದರಿಂದ ನೀವು ಧೈರ್ಯವನ್ನು ಹೊಂದಿರಿ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಿಮ್ಮ ಪಾಲನ್ನು ನೆರವೇರಿಸಿರಿ!"

ಎದೆಗುಂದಿದ ಜನರಲ್ಲಿ ಜ್ಞಾನಾನಂದನ ಉಪದೇಶಗಳು ಒಂದು ಹೊಸ ಬೆಳಕನ್ನು ಹುಟ್ಟುವಂತೆ ಮಾಡಿದವು. ಪ್ರಯತ್ನಿಸುವ ಎದೆಗಾರಿಕೆಯು ಜನರಲ್ಲಿಲ್ಲದಿದ್ದರೂ, ಜ್ಞಾನಾನಂದನ ಕಲಾಪಗಳಲ್ಲಿ ಅವರಿಗೆ ಒಂದು ವಿಧದ ಸಹಾನುಭೂತಿಯು ಹುಟ್ಟಿತು. ಈ ಮನುಷ್ಯನಿಂದ ತಮ್ಮ ಸಂಕಟಗಳು ಪರಿ

ಹಾರವಾಗುವವೆಂಬ ನಂಬಿಕೆ ಜನರ ಎದೆಗಳಲ್ಲಿ ಮೂಡಿತು. ಅಂತೂ ಜ್ಞಾನಾನಂದನು ಚಾತುರ್ಯದಿಂದ ಜನರ ಮನಸ್ಸುಗಳನ್ನು ತನ್ನ ಕಡೆ ತಿರುಗಿಸಿದನು.

ರಾಜದುರ್ಗದ ಜನರಲ್ಲಿ ಜ್ಞಾನಾನಂದನು ಪರಿಣಾಮವನ್ನು ಉಂಟು ಮಾಡಿದನು. ವಿದ್ರೋಹಿಗಳು ರಾಜದುರ್ಗವನ್ನು ಕರಗತ ಮಾಡಿಕೊಂಡಾಗ ರಾಜದುರ್ಗದ ಜನರು ಭಯಪೀಡಿತರಾಗಿದ್ದರು. ಪಠಾಣ ಪ್ರಜೆಗಳಂತೂ ಒಂದೂ ವಿದ್ರೋಹಿಗಳಿಂದ ತಮಗೆ ಯಾವ ವಿಪತ್ತು ಬರುವದೋ ಎಂಬ ಭೀತಿಯಿಂದ ತಲ್ಲಣಗೊಂಡಿದ್ದರು. ಕೆಲವು ಮಂದಿ ದುಷ್ಟರು ಈ ಸಂದರ್ಭವನ್ನು ತಮ್ಮ ಸ್ವಾರ್ಥತೆಯನ್ನು ಸಾಧಿಸಿಕೊಳ್ಳಲುಪಯೋಗಿಸಿದರು. ಒಂದು ದಿನ ರಾತ್ರಿ ಕೆಲವು ಮಂದಿ ನೀಚರು ಓರ್ವ ಪಠಾಣ ಕನ್ಯೆಯನ್ನು ಜ್ಞಾನಾನಂದನ ಬಳಿಗೆ ಕರೆದುಕೊಂಡು ಬಂದರು. ಅವರು ತಮ್ಮ ಈ ಕೃತ್ಯದಿಂದ ಜ್ಞಾನಾನಂದನು ಸಂತುಷ್ಟನಾಗುವನೆಂದು ಭಾವಿಸಿದ್ದರು. ಅವರು ಜ್ಞಾನಾನಂದನಿಗೆ ವಂದಿಸಿ ಹೀಗೆ ಹೇಳಿದರು: "ಸ್ವಾಮೀ, ತಮಗೆ ಸಮರ್ಪಿಸಲು ಒಂದು ಕಾಣಿಕೆಯನ್ನು ತಂದಿರುತ್ತೇವೆ."

"ಏನದು?" ದುಷ್ಟರ ಹಂಚಿಕೆ ತಿಳಿಯದೆ ಜ್ಞಾನಾನಂದನು ಕೇಳಿದನು.

ಆ ನೀಚರು ತಾವು ಕರೆದುಕೊಂಡು ಬಂದಿದ್ದ ಪಠಾಣ ಯುವತಿಯನ್ನು ಜ್ಞಾನಾನಂದನಿಗೆ ತೋರಿಸಿದರು. ಆ ತರುಣಿಯನ್ನು ಕಾಣುತ್ತಲೇ ಈ ಜನರ ಹಂಚಿಕೆಯೇನೆಂಬದು ಜ್ಞಾನಾನಂದನಿಗೆ ತಿಳಿಯಿತು. ಅವನ ಕಣ್ಣುಗಳು ಕೆಂಡಗಳನ್ನು ಕಾರಿದವು. ಮೈಯು ನಡುಗಿತು. ಅವನು ತೀಕ್ಷ್ಣ ಸ್ವರದಲ್ಲಿ ಆ ಸ್ವಾರ್ಥಿಗಳನ್ನು ಪ್ರಶ್ನಿಸಿದ: "ಈಕೆಯನ್ನು ನೀವು ಕರೆದುಕೊಂಡು ಬಂದಿರುವುದೇಕೆ?"

"ಸ್ವಾಮಿ, ಯಾವರು ನಮ್ಮ ಕಾಣಿಕೆಯಿಂದ ಸಂತುಷ್ಟರಾಗಬೇಕೆಂಬುದು ನಮ್ಮ ವಿಚಾರವಾಗಿದೆ."

"ನಿಮಗೆ ಅಕ್ಕ-ತಂಗಿಯರಿಲ್ಲವೇ?" ಇದಾಗಿದ್ದಿತು ಜ್ಞಾನಾನಂದನ ತುಟಿಗಳಿಂದ ಉದುರಿದ ಪ್ರಶ್ನೆಯು.

ಆ ದುರ್ಜನರು ಜ್ಞಾನಾನಂದನಿಗೆ ಜಬಾಬುಕೊಡಲಿಲ್ಲ. ಜ್ಞಾನಾನಂದನು ಕೋಪಸಮ್ಮಿಶ್ರವಾದ ಸ್ವರದಲ್ಲಿ ಹೇಳಿದನು: "ನಿಮಗೆ ಅಕ್ಕತಂಗಿಯರಿಲ್ಲವೇ? ನಾವು ಪ್ರಯತ್ನಿಸುತ್ತಿರುವದು ನಮ್ಮ ವಿಷಯವಾಸನೆಯ ಸಂತೃಪ್ತಿಗಾಗಿಯಲ್ಲ. ಸ್ವಾತಂತ್ರ್ಯಸಾಧನೆಗಾಗಿವೆ. ನಮ್ಮ ಉದ್ದೇಶವು ವನಿತೆಯರ

ಮಾನವನ್ನು ಕಾಯುವದು ನಮ್ಮ ಪಾವನ ಕರ್ತವ್ಯವಾಗಿವೆ. ನಾವು ಸ್ಥಾಪಿಸಲಾಗ್ರಹಿಸುತ್ತಿರುವ ರಾಜ್ಯದಲ್ಲಿ ಇವರು ಹಿಂದುಗಳು, ಇವರು ಪಠಾಣರು ಎಂಬ ವ್ಯತ್ಯಾಸವಿರದು. ಮನುಷ್ಯರೆಲ್ಲರಿಗೂ ಅನ್ಯರಿಗೆ ಕೇಡು ಬಯಸದೆ ಜೀವಿಸತಕ್ಕ ಸ್ವಾತಂತ್ರ್ಯವಿದೆ. ಹಿಂದುಗಳನ್ನು ನಾವು ಮಾನಿಸುವಂತೆಯೇ ಪಠಾಣರನ್ನು ಮಾನಿಸುವದೂ ಅತ್ಯಾವಶ್ಯಕವಾಗಿದೆ. ಏಕೆಂದರೆ ಅವರೂ ನಮ್ಮಂತೆಯೆ ಮನುಷ್ಯರಿರುತ್ತಾರೆ. ನಾವು ಪಠಾಣ ಮಹಿಳೆಯರ ಮಾನವನ್ನು ಕಾಯಲು ಬದ್ಧಕಂಕಣರಾಗಿರುತ್ತೇವೆ. ನಿಮ್ಮ ಈ ವಿವೇಕಶೂನ್ಯವಾದ ಕೆಲಸವು ನನ್ನ ಕೋಪವನ್ನು ಪ್ರಜ್ವಲಿಸುವಂತೆ ಮಾಡಿದೆ. ಈ ಹೀನ ಕೆಲಸದಿಂದ ನಾವು ತೃಪ್ತಿಯನ್ನು ಹೊಂದಲಾರೆವು. ಇದು ನಿಮ್ಮ ಮೊದಲನೆಯ ಅಪರಾಧವಾದುದರಿಂದ ನಿಮ್ಮನ್ನು ಈ ಸಲ ಕ್ಷಮಿಸಿರುತ್ತೇನೆ. ಇನ್ನು ಮುಂದೆ ಈ ತರದ ಹೀನ ಕೆಲಸಕ್ಕೆ ಕೈ ಹಾಕಬೇಡಿ. ಈ ತರದ ಮೃಗೀಯ ವ್ಯಾಪಾರಗಳಿಗೆ ನೀವು ಕೈ ಹಾಕುವದಾದರೆ ಕ್ರೂರವಾದ ದಂಡನೆಯನ್ನು ಅನುಭವಿಸಬೇಕಾದೀತು!"

ಜ್ಞಾನಾನಂದನ ಈ ನುಡಿಗಳು ಆ ನೀಚರನ್ನು ಎಚ್ಚರಿಸಿದವು. ತಮ್ಮ ವಿಚಾರದಂತೆ ಜ್ಞಾನಾನಂದನೂ ಇತರ ವಿದ್ರೋಹಿಗಳೂ ದುರ್ಬಲ ಚಿತ್ತವೃತ್ತಿಯುವರಲ್ಲವೆಂಬುದು ಅವರಿಗೆ ಮನನವಾಯಿತು. ತಮ್ಮ ಕುಟಿಲತೆಗೆ ಜ್ಞಾನಾನಂದನು ಸಿಗತಕ್ಕವನಲ್ಲವೆಂಬುದು ಆ ಜನರಿಗೆ ವ್ಯಕ್ತವಾಯಿತು. ಅವರು ಲಜ್ಜಿತರಾದರು; ಜ್ಞಾನಾನಂದನ ಮುಂದೆ ತಮ್ಮ ಶಿರಸ್ಸುಗಳನ್ನು ತಗ್ಗಿಸಿದರು.

ತಲೆ ತಗ್ಗಿಸಿ ಒಂದು ಮೂಲೆಯಲ್ಲಿ ನಿಂತಿದ್ದ ಮಹಿಳೆಯ ಕಡೆಗೆ ಜ್ಞಾನಾನಂದನು ತನ್ನ ದೃಷ್ಟಿಯನ್ನು ಹೊರಳಿಸಿದನು. ದಯಾಪೂರ್ಣವಾದ ನುಡಿಗಳು ಜ್ಞಾನಾನಂದನ ತುಟಿಗಳಿಂದ ಹೊರಬಿದ್ದವು: "ತಂಗೀ, ಈ ದುರಾತ್ಮರು ನಿನ್ನನ್ನು ತೊಂದರೆಗೊಳಿಸಿದರೆಂಬದನ್ನು ತಿಳಿಯಲು ನನಗೆ ತುಂಬಾ ವಿಷಾದವಾಗುತ್ತದೆ. ನನ್ನ ಕಡೆಯ ಕೆಲವು ದಂಡಾಳುಗಳಿಗೆ ನಿನ್ನನ್ನು ನಿನ್ನ ವಸತಿಗೆ ತಲುಪಿಸಲು ಹೇಳುವೆ; ನಮ್ಮಿಂದ ನಿನಗೆ ಯಾವ ಕೇಡೂ ಸಂಭವಿಸದು. ಹೆದರಬೇಡ; ವಿದ್ರೋಹಿಗಳು ಸತ್ಯವಸ್ತು, ಧರ್ಮ ಇವುಗಳನ್ನು ತಮ್ಮ ಕರ್ಮಪದ್ಧತಿಯ ತಳಹದಿಯಾಗಿ ಸ್ವೀಕರಿಸಿದವರಾಗಿರುತ್ತಾರೆ. ನಮ್ಮಿಂದ ಅಧರ್ಮವಾದ ಯಾವ ಕೆಲಸವೂ ಘಟಿಸದು. ನಿನ್ನ ಮಾನ-ಮರ್ಯಾದೆಯನ್ನು ಸುರಕ್ಷಿತವಾಗಿ ಕಾಯುವ ಕೆಲಸ ನಮ್ಮದು."

ಜ್ಞಾನಾನಂದನ ಈ ಮಾತುಗಳು ಆ ಪಠಾಣ ಮಹಿಳೆಯ ಅಂಜಿಕೆ

ಯನ್ನು ಹೋಗಲಾಡಿಸಿದವು. ತನ್ನ ಶೀಲಕ್ಕೆಲ್ಲಿ ಧಕ್ಕೆ ತಗಲುವದೋ ಎಂಬ ಅಂಜಿಕೆಯು ಅವಳಿಗಿದ್ದಿತು ವಿದ್ರೋಹಿಗಳೆಂದರೆ ಮನುಷ್ಯಾಕಾರದ ರಾಕ್ಷಸರೆಂದು ಅವಳ ಈ ವರೆಗಿನ ಭಾವನೆಯಾಗಿದ್ದಿತು. ವಿದ್ರೋಹಿಗಳಿಂದ ಕೇಡನ್ನಲ್ಲದೇ ಇನ್ನಾವುದನ್ನೂ ಅವಳು ಅಪೇಕ್ಷಿಸಿರಲಿಲ್ಲ; ಆದರೆ ಜ್ಞಾನಾನಂದನ ಮಾತುಗಳು ಅವಳ ಈ ಅಭಿಪ್ರಾಯವು ಪರಿವರ್ತನೆಯನ್ನು ಹೊಂದುವಂತೆ ಮಾಡಿದವು. ವಿದ್ರೋಹಿಗಳೆಂದರೆ ರಾಕ್ಷಸ ಸ್ವಭಾವದವರಲ್ಲ; ದಯಾ ಸಹಾನುಭೂತಿಗಳಿಂದ ತುಂಬಿದ ಮನುಷ್ಯರಿರುತ್ತಾರೆಂದು ಅವಳು ತಿಳಿದುಕೊಂಡಳು. ದುರಾತ್ಮರು ಅಸಹಾಯಕಳಾದ ಅವಳನ್ನು ಜ್ಞಾನಾನಂದನಿಗೆ ಒಪ್ಪಿಸಿದರೂ, ಅವನು ಅವಳಿಗೆ ಯಾವ ಕೇಡನ್ನೂ ಮಾಡಲಿಲ್ಲ. ಅವನು ಅವಳನ್ನು ಗೌರವಿಸಿದನು; ಅವಳ ಮಾನವನ್ನು ಕಾಯುವಂತೆ ಭರವಸೆಯನ್ನು ನೀಡಿದನು. ಆ ಪಠಾಣ ಯುವತಿಯ ಹೃದಯದಲ್ಲಿ ವಿದ್ರೋಹಿಗಳ ಬಗ್ಗೆ ಗೌರವವು ಜನಿಸಿತು.

ಜ್ಞಾನಾದಂದನು ಆ ದುರಾತ್ಮರಿಗೆ ಒಳ್ಳೆಯ ದಾರಿಯನ್ನು ಅವಲಂಬಿಸಬೇಕೆಂದು ಉಪದೇಶಿಸಿದುದಲ್ಲದೆ, ಈ ತರದ ನೀಚ ಕೆಲಸಗಳಿಗೆ ಕೈ ಹಾಕುವುದಾದರೆ ಕಠಿಣ ದಂಡನೆಯನ್ನು ನೀಡಬೇಕಾಗುವದೆಂದು ಎಚ್ಚರಿಕೆ ಕೊಟ್ಟನು. ಜ್ಞಾನಾನಂದನ ನಿರ್ದೇಶದಂತೆ ದಂಡಾಳುಗಳು ಆ ಪಠಾಣ ಕನ್ಯೆಯನ್ನು ಆಕೆಯ ವಸತಿಗೆ ಕರೆದುಕೊಂಡು ಹೋಗಿ ಬಿಟ್ಟರು

ಜ್ಞಾನಾನಂದನ ಈ ಉದ್ಯಮವು ಪಠಾಣರಲ್ಲಿ ಒಂದು ಹೊಸ ವಿಚಾರವನ್ನು ಹುಟ್ಟಿಸಿತು. ತಾವು ವಿಚಾರಿಸಿದಂತೆ ಹಿಂದೂ ವಿದ್ರೋಹಿಗಳು ದುರಾತ್ಮರಲ್ಲ; ಸತ್ಯ ಮತ್ತು ಧರ್ಮಗಳ ಮೇರೆಯನ್ನು ಮೀರಿ ನಡೆಯತಕ್ಕವರಲ್ಲ, ಎಂಬ ಸಂಗತಿಗಳು ಅವರಿಗೆ ತಿಳಿದವು. ಪಠಾಣರನ್ನು ಹಿಂದೂ ವಿದ್ರೋಹಿಗಳು ಪೀಡಿಸಿ ಹಿಂಸಿಸುವರೆಂದು ಅವರು ಈ ವರೆಗೆ ನಂಬಿಕೊಂಡಿದ್ದರು; ಆದರೆ ಪಠಾಣರನ್ನು ವಿದ್ರೋಹಿಗಳು ಹಿಂಸಿಸಲಿಲ್ಲ. ಪಠಾಣ ಮಹಿಳೆಯರ ಶೀಲವನ್ನು ಅಪಹರಿಸಲು ಹೊರಡಲಿಲ್ಲ. ವಿದ್ರೋಹಿಗಳ ಈ ನಿಷ್ಪಕ್ಷವಾದ ಬುದ್ಧಿಯು ಪಠಾಣರನ್ನು ಆಕರ್ಷಿಸದಿರಲಿಲ್ಲ. ಹಿಂದೂ ವಿದ್ರೋಹಿಗಳ ಆಳ್ವಿಕೆಯು ತಮ್ಮ ಸುಖಶಾಂತಿಗಳಿಗೆ ವಿಘ್ನವನ್ನುಂಟು ಮಾಡದೆಂದು ಅವರು ಗ್ರಹಿಸತೊಡಗಿದರು. ಜ್ಞಾನಾನಂದನ ವಿದ್ವೇಷರಹಿತವಾದ ಧೋರಣೆಯು ಪಠಾಣ ಪ್ರಜೆಗಳ ಮೈತ್ರಿಯನ್ನು ಸಂಪಾದಿಸಲು ಪರ್ಯಾಪ್ತವಾದುದಾಯಿತು.

ಸಾಧಾರಣ ಪಠಾಣನಿವಾಸಿಗಳು ವಿದ್ವೇಷದ ಬಣ್ಣವನ್ನು ಬಳಿದುಕೊಂ

ಡವರಾಗಿರಲಿಲ್ಲ. ಹಿಂದುಗಳ ಸಹಾಯ ಸಲಕರಣೆಗಳಿಲ್ಲವೆ ಈ ನಾಡಿನಲ್ಲಿ ಬಾಳುವದು ಅಶಕ್ಯವೆಂಬುದನ್ನು ಅವರು ಮನಗಂಡಿದ್ದರು. ಅವರ ಮಾನು ಸಿಕ ಹೃದಯಗಳು ಅನ್ಯ ಧರ್ಮದವರ ಸಹಾಯ ಸಲಕರಣೆಗಳನ್ನು ಕಾಂಕ್ಷಿ ಸುತ್ತಿದ್ದವು. ಅಧಿಕಾರ ಸಂಪನ್ನರಾದ ಪಠಾಣರು ವಿಧರ್ಮೀಯರಾದ ಪ್ರಜೆ ಗಳನ್ನು ಹಿಂಸಿಸುತ್ತಿದ್ದರು, ಪೀಡಿಸುತ್ತಿದ್ದರೆಂಬುದು ನಿಜವು. ಈ ಪೀಡನೆಯ ಕಾರಣವು ಧರ್ಮಾಭಿಮಾನವಲ್ಲ; ಸ್ವಾರ್ಥತತ್ಪರತೆಯಾಗಿದ್ದಿತೆಂದು ಹೇಳ ಬಹುದು. ಧರ್ಮದ ಹೆಸರನ್ನು ಹೇಳಿ ಆಗಿನ ಪಠಾಣ ಅಧಿಕಾರಿಗಳು ತಮ್ಮ ಸ್ವಾರ್ಥತೆಯನ್ನು ಸಾಧಿಸುತ್ತಿದ್ದರು; ಆದರೆ ಸಾಧಾರಣ ಪಠಾಣ ಪ್ರಜೆಗಳು ಮತವಿದ್ವೇಷದಿಂದ ಕೂಡಿದವರಾಗಿರಲಿಲ್ಲ. ಅವರ ವ್ಯವಹಾರಗಳಿಗೆ ಹಿಂದು ಗಳ ಸಾಹಾಯ ಸಲಕರಣೆಗಳು ಅತ್ಯಾವಶ್ಯಕವಾಗಿದ್ದವು. ಆದುದರಿಂದ ಜನ ಸಾಮಾನ್ಯರನ್ನು ಮತವಿದ್ವೇಷವು ಸ್ಪರ್ಶಿಸಿರಲಿಲ್ಲ.

ರಾಜದುರ್ಗದಲ್ಲಿ ಪಠಾಣರ ಶಾಸನ ಚಕ್ರವು ನಾಶವಾಗಿ ಅದರ ಸ್ಥಾನ ವನ್ನು ವಿದ್ರೋಹಿಗಳ ಆಡಳಿತವು ಆಕ್ರಮಿಸಲು ಪಠಾಣ ಪ್ರಜೆಗಳಿಗೆ ತುಸ ಭಯಾಂಶತೆಗಳು ಉಂಟಾಗದಿರಲಿಲ್ಲ. ಹಿಂದುಗಳು ತಮ್ಮ ಸೇಡನ್ನು ತೀರಿಸಿ ಕೊಳ್ಳುವ ಹವ್ಯಾಸಕ್ಕೆ ಬೀಳುತ್ತಾರೆಂಬುದು ಅವರ ಭಾವನೆಯಾಗಿದ್ದಿತು; ಆದರೆ ಜ್ಞಾನಾನಂದನ ನೇತೃತ್ವದಲ್ಲಿ ನಿರ್ಮಿತವಾದ ಹೊಸ ಶಾಸನಸಂಸ್ಥೆಯು ಸೇಡನ್ನು ತೀರಿಸಿಕೊಳ್ಳುವ ಹವ್ಯಾಸದಲ್ಲಿ ಸಿಕ್ಕಿ ಬೀಳಲಿಲ್ಲ. ಪಠಾಣರ ಧಾರ್ಮಿಕ ಆಚಾರ ವಿಚಾರಗಳನ್ನು ಆತಂಕಪಡಿಸಲಿಲ್ಲ. ಅನ್ಯ ಧರ್ಮಾವಲಂಬಿಯೆಂಬ ಕಾರಣದಿಂದ ಯಾವ ಪಠಾಣನೂ ವಿದ್ರೋಹಿಗಳ ಆಡಳಿತದಲ್ಲಿ ದಂಡನೆಗೆ ಗುರಿಯಾಗಲಿಲ್ಲ. ಪಠಾಣ ಮಹಿಳೆಯರಾದರೂ ಸುರಕ್ಷಿತವಾಗಿದ್ದರು. ಪಠಾ ಣರ ಆಳ್ವಿಕೆಯಲ್ಲಿ ದೊರಕದಿದ್ದ ಸುಖ ಶಾಂತಿಗಳು ವಿದ್ರೋಹಿಗಳ ಆಳ್ವಿಕೆ ಯಲ್ಲಿ ಲಭಿಸಿದವು. ಈ ಕಾರಣಗಳಿಂದ ಪಠಾಣರು ವಿದ್ರೋಹಿಗಳೊಡನೆ ವಿದ್ವೇಷವನ್ನು ಪ್ರದರ್ಶಿಸಲಿಲ್ಲ. ವಿದ್ರೋಹಿಗಳಿಗೆ ಪಠಾಣ ಪ್ರಜೆಗಳ ಬೆಂಬಲ ದೊರಕದಿದ್ದರೂ ರಾಜದುರ್ಗದ ಪಠಾಣ ಪ್ರಜೆಗಳ ಶತ್ರುತ್ವವನ್ನು ಕಟ್ಟಿ ಕೊಳ್ಳಬೇಕಾಗಿ ಬರಲಿಲ್ಲ.

ಹೀಗೆ ರಾಜದುರ್ಗದಲ್ಲಿ ವಿದ್ರೋಹಿಗಳ ಅಧಿಕಾರವು ಸುಸಂಘಟಿತವಾ ಯಿತು. ಹೊರಗಿನ ಶತ್ರುಗ... ...ದ್ರೋಹಿಗಳು ಎದುರಿಸಬೇಕಾಗಿದ್ದಿತು. ಅವರ ದಾರಿಯು ಅಷ್ಟು ಸುಗ... ಆದರೆ ಜ್ಞಾನಾನಂದನ ಕಾರ್ಯ

ವಕ್ಷತೆ, ತೀಕ್ಷ್ಣಬುದ್ಧಿ ಇವುಗಳು ರೂಪನಗರವನ್ನು ಸ್ವಾಧೀನತೆಯ ಕಡೆಗೆ ಒಯ್ಯಲು ಪರ್ಯಾಪ್ತವಾದವುಗಳಾಗಿದ್ದವು.

---

## ೧೭ ಹೇಮಚಂದ್ರ.

ಮಧ್ಯಾಹ್ನ ಸಮಯವಾಗಿರಬಹುದು; ಜ್ಞಾನಾನಂದನು ತನ್ನ ವಸತಿಯಲ್ಲಿ ಇದ್ದನು. ಕುಮಾರ ಅಮರಸಿಂಹನು ತನ್ನ ಆಚಾರ್ಯನೊಡನೆ ಆಡಳಿತಕ್ಕೆ ಸಂಬಂಧಿಸಿದ ವಿಷಯಗಳನ್ನು ತರ್ಕಿಸುತ್ತಿದ್ದನು. ಜ್ಞಾನಾನಂದನು ಪ್ರಸನ್ನಚಿತ್ತನಾಗಿ ಕುಮಾರನಾಡುತ್ತಿದ್ದ ಮಾತುಗಳನ್ನು ಆಶ್ರಾವಿಸುತ್ತಿದ್ದನು. ಕುಮಾರನು ತನ್ನ ಆಚಾರ್ಯನೊಡನೆ ಹೀಗೆ ಹೇಳಿದನು: "ಗುರುದೇವ, ರೂಪನಗರದಿಂದ ಪಠಾಣರ ದಂಡು ಬರುತ್ತಿದೆಯೆಂಬ ಸುದ್ದಿಯು ನಮ್ಮ ಚಾರರಿಂದ ತಿಳಿದು ಬಂದಿದೆ. ಪಠಾಣರ ಒಂದು ಪ್ರಬಲವಾದ ದಂಡನ್ನೇ ನಾವು ಎದುರಿಸಬೇಕಾಗಬಹುದು."

"ಕುಮಾರ," ಜ್ಞಾನಾನಂದನ ಮೃದು ಸ್ವರವು ಹೊರಟಿತು. "ನಾವು ಸ್ವಾಧೀನ ಜೀವನದ ಭವ್ಯನಿಲಯವನ್ನು ಕಟ್ಟತೊಡಗಿರುವೆವಷ್ಟೇ? ಅದನ್ನು ಕಟ್ಟಿ ಮುಗಿಸುವೆವೆಂಬ ಆತ್ಮವಿಶ್ವಾಸವು ನಮ್ಮಲ್ಲಿರಬೇಕಾದುದು ಅತ್ಯಾವಶ್ಯಕ."

"ಗುರುದೇವ, ನಮ್ಮ ಜನರ ಆತ್ಮ ವಿಶ್ವಾಸಕ್ಕೆ ಯಾವ ಕೊರತೆಯೂ ಇರುವುದಿಲ್ಲ. ಕೊನೆಯ ತನಕ ಪ್ರಯತ್ನಿಸುವೆವೆಂಬ ಎದೆಗಾರಿಕೆಯು ಪ್ರತಿಯೊಬ್ಬನಲ್ಲಿಯೂ ಇದೆ; ಆದರೆ ಕೇವಲ ಧೈರ್ಯದಿಂದ ಮಾತ್ರ ಕಾರ್ಯಸಾಧನೆಯಾಗದಷ್ಟೇ? ಪಠಾಣರು ತಾವು ಕಳೆದುಕೊಂಡ ಪ್ರಾಂತವನ್ನು ಮರಳಿ ಪಡೆಯಲು ಪ್ರಯತ್ನಿಸದೆ ಇರಲಾರರು. ನಮಗಿಂತ ಹೆಚ್ಚಿನ ಸೇನಾಬಲವು ಅವರಿಗಿದೆ. ಅವರ ಆಯುಧಗಳು ನಮ್ಮವುಗಳಿಗಿಂತ ಉತ್ತಮವಾದವುಗಳು. ಆಹಾರ ಸಾಮಗ್ರಿಗಳ ಕೊರತೆಯು ಅವರಿಗಿಲ್ಲ. ದುರ್ಗವನ್ನು ಅವರಿಂದ ಸಂರಕ್ಷಿಸಿಕೊಳ್ಳುವುದು ಹೇಗೆಂಬುದನ್ನು ನಾವು ಚಿಂತಿಸುವುದು ಅತ್ಯಾವಶ್ಯವಾಗಿದೆ. ಇಂದಿಲ್ಲದಿದ್ದರೆ ನಾಳೆಯಾದರೂ ರೂಪನಗರದಿಂದ ಪಠಾಣರು ಬಂದೇ ಬರುವರು. ನಮ್ಮಲ್ಲಿ ಆಹಾರ ಸಾಮಗ್ರಿಗಳ ಅಭಾವವು ಹೆಚ್ಚಾಗುತ್ತಲಿದೆ. ಮುಂದೇನು ಮಾಡುವುದೆಂಬುದೊಂದು ಸಮಸ್ಯೆಯಾಗಿ ಪರಿಣಮಿಸಿದೆ."

"ಕುಮಾರ, ನೀನು ಹೇಳುವುದು ನಿಜ; ತಂತ್ರಪ್ರಯೋಗದಿಂದ ದುರ್ಗ

ವನ್ನೇನೋ ನಮ್ಮ ವಶಪಡಿಸಿಕೊಂಡು ಇಲ್ಲಿ ನಮ್ಮ ಅಧಿಕಾರವನ್ನು ಸ್ಥಾಪಿಸು ವುದಾಯಿತು. ಈಗ ನಾವು ಗೆದ್ದುಕೊಂಡಿದ್ದ ದುರ್ಗವನ್ನು ಶತ್ರುಗಳಿಂದ ಕಾಪಾಡಿಕೊಳ್ಳಬೇಕಾಗಿದೆ. ಈ ಹೋರಾಟದಲ್ಲಿ ನಮಗೆ ಜನರ ಬೆಂಬಲವು ಬೇಕು; ಆಯುಧಗಳು ಬೇಕು; ಆಹಾರ ಸಾಮುಗ್ರಿಗಳೂ ಬೇಕು. ಪಠಾಣರು ಕೊನೆಯ ತನಕ ಪ್ರಯತ್ನಿಸದೆ ಇರಲಾರರು. ನಾವು ಈ ಹೋರಾಟಕ್ಕೆ ಆವಶ್ಯ ಕರುವ ಸನ್ನದ್ಧತೆಗಳನ್ನು ಮಾಡಬೇಕಾಗಿದೆ. ನಮ್ಮ ಸೇನಾಬಲವು ಬಹು ಕಡಿಮೆಯಾದುದಾಗಿದೆ. ಆದುದರಿಂದ ಸಹಾಯಸಲಕರಣೆಗಳ ಬಗ್ಗೆ ಜನ ರನ್ನು ಯಾಚಿಸಬೇಕಾಗಿದೆ. ನಾವೇನೂ ಸ್ವಾರ್ಥಸಾಧನೆಗಾಗಿ ಪ್ರಯತ್ನಿಸುತ್ತ ಲಿಲ್ಲ; ಜನರ ಹಿತವನ್ನೇ ಕಾಂಕ್ಷಿಸಿ ಪ್ರಯತ್ನಿಸುತ್ತಿದ್ದೇವೆ. ಆದುದರಿಂದ ನಮ್ಮ ಉದ್ಯಮಗಳಿಗೆ ಸಹಾಯವನ್ನು ನೀಡಬೇಕಾದವರು ಜನರಾಗಿರುತ್ತಾರೆ ಸ್ವಾಭಿಮಾನವು ಜನರ ಹೃದಯದಲ್ಲಿದ್ದರೆ ಅವರು ಪ್ರಯತ್ನಿಸುವರು ಕುಮಾರ, ನಾವೂ ಪ್ರಯತ್ನಿಸಬೇಕು; ಜನರು ತಮ್ಮ ದಂಡಿನಲ್ಲಿ ಸೇರಿ ಸ್ವಾತಂತ್ರ್ಯಸಾಧನೆ ಗಾಗಿಉದ್ಯಮಿಸಲು ಅವರನ್ನು ಪ್ರೇರಿಸಬೇಕು. ನಾವೀಗ ಅಭಿಮುಖೀಕರಿಸುತ್ತಿ ರುವ ಸಮಸ್ಯೆಯನ್ನು ಜನರ ಮುಂದೆ ಇಡಬೇಕಾಗಿದೆ."

"ಆದರೆ! ಜನರು ನಮಗೆ ಬೆಂಬಲವನ್ನು ನೀಡುವರೆ? ನಾಡಿನ ಹಿತವನ್ನು ಚಿಂತಿಸಿ ವಿವಿಧ ಸಂಕಟಗಳಿಗೆ ಎದೆಯೊಡ್ಡುವ ಧೈರ್ಯ ಮತ್ತು ತ್ಯಾಗಗಳು ಜನರಲ್ಲಿವೆಯೇ?"

"ಕುಮಾರ, ಜನರಲ್ಲಿ ಜಾಗೃತೆಯನ್ನುಂಟುಮಾಡುವದು, ಅವರನ್ನು ಆವರಿಸಿದ ಭೀರುತ್ವವನ್ನು ಹೋಗಲಾಡಿಸುವದು ಇವುಗಳಾಗಿರುತ್ತವೆ ನಾ ವೀಗ ಮಾಡಬೇಕಾದ ಪ್ರಾರಂಭದ ಕೆಲಸಗಳು. ಯಾವ ಕಾರ್ಯವೇ ಆಗಿರಲಿ, ಅದಕ್ಕೆ ಜನರ ಬೆಂಬಲವು ದೊರಕದೆ ಹೋದರೆ ಜಯವು ಸಿಗದು ನಮ್ಮ ಸ್ವಾತಂತ್ರ್ಯಸಂಗ್ರಾಮಕ್ಕೆ ಜನರ ಬೆಂಬಲವು ಅತ್ಯಾವಶ್ಯಕವಾಗಿದೆ. ಜನರನ್ನು ವಿಚಾರಶೀಲರನ್ನಾಗಿ ಮಾಡುವದು, ಅವರ ಎದೆಗಳಲ್ಲಿ ಸ್ವಾತಂತ್ರ್ಯದಾಹ ವನ್ನು ಹುಟ್ಟಿಸುವದು ಇವುಗಳು ಅತ್ಯಾವಶ್ಯಕವಾಗಿವೆ. ವಿದ್ರೋಹವೆಂಬುದು ಕೆಲವು ಮಂದಿ ಜನರ ಕಾರ್ಯಸಮುಚ್ಚಯವಾಗಕೂಡದು. ಕೊಳೆತಿರುವ ಶಾಸನ ಸಂಪ್ರದಾಯವು ನಾಶವಾಗಬೇಕೆಂಬ ವಿದ್ರೋಹ ಮನಸ್ಥಿತಿಯು ಜನ ರಲ್ಲಿ ಹುಟ್ಟಬೇಕು. ಹಳೆಯದಾದುದನ್ನು ನಾಶಿಸದೆ ಹೊಸದನ್ನು ನಿರ್ಮಿಸಲು ಶಕ್ಯವಿಲ್ಲ. ಹಳೆದಾದ, ಉಪಯೋಗಪ್ರದವಲ್ಲದ, ಅಭ್ಯುನ್ನತಿಗೆ ಹಾನಿಕರವಾದ

ಆಡಳಿತವನ್ನು ನಿರ್ನಾಮಗೊಳಿಸಬೇಕೆಂಬ ಮನಸ್ಥಿತಿಯು ಜನರಲ್ಲಿ ಉದಯ ವಾಗಬೇಕು. ಇದಾಗಿದೆ ವಿದ್ರೋಹದ ಜೀವನಾಡಿಯು. ನಾವು ಕೆಲವು ಮಂದಿ ಪಠಾಣರ ಆಡಳಿತವನ್ನು ಅಡಿಮೇಲು ಮಾಡಲು ಪ್ರಯತ್ನಿಸುವದರಿಂದ ಅವರ ದುಷ್ಪ್ರಭುತ್ವವು ಇಲ್ಲದಾಗದು. ನಮ್ಮ ಕೈಗಳಿಗೆ ಶಕ್ತಿಯನ್ನು ನೀಡಲು ಜನರಿರ ತಕ್ಕದ್ದು. ರಾಜದುರ್ಗದಲ್ಲಿ ನಮ್ಮ ಆಡಳಿತವು ಉಳಿಯಬೇಕಾದರೆ ಜನರ ಸಹಾಯವು ನಮಗೆ ಅತ್ಯಾವಶ್ಯಕವಾಗಿದೆ. ಆ ಸಹಾಯ ಸಲಕರಣೆಗಳನ್ನು ಜನರಿಂದ ಪಡೆಯಲು ಪ್ರತಿಯೊಬ್ಬ ವಿದ್ರೋಹಿಯು ಪ್ರಯತ್ನಿಸಬೇಕು. ವಿಜಯವು ಅಡಗಿರುವದು ಹೋರಾಟದಲ್ಲಲ್ಲ; ಜನತೆಯ ಬೆಂಬಲವನ್ನು ಸಂಪಾದಿಸುವ ಪ್ರಯತ್ನದಲ್ಲಾಗಿದೆ ಗೆಲವು ಇರುವದು. ಇನ್ನು ಆಯುಧ ಮತ್ತು ಆಹಾರಗಳ ಸಂಗತಿಯು. ಪ್ರತಿಯೊಬ್ಬ ಧನಿಕನೂ ತನ್ನಲ್ಲಿ ಮಿಕ್ಕಿರುವ ಧನ ಧಾನ್ಯಗಳನ್ನು ಕೊಡಲು ಆತನನ್ನು ಪ್ರೇರಿಸಬೇಕು. ವಿದ್ರೋಹಿಗಳು ಜನತೆಯ ಹಿತವನ್ನು ಚಿಂತಿಸಿ ಪ್ರಯತ್ನಿಸುತ್ತಿರುವದರಿಂದ ಅವರಿಗೆ ಆಹಾರ ಸಾಮಗ್ರಿಗಳನ್ನು ಪೂರೈಸುವದು ಜನತೆಯ ಕೆಲಸವಾಗಿರುತ್ತದೆ."

"ಗುರುದೇವ, ನಿಮ್ಮ ನುಡಿಗಳು ನಿಜವಾದವುಗಳು; ಆದರೆ ಜನತೆಯಲ್ಲಿ ಆ ತ್ಯಾಗಸನ್ನದ್ಧತೆಯ ಮನಸ್ಥಿತಿಯುಂಟಾಗಬೇಡವೇ? ವಿದ್ರೋಹಿಗಳೆಂದರೆ ಜನರು ಭಯಪಡುತ್ತಾರೆ. ಹೇಡಿತನವು ಜನರಲ್ಲಿ ಬೇರೂರಿದೆ. ಸತ್ವಶೂನ್ಯವಾದ ಈ ಜನತೆಯಿಂದ ಯಾವ ಸಹಾಯ ಸಲಕರಣೆಗಳನ್ನು ನಾವು ಪ್ರತೀಕ್ಷಿಸಬಹುದು." ಹೀಗೆ ಅಮರಸಿಂಹನು ತನ್ನ ಸಂದೇಹಗಳನ್ನು ವ್ಯಕ್ತಪಡಿಸಿದ.

ಆಚಾರ್ಯನ ತುಟಿಗಳ ಮೇಲೆ ಒಂದು ಮಂದಸ್ಮಿತವು ಮೂಡಿತು. ಅವನು ಹೇಳಿದ: "ಕುಮಾರ, ಬಲಹೀನತೆಯೇ ಈ ಭೀರುತನದ ಕಾರಣವು. ಜನತೆಯು ತನ್ನ ಬಲವೆಷ್ಟಿದೆಯೆಂಬುದನ್ನು ತಿಳಿದಿಲ್ಲ. ಆದುದರಿಂದಲೇ ಜನರು ಪಠಾಣರಿಗೆ ಹೆದರಿ ಅವರಿಗೆ ತಲೆಯನ್ನು ತಗ್ಗಿಸಿದ್ದಾರೆ. ಜನರಿಗೆ ತಮ್ಮ ಶಕ್ತಿಯ ಅರಿವಾದರೆ, ಅವರನ್ನು ಆವರಿಸಿರುವ ಭೀರುತನವು ತಾನಾಗಿಯೇ ಬಿಟ್ಟು ಹೋಗುವದು. ತಾವು ಈ ವಿಷಮ ಪರಿಸ್ಥಿತಿಯಿಂದ ಪಾರಾಗಬೇಕಾದರೆ ಹೇಗೆ ಪ್ರಯತ್ನಿಸಬೇಕೆಂಬ ಪರಿಚಯವು ಜನರಿಗಿರುವದಿಲ್ಲ. ಅವರು ಉದಾಸೀನರಾಗಿ ಬಿದ್ದಿದ್ದಾರೆ; ಜಾಗ್ರತಿಯಿಲ್ಲದೆ ಬಿದ್ದಿದ್ದಾರೆ. ಅವರ ಈ ಆಲಸತೆಯನ್ನು ನೋಡಿ ಅವರಲ್ಲಿ ಬಲವಾಗಲೀ, ಸ್ವಾತಂತ್ರ್ಯದ ಆಗ್ರಹವಾಗಲೀ ಇಲ್ಲವೆಂದು ಭಾವಿಸುವದು ತಪ್ಪಾಗಿದೆ. ಅವರಲ್ಲಿರುವ ಶಕ್ತಿಯು

ಹೊರಗೆ ಹರಿಯುವಂತೆ ಮಾಡಲು ನಾವು ಒಂದು ದಾರಿಯನ್ನು ತೋರಿಸಿ ಕೊಡಬೇಕು. ಅವರ ಬಲವು ಕ್ರಿಯಾರೂಪವನ್ನು ಹೊಂದುವಂತೆ ಮಾಡ ಬೇಕು. ಅವರನ್ನು ಎಚ್ಚರಿಸುವದು, ಅವರಲ್ಲಿರುವ ಸ್ವಾತಂತ್ರ್ಯ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವದು ಪಿಮ್ರೋಹಿಗಳ ಕೆಲಸವಾಗಿದೆ. ಬಿಡುಗಡೆ ಯನ್ನು ಪಡೆಯಲುದ್ಯಮಿಸುತ್ತಿರುವ ಜನತೆಯನ್ನು ಸರಿಯಾದ ದಾರಿಯಲ್ಲಿ ನಿರ್ದಿಷ್ಟಸ್ಥಾನಕ್ಕೆ ಕರೆದೊಯ್ಯುವದು ಪಿಮ್ರೋಹಿಗಳ ಕರ್ತವ್ಯವಾಗಿದೆ. ಸ್ವಾ ತಂತ್ರ್ಯ ಸಂಗ್ರಾಮಕ್ಕೆ ಜನತೆಯನ್ನು ಸಿದ್ಧಗೊಳಿಸುವ ಕೆಲಸದಲ್ಲಿ ನಮ್ಮ ಶಕ್ತಿಯನ್ನು ಈಗ ನಾವು ವಿನಿಯೋಗಿಸತಕ್ಕದ್ದು. ಆದುದರಿಂದ ಕುಮಾರ, ರೂಪನಗರದಿಂದ ನಮ್ಮನ್ನು ಎದುರಿಸಲು ದಂಡು ಬರುವದೆಂದು ಕೇಳಿ ನಾವು ದಿಗಿಲನ್ನು ಹೊಂದಬೇಕಾಗಿಲ್ಲ. ಅವರನ್ನು ಎದುರಿಸಲಿರುವ ಸನ್ನಾಹವನ್ನು ಮಾಡಬೇಕು."

ಈ ಸಮಯದಲ್ಲಿ ಭೃತ್ಯನೊಬ್ಬನು ಒಳಗ ಬಂದನು. ಅವನನ್ನು ಕಾಣಲು ಜ್ಞಾನಾನಂದನು ತನ್ನ ಸಂಭಾಷಣೆಯನ್ನು ನಿಲ್ಲಿಸಿ, ಅವನ ಕಡೆಗೆ ತನ್ನ ದೃಷ್ಟಿಯನ್ನು ತಿರುಗಿಸಿದನು. ಭೃತ್ಯನು ಜ್ಞಾನಾನಂದನಿಗೆ ವಂದಿಸಿ ಹೇಳಿದ: "ತಮ್ಮನ್ನು ಕಾಣಬೇಕೆಂದು ಒಬ್ಬ ಅಪರಿಚಿತ ತರುಣನು ಬಂದಿದ್ದಾನೆ."

ಜ್ಞಾನಾನಂದನು ತುಸ ಹೊತ್ತು ಆಲೋಚಿಸಿದ. ಆ ಮೇಲೆ "ಒಳಗೆ ಬರ ಹೇಳು." ಎಂಬ ಆಜ್ಞೆಯು ಭೃತ್ಯನಿಗೆ ಲಭ್ಯವಾಯಿತು.

"ಆಗಲಿ." ಎಂದು ಹೇಳಿ ಭೃತ್ಯನು ಹೊರಕ್ಕೆ ಗಮಿಸಿದ.

"ಕುಮಾರ, ನೀನು ಪಾಳಯಕ್ಕೆ ಹೋಗು. ನಮ್ಮ ಕಡೆಯ ದಂಡಾಳು ಗಳು ಗ್ರಾಮಾಂತರಗಳಿಗೆ ತೆರಳಿ ದಂಡಿಗೆ ಜನರನ್ನು ಸೇರಿಸಲು ಪ್ರಯತ್ನಿಸಲಿ. ಅದರಂತೆಯೇ ಆಹಾರ ಸಾಮಗ್ರಿಗಳನ್ನು ಸಂಗ್ರಹಿಸುವದರಲ್ಲಿ ಉದ್ಯಮಿಸಲಿ. ಹೊರಗೆ ಬಂದು ನಿಂತಿರುವ ತರುಣನು ಯಾರೆಂಬುದನ್ನು ತಿಳಿದು, ಅವನ ಸಮಾಚಾರವೇನೆಂಬುದನ್ನು ನಾನು ವಿಚಾರಿಸುವೆ. ಸಂಜೆಯ ಸಮಯಕ್ಕೆ ನಾನು ಪಾಳಯಕ್ಕೆ ಬರುವೆ."

ಗುರುದೇವನ ನಿರ್ದೇಶದಂತೆ ಕುಮಾರನು ಆ ವಸತಿಯನ್ನು ಬಿಟ್ಟು ಪಾಳಯದ ಕಡೆಗೆ ಚಲಿಸಿದ. ಹೊರಗೆ ಜ್ಞಾನಾನಂದನ ದರ್ಶನಕ್ಕೆಂದು ಕಾದು ನಿಂತಿದ್ದ ತರುಣನು ನಿಲಯದೊಳಗೆ ಪ್ರವೇಶಿಸಿದನು. ತರುಣನಿಗೆ ೨೧-೨೨ ವರ್ಷಗಳ ಪ್ರಾಯವಿರಬಹುದು. ಸುಂದರವಾದ ಮುಖ, ಹೊಳೆಯುತ್ತಿರುವ

ಕಣ್ಣು, ಕಿರುನಗೆ ಸೂಚಿಸುತ್ತಿರುವ ತುಟಿ, ಕೋಮಲವಾದ ದೇಹಪ್ರಕೃತಿ. ತರುಣನು ಬಂದು ಸಂಕೋಚದಿಂದ ಜ್ಞಾನಾನಂದನ ಮುಂದೆ ನಿಂತನು.

ಜ್ಞಾನಾನಂದನು ತರುಣನ ಮೋರೆಯ ಮೇಲೆ ತನ್ನ ದೃಷ್ಟಿಯನ್ನು ಚೆಲ್ಲಿದನು. ಆ ನೋಟದಿಂದ ತರುಣನ ಅಂತರಂಗದಲ್ಲಿರುವದೇನೆಂಬುದನ್ನು ತಿಳಿಯಲು ಜ್ಞಾನಾನಂದನು ಪ್ರಯತ್ನಿಸುವಂತಿದ್ದಿತು. ಆ ನೋಟವು ಆ ತರುಣನ ಮೋರೆಯನ್ನು ಬೆವರುವಂತೆ ಮಾಡಿತು; ಅವನ ಮನಸ್ಸು ಸಂಭ್ರಮಯುಕ್ತವಾಯಿತು. ಅವನು ಮಾತಾಡಲು ಯತ್ನಿಸಿದ; ಆದರೆ ಅದು ಸಾಧ್ಯವಾಗಲಿಲ್ಲ.

ಜ್ಞಾನಾನಂದನು ಗಂಭೀರಸ್ವರದಲ್ಲಿ ಹೀಗೆ ಪ್ರಶ್ನಿಸಿದನು: "ಎಲ್ಲಿಂದ ಬಂದಿರುವೆ?" "ರೂಪನಗರದಿಂದ."

"ಹೆಸರೇನು?" "ರಾಮಚಂದ್ರ."

"ತರುಣನ ಕಂಠನಾದವು ಗಂಡಸಿನ ಸ್ವರದಂತಿರಲಿಲ್ಲ. ಅದು ಬಹು ಮಂದವಾಗಿದ್ದಿತು; ಕೇಳಲು ಬಹು ಇಂಪಾಗಿದ್ದಿತು. ಆ ಸ್ವರವು ಆ ಸಂನ್ಯಾಸಿಯನ್ನು ಆಶ್ಚರ್ಯಚಕಿತನನ್ನಾಗಿ ಮಾಡಿತು. ಅವನು ಬೇರೆ ಮಾತಾಡಲಿಲ್ಲ. ಅವನು ಆಲೋಚನಾಮಗ್ನನಾದ.. ಯಾವುದೋ ಒಂದು ರಹಸ್ಯವನ್ನು ಭೇದಿಸುವುದರಲ್ಲಿ ಅವನ ಬುದ್ಧಿಯು ಉದ್ಯುಕ್ತವಾಗಿದ್ದಿತು. ಕೊನೆಗೆ ಜ್ಞಾನಾನಂದನು ಆ ತರುಣನಿಗೆ ಈ ಪ್ರಶ್ನೆಯನ್ನು ಕೇಳಿದ: "ಈ ಜ್ಞಾನಾನಂದನೆದುರು ಸುಳ್ಳುಹೇಳಿ ಏಕೆ ಮೋಸಮಾಡಲು ಹೊರಟಿರುವೆ?"

"ನಾನು ಹೇಳಿದುದು ಸುಳ್ಳಲ್ಲ." ಈ ಮಾತಗಳನ್ನಾಡುವಾಗ ರಾಮಚಂದ್ರನ ತುಟಿಗಳು ನಡುಗುತ್ತಿದ್ದವು.

"ನಿನ್ನ ಕೌಶಲ್ಯವು ನನ್ನ ಮುಂದೆ ನಡೆಯದು." ಜ್ಞಾನಾನಂದನ ಗಂಭೀರ ಸ್ವರವು ಹೊರಟಿತು. ಅವನು ತನ್ನ ಆಸನದಿಂದ ಎದ್ದು ನಿಂತನು. ಇನ್ನೊಂದು ನಿಮಿಷದಲ್ಲಿ ಅವನು ಹೇಮಚಂದ್ರನ ತಲೆಯ ಮೇಲಿದ್ದ ಮುಂಡಾಸವನ್ನು ಕಿತ್ತುಕೊಂಡನು. ಹೇಮಚಂದ್ರನ ತಲೆಯಲ್ಲಿ ಉದ್ದವಾದ ಕೇಶರಾಶಿಯು ಜ್ಞಾನಾನಂದನಿಗೆ ಗೋಚರವಾಯಿತು. ಹೇಮಚಂದ್ರನು ಗಂಡಸಾಗಿರಲಿಲ್ಲ; ಅವಳೊಬ್ಬ ಹೆಂಗಸಾಗಿದ್ದಳು. ಅವಳು ಲಜ್ಜೆಯಿಂದ ಶಿರಸ್ಸನ್ನು ಬಾಗಿಸಿ ಜ್ಞಾನಾನಂದನ ಮುಂದೆ ನಿಂತಳು.

"ತಂಗೀ, ಈ ಸಾಹಸದ ಕೆಲಸದಲ್ಲಿ ಏಕೆ ಕೈಹಾಕಿದೆ?" ಮೃದು ಸ್ವರದಲ್ಲಿ ಜ್ಞಾನಾನಂದನು ಪ್ರಶ್ನಿಸಿದನು.

"ನಾಡಸೇವೆಯ ಉದ್ದೇಶದಿಂದ ಮಹಾರಾಜ!"

"ಕೋಮಲ ಗಾತ್ರಿಯಾದ ಅಬಲೆಯರು ವಿದ್ರೋಹಿಗಳ ವಿಪತ್ಪರಿಪೂರ್ಣ ಜೀವನವನ್ನು ಸ್ವೀಕರಿಸಲು ಸಾಧ್ಯವಾಗುವುದೇ?"

"ಸಾಧ್ಯವಿಲ್ಲದೇನು?" ತರುಣಿಯು ಅಂದಳು.

"ವನಿತೆಯರಿಗೆ ಸ್ಥಳವನ್ನು ಕೊಡುವುದರಿಂದ ನಮ್ಮ ದಂಡು ಬಲಹೀನವಾಗಬಹುದು. ಆರ್ಯವನಿತೆಯರ ಉದ್ಯಮ ರಣರಂಗವಲ್ಲ; ಗೃಹವಾಗಿದೆ. ಸಮರಾಂಗಣವಲ್ಲ."

"ಮಹಾರಾಜ, ತಮ್ಮ ಧೈರ್ಯವನ್ನು, ತಮ್ಮ ಸಾಹಸವನ್ನು ಪ್ರದರ್ಶಿಸಿ ಜನತೆಗೆ ಬಂದೊದಗಿದ ವಿಪತ್ತನ್ನು ನಿವಾರಿಸಲು ಆರ್ಯಮಹಿಳೆಯರಿಂದ ಸಾಧ್ಯವಾಗದೇ?" ತರುಣಿಯು ಜ್ಞಾನಾನಂದನ ಕಡೆಗೆ ತನ್ನ ದೃಷ್ಟಿಯನ್ನು ಹೊರಳಿಸಿದಳು.

ತರುಣಿಯ ಪ್ರಶ್ನೆಯು ಜ್ಞಾನಾನಂದನನ್ನು ಗೊಂದಲದಲ್ಲಿ ಕೆಡಹಿತು. ಹಿಂದಿನ ಕಾಲದಲ್ಲಿ ಎಷ್ಟೋ ಮಂದಿ ವನಿತೆಯರು ಯುದ್ಧರಂಗದಲ್ಲಿ ಕಾದಾಡಿರುವರೆಂಬ ಸ್ಮರಣೆಗಳು ಅವನ ಚಿತ್ತದಲ್ಲಿ ಮೂಡಿದವು. ಆದುದರಿಂದ ಹೆಂಗಸರಲ್ಲಿ ಧೈರ್ಯ ಸಾಹಸಗಳಿಲ್ಲವೆಂದು ನುಡಿಯ ಬರುವಂತಿರಲಿಲ್ಲ. ಕೆಲವು ನಿಮಿಷಗಳ ವರೆಗೆ ಜ್ಞಾನಾನಂದನು ಮೌನವನ್ನವಲಂಬಿಸಿದನು. ಅವನು ಮಾತಾಡದಿದ್ದುದನ್ನು ನೋಡಿ ಮಹಿಳೆಯೇ ನುಡಿಯತೊಡಗಿದಳು:

"ಮಹಾರಾಜ, ನಾಡಸೇವೆಯನ್ನು ಮಾಡಬೇಕೆಂಬ ಹಂಬಲದಿಂದ ಬಂದಿರುವೆ. ನನ್ನ ನಿಜರೂಪದಲ್ಲಿ ಬರುವದರಿಂದ ನನ್ನ ಉದ್ದೇಶಕ್ಕೆ ವಿಘ್ನವುಂಟಾದೀತೆಂದು ನೆನಸಿ, ಈ ಪುರುಷವೇಷವನ್ನು ಧರಿಸಿದೆ; ಆದರೆ ನನ್ನ ವೇಷಧಾರಣೆಯು ತಮ್ಮ ಚಾಣಾಕ್ಷ ಬುದ್ಧಿಗೆ ಹೊಳೆಯದೆ ಇರಲಿಲ್ಲ. ಪವಿತ್ರವಾದ ಉದ್ದೇಶದಿಂದ ಬಂದ ನನ್ನನ್ನು ನೀವು ನಿರಾಕರಿಸಬೇಡಿರಿ."

"ತಂಗೀ, ನಿನ್ನ ಧೈರ್ಯ ಸಾಹಸಗಳನ್ನು ನೋಡಿ ನನಗೆ ಸಂತೋಷವಾಯಿತು; ಆದರೆ ನೋಡು, ಈ ರಂಗದಲ್ಲಿ ಮಹಿಳೆಯರು ಪ್ರವೇಶಿಸುವದು ಅನುಚಿತವಾಗಿದೆ."

"ಹೆಂಗಸು ತನ್ನ ಗಂಡನ ಅರ್ಧ ಶರೀರಳಾಗಿದ್ದಾಳೆಂದು ತಿಳಿದವರು ಹೇಳುತ್ತಾರೆ. ಸ್ವಾತಂತ್ರ್ಯಸಾಧನೆಯ ರಂಗದಲ್ಲಿ ಜನತೆಯ ಅರ್ಧಭಾಗವು ಪ್ರವೇಶಿಸಕೂಡದೆಂದು ಹೇಳುವುದು ಯಾವ ನ್ಯಾಯ? ಸ್ವಾತಂತ್ರ್ಯ ಸಂಗ್ರಾ

ಮದ ವಲಯದಲ್ಲಿ ಹೆಂಗಸರು ಪ್ರವೇಶಿಸುವದಾದರೆ ಅಲ್ಲಿ ಪಾಪ ತುಂಬುವದೆಂಬ ತಮ್ಮ ಅಭಿಪ್ರಾಯವನ್ನು ನಾನು ತಿಳಿದುಕೊಂಡೆನು. ಒಂದು ಮಾತನ್ನು ನಾನು ಹೇಳಬಲ್ಲೆ. ಯಾವ ಕ್ಷೇತ್ರದಲ್ಲಿಯಾದರೂ ಸರಿಯೇ, ಹೆಂಗಸು ಮನೋದಾರ್ಢ್ಯದಿಂದ ವರ್ತಿಸಬಲ್ಲಳು. ಪವಿತ್ರೋದ್ದೇಶದಿಂದ ವಿದ್ರೋಹಿಗಳ ತಂಡದಲ್ಲಿ ಸೇರಬೇಕೆಂದು ಬಂದಿರುವ ನನ್ನಿಂದ ವಿದ್ರೋಹಿಗಳ ಶಕ್ತಿಯು ವರ್ಧಿಸುವದಲ್ಲವೆ, ಅವರ ಬಲವು ಕುಂದಲಾರದು."

"ತಂಗೀ, ನಿನ್ನ ನುಡಿಗಳನ್ನು ಕೇಳುವಾಗಲಂತೂ ನೀನು ಆದಿಶಕ್ತಿಯಿರುವೆಯೆಂದು ನನಗೆ ತೋರಿ ಹೋಗುತ್ತದೆ. ನೀನು ಯಾರೆಂಬುದನ್ನೊಮ್ಮೆ ಅರುಹುವೆಯಾ?" ತನ್ನೊಡನೆ ಸಂವಾದವನ್ನು ನಡೆಸುತ್ತಲಿರುವ ಮಹಿಳೆಯು ಯಾರೆಂಬುದನ್ನು ತಿಳಿಯಲು ಜ್ಞಾನಾನಂದನು ಉತ್ಸುಕತೆಯಿಂದ ಪ್ರಶ್ನಿಸಿದನು.

"ನಾನು ರೂಪನಗರದವಳು; ಹೇಮಾವತಿಯೆಂದು ಜನರು ನನ್ನನ್ನು ಕರೆಯುತ್ತಾರೆ."

"ನಿನಗೆ ಬಂಧು ಬಳಗದವರು ಯಾರೂ ಇಲ್ಲವೆ?" ಈ ಪ್ರಶ್ನೆಯು ಜ್ಞಾನಾನಂದನ ತುಟಿಗಳಿಂದ ಹೊರಟಿತು.

"ಇದ್ದಾರೆ. ನನ್ನ ಭಾಗ್ಯಪ್ರದೀಪಕರು ಸ್ವಾತಂತ್ರ್ಯ ಸಾಧಕರಲ್ಲಿ ಅಗಣ್ಯರು; ಅವರ ಹೆಜ್ಜೆಗಳನ್ನೇ ಅನುಸರಿಸಲು ನಾನು ಆಗ್ರಹಿಸುತ್ತಿದ್ದೇನೆ."

"ಅವನು ಯಾರು?"

"ಪತಿಯ ಪಾವನ ನಾಮವನ್ನು ಉಚ್ಚರಿಸುವದು ಕುಲಸ್ತ್ರೀಯರಿಗೆ ಉಚಿತವೆನಿಸುವದೇ? ಅವರು ಎಲ್ಲರಿಗೂ ಪರಿಚಿತರು; ತಮ್ಮ ಅಕ್ಕರೆಯ ಶಿಷ್ಯರು. ನಾನು ಇಲ್ಲಿಗೆ ಬಂದೊಡನೆಯೇ ಅವರು ಇಲ್ಲಿಂದ ಹೊರ ತೆರಳಿದರು."

"ಯಾರು! ಕುಮಾರ ಅಮರಸಿಂಹನೇ?" ಜ್ಞಾನಾನಂದನು ಪ್ರಶ್ನಿಸಿದ.

"ಅಹುದು." ಹೇಮಾವತಿಯು ತನ್ನ ತಲೆಯನ್ನು ತಗ್ಗಿಸಿದಳು.

"ಕುಮಾರಿ, ನಿನ್ನ ಈ ಪ್ರಯತ್ನದಿಂದ ನನ್ನ ಉದ್ದೇಶಸಾಧನೆಗೆ ವಿಘ್ನವು ಬಂದೊದಗಬಹುದೆಂದು ಅನಿಸುತ್ತದೆ. ನೀನು ನಿನ್ನ ಈ ಹಂಬಲವನ್ನು ಪರಿತ್ಯಜಿಸಿ ಹಿಂದಿರುಗುವುದೇ ಒಳ್ಳೆಯದು."

"ಮಹಾರಾಜ, ಆದೇಕೆ ಹಾಗೆ ನುಡಿಯುವಿರಿ? ಪತಿಯ ಹೆಜ್ಜೆಗಳನ್ನು ಹಿಂಬಾಲಿಸುವದು ಸತಿಯ ಕರ್ತವ್ಯವಲ್ಲವೆ?"

"ನೋಡು ತಂಗೀ, ನನ್ನ ಉದ್ದೇಶಸಾಧನೆಯ ವಿಜಯವು ಅಮರಸಿಂಹ

ನನ್ನೇ ಅವಲಂಬಿಸಿದೆ. ಈ ರಂಗದಲ್ಲಿ ನೀನು ಪ್ರವೇಶಿಸುವದೆಂದರೆ, ಅವನನ್ನು ಕರ್ತವ್ಯಚ್ಯುತನನ್ನಾಗಿ ಮಾಡಿದಂತಾಗುತ್ತದೆ. ನೀನಿಲ್ಲಿದ್ದರೆ ನಿಶ್ಚಯವಾಗಿ ಅವನ ದೃಷ್ಟಿಯು ನಿನ್ನ ಕಡೆಗೆ ಹರಿಯುತ್ತದೆ. ಆಗ ಅವನು ಮಮತೆಗೆ ಒಳಗಾಗುತ್ತಾನೆ. ಆಗ ಅವನು ಸ್ವಾತಂತ್ರ್ಯಸಂಗ್ರಾಮದಿಂದ ವಿಮುಖನಾಗ ಬಹುದು. ಅಮರಸಿಂಹನು ಕರ್ತವ್ಯಚ್ಯುತನಾದರೆ, ನನ್ನ ಈ ವರೆಗಿನ ಪ್ರಯತ್ನಗಳು ಜಲಮಧ್ಯದ ಯಜ್ಞವಾಗಬಹುದು. ಅವನು ಆಗ ತನ್ನ ದೃಷ್ಟಿಯನ್ನು ಲೌಕಿಕ ಸುಖದ ಕಡೆಗೆ ತಿರುಗಿಸಬಹುದು."

"ಮಹಾರಾಜ, ತಾವು ಅಷ್ಟು ಭಯಪಡಬೇಕಾದುದಿಲ್ಲ; ಅವರು ಅಷ್ಟು ಮನೋದಾರ್ಢ್ಯವಿಲ್ಲದವರಲ್ಲ. ಇದಲ್ಲದೆ ನಾನು ಪುರುಷವೇಷದಲ್ಲಿರುವದರಿಂದ ಅವರು ನನ್ನನ್ನು ಗುರುತಿಸಲಾರರು. ನಾನು ಅಬಲೆಯಾದರೂ ಕತ್ತಿಯನ್ನು ಹಿಡಿಯುವ ಶಕ್ತಿಯು ನನ್ನ ಕೈಗೆ ಇದೆ."

"ಕುಮಾರಿ, ನಿನ್ನ ಈ ನುಡಿಗಳು ನಿನ್ನ ಉದ್ದೇಶ ಶುದ್ಧಿಯನ್ನು ಸೂಚಿಸುತ್ತಲಿವೆ. ನಾಡಿನ ಹಿತಕ್ಕಾಗಿ ನೀನು ಕ್ಲೇಶಗಳನ್ನು ಅನುಭವಿಸಲು ಸನ್ನದ್ಧಳಾಗಿರುವದನ್ನು ನೋಡಿ ನನಗೆ ಸಂತೋಷವಾಯಿತು; ಆದರೆ ಬಂಡುಗಾರರಾದ ವಿದ್ರೋಹಿಗಳ ಜೀವನವು ಸುಖದಾಯಕವಾದುದಲ್ಲ. ಅವರ ದಾರಿಯಲ್ಲಿರುವ ಪ್ರತಿಯೊಂದು ಅಡಿಯೂ ವಿಪತ್ತುಗಳೆಂಬ ಮುಳ್ಳುಗಳಿಂದ ನಿಬಿಡವಾಗಿದೆ. ಕಾದಾಟವನ್ನು ನಿರೀಕ್ಷಿಸುತ್ತಾ ನಾವು ಪ್ರತಿಯೊಂದು ನಿಮಿಷವನ್ನೂ ಕಳೆಯಬೇಕಾಗುವದು. ಹೀಗೆ ಯಾವಾಗಲೂ ವಿಪತ್ತುಗಳಿಗೆ ಎದೆಯನ್ನೊಡ್ಡತಕ್ಕ ಎದೆಗಾರಿಕೆಯು ನಿನಗಿದೆಯೇ?" ಜ್ಞಾನಾನಂದನು ತನ್ನ ಮನದಲ್ಲಿ ಮೂಡಿದ ಸಂದೇಹಗಳನ್ನು ಹೇಮಾವತಿಗೆ ತಿಳಿಸಿದನು.

"ಮಹಾರಾಜ!" ಹೇಮಾ ನುಡಿದಳು: "ನನ್ನಲ್ಲಿ ಎದೆಗಾರಿಕೆಯೇ ಇದೆಯೋ ಇಲ್ಲವೋ ಎಂಬುದನ್ನು ತಾವು ಪರೀಕ್ಷಿಸಿರಿ. ಸ್ವಾತಂತ್ರ್ಯ ಸಾಧಕರ ಜೀವನವು ಮುಳ್ಳಿನ ಹಾಸಿಗೆಯಾಗಿದೆಯೆಂಬುದನ್ನು ನಾನು ಬಲ್ಲೆ. ಆ ಕ್ಲೇಶಗಳನ್ನೆಲ್ಲಾ ಅನುಭವಿಸಲು ಸಿದ್ಧಳಾಗಿಯೇ ಇಲ್ಲಿಗೆ ಬಂದಿರುತ್ತೇನೆ."

"ತಂಗೀ, ಚಿಂತೆಯಿಲ್ಲ; ನಿನ್ನ ಶಕ್ತಿಪರೀಕ್ಷೆಯಾಗಬೇಕಾಗಿದೆ. ಅದರಲ್ಲಿ ನೀನು ಉತ್ತೀರ್ಣಳಾದರೆ ವಿದ್ರೋಹಿಗಳ ದಂಡಿನಲ್ಲಿ ಸೇರಬಹುದು. ಈ ಪರೀಕ್ಷೆಯಲ್ಲಿ ನೀನು ಪರಾಜಿತಳಾದರೆ, ನಮ್ಮ ದಳದಲ್ಲಿ ಸೇರಬೇಕೆಂಬ ನಿನ್ನ ಆಶೆಯನ್ನು ನೀನು ಬಿಟ್ಟು ಬಿಡಬೇಕಾಗುವದು."

"ನನ್ನನ್ನು ಯಾವ ಪರೀಕ್ಷೆಗೆ ಬೇಕಾದರೂ ತಾವು ಒಳಪಡಿಸಬಹುದು. ತಮ್ಮ ನುಡಿಯನ್ನು ಅನುಸರಿಸಲು ನಾನು ಸಿದ್ಧಳಿದ್ದೇನೆ."

"ಹಾಗಾದರೆ ಈ ಕಡೆ ಬಾ!"

ಜ್ಞಾನಾನಂದನು ಹೇಮಳನ್ನು ಪಕ್ಕದಲ್ಲಿದ್ದ ಒಂದು ಕೋಣೆಗೆ ಕರೆದೊಯ್ದನು. ಆ ಕೋಣೆಯಲ್ಲಿ ಕತ್ತಿ, ಕಠಾರಿ ಎಂಬಿತ್ಯಾದಿ ವಿವಿಧ ಆಯುಧಗಳಿದ್ದವು. ಜ್ಞಾನಾನಂದನು ಆ ಆಯುಧಗಳ ಮಧ್ಯದಲ್ಲಿದ್ದ ಒಂದು ಗದೆಯನ್ನು ಹೇಮಳಿಗೆ ತೋರಿಸಿದ. ಆ ಗದೆಯನ್ನು ಅವಳಿಗೆ ತೋರಿಸಿ ಕೊಡುತ್ತಾ ಅವನು ಹೀಗೆ ಹೇಳಿದ: "ತಂಗೀ, ಅಲ್ಲಿ ನೋಡು, ಆ ಗದೆಯನ್ನು ಒಂದು ಕೈಯಿಂದ ಮೇಲಕ್ಕೆ ಎತ್ತಬೇಕು. ಅದು ನಿನ್ನಿಂದ ಸಾಧ್ಯವಾದರೆ ಈ ಪರೀಕ್ಷೆಯಲ್ಲಿ ನೀನು ವಿಜಯಿನಿಯಾದೆ."

ಹೇಮಾ ಗದೆಯನ್ನು ನೋಡಿದಳು. ಅದು ಉಕ್ಕಿನಿಂದ ಮಾಡಿದುದಾಗಿದ್ದಿತು. ಅದರ ಹಿಡಿಕೆಯನ್ನು ಅವಳು ಬಲಗೈಯಿಂದ ಸ್ಪರ್ಶಿಸಿದಳು. ಅದು ಬಹು ಭಾರವಾದುದೆಂಬುದು ಅವಳಿಗೆ ಹೊಳೆಯಿತು. ಆ ಆಯುಧವನ್ನು ನೆಲದಿಂದ ಮೇಲಕ್ಕೆ ಎತ್ತಲು ಪ್ರಯತ್ನಿಸಿದಳು. ಜ್ಞಾನಾನಂದನು ಅವಳ ಈ ಪ್ರಯತ್ನವನ್ನು ನೋಡುತ್ತಾ ನಿಂತನು.

ಎರಡು ನಿಮಿಷಗಳು ಕಳೆದವು. ಹೇಮಾ ನೆಲದಲ್ಲಿ ಬಿದ್ದಿದ್ದ ಗದೆಯನ್ನು ಹಿಡಿದು ಮೇಲಕ್ಕೆತ್ತಿದಳು. ಅವಳ ಬಲಗೈಯನ್ನು ಆ ಆಯುಧವು ಅಲಂಕರಿಸಿತು. ಆ ಚಿತ್ರವನ್ನು ಕಾಣುತ್ತಲೆ ಜ್ಞಾನಾನಂದನ ಕಣ್ಣುಗಳಲ್ಲಿ ವಿಸ್ಮಯದ ಕಿಡಿಗಳು ಹೊಳೆದವು. ಹೇಮಳ ಬಲವು ಜ್ಞಾನಾನಂದನನ್ನು ಅಚ್ಚರಿಗೊಳಿಸಿತು. ಅವನು ಹೇಮಳ ಕಡೆಗೆ ತನ್ನ ದೃಷ್ಟಿಯನ್ನು ತಿರುಗಿಸಿ ಪ್ರಶ್ನಿಸಿದ: "ತಾಯಿ, ನೀನು ಈ ಶಕ್ತಿಯನ್ನು ಎಲ್ಲಿಂದ ಪಡೆದೆ?"

"ಏಕೆ ಮಹಾರಾಜ!" ತರುಣಿಯ ತುಟಿಗಳ ಮೇಲೆ ಒಂದು ಮಂದಸ್ಮಿತವು ಮೂಡಿತು.

"ಸಾಮಾನ್ಯ ಜನರಿಂದ ಸಾಧ್ಯವಾಗುವ ಕೆಲಸವಲ್ಲವಿದು. ನಮ್ಮ ದಂಡಿನಲ್ಲಿ ಈ ಗದೆಯನ್ನು ನೆಲದಿಂದ ಮೇಲಕ್ಕೆತ್ತಲು ಶಕ್ತರಾದವರು ಇಬ್ಬರು ಮಾತ್ರವಾಗಿದ್ದಾರೆ. ನಾನು ಮತ್ತು ಕುಮಾರ. ಇತರರಾರಿಂದಲೂ ಈ ಕೆಲಸವು ಸಾಧ್ಯವಾಗಲಿಲ್ಲ. ಈ ಗದೆಯನ್ನು ಮೇಲಕ್ಕೆತ್ತಿದ ಮೂರನೆಯ ವ್ಯಕ್ತಿಯೆಂದರೆ ನೀನೇ ಸರಿ!"

"ಮಹಾರಾಜ!" ಮಹಿಳೆಯು ನುಡಿದಳು: "ಇದು ನನ್ನಿಂದ ಸಾಧ್ಯವಾದುದು ನನ್ನ ಸಚ್ಚರಿತ್ರೆಯ ಮೂಲಕವಾಗಿದೆ."

"ಒಳ್ಳೆಯದು. ತಾಯಿ, ನೀನು ನಮ್ಮ ಗುಂಪಿನಲ್ಲಿ ಸೇರಬಹುದು; ಆದರೆ ಒಂದು ಮಾತು. ನಮ್ಮ ಪಂಡಿನ ಜನರಿಗೆ ನೀನು ಹೆಂಗಸಿರುವೆಯೆಂಬುದು ತಿಳಿಯಕೂಡದು. ನೀನು ಯಾವಾಗಲೂ ಪುರುಷವೇಷದಲ್ಲಿಯೇ ಇರಬೇಕು. ನೀನು ತಿಳುವಳಿಕೆಯುಳ್ಳವಳಾಗಿರುವೆ. ಆದುದರಿಂದ ನಾನು ಹೆಚ್ಚಿಗೇನೂ ಹೇಳಬೇಕಾದುದಿಲ್ಲ."

"ಮಹಾರಾಜ, ತಮ್ಮ ವಚನವನ್ನು ಶಿರಸಾವಹಿಸುವೆನು." ಹೇಮಳು ಜ್ಞಾನಾನಂದನಿಗೆ ನಮಿಸಿದಳು.

"ಒಳ್ಳೆಯದು. ದುರ್ಗೆಯು ನಿನಗೆ ಶುಭವನ್ನು ನೀಡಲಿ!" ಈ ಆಶೀರ್ವಾದವು ಜ್ಞಾನಾನಂದನ ತುಟಿಗಳಿಂದ ಹೊರಟಿತು. "ಹೇಮಚಂದ್ರನೆಂಬ ಹೆಸರಿನಿಂದಲೇ ನೀನು ಇಲ್ಲಿರು."

— —

## ೧೮ ಭೈರವಿ

ಆ ಕಾಲದಲ್ಲಿ ಒಬ್ಬಳು ಹಾಡುತ್ತಾ ರೂಪನಗರ ಸಂಸ್ಥಾನದ ಹಳ್ಳಿಹಳ್ಳಿಗಳಲ್ಲಿ ಸಂಚರಿಸುತ್ತಿದ್ದಳು. ಆಕೆ ಯಾರು? ಅವಳ ಹೆಸರೇನು? ಈ ಸಂಗತಿಗಳನ್ನು ಬಲ್ಲವರು ಯಾರೂ ಇರಲಿಲ್ಲ; ಆದರೆ ಅವಳನ್ನು ಎಲ್ಲರೂ ಬಲ್ಲರು. ಅವಳು ಹಾಡುತ್ತಿದ್ದ ಗೀತೆಗಳು ಎಲ್ಲರ ಎದೆಗಳನ್ನೂ ಸೂರೆಗೊಂಡಿದ್ದವು. ಪ್ರತಿಯೊಬ್ಬರನ್ನೂ ಆ ಹಾಡುಗಳು ಹರುಷದ ಕಡಲಿನಲ್ಲಿ ಮುಳುಗಿಸುತ್ತಿದ್ದವು; ಆದರೆ ಅವಳ ಪರಿಚಯ ಮಾತ್ರ ಯಾರಿಗೂ ಇಲ್ಲ. ಅವಳನ್ನು ಅವರು ಭೈರವಿ ಎಂದು ಕರೆಯುತ್ತಿದ್ದರು.

ಅವಳಿಗೆ ಮನೆ ಮಾರುಗಳಿರಲಿಲ್ಲ. ಅವಳಿಗಿದ್ದ ಸೊತ್ತು ಅವಳ ಕರದಲ್ಲಿದ್ದ ತಂಬೂರಿ ಮಾತ್ರವಾಗಿದ್ದಿತು. ಬೆಲೆಯಿಲ್ಲದ ಒಡವೆಯದು; ಆದರೆ ಅವಳು ತಂಬೂರಿಯ ತಂತಿಯನ್ನೊಮ್ಮೆ ಮೀಟಿದಳೆಂದರೆ ಅದರಿಂದ ಹೊರಡುತ್ತಿದ್ದ ನಾದವು ಜನರ ಎದೆಗಳನ್ನು ಹಿಗ್ಗುವಂತೆ ಮಾಡುತ್ತಿದ್ದಿತು. ನೊಂದವರ ಎದೆಗಳಿಗೆ ತಂಪನ್ನು ನೀಡುತ್ತಿದ್ದವು ಅವಳ ಹಾಡುಗಳು. ಅವ್ಯಕ್ತವಾದ ಆನಂದದ ಕಡಲಿನಲ್ಲಿ ಆ ಗಾನಗಳು ಜನರನ್ನು ಮುಳುಗಿಸುತ್ತಿದ್ದವು. ಆದುದರಿಂದ

ಭೈರವಿಯ ಹಾಡುಗಳನ್ನು ಕೇಳಿ ಆನಂದವನ್ನು ಪಡೆಯಲು ಜನರು ಅವಳ ಸುತ್ತಲೂ ನೆರೆಯುತ್ತಿದ್ದರು. ಭೈರವಿಯ ಗೀತೆಗಳೆಂದರೆ ಕಲ್ಲುಸಕ್ಕರೆಗಿಂತಲೂ ಸಿಹಿಯಾದವುಗಳು. ಅವಳ ಎದೆಯಿಂದ ಹರಿದು ಬರುತ್ತಿದ್ದ ಗಾನವು ಇನ್ನೊಂದು ಎದೆಯನ್ನು ಸ್ಪರ್ಶಿಸದೆ ಇರಲಾರದು. ಆ ಹಾಡುಗಳು ಜನರನ್ನು ಮಂತ್ರ ಮುಗ್ಧರನ್ನಾಗಿ ಮಾಡುತ್ತಿದ್ದವು. ಸ್ನೇಹ ಮಮತೆಗಳು ಅವಳ ನುಡಿಗಳಲ್ಲಿ ತುಂಬಿದ್ದವು. ಅವಳ ಮಾತುಗಳಲ್ಲಿ ತುಂಬಿದ್ದ ಪ್ರೀತಿಯು ನೊಂದ ಜನರ ಭಾರವನ್ನು ಕಡಿಮೆ ಮಾಡುತ್ತಿದ್ದಿತು.

ಭೈರವಿಯು ಬಡವಳು. ತನ್ನದೆಂದು ಹೇಳಿಕೊಳ್ಳಬಹುದಾದ ಯಾವ ಒಡವೆಯೂ ಅವಳ ಪಕ್ಕದಲ್ಲಿರಲಿಲ್ಲ. ಜನರ ಔದಾರ್ಯದಿಂದ ಅವಳ ಉಪ ಜೀವನವು ಸಾಗುತ್ತಿದ್ದಿತು; ಆದರೆ ಧನಿಕರ ಬಳಿಯಲ್ಲಿ ನೋಡ ಸಿಗದ ಆನಂದವು ಅವಳ ಬಳಿಯಲ್ಲಿದ್ದಿತು. ಕುಬೇರನಿಗೆ ದೊರಕದ ಉಲ್ಲಾಸವು ಅವಳ ಬಾಳಿನಲ್ಲಿ ಮಿಂಚುತ್ತಿದ್ದಿತು. ಧನಕನಕಗಳಿಂದ ಮಾತ್ರ ಸುಖವು ಲಭ್ಯವಾಗುವದೆಂದು ಹೇಳತಕ್ಕ ಜನರು ಭೈರವಿಯ ಜೀವನದ ಕಡೆಗೊಮ್ಮೆ ತಮ್ಮ ದೃಷ್ಟಿಯನ್ನು ತಿರುಗಿಸಿದರೆ ತಮ್ಮ ಭಾ ವ ನೆ ಯು ತಪ್ಪಾದುದೆಂಬದನ್ನು ತಿಳಿದುಕೊಳ್ಳದೆ ಇರಲಾರರು. ಏಕೆಂದರೆ ಧನಿಕನಿಗೆ ಲಭ್ಯವಾಗದ ನೆಮ್ಮದಿ-ಹರುಷಗಳು ಭೈರವಿಗೆ ಲಭ್ಯವಾಗಿದ್ದವು ಅವಳ ಜೀವಪಕ್ಷಿಯು ಹೇಮ ಪಂಜರದಲ್ಲಿ ಬಂಧಿತವಾಗಿರಲಿಲ್ಲ. ಯಾವ ಬಂಧನಕ್ಕೂ ಒಳಗಾಗದೆ ಅದು ನಿರ್ಮಲಾಂತರಿಕ್ಷದಲ್ಲಿ ಹಾರಾಡುತ್ತಿದ್ದಿತು. ಎತ್ತರಕ್ಕೆ ಇನ್ನೂ ಎತ್ತರಕ್ಕೆ ಮುಗಿಲುಗಳಾಚೆಗೆ ಅದು ಸರಿಯುತ್ತಿದ್ದಿತು! ಬಂಧನವಿಲ್ಲ; ಆದುದರಿಂದ ಆಕೆಗೆ ದುಃಖವೂ ಇರಲಿಲ್ಲ. ಒಡವೆ ವಸ್ತುಗಳಿಲ್ಲ; ಆದುದರಿಂದ ಅವುಗಳನ್ನು ನೋಡಿಕೊಳ್ಳುವ ಚಿಂತೆಯೂ ಅವಳಿಗಿಲ್ಲ. ಮನೆಮಾರುಗಳಿಲ್ಲದುದರಿಂದ ನಾಲ್ಕು ಗೋಡೆಗಳ ಹೊರಗಿರುವದೆಲ್ಲ ಬೇರೆಯವರದು, ಎಂಬ ಸಂಕುಚಿತ ಚಿತ್ತವೃತ್ತಿಯೂ ಅವಳಿಗಿಲ್ಲ. ತನ್ನದೆಂದು ಹೇಳಿಕೊಳ್ಳಬಹುದಾದ ಒಡವೆಯಾವದೂ ಅವಳ ಪಕ್ಕದಲ್ಲಿ ಇಲ್ಲದಿದ್ದುದರಿಂದ ತಾನು-ಪರರು ಎಂಬ ಭೇದಬುದ್ಧಿಗೆ ಅವಳಲ್ಲಿ ಸ್ಥಳವಿರಲಿಲ್ಲ. ಆದುದರಿಂದ ಅವಳು ಹಕ್ಕಿಗಳಂತೆ ಸರ್ವತಂತ್ರಸ್ವತಂತ್ರಳಾಗಿದ್ದಳು. ಪಿಕದ ಸವಿಗೊರಳ ಇಂಚರಗಳಂತೆ ಭೈರವಿಯ ಕಂಠದಿಂದ ಹರಿದು ಬರುತ್ತಿದ್ದ ಹಾಡುಗಳು ಜನರನ್ನು ಆಹ್ಲಾದಗೊಳಿಸುತ್ತಿದ್ದವು.

ಚೆಲುವುಗಾನಗಳಿಂದ ಜನರನ್ನು ಮರುಳು ಗೊಳಿಸತಕ್ಕ ಒಬ್ಬ ಸಾಮಾನ್ಯ

ಗಾಯಕಿಯು ಭೈರವಿಯಾಗಿರಲಿಲ್ಲ. ಅವಳ ಹಾಡುಗಳಲ್ಲಿ ಒಂದು ದಿವ್ಯ ಸಂದೇಶವು ಅಡಗಿದ್ದಿತು ಅವಳ ಗಾನಗಳು ನವಚೇತನವನ್ನುಂಟು ಮಾಡು ತ್ತಿದ್ದವು. ಒಂದು ಹೊಸ ಬೆಳಕು ಅವಳ ಹಾಡುಗಳಲ್ಲಿ ಗೋಚರಿಸುತ್ತಿದ್ದಿತು. ಈ ನವಚೇತನವಾಗಿದ್ದಿತು ಜನರನ್ನು ಆಕರ್ಷಿಸಿದುದು; ಎಂದು ಹೇಳಿದರೆ ತಪ್ಪಾಗಲಾರದು. ಅವಳ ಹಾಡುಗಳು ನಿದ್ರೆಯಲ್ಲಿ ಬಿದ್ದಿದ್ದ ಮನುಷ್ಯಾತ್ಮ ಗಳನ್ನು ಎಚ್ಚರಗೊಳಿಸುತ್ತಿದ್ದವು. ಅಂತರಾತ್ಮನನ್ನು ಜಾಗೃತಿಗೊಳಿಸುತ್ತಿದ್ದವು

ಈ ಹಾಡುಗಳು ಧನಿಕರಿಗಿಂತ ಬಡವರನ್ನಾಗಿದ್ದವು ಹೆಚ್ಚಿಗೆ ಆಕರ್ಷಿಸಿ ದುದು. ದೀನ ದರಿದ್ರರು ಭೈರವಿಯ ಹಾಡುಗಳನ್ನು ಕೇಳಲು ಹೆಚ್ಚಿಗೆ ಉತ್ಸುಕರಾಗಿದ್ದರು. ಉಪವಾಸದಿಂದ ಬೆಂದು ನೊಂದ ಬಡವರಿಗೆ ಈ ಹಾಡು ಗಳು ತುಸ ಶಾಂತಿಯನ್ನು ನೀಡುತ್ತಿದ್ದವು. ಅವಳ ಹಾಡುಗಳಲ್ಲಿ ಬಡತನದ ವರ್ಣನೆಯಿದ್ದಿತು. ಪರರ ಅನೀತಿಯ ಆಳ್ವಿಕೆಗೆ ಸಿಲುಕಿ ಬೇಗುದಿಗೊಂಡವರ ಸ್ಥಿತಿಯು ಅವರ್ಣನೀಯವಾಗಿದ್ದಿತು; ಕರುಣೆಯು ಹರಿಯುತ್ತಿದ್ದಿತು; ಭಯಾ ನಕ ಚಿತ್ರಗಳು ಜನರ ಕಣ್ಣುಗಳ ಮುಂದೆ ಬಂದು ನಿಲ್ಲುತ್ತಿದ್ದವು. ಧೈರ್ಯ ವನ್ನು ತಾಳಬೇಕೆಂಬ ಸಂದೇಶಗಳನ್ನು ಈ ಗೀತಿಗಳು ಜನರಿಗೆ ಮುಟ್ಟಿಸುತ್ತಿದ್ದವು. ಪ್ರಯತ್ನಿಸಿದರೆ ಬದುಕು ನಂದನವನವನ್ನಾಗಿ ಮಾಡಬಹುದೆಂಬ ಹೊಸ ಆ ಕಾಂಕ್ಷೆಗಳನ್ನು ಜನರ ಎದೆಯಲ್ಲಿ ಹುಟ್ಟಿಸುತ್ತಿದ್ದವು. ಈ ಸವಿಗಾನಗಳನ್ನು ಕೇಳಿದ ಜನರು ಚಿಂತಿಸತೊಡಗಿದರು. ಅವರ ಎದೆಗಳನ್ನು ಆವರಿಸಿದ್ದ ನಿರಾಶೆಯ ಮಂಜು ಕರಗತೊಡಗಿತು. ಗೀತೆಯು ನೀಡಿದ ನವಚೇತನವು ಅವರ ಧಮನಿ ಗಳಲ್ಲಿ ಸಂಚರಿಸತೊಡಗಿತು. ತಮ್ಮಲ್ಲಿರುವ ಚೈತನ್ಯದ ಅರಿವು ಅವರಿಗುಂಟಾ ಯಿತು. ಭೈರವಿಯ ಹಾಡುಗಳು ಅವರ ಎದೆಗಳನ್ನು ಅಗಲವಾಗುವಂತೆ ಮಾ ಡಿದವು. ಇರುಳು ಕವಿದಿದ್ದ ಆ ಗವಿಗಳಲ್ಲಿ ಬೆಳಕನ್ನು ಹರಡಿದವು. ರಸಶೂನ್ಯ ವಾದ ಜನರ ಬಾಳುವೆಗಳಲ್ಲಿ ರಸದೇವಿಯು ತನ್ನ ಕಿರಣಗಳನ್ನು ಬೀರಿದಳು. ಜನತೆಯ ಹೃದಯಗಳು ಸ್ಪಂದಿಸತೊಡಗಿದವು.

ಭೈರವಿಯು ಪ್ರಭಾತಕಾಲದ ಪಿಕವಾಗಿದ್ದಳು. ನಿದ್ದೆಯಲ್ಲಿ ಬಿದ್ದಿರುವ ಜನರನ್ನು ಕೋಗಿಲೆಯ ಸವಿಗೊರಳ ಇಂಚರವು ಎಚ್ಚರಿಸುತ್ತದೆ. ಬೆಳಕು ಹರಿದಿತು, ಭಾಸ್ಕರನು ಉದಯವಾದನು, ಈ ಸಂದೇಶವನ್ನು ಕೋಗಿಲೆಯು ಜಗತ್ತಿಗೆ ಸಾರುತ್ತದೆ. ದಾಸ್ಯನಿದ್ದೆಯಲ್ಲಿ ಬಿದ್ದಿದ್ದ ಜನಾಂಗಕ್ಕೆ ಸ್ವಾತಂತ್ರ್ಯ ಭಾನುವಿನ ಉದಯ ಸಂದೇಶವನ್ನು ಅರುಹಿ ಭೈರವಿಯು ಪಿಕದ ಕೆಲಸವನ್ನು

ಮಾಡಿದಳು. ದಾಸ್ಯ, ಬಡತನ, ಬರಗಾಲ ಇವುಗಳಿಂದ ನರಳುತ್ತಿದ್ದ ಜನರಿಗೆ ಸುಖ ಶಾಂತಿಗಳಿಂದ ಪರಿಪೂರ್ಣವಾಗಿರುವ ಒಂದು ನವಯುಗವು ಬರಲಿವೆ ಎಂಬುದನ್ನು ಅವಳು ಉಸುರಿದಳು. ಹೊಸದೊಂದು ಜಗತ್ತನ್ನು ನಿರ್ಮಿಸಲು ಜನರು ಉದ್ಯುಕ್ತರಾಗಬೇಕೆಂಬುದನ್ನು ಸೂಚಿಸಿದಳು. ಇರುಳು ಕಳೆದರೆ ಸುಪ್ರಭಾತವು ಬರುವದೆಂಬ ಭರವಸೆಯನ್ನು ಜನರಿಗೆ ನೀಡಿದಳು. ನೊಂದವರು, ಬೆಂದವರು, ದುಃಖಿತರು, ದೀನ ದರಿದ್ರರು ಇವರೆಲ್ಲಾ ಭೈರವಿಯ ಸಂದೇಶವನ್ನು ಕೇಳಿದರು. ತಮ್ಮನ್ನು ಆವರಿಸಿದ್ದ ಕ್ಲೇಶಯಾಮಿನಿಯನ್ನು ಹೊಡೆದೋಡಿಸತಕ್ಕ ಸ್ವಾತಂತ್ರ್ಯ ಭಾಸ್ಕರನುದಯವನ್ನು ಇದಿರು ನೋಡತೊಡಗಿದರು.

ಅವಳು ಮನೆಮನೆಗೆ ತೆರಳುತ್ತಿದ್ದಳು; ಜನರ ಕಷ್ಟ-ಸುಖಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದಳು. ಪಶ್ಚಾತ್ತಾಪಪರಿಪೂರ್ಣವಾದ ಸ್ವರದಲ್ಲಿ ನೊಂದ ಜನರಿಗೆ ಹೀಗೆ ಉಸುರುತ್ತಿದ್ದಳು. "ಒಳ್ಳೆಯ ಜನರೇ, ಖೇದಿಸದಿರಿ. ಕತ್ತಲೆ ಕಳೆದ ಮೇಲೆ ಹಗಲು ಬಂದೇ ಬರುತ್ತಿದೆ. ಈಗಿನ ಬಡತನದ ರಾತ್ರಿಕಳೆದರೆ ಸುಖಶಾಂತಿಗಳಿಂದ ಪರಿಪೂರ್ಣವಾದ ಒಂದು ಹಗಲು ಇದ್ದೇ ಇದೆ. ಆದುದರಿಂದ ನಿರಾಶೆಯನ್ನು ಹೊಂದಬೇಡಿ. ಎದೆಯಲ್ಲಿ ಜ್ಞಾನದ ನಂದಾದೀಪವು ಉರಿಯತೊಡಗಿದರೆ ಸುತ್ತಲೂ ಹರಡಿದ ಕತ್ತಲೆಯು ತಾನಾಗಿಯೇ ನಾಶವಾಗುವುದು. ಈ ನಮ್ಮನ್ನು ಕವಿದಿರುದ ಕಾರ್ಮುಗಿಲನ್ನು ಆತ್ಮ ಸೂರ್ಯನು ತನ್ನ ಪ್ರಕಾಶದಿಂದ ಇಲ್ಲದಾಗಿಸಲಿ. ನಮಗೆ ಬಂದ ದುರಿತಗಳನ್ನು ಹೋಗಲಾಡಿಸಲು ನಾವು ಪ್ರಯತ್ನಿಸಬೇಕಲ್ಲವೆ, ಸುಮ್ಮನೆ ಗೋಳಾಡುವುದರಿಂದ ಯಾವ ಪ್ರಯೋಜನವೂ ದೊರಕದು. ಜನರಿಗೆ ಬಂದೊದಗಿದ ದುರಿತಗಳನ್ನು ಹೋಗಲಾಡಿಸಲು ರಾಜದುರ್ಗದಲ್ಲಿ ಒಬ್ಬ ಯೋಗಿವರ್ಯನು ಪ್ರಯತ್ನಿಸುತ್ತಿದ್ದಾನೆ. ಸರಿಯಾದ ದಾರಿಯಲ್ಲಿ ನಿಮ್ಮನ್ನೆಲ್ಲಾ ಸುಖಶಾಂತಿಗಳ ಅರಮನೆಗೆ ಕರೆದೊಯ್ಯುವ ಶಕ್ತಿಯು ಆತನಲ್ಲಿದೆ. ನೀವು ಆತನು ಜರುಗಿಸುತ್ತಿರುವ ಸ್ವಾತಂತ್ರ್ಯಯಜ್ಞಕ್ಕೆ ಬೇಕಾಗುವ ಸಹಾಯ ಸಲಕರಣೆಗಳನ್ನು ಒದಗಿಸಬೇಕು. ಆ ಮಹಾತ್ಮನ ಕೈಯಲ್ಲಿ ಒಂದು ವಿದ್ಯುದ್ದೀಪವು ಉರಿಯುತ್ತಲಿದೆ; ಆದುದರಿಂದ ಪಥವನ್ನು ಕಾಣುವದಿಲ್ಲವೆಂದು ನೀವು ನರಳಬೇಕಾಗಿಲ್ಲ. ಅವನನ್ನು ಹಿಂಬಾಲಿಸಿರಿ; ಅವನ ನುಡಿಗಳನ್ನು ಅನುಸರಿಸಿರಿ. ಹಾಗಾದರೆ ನಿಮ್ಮ ದುರಿತಗಳು ನಿವಾರಣೆಯನ್ನು ಹೊಂದುವವು; ಸಂಕಟಗಳು ಮಾಯವಾಗುವವು."

ಭೈರವಿಯ ಈ ನುಡಿಗಳನ್ನು ಕೇಳಿದ ಜನರು ಅವಳಿಗೆ ಈ ಪ್ರಶ್ನೆಯನ್ನು ಹಾಕಿದರು. "ರಾಜದುರ್ಗದಲ್ಲಿರುವ ಮಹಾತ್ಮನಾರು? ಆತನು ನಮ್ಮನ್ನೆಲ್ಲ ಈ ವಿಪತ್ತುಗಳಿಂದ ಸಂರಕ್ಷಿಸುವನೇ?"

"ರಾಜದುರ್ಗದಲ್ಲಿ ಸ್ವಾತಂತ್ರ್ಯಪ್ರಭೆಯನ್ನು ಚಲ್ಲಿದ ಆ ಮಹನೀಯನ ಹೆಸರು ಜ್ಞಾನಾನಂದನೆಂದು. ಜನರು ಅನುಭವಿಸುತ್ತಿರುವ ಗೋಳನ್ನು ಇಲ್ಲದಾಗಿಸಲು ಆತ ತನ್ನ ಜೀವನವನ್ನೇ ಅರ್ಪಿಸಿದ್ದಾನೆ. ಅವನನ್ನು ನಾವು ಅನುಸರಿಸುವುದಾದರೆ ನಮ್ಮೆಲ್ಲರ ಅಭ್ಯುನ್ನತಿಯಾಗುವುದು."

"ಆತನನ್ನು ಅನುಸರಿಸುವ ಬಗೆ ಹೇಗೆ?"

"ಧೈರ್ಯವನ್ನು ತಾಳಬೇಕು. ತ್ಯಾಗವೆಂದುದಾಗಿದೆ ಆತನು ಉಪದೇಶಿಸತಕ್ಕ ಮಂತ್ರವು. ಇಂದಿನ ಪಠಾಣರ ಆಳ್ವಿಕೆಯೇ ಸಕಲ ಅನಾಹುತಗಳಿಗೆ ಮೂಲಕಾರಣವಾಗಿರುವುದರಿಂದ, ಅದನ್ನು ಇಲ್ಲದಂತೆ ಮಾಡುವುದಾಗಿದೆ ಅವನ ಉದ್ದೇಶವು. ಜನರ ಹಿತದ ಕಡೆಗೆ ದೃಷ್ಟಿಯನ್ನು ಹರಿಸದ ಇಂದಿನ ಅಧಿಕಾರಿಯನ್ನು ಹೊರ ದೂಡಿ ಪ್ರಜೆಗಳ ಕ್ಷೇಮವನ್ನು ಚಿಂತಿಸುವ ಒಬ್ಬ ಸತ್ಯವಂತನಾದ ಅರಸನ ಕೈಗೆ ನಾವು ಆಡಳಿತವನ್ನು ಕೊಡಬೇಕಾಗಿದೆ. ಈ ಕೆಲಸದಲ್ಲಿ ನೀವೆಲ್ಲರೂ ಆ ಯೋಗಿವರ್ಯನಿಗೆ ಬೆಂಬಲವನ್ನು ನೀಡತಕ್ಕದ್ದು. ನೀವು ಗಂಡಸರಿರುತ್ತೀರಿ; ಪೌರುಷವು ನಿಮ್ಮಲ್ಲಿ ನೆಲಸಿದೆ. ಭೀರುಗಳಂತೆ ಕುನ್ನಿಬಾಳಿನಿಂದ ತೃಪ್ತಿಯನ್ನು ಹೊಂದುವುದು ಸರಿಯಲ್ಲ. ಮನುಷ್ಯತ್ವವನ್ನು ನೀವು ತೋರಿಸಬೇಕು, ಮನುಷ್ಯರಂತೆ ಪ್ರಯತ್ನಿಸಬೇಕು. ನೀವು ಉದ್ಯಮಿಸದಿದ್ದರೆ ಈ ವಿಪತ್ತುಗಳು ಪರಿಹಾರವಾಗುವಂತಿಲ್ಲ. ಮನುಷ್ಯನಾದವನು ಇಂದಿಲ್ಲದಿದ್ದರೆ ನಾಳೆಯಾದರೂ ಸಾಯಬೇಕಾಗುವುದು. ಮನುಷ್ಯನ ಸ್ಥಿತಿಯು ಹೀಗಿರುವಾಗ, ಅವನೇಕೆ ತನ್ನ ಸಮಯವನ್ನು ನಾಡಿನ ಹಿತಕ್ಕಾಗಿ ವಿನಿಯೋಗಿಸಕೂಡದು? ಕುನ್ನಿಗಳಂತೆ ಎರಡು ದಿನಗಳ ವರೆಗೆ ಬದುಕಿ ಮಡಿಯುವದರಿಂದ ಯಾವ ಪ್ರಯೋಜನವಿದೆ? ಪ್ರಯತ್ನಿಸಿರಿ, ರಾಜದುರ್ಗದ ಯೋಗಿಯನ್ನು ಅನುಸರಿಸಿರಿ."

ಭೈರವಿಯು ಮೇಲೆ ಹೇಳಿದಂತೆ ಜನರಿಗೆ ಉಪದೇಶ ಮಾಡುತ್ತಿದ್ದಳು ಅವಳ ನುಡಿಗಳು ಜನರಲ್ಲಿ ವ್ಯಾಪಿಸಿದ್ದ ಅಂಜಿಕೆಯನ್ನು ಹೋಗಲಾಡಿಸಿದವು. ಅವರನ್ನು ಆಲೋಚಿಸಲಿರುವ ಶಕ್ತಿಯನ್ನು ಉತ್ತೇಜನಗೊಳಿಸಿದವು. ಅವರು ತಮಗೆ ಬಂದೊದಗಿದ ಸಂಕಟಗಳ ಕಾರಣಗಳನ್ನು ತಿಳಿದುಕೊಂಡರು. ಪರಿ

ಹಾರ ಮಾರ್ಗವನ್ನು ಕುರಿತು ಚಿಂತಿಸತೊಡಗಿದರು. ಪರದಾಸ್ಯದ ಕೆಸರಿನ ಹೊಂಡದಿಂದ ಹಿಡಿದೆತ್ತಿ ದಾರಿಯನ್ನು ತೋರಿಸಲು ಒಬ್ಬ ಪುಣ್ಯವಂತನು ಇರುವನೆಂಬುದನ್ನು ತಿಳಿಯಲು ಜನರಿಗೆ ಸಂತಸವಾಯಿತು. ಅವರು ಅನುಭವಿಸುತ್ತಲಿದ್ದ ಸಂಕಟಗಳು ಅಪಾರವಾಗಿದ್ದವು. ಭೈರವಿಯ ನುಡಿಗಳು ಧೈರ್ಯವನ್ನವಲಂಬಿಸಲು ಅವರಿಗೆ ಪ್ರೇರಣೆಯನ್ನು ನೀಡಿದವು. ಆದುದರಿಂದ ಅವರು ಭೈರವಿಯ ನುಡಿಗಳನ್ನು ಪುರಸ್ಕರಿಸಿದರು; ಜ್ಞಾನಾನಂದನನ್ನು ಅನುಸರಿಸಲು ಮನಸ್ಸು ಮಾಡಿದರು. ಜನರ ಎದೆಗಳಲ್ಲಿ ಸ್ವಾತಂತ್ರ್ಯಾಗ್ನಿಯು ಉರಿಯತೊಡಗಿತು. ಸ್ವಾಧೀನ ಜೀವನದ ನೀರಡಿಕೆಯು ಅವರಲ್ಲಿ ಅಂಕುರಿಸತೊಡಗಿತು.

ಸ್ವಾತಂತ್ರ್ಯ ಸಂದೇಶದೊಡನೆ ಭೈರವಿಯು ಪ್ರತಿಯೊಂದು ಗ್ರಾಮಕ್ಕೂ ತೆರಳಿದಳು. ಆವಳ ತಂಬೂರಿಯಿಂದ ಸ್ವಾತಂತ್ರ್ಯಗೀತೆಯು ಹೊರಟಿತು. ಅವಳ ನಾಲಿಗೆಯು ಸ್ವಾತಂತ್ರ್ಯಗಾನವನ್ನು ಮಾಡಿತು. ಅವಳು ನಾಡಿನಲ್ಲಿ ಸ್ವಾತಂತ್ರ್ಯದ ಬೆಳಕನ್ನು ಪಸರಿಸಿದಳು. ಹೆಂಗಸರು ಗಂಡಸರು ಮುದುಕರು ಇವರೆಲ್ಲಾ ಅವಳು ನುಡಿಯುತ್ತಿದ್ದುದನ್ನು ಕೇಳಿದರು; ಆ ಹಾಡುಗಳು ಅವರ ಎದೆಗಳನ್ನು ಅರಳಿಸಿದವು. "ನಮ್ಮ ನಾಡು ನಮ್ಮ ಜನರು" ಎಂಬ ಅಭಿಮಾನವು ಜನರಲ್ಲಿ ಸಂಜಾತವಾಯಿತು. ಅವರು ಸ್ವಾತಂತ್ರ್ಯ ಭಾಸ್ಕರನ ಉದಯವನ್ನು ಇದಿರು ನೋಡತೊಡಗಿದರು ಒಂದು ನುಡಿಯಲ್ಲಿ ಹೇಳುವದಾದರೆ, ಸ್ವಾತಂತ್ರ್ಯದ ಕಾಳ್ಗಿಚ್ಚು ಗ್ರಾಮಾಂತರಗಳಿಗೆ ತಲುಪಿತು. ಜನರ ಎದೆಗಳಿಂದ ಸ್ವಾತಂತ್ರ್ಯ ಗಾನಗಳು ಹೊರಸೂಸತೊಡಗಿದವು. ಇದುವರೆಗೆ ಅವರನ್ನು ಆವರಿಸಿದ್ದ ಅಂಜಿಕೆಯು ಮಾಯವಾಯಿತು.

ಅಧಿಕಾರಿಗಳು ಜನರಲ್ಲಿ ಬೆಳೆದು ಬರುತ್ತಿದ್ದ ಸ್ವಾತಂತ್ರ್ಯ ಪಿಪಾಸೆಯನ್ನು ದರ್ಶಿಸಿ ಕೋಪಾಕುಲರಾದರು. ತಮ್ಮ ಸಾಮ್ರಾಜ್ಯವೆಲ್ಲಿ ಅಡಿಮೇಲಾಗುವದೋ ಎಂಬ ಭೀತಿಯು ಅವರ ಈ ದ್ವೇಷಕ್ಕೆ ಕಾರಣವಾಗಿದ್ದಿತು. ಅತ್ಯಾಚಾರಗಳಿಂದ ಜನರನ್ನು ಮರ್ದಿಸುವದರಿಂದ ನಾಡಿನಲ್ಲಿ ಹುಟ್ಟಿದ ಜಾಗೃತಿಯನ್ನು ಅಧಿಕಾರಿಗಳು ಇಲ್ಲದಾಗಿಸಲು ಪ್ರಯತ್ನಿಸಿದರು. ಅಧಿಕಾರ ದುಷ್ಪ್ರಮತ್ತರಿಗೆ ಉದಾರ ಬುದ್ಧಿಯಾಗಲೀ, ವಿಶಾಲ ಹೃದಯವಾಗಲೀ ಇರುವದಿಲ್ಲ. ಜನರ ಕಷ್ಟ ಸುಖಗಳ ಕಡೆಗೆ ಗಮನವಿಟ್ಟು ಬಂದೊದಗಿದ ಬಿಕ್ಕಟ್ಟುಗಳನ್ನು ಅವರು ಪರಿಹರಿಸಲು ಹೊರಡುವಂತಿಲ್ಲ. ಶಸ್ತ್ರಪ್ರಯೋಗದಿಂದ ಹೊಸದಾಗಿ ಆವಿರ್ಭವಿಸಿದ

ವಿಚಾರಗಳನ್ನು ತಡೆಗಟ್ಟಲು ಅವರು ಪ್ರಯತ್ನಿಸಿದರು. ತಮ್ಮ ದಬ್ಬಾಳಿಕೆಯೇ ಜನರಲ್ಲಿ ಬೆಳೆದು ಬರುತ್ತಿರುವ ಅಸಂತೃಪ್ತಿಗೆ ಕಾರಣವೆಂದು ತಿಳಿದುಕೊಂಡು ಉದಾರಬುದ್ಧಿಯಿಂದ ತಮ್ಮ ಧೋರಣೆಯಲ್ಲಿ ಒಂದಃ ಪರಿವರ್ತನೆಯನ್ನುಂಟು ಮಾಡಲು ಅವರು ಹೊರತಲಿಲ್ಲ. ಈ ಉದಾರ ಧೋರಣೆಯನ್ನು ಅವರು ಕೈಗೊಂಡಿದ್ದರೆ ಜನರಲ್ಲಿ ವಿದ್ರೋಹ ಮನಸ್ಥಿತಿಯು ಆವಿರ್ಭವಿಸುತ್ತಿರಲಿಲ್ಲ; ಆದರೆ ಆಳುತ್ತಿದ್ದವರ ಕಣ್ಣುಗಳು ಕುರುಡಾಗಿದ್ದವು. ತಮ್ಮ ಸ್ವಾರ್ಥಸಾಧನೆಯ ಬಗ್ಗೆ ಜನರನ್ನು ತುಳಿಯಲು ಅವರು ಹಿಂಜರಿಯಲಿಲ್ಲ. ಸುಭೇದಾರ ಯಾಕೂಬಖಾನನಾದರೂ ಜನರಲ್ಲಿ ಹೆಚ್ಚಿ ಬರುತ್ತಿದ್ದ ಸ್ವಾತಂತ್ರ್ಯಾಕಾಂಕ್ಷೆಗಳನ್ನು ಕ್ರೂರ ದಬ್ಬಾಳಿಕೆಗಳಿಂದ ತಡೆಗಟ್ಟಲು ಉದ್ಯಮಿಸಿದನು. ಉಸ್ಮಾನಖಾನನಂಥ ವಿವೇಕಿಗಳು ಉದ್ಯೋಗಗಳನ್ನು ಪರಿತ್ಯಜಿಸಲು ಅವರ ಸ್ಥಾನಗಳಿಗೆ ತಿಳುವಳಿಕೆಯಿಲ್ಲದ ಮೂಢರು ಬಂದರು. ಸುಭೇದಾರ ಯಾಕೂಬಖಾನನ ನಿರ್ದೇಶಗಳಂತೆ ಪೈಶಾಚಿಕರೀತಿಯಲ್ಲಿ ಹಿಂಸಿಸಲು ಆ ಅಧಿಕಾರಿಗಳು ಹಿಂಜರಿಯಲಿಲ್ಲ.

ಭೈರವಿಯ ಮೇಲೆ ಅಧಿಕಾರಿಗಳ ಕೋಪದೃಷ್ಟಿಯು ಪತಿಸತೊಡಗಿತು. ಜನರಲ್ಲಿ ಬೆಳೆದು ಬರುತ್ತಿದ್ದ ವಿದ್ರೋಹ ಮನಸ್ಥಿತಿಗೆ ಕಾರಣಭೂತಳು ಭೈರವಿಯೆಂದು ತಿಳಿದು ಅವಳನ್ನು ಬಂಧಿಸಲು ಅಧಿಕಾರಿಗಳು ಸಜ್ಜುಗೊಳಿಸಿದರು. ಭೈರವಿಯು "ವಿದ್ರೋಹಿಣಿ; ಅವಳನ್ನು ಬಂಧಿಸಬೇಕೆ"ಂಬ ಆಜ್ಞೆಯನ್ನು ಅವರು ಹೊರಡಿಸಿದರು. ಅಧಿಕಾರಿಗಳ ಈ ಆಜ್ಞೆಯನ್ನು ಕೇಳಿ ಭೈರವಿಯು ಭಯಭೀತಳಾಗಲಿಲ್ಲ. ಅವಳು ಅಧಿಕಾರಿಗಳು ಹೊರಡಿಸಿದ ಆಜ್ಞೆಯನ್ನು ಕೇಳಿ ನಗುತ್ತಾ ಹೀಗೆ ಹೇಳಿದಳು: "ಅವರು ನನ್ನನ್ನು ಬಂಧಿಸಲಿ! ಶೂಲದೆಡೆಗೆ ಒಯ್ಯಲಿ! ಅದಕ್ಕಾಗಿ ಅಂಜುವವಳು ನಾನಲ್ಲ; ಆದರೆ ನನ್ನ ಆತ್ಮವನ್ನು ಬಂಧಿಸಲು ಅಧಿಕಾರಿಗಳಿಗೆ ಸಾಧ್ಯವಾಗದಷ್ಟೆ? ನಾನು ಸತ್ಯವನ್ನು ನುಡಿದುದೇ ಅಪರಾಧ; ನಾನು ನಿಜವನ್ನು ನುಡಿದೆನೆಂದು ಅಧಿಕಾರಿಗಳು ಪೀಡಿಸುತ್ತಿರುವಾಗ, ನೀವು ಆ ಚಿತ್ರವನ್ನು ನೋಡುತ್ತಾ ನಗುತ್ತಾ ನಿಲ್ಲುವಿರಾ? ನಿಮ್ಮ ಸಹೋದರಿಯೊಬ್ಬಳು ಪಠಾಣರ ಬಂಧನಕ್ಕೆ ಸಿಲುಕಿರುವಾಗ, ಅವಳನ್ನು ಕಾಪಾಡುವ ಚೈತನ್ಯವು ನಿಮ್ಮ ಬಾಹುಗಳಲ್ಲಿಲ್ಲವೆ?"

ಭೈರವಿಯು ಆಡಿದ ಮಾತುಗಳು ಜನರ ಹೃದಯಗಳಲ್ಲಿ ಪ್ರವೇಶಿಸಿದವು. ಅವಳನ್ನು ಬಂಧಿಸಲು ಅಧಿಕಾರಿಗಳು ಹೊರಟಿರುವರೆಂಬದನ್ನು ತಿಳಿಯಲು

ಜನರಿಗೆ ಅಪಾರವಾದ ಸಂತಾಪವುಂಟಾಯಿತು. ಭೈರವಿಯನ್ನು ಅವರು ಗೌರವಿಸುತ್ತಿದ್ದರು. ಅವಳ ಹಾಡುಗಳಿಗೆ ಅವರ ಹೃದಯಗಳು ವಶವಾಗಿದ್ದವು. ಎಲ್ಲರೂ ಅವಳನ್ನು ಆತ್ಮೀಯಭಾವದಿಂದ ನೋಡುತ್ತಿದ್ದರು. ಹೀಗೆ ಜನರ ಸ್ನೇಹಾದರಗಳಿಗೆ ಪಾತ್ರೀಭವಿಸಿದ ಭೈರವಿಯನ್ನು ಪೀಡಿಸಲಿಕ್ಕೆ ಅಧಿಕಾರಿಗಳು ಹೊರಟಿರುವರೆಂಬುದನ್ನು ತಿಳಿಯಲು ಜನರು ಸಂತಾಪಗೊಂಡುದುದರಲ್ಲಿ ಅದ್ಭುತವಿಲ್ಲ. ಭೈರವಿಯ ನುಡಿಗಳು ಅವರಲ್ಲಿರುವ ಆತ್ಮಾಭಿಮಾನವನ್ನು ಕೆರಳುವಂತೆ ಮಾಡಿದವು. ನಿರಪರಾಧಿನಿಯಾದ ಒಬ್ಬ ಹೆಂಗಸನ್ನು ಪೀಡಿಸಲು ಅಧಿಕಾರಿಗಳು ಉದ್ಯುಕ್ತರಾಗುವಾಗ, ಆ ಚಿತ್ರವನ್ನು ನೋಡುತ್ತಾ ನಿಲ್ಲುವದು ತಮ್ಮ ಗಂಡಸುತನಕ್ಕೆ ಅನುಯೋಜ್ಯವಾದುದಲ್ಲವೆಂಬ ಭಾವನೆಯು ಜನರಲ್ಲಿ ಉತ್ಪನ್ನವಾಯಿತು. ಅಧಿಕಾರಿಗಳು ಅವಳ ಮೇಲೆ ಕೈ ಮಾಡುವದಾದರೆ ಆ ಉದ್ಯಮವನ್ನು ತಡೆಯಬೇಕೆಂದು ಜನರು ನಿರ್ಧರಿಸಿದರು.

ಪಠಾಣ ಅಧಿಕಾರಿಗಳು ಜನರ ಮಧ್ಯದಲ್ಲಿ ಭೈರವಿಗೆ ಇರುವ ಸ್ವಾಧೀನ ಶಕ್ತಿಯನ್ನಾಗಲೀ, ಆಕೆಯನ್ನು ಬಂಧಿಸುವುದರಿಂದ ಜನರ ಕೋಪಾಗ್ನಿಗೆ ಪಾತ್ರೀಭವಿಸಬೇಕಾಗುವುದೆಂಬುದನ್ನಾಗಲೀ ತಿಳಿದಿರಲಿಲ್ಲ. ಊರು ಮನೆಗಳಿಲ್ಲದ ಒಬ್ಬಾಕೆಯನ್ನು ಬಂಧಿಸುವದರಿಂದ ಹೆಚ್ಚಿನ ತೊಂದರೆಗಳಿಗೆ ಒಳಗಾಗಬಹುದೆಂದು ಅವರು ವಿಚಾರಿಸಿರಲಿಲ್ಲ. ಇದಲ್ಲದೆ ಪಠಾಣರ ಆಳ್ವಿಕೆಗೆ ವಿರುದ್ಧವಾಗಿ ಬಂಡು ಮಾಡಲು ಭೈರವಿಯು ಜನರಿಗೆ ಉಪದೇಶಿಸುತ್ತಿದ್ದು, ಅವಳನ್ನು ಬಂಧಿಸುವದು ಅತ್ಯಾವಶ್ಯಕವೆಂದು ಅಧಿಕಾರಿಗಳು ಭಾವಿಸಿದರು. ಸುಭೇದಾರ ಯಾಕೂಬಖಾನನಂತೂ ಭೈರವಿಯನ್ನು ಬಂಧಿಸದಿದ್ದರೆ ಪಠಾಣರ ರಾಜ್ಯವು ಉಳಿಯಲಾರದೆಂದು ಉದ್ಘೋಷಿಸಿದನು. ಸುಭೇದಾರನ ವೇದವಾಕ್ಯ; ಅದನ್ನು ಯಾರೂ ಮೀರಿ ನಡೆಯುವಂತಿಲ್ಲ. ಸುಭೇದಾರನಿಗೆ ಬುದ್ಧಿ ಹೇಳತಕ್ಕ ವಿವೇಕವು ಇತರ ಅಧಿಕಾರಿಗಳಿಗಿರಲಿಲ್ಲ. ಆದುದರಿಂದ ಭೈರವಿಯನ್ನು ಬಂಧಿಸಲು ಅಧಿಕಾರಿಗಳು ಸನ್ನದ್ಧರಾದರು. ಅವಳನ್ನು ಹುಡುಕುತ್ತ ಸೈನಿಕರೂ ಗ್ರಾಮಾಂತರಗಳಲ್ಲಿ ಅಲೆಯತೊಡಗಿದರು.

ಭೈರವಿಯು ಎಲ್ಲಿಯೂ ಸ್ಥಿರವಾಗಿ ನಿಲ್ಲದೆ ಗ್ರಾಮಾಂತರಗಳಲ್ಲಿ ಅಲೆಯುತ್ತಿದ್ದುದರಿಂದ ಅವಳನ್ನು ಬಂಧಿಸುವದು ಅಧಿಕಾರಿಗಳಿಗೆ ಅಷ್ಟು ಸುಲಭದ ಕೆಲಸವಾಗಿರಲಿಲ್ಲ. ಅವಳನ್ನು ಅರಸುತ್ತಾ ಸೈನಿಕರು ಗ್ರಾಮಾಂತರಗಳಲ್ಲಿ ಅಲೆಯತೊಡಗಿದರು. ಅವರಿಗೆ ಜನರಿಂದ ಹೆಚ್ಚಿನ ಸಹಾಯ-ಸೌಕರ್ಯಗಳು

ಲಭಿಸಲಿಲ್ಲ. ಭೈರವಿಯು ಇರುವದೆಲ್ಲಿಯೆಂಬ ಸಂಗತಿಯನ್ನು ಸೈನಿಕರು ಜನರನ್ನು ಹಿಂಸಿಸಿದರೂ ಅವರಿಂದ ತಿಳಿಯಲು ಸಾಧ್ಯವಾಗಲಿಲ್ಲ. ಭೈರವಿಯೆಂದರೆ ಒಬ್ಬ ದೇವತೆಯಾಗಿರುವಳೆಂದು ಜನರು ಭಾವಿಸಿದ್ದರು. ಅವಳು ತಮ್ಮ ಸಹೋದರಿಯೆಂಬ ಭಾವನೆಯಿಂದ ಜನರು ವರ್ತಿಸುತ್ತಿದ್ದರು. ಸೈನಿಕರು ಜನರಿಗೆ ಚಿತ್ರ ಹಿಂಸೆಯನ್ನು ನೀಡಿದರೂ ಭೈರವಿಯ ಸಮಾಚಾರವು ಅಧಿಕಾರಿಗಳಿಗೆ ದೊರಕಲಿಲ್ಲ. ಈ ಸಂಗತಿಯಿಂದ ಜನರಲ್ಲಿ ಒಂದು ಐಕ್ಯತೆಯಿರುವದೆಂಬದು ಗೋಚರಿಸಿತು. ಭೈರವಿಯೆಲ್ಲಿ? ಎಂಬ ಸೈನಿಕರ ಪ್ರಶ್ನೆಗೆ ಅವರು ಹೀಗೆ ಜವಾಬು ಹೇಳುತ್ತಿದ್ದರು: "ಭೈರವಿಯೆಂದರೆ ನಮ್ಮ ತಾಯಿಯು. ಅವಳಿರುವದೆಲ್ಲಿ, ಎಂಬುದನ್ನು ನಾವು ಅರುಹುವಂತಿಲ್ಲ. ಆ ಪ್ರಶ್ನೆಯನ್ನು ನಮ್ಮೊಡನೆ ಕೇಳಬೇಡಿರಿ. ನಮ್ಮನ್ನು ನೀವು ಕೊಂದರೂ ಚಿಂತೆಯಿಲ್ಲ."

ಜನರ ಈ ಮಾತುಗಳಿಗೆ ಅಧಿಕಾರಿಗಳು ಏನೆಂದು ಹೇಳುವರು? ಜನರಲ್ಲಿ ತ್ಯಾಗಬುದ್ಧಿಯು ಉದಿಸಿದ್ದಿತು. ಜೀವವನ್ನು ಬಲಿಯಾಗಿ ಅರ್ಪಿಸುವ ಧೈರ್ಯವು ಅವರಲ್ಲಿ ಅಂಕುರಿಸಿದ್ದಿತು. ಜನರಲ್ಲಿ ಬೆಳೆದು ಬಂದ ಪ್ರಬುದ್ಧತೆಯನ್ನು ತಿಳಿದುಕೊಳ್ಳುವ ವಿವೇಕವು ಅಧಿಕಾರಿಗಳಿಗಿರಲಿಲ್ಲ. ಅವರು ಭೈರವಿಯ ಸಮಾಚಾರವನ್ನು ತಿಳಿದುಕೊಳ್ಳಬೇಕೆಂಬ ಆಗ್ರಹದಿಂದ ಪ್ರಜೆಗಳನ್ನು ಹಿಂಸಿಸಿದರು: ಪೀಡಿಸಿದರು; ಕರುಣೆಯಿಲ್ಲದೆ ಹೆಂಗಸರು, ಗಂಡಸರು ಇವರನ್ನೆಲ್ಲಾ ಪ್ರಹರಿಸಿದರು. ಜನರು ಸೈನಿಕರು ಕೊಡುತ್ತಿದ್ದ ತೊಂದರೆಗಳನ್ನೆಲ್ಲಾ ಸಹಿಸಿದರು. ಹಿಂಸೆಗಳಿಗೆ ತಮ್ಮ ಶರೀರಗಳನ್ನು ಒಡ್ಡಿದರು; ಆದರೂ ಭೈರವಿಯು ಇರುವುದೆಲ್ಲಿ ಎಂಬ ರಹಸ್ಯವನ್ನು ಅಧಿಕಾರಿಗಳಿಗೆ ಉಸುರಲಿಲ್ಲ. ದಂಡಾಳುಗಳು ತಮ್ಮ ಕೆಲಸದಲ್ಲಿ ಯಶಸ್ವಿಗಳಾಗದೆ ಹಿಂದಿರುಗಬೇಕಾಗಿ ಬರುತ್ತಿದ್ದಿತು.

ಹಿಂಸೆಯಿಂದ ತಮ್ಮ ಕೆಲಸವು ಸಾಧಿಸದೆಂಬುದು ಅಧಿಕಾರಿಗಳಿಗೆ ತಿಳಿಯಿತು. ಅವರು ಇತರ ಮಾರ್ಗವನ್ನು ಅವಲಂಬಿಸಲು ಹೊರಟರು. ಅವರು ತಮ್ಮ ಜೇಬುಗಳಿಂದ ಚಿನ್ನದ ನಾಣ್ಯಗಳನ್ನು ಹೊರತೆಗೆದರು. ಹೊಳೆಯುತ್ತಲಿದ್ದ ಆ ನಾಣ್ಯಗಳನ್ನು ಅವರು ಜನರಿಗೆ ತೋರಿಸಿದರು. ಹೊನ್ನಿನಾಶೆಯಿಂದ ಜನರು ಭೈರವಿಯ ಗುಟ್ಟನ್ನು ಉಸುರಬಹುದೆಂದು ಸೈನಿಕರು ಭಾವಿಸಿದರು. ಅವರ ಈ ಹಂಚಿಕೆಯು ಫಲಕಾರಿಯಾಗದಿರಲಿಲ್ಲ. ಜನರು ಎಷ್ಟು ಪ್ರಬುದ್ಧರಾಗಿದ್ದರೂ ಅವರ ಮಧ್ಯದಲ್ಲಿ ಕೆಲವು ಮಂದಿ ಕುಹಕ ಚಿತ್ತದವರು ಇದ್ದೇ ಇದ್ದರು. ಹಣದ ಮೋಹವು ಮನುಷ್ಯನಲ್ಲಿ ಹೆಚ್ಚಾಗಿರುತ್ತದೆ. ಹೊಳೆಯುತ್ತಿ

ರುವ ನಾಣ್ಯಗಳನ್ನು ಕಾಣುವಾಗ ಮನುಷ್ಯನ ಮೆದುಳಿನಿಂದ ಇತರ ತತ್ವಗಳೆಲ್ಲ ಮರೆಯಾಗುತ್ತಿರುವ ಚಿತ್ರವನ್ನು ಈ ಲೋಕದಲ್ಲಿ ನಾವು ಧಾರಾಳವಾಗಿ ಕಾಣ ಬಹುದು. ಹಣವನ್ನು ಆಶಿಸಿ ಮನುಷ್ಯನು ಸತ್ಯ ಮತ್ತು ನ್ಯಾಯಗಳನ್ನು ಉಪೇಕ್ಷಿಸಿ, ಮಾಡಬಾರದ ಕೆಲಸಗಳನ್ನು ಮಾಡುತ್ತಾನೆ. ರೂಪನಗರದ ನಿವಾಸಿಗಳೆಲ್ಲರೂ ಹರಿಶ್ಚಂದ್ರರೋ ಅಥವಾ ಶಿಬಿಚಕ್ರವರ್ತಿಗಳೋ ಆಗಿರಲಿಲ್ಲ. ಅವರೆಲ್ಲರೂ ಅಸಾಧಾರಣ ಮನುಷ್ಯರಲ್ಲದುದರಿಂದ ಅವರ ಮಧ್ಯದಲ್ಲಿ ಕುಹಕಿಗಳೂ, ದುಷ್ಟರೂ ಕೆಲವು ಮಂದಿ ಇದ್ದೇ ಇದ್ದರು. ಅಧಿಕಾರಿಗಳು ಹೊನ್ನನ್ನು ತೋರಿಸಲು, ಅದನ್ನು ಮೋಹಿಸಿ ಭೈರವಿಯ ಸಂಗತಿಯನ್ನು ಅಧಿಕಾರಿಗಳಿಗುಸುರಲು ಕೆಲವು ಮಂದಿ ಧನಮೋಹಿಗಳು ಹೊರಟರು. ಒಬ್ಬ ಮನುಷ್ಯನು ಧನದಾಸೆಯಿಂದ ಭೈರವಿಯ ಸುಳಿವನ್ನು ಅಧಿಕಾರಿಗಳಿಗೆ ಅರುಹಿದ. ಅವನೊಬ್ಬ ಬಡಪಾಯಿ. ದಾರಿದ್ರ್ಯದ ಕೆಸರ ಹೊಂಡದಲ್ಲಿ ಮುಳುಗೇಳುತ್ತಿದ್ದ ಒಬ್ಬ ನರಜೀವಿ. ಹೊಳೆಯುತ್ತಿದ್ದ ಚಿನ್ನದ ನಾಣ್ಯವು ಅವನ ಬುದ್ಧಿಯನ್ನು ಮಂಕುಗೊಳಿಸಿತು. ಹಣವು ಸೈನಿಕರಿಂದ ಲಭ್ಯವಾದರೆ ಕೆಲವು ತಿಂಗಳುಗಳ ತನಕ ಸುಖದಲ್ಲಿ ಕಾಲಯಾಪನೆ ಮಾಡಬಹುದೆಂಬ ವಿಚಾರವು ಅವನ ಮೆದುಳಿನಲ್ಲಿ ಸುಳಿದಿರಲಿಕ್ಕೆ ಸಾಕು. ಅಂತು ಆ ಬಡಪಾಯಿ ಭೈರವಿಯು ಇರುವುದೆಲ್ಲಿ ಎಂಬ ಗುಟ್ಟನ್ನು ಸೈನಿಕರಿಗೆ ಅರುಹಿದ. ಆ ಗುಟ್ಟನ್ನು ತಿಳಿಸಿ ಹೊಳೆಯುತ್ತಿದ್ದ ಕೆಲವು ನಾಣ್ಯಗಳನ್ನು ಅರ್ಜಿಸಿದ.

ಧನವನ್ನು ಕೊಟ್ಟು ಭೈರವಿಯು ಇರುವದೆಲ್ಲಿ ಎಂಬುದನ್ನು ಸೈನಿಕರು ಕಂಡು ಹಿಡಿದರು. ಆಗ ಭೈರವಿಯು ಒಂದು ಹಳ್ಳಿಯಲ್ಲಿ ಹಾಡುತ್ತಾ ಕೂಸುಗಳ ಸಂಗಡ ಆಟವಾಡುತ್ತಲಿದ್ದಳು. ಅವಳ ಮೃದು ಮೋಹಕ ಸ್ವರವು ಬಾಲಕರನ್ನು ಹರುಷದ ಕಡಲಲ್ಲಿ ತೇಲುವಂತೆ ಮಾಡುತ್ತಿದ್ದಿತು. ಅವಳಂದ ಹಾಡನ್ನೇ ಮತ್ತೆ ಹಾಡಲು ಪ್ರಯತ್ನಿಸುತ್ತಿದ್ದರಾ ಬಾಲಕರು. ಮಕ್ಕಳ ನಡುವೆ ಕುಳಿತು ತಂಬೂರಿಯನ್ನು ಮೀಟುತ್ತಿದ್ದಳು ಭೈರವಿಯು. ಹಣದಾಸೆಯಿಂದ ಭೈರವಿಯನ್ನು ಸೈನಿಕರಿಗೆ ತೋರಿಸಿಕೊಡಲು ಹೊರಟ ಆ ಬಡಪಾಯಿಯು ಶಿಶುಗಳ ಸಂಗಡ ಆಟವಾಡುತ್ತಾ ಕುಳಿತಿದ್ದ ಭೈರವಿಯನ್ನು ದಂಡಾಳುಗಳಿಗೆ ತೋರಿಸಿದ. ದೂರದಲ್ಲಿ ನಿಂತು ಆವಳ ಕಡೆಗೆ ತನ್ನ ಬೆರಳನ್ನು ಚಾಚಿ ಅವನು ಹೀಗೆ ಹೇಳಿದ: "ಅಲ್ಲಿ ನೋಡಿ, ಆ ಮಕ್ಕಳ ನಡುವೆ ಕುಳಿತು ಹಾಡುತ್ತಲಿರುವ ಹೆಂಗುಸೇ ನೀವು ಹುಡುಕುತ್ತಿರುವ ಭೈರವಿಯಾಗಿರುತ್ತಾಳೆ."

"ಓಹೋ! ಅವಳೇ ಏನು?" ಸೈನಿಕರು ತಮ್ಮ ತುಟಿಗಳನ್ನಲ್ಲಾಡಿಸಿದರು.

"ಅಹುದು." ಎಂಬ ಜವಾಬು ಅವನ ತುಟಿಗಳಿಂದ ಬಂದಿತು. ಅವನು ಅಲ್ಲಿ ಹೆಚ್ಚು ಹೊತ್ತು ನಿಲ್ಲಲಿಲ್ಲ. ಸೈನಿಕರು ಕೊಟ್ಟ ಹೊನ್ನುಗಳನ್ನು ತೆಗೆದು ಕೊಂಡು ಅವನು ಅಲ್ಲಿಂದ ತೆರಳಿದ.

ಆ ದಂಡಾಳುಗಳು ಮಕ್ಕಳಿರುವಲ್ಲಿಗೆ ಹೋದರು; ಅವರ ಉಡಿಗೆ ತೊಡಿಗೆ ಗಳು, ಅವರ ಕೈಗಳಲ್ಲಿದ್ದ ಕರವಾಳಗಳು, ಅವರ ಕರುಣೆಯಿಲ್ಲದ ಕಣ್ಣುಗಳು ಇವುಗಳು ಆ ಶಿಶುಗಳನ್ನು ಭಯಪಡಿಸಿದವು. ಸೈನಿಕರನ್ನು ಕಂಡೊಡನೆಯೇ ಎಲ್ಲರಗಿಂತಲೂ ಚಿಕ್ಕದಿದ್ದ ಶಿಶುವೊಂದು ಚೀರತೊಡಗಿತು. ಕೂಸಿನ ಈ ಕ್ರಂ ದನವನ್ನಾಶ್ರಾಮಿಸಲು ಭೈರವಿಯು ತನ್ನ ಗಾನವನ್ನು ನಿಲ್ಲಿಸಿದಳು. "ಏಕಪ್ಪಾ ನೀನು ಅಳತೊಡಗಿದೆ?" ಎನ್ನುತ್ತಾ ಅವಳು ತನ್ನ ಮೋರೆಯನ್ನು ಮೇಲಕ್ಕೆತ್ತಿ ದಳು. ಕೂಸುಗಳಿದ್ದೆಡೆಗೆ ಹತ್ತೆಂಟು ಮಂದಿ ಸೈನಿಕರು ಬರುತ್ತಿದ್ದುದು ಭೈರ ವಿಗೆ ಗೋಚರವಾಯಿತು. ಅವಳು ನುಡಿಯಾಡಲಿಲ್ಲ. ಕರದಲ್ಲಿ ತಂಬೂರಿ ಯನ್ನು ಹಿಡಿದುಕೊಂಡು ಕುಳಿತಳು. ತಮಗೆ ಪರಿಚಯವಿಲ್ಲದ ಆ ದಂಡಾ ಳುಗಳ ದರ್ಶನದಿಂದ ಭಯಪೀಡಿತರಾದ ಆ ಬಾಲಕರು ತುಟಿಗಳನ್ನು ಎರಡು ಮಾಡದೆ ಬೆಪ್ಪರಂತೆ ಕುಳಿತಿದ್ದರು.

"ಭೈರವಿಯೆಂದರೆ ನೀನೇ ಏನು?" ಸನಿಯಕ್ಕೆ ಬಂದ ಆ ದಂಡಾಳುಗಳು ಭೈರವಿಯ ಕಡೆಗೆ ತಮ್ಮ ದೃಷ್ಟಿಯನ್ನು ಚೆಲ್ಲುತ್ತಾ ಪ್ರಶ್ನಿಸಿದರು.

"ಅಹುದು; ನೀವು ಅರಸುತ್ತಲಿರುವ ಭೈರವಿಯೇ ನಾನಾಗಿದ್ದೇನೆ." ಇದಾ ಗಿದ್ದಿತು ಭೈರವಿಯ ಜವಾಬು.

"ನೀನೀಗ ನಮ್ಮ ಸೆರೆಯಾಳಾಗಬೇಕಾಗಿದೆ."

"ಏಕೆ?" ತನ್ನ ಕಣ್ಣುಗಳನ್ನು ಭೈರವಿಯು ಅಗಲಿಸಿದಳು.

"ರಾಜದ್ರೋಹ! ನಿನ್ನನ್ನು ಸೆರೆಹಿಡಿಯಲು ಸುಭೇದಾರರು ಅಪ್ಪಣೆ ಹೊರಡಿಸಿದ್ದಾರೆ."

"ಒಳ್ಳೆಯದು; ಈ ಶರೀರವನ್ನು ನೀವು ಬಂಧಿಸುವಿರಲ್ಲದೆ, ದೇಹದೊಳ ಗಿರುವ ಆತ್ಮವನ್ನು ಸೆರೆಹಿಡಿಯಲು ನಿಮಗೆ ಶಕ್ಯವಾಗದಷ್ಟೇ?"

"ಅನಾವಶ್ಯಕವಾಗಿ ಹರಟೆಕೊಚ್ಚದಿರು. ನಮ್ಮ ಹೇಳಿಕೆಯಂತೆ ನೀನು ಬರುವದಾದರೆ, ನಿನ್ನನ್ನು ನಾವು ತೊಂದರೆಗೊಳಿಸುವುದಿಲ್ಲ. ಇಲ್ಲದಿದ್ದರೆ ನಿನ್ನ ಕೈಕಾಲುಗಳನ್ನು ಬಂಧಿಸಿ ಕರೆದೊಯ್ಯಬೇಕಾಗುತ್ತದೆ."

"ಅಣ್ಣಂದಿರಾ, ಚತುರೋ ಮಾತನ್ನೇ ನೀವು ಆಡಿದಿರಿ! ನಾನು ನಿಮ್ಮನ್ನು ಹಿಂಬಾಲಿಸಬೇಕಲ್ಲವೇ? ಅದು ಆಗದ ಮಾತು. ಕುಲಿಮಾರಿಯು ಕಟುಕರ ಸಾಲೆಗೆ ತಾನಾಗಿಯೇ ಹೋಗದು." ಭೈರವಿಯು ಹೇಳಿದಳು. "ನೀವು ನನ್ನನ್ನು ಬಂಧಿಸಲು ಬಂದಿದ್ದೀರಿ; ಆದರೆ ನಾನು ಯಾವ ತಪ್ಪನ್ನು ಮಾಡಿದೆ?"

"ನಿನಗೆ ಕಿವಿಕೇಳಿಸುವುದಿಲ್ಲವೇ?" ಸೈನಿಕರು ಗರ್ಜಿಸಿದರು. ಅವರಲ್ಲಿ ಸಹನಶಕ್ತಿಯು ಉಳಿಯಲಿಲ್ಲ. "ಅನಾವಶ್ಯಕ ಮಾತುಗಳನ್ನಾಡಬೇಡ. ನಮ್ಮನ್ನು ಬೇಗನೆ ಹಿಂಬಾಲಿಸು."

"ನಾನು ಬರುವದಿಲ್ಲ." ಇದಾಗಿದ್ದಿತು ಭೈರವಿಯ ಉತ್ತರ.

"ಕತ್ತೆಯ ಮಗಳೇ!" ಬಲಾಢ್ಯ ದಂಡಾಳೊಬ್ಬ ಗರ್ಜಿಸಿದ: "ಮರ್ಯಾದೆಯಿಂದ ಹೇಳಿದರೆ ನೀನು ಕೇಳುವ ಹಾಗಿಲ್ಲ."

ಅವನು ಒಂದು ಹೆಜ್ಜೆಯನ್ನು ಮುಂದೆ ಮಡುಗಿದ. ಭೈರವಿಯ ಕರವನ್ನು ಹಿಡಿದೆಳೆಯಲು ಉಪಕ್ರಮಿಸಿದ. ಇದುವರೆಗೆ ಶಾಂತತೆಯ ಮನಸ್ಥಿತಿಯನ್ನು ಅವಲಂಬಿಸಿದ್ದ ಭೈರವಿಯ ಸ್ವಭಾವವು ಈಗ ವ್ಯತ್ಯಸ್ತವಾದ ಒಂದು ಭಾವವನ್ನು ಸ್ವೀಕರಿಸಿತು. ಅವಳ ಕಣ್ಣುಗಳು ಬೆಂಕಿಯನ್ನು ಕಾರಿದವು; ಮೋರೆಯ ಮೇಲೆ ರೌದ್ರಭಾವವು ನರ್ತಿಸತೊಡಗಿತು. ಅವಳು ತನ್ನ ಎಡಗೈಯನ್ನು ಹಿಡಿದ ಪಠಾಣನನ್ನು ತನ್ನ ಬಲಗೈಯಿಂದ ದೂಡಿದಳು. ಅವನು ತನ್ನ ಹಿಡಿತವನ್ನು ಬಿಟ್ಟು ಎರಡು ಹೆಜ್ಜೆಗಳಷ್ಟು ದೂರ ಹಿಂದಕ್ಕೆ ಸರಿದ. ಇನ್ನೊಂದು ನಿಮಿಷದಲ್ಲಿ ಭೈರವಿಯು ತನ್ನ ಮಡಲಿನಿಂದ ಹೊಳೆಯುತ್ತಿದ್ದ ಒಂದು ಕಠಾರಿಯನ್ನು ತೆಗೆಯುತ್ತಿರುವುದು ಸೈನಿಕರಿಗೆ ಗೋಚರಿಸಿತು. ಅವಳು ಕಠಾರಿಯನ್ನು ತಿರುಗಿಸುತ್ತಾ ಹೀಗೆ ಹೇಳಿದಳು: "ಮಹಾತ್ಮರೇ, ನನ್ನ ಶರೀರವನ್ನು ಸ್ಪರ್ಶಿಸಿದರೆ ನಿಮ್ಮ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ."

ಈ ದೃಶ್ಯವನ್ನು ಕಂಡು ಅಲ್ಲಿದ್ದ ಬಾಲಕರು ಬೆದರಿದರು; ಚೀರಿದರು. ನಾನಾ ಕಡೆಗಳಿಗೆ ಓಡಿದರು. ಸೈನಿಕರು ತಮ್ಮ ಖಡ್ಗಗಳನ್ನು ಹಿರಿದು ಭೈರವಿಯನ್ನು ಬಂಧಿಸಲು ಪ್ರಯತ್ನಿಸಿದರು; ಆದರೆ ಭೈರವಿಯನ್ನು ಸೆರೆಹಿಡಿಯುವುದು ಅಷ್ಟು ಸುಲಭವಾದ ಕೆಲಸವಲ್ಲ. ತನ್ನ ಕೈಯಲ್ಲಿದ್ದ ಆ ಪುಟ್ಟ ಆಯುಧವನ್ನು ಅವಳು ಬಹು ಚಾತುರ್ಯದಿಂದ ತಿರುಗಿಸುತ್ತಿದ್ದಳು. ತನ್ನ ಸನಿಯಕ್ಕೆ ಬರಲು ಯತ್ನಿಸುತ್ತಿದ್ದ ಆ ದಂಡಾಳುಗಳ ಮೇಲೆ ಅದನ್ನು ಉಪಯೋಗಿಸಲು ಅವಳು ಹಿಂದುಮುಂದೆ ನೋಡಲಿಲ್ಲ. ಅವಳನ್ನು ಹಿಡಿಯಬೇಕೆಂದು

ಮುಂದೆ ಹೋಇವ ಒಬ್ಬ ಸೈನಿಕನಿಗೆ ಭೈರವಿಯ ಕಠಾರಿಯು ತಗಲಿ ಗಾಯ ವಾಯಿತು. ಆ ಗಾಯದಿಂದ ನೆತ್ತರು ಒಂದೇಸಮನೆ ಹರಿಯತೊಡಗಿತು.

ಮಕ್ಕಳ ಆಕ್ರೋಶಗಳಿಂದ ಊರ ಜನರಿಗೆ ಭೈರವಿಗೆ ಬಂದೊದಗಿದ ಆಪತ್ತು ತಿಳಿದಿತು. ಊರ ತರುಣರು ದೊಣ್ಣೆ, ಖಡ್ಗ, ಕೊಡಲಿ ಮೊದಲಾದ ಆಯುಧಗಳನ್ನು ಹಿಡಿದುಕೊಂಡು ಈ ಅನಾಹುತವು ಜರುಗತಲಿದ್ದ ಸ್ಥಳಕ್ಕೆ ಬಂದು ಸೇರಿದರು. ಅವರು ಅಲ್ಲಿಗೆ ಬಂದು ತಲುಪಿದಾಗ, ಸೈನಿಕರು ತಮ್ಮ ಕೆಲಸದಲ್ಲಿ ನಿರತರಾಗಿದ್ದರು. ಅವರು ಭೈರವಿಯನ್ನು ಹಿಡಿದು ಹಗ್ಗಗಳಿಂದ ಕಟ್ಟಿದ್ದರು. ಒಬ್ಬ ಸೈನಿಕನು ಬಂದು ಚಾವಟಿಗೆಯಿಂದ ಭೈರವಿಯನ್ನು ಪ್ರಹರಿಸುತ್ತಲಿದ್ದನು. ಭೈರವಿಯು ಆ ವೇದನೆಯನ್ನು ಸಹಿಸಿಕೊಳ್ಳುತ್ತಾ ಸುಮ್ಮನಿದ್ದಳು. ಈ ಚಿತ್ರವು ಜನರಲ್ಲಿ ಮೂಡಿದ್ದ ವಿದ್ವೇಷವನ್ನು ಕುದಿಯುವಂತೆ ಮಾಡಿತು. ಊರ ಜನರು ಆ ಸೈನಿಕರನ್ನು ನಾಲ್ಕೂ ಪಾರ್ಶ್ವಗಳಿಂದಲೂ ಆವರಿಸಿದರು. ಅವರು ಸೈನಿಕರ ಮೇಲೆ ದೊಣ್ಣೆ, ಕೊಡಲಿ ಇವುಗಳನ್ನು ಬೀಸ ತೊಡಗಿದರು.

ಜನರ ಮಧ್ಯದಲ್ಲಿ ಇಷ್ಟು ಐಕ್ಯವಿದೆಯೆಂದಾಗಲೀ, ಅವರು ತಮ್ಮನ್ನು ಎದುರಿಸಲು ಬರುವರೆಂದಾಗಲೀ ಸೈನಿಕರು ಊಹಿಸಿರಲಿಲ್ಲ. ಆ ಪರಿಜ್ಞಾನವು ಅವರಿಗಿದ್ದಿದ್ದರೆ ಭೈರವಿಯನ್ನು ಸೆರೆಹಿಡಿಯುವ ಕೆಲಸಕ್ಕೆ ಅವರು ಕೈಹಾಕುತ್ತಿರಲಿಲ್ಲ. ನಲವತ್ತು ಐವತ್ತು ಮಂದಿ ಜನರು ಸೈನಿಕರನ್ನು ಎದುರಿಸಲು ಬಂದಿದ್ದರು. ಅಷ್ಟು ಜನರೊಡನೆ ಕಾದಾಡಿ ಸೈನಿಕರು ಜೈಸುವುದೆಂದರೆ ಆಗದ ಕೆಲಸವು. ಅಲ್ಲಿಂದ ಓಡಿ ಹೋಗಿ ತಮ್ಮ ಜೀವಗಳನ್ನು ರಕ್ಷಿಸಿಕೊಳ್ಳಲು ಸೈನಿಕರಿಗೆ ಸಾಧ್ಯವಿರಲಿಲ್ಲ ಮೃತ್ಯುದೇವತೆಯ ಮುಂದೆ ತಾವು ನಿಂತಿರುವೆವೆಂಬುದು ಅವರಿಗೆ ಭಾಸವಾಯಿತು; ಆದರೆ ಮಾಡುವುದೇನು?

ಆ ಪುಟ್ಟ ಕದನವನ್ನು ಬಣ್ಣಿಸಲು ನಾನು ಹೊರಡುವುದಿಲ್ಲ. ಅದರ ಪರಿಣಾಮವು ನಾಲ್ಕು ಮಂದಿ ಸೈನಿಕರು ಮರಣವನ್ನು ಹೊಂದಿ ಭೂಮಿಯ ಮೇಲೆ ಪತಿಸಿದುದಾಗಿದ್ದಿತು. ಉಳಿದವರು ಅಲ್ಲಿಂದ ಕಾಲುಗಳನ್ನು ಕಿತ್ತು ಓಡಿ ಹೋಗಿ ತಮ್ಮ ಜೀವಗಳನ್ನು ರಕ್ಷಿಸಿಕೊಂಡರು. ಜನರು ಭೈರವಿಯನ್ನು ಕಟ್ಟುಗಳಿಂದ ಬಿಡಿಸಿ ಸ್ವತಂತ್ರಳನ್ನಾಗಿ ಮಾಡಿದರು. ಈ ಕದನವು ಒಂದು ಪುಟ್ಟ ಸಂಭವವಾದರೂ ಹೆಚ್ಚಿನ ಮಹತ್ವವುಳ್ಳದ್ದಾಗಿದ್ದಿತು. ಏಕೆಂದರೆ ಈ ಕದನವು ಜನರಲ್ಲಿ ಹಬ್ಬಿದ ಐಕ್ಯಮತ್ಯವನ್ನೂ, ಧೀರತೆಯನ್ನೂ ಸೂಚಿಸುತ್ತ

ಲಿತ್ತು. ಈ ಸಂಭವವು ರೂಪನಗರದಲ್ಲಿ ಸ್ವಾತಂತ್ರ್ಯ ಭಾಸ್ಕರನು ಉದಿಸಲು ಇನ್ನು ಹೆಚ್ಚು ವಿಳಂಬವಿಲ್ಲವೆಂಬುದನ್ನು ಸೂಚಿಸಿತು.

---

## ೧೯ ಮಿತ್ರರಿಬ್ಬರ ಸಂಗಮ.

ಕತ್ತಲೆಯು ಹರಡಿತ್ತು. ಕೃಷ್ಣಪಕ್ಷವಾಗಿದ್ದುದರಿಂದ ಹಿಮಾಂಶುವು ಇನ್ನೂ ಉದಯವನ್ನು ಹೊಂದಿರಲಿಲ್ಲ. ಆ ಇರುಳಿನಲ್ಲಿ ರಾಜದುರ್ಗಕ್ಕಿರುವ ಪಥವನ್ನು ಹಿಡಿದು ದಾರಿಗರಿಬ್ಬರು ತೆರಳುತ್ತಿದ್ದರು. ಅವರಿಬ್ಬರನ್ನು ನೋಡಿದೊಡನೆಯೇ ಅವರು ಇಸ್ಲಾಂ ಧರ್ಮಾವಲಂಬಿಗಳೆಂಬುದು ಹೊಳೆಯದೆ ಇರಲಾರದು. ಒಬ್ಬನು ಶಾಂತಸ್ವಭಾವದವ; ಅವನ ಕಣ್ಣುಗಳಿಂದ ಸೌಮ್ಯತೆಯು ಹೊರಸೂಸುತ್ತಿದ್ದಿತು. ಇನ್ನೊಬ್ಬನು ತರುಣ. ಧೀರತೆಯು ಅವನ ವದನದಲ್ಲಿ ಕಳೆಗೊಂಡಿದ್ದಿತು. ಒಂದು ಖಡ್ಗವು ಅವನ ಹಸ್ತವನ್ನು ಅಲಂಕರಿಸಿದ್ದಿತು. ಇಬ್ಬರೂ ಮಾತಾಡದೆ ರಾಜದುರ್ಗದ ಹಾದಿಯನ್ನು ಹಿಡಿದು ಮುಂದೆ ಸಾಗುತ್ತಿದ್ದರು. ಅವರ ದೇಹಗಳು ದಣಿದುದರಿಂದ ಅವರು ಬಹು ದೂರದಿಂದ ನಡೆದು ಬರುತ್ತಿದ್ದರೆಂಬುದು ವ್ಯಕ್ತವಾಗುತ್ತಿದ್ದಿತು.

ಅವರಲ್ಲಿ ಹಿರಿಯನಾದವನು ತಾನು ಇದುವರೆಗೆ ಅವಲಂಬಿಸಿದ್ದ ಮೌನವನ್ನು ಭಂಜಿಸಿ ಮಾತಾಡಲುಪಕ್ರಮಿಸಿದ: "ಉಸ್ಮಾನ, ನಾವೀಗ ರಾಜದುರ್ಗದ ಹತ್ತಿರ ಬಂದಿರುವೆವು. ಇಲ್ಲಿಂದ ಒಂದು ಹರದಾರಿ ದೂರದಲ್ಲಿದೆ ರಾಜದುರ್ಗ. ನೋಡು, ಸುಭೇದಾರನ ಕಡೆಯ ಚಾರರು ನಮ್ಮನ್ನು ಬೆನ್ನಟ್ಟಿ ಬರುವರೋ ಎಂಬ ಸಂಶಯವು ನನಗಿದೆ."

"ಚಾರರು ನಮ್ಮ ಬೆನ್ನ ಹಿಂದೆ ಬರುವದಾದರೆ ಅವರಿಗೆ ಏನು ಮಾಡಲು ಸಾಧ್ಯವಿದೆ? ನನ್ನ ಕೈಯಲ್ಲಿ ಕರವಾಳವಿದೆ; ಇದರಿಂದ ಅವರ ಬದುಕಿನಾಟವನ್ನು ಪೂರೈಸಿದರಾಯಿತು." ತರುಣನು ತಾನು ಕೈಯಲ್ಲಿ ಹಿಡಿದ ಖಡ್ಗವನ್ನು ನೋಡುತ್ತಾ ನಿರ್ಭೀತಿಯ ಸ್ವರದಲ್ಲಿ ಹೇಳಿದನು.

"ನಿಜ, ಉಸ್ಮಾನ; ಆದರೆ ನೋಡು ಅನಾವಶ್ಯಕವಾಗಿ ಕೈಕೆಸರು ಮಾಡಿಕೊಳ್ಳುವದರಿಂದ ಯಾವ ಪ್ರಯೋಜನವಿದೆ? ಸುಭೇದಾರನಿಗೆ ಮನುಷ್ಯ ಹೃದಯವಿಲ್ಲವೆಂಬುದು ನೀನು ತಿಳಿದ ಸಂಗತಿಯಾಗಿದೆ. ನೀನು ರಾಜದುರ್ಗದಲ್ಲಿ ಅಭಯವನ್ನು ಹೊಂದಿದೆಯೆಂಬುದು ಅವನಿಗೆ ತಿಳಿದರೆ, ತನ್ನ ಬುದ್ಧಿಗನು

ಸಾರವಾಗಿ ಅವನು ತನ್ನ ಸೇಡನ್ನು ತೀರಿಸಿಕೊಳ್ಳಲು ಹೊರಡುವನು. ಅದಲ್ಲದೆ ಒಬ್ಬ ಚಾರನ ವಧೆಯು ನಿನ್ನಿಂದ ಘಟಿಸಿತೆಂಬುದನ್ನು ಅವನು ಅರಿತರೆ, ನಿಶ್ಚಯವಾಗಿಯೂ ನಿನ್ನ ತಂದೆಗೆ ಅಪಾಯವುಂಟಾಗುವದು. ಈಗ ನಿನ್ನ ತಂದೆಯು ಸೆರೆಮನೆಯಲ್ಲಿರುವದರಿಂದ ಆತನನ್ನು ರಕ್ಷಿಸುವುದು ನಮ್ಮಿಂದ ಸಾಧ್ಯವಾಗದ ಕೆಲಸವು. ಆದುದರಿಂದ ಚಾರರಿಗೆ ನಮ್ಮ ಸುಳಿವನ್ನು ಕೊಡದೆ ನಾವು ಎಚ್ಚರಿಕೆಯಿಂಡ ರಾಜದುರ್ಗವನ್ನು ಸೇರಬೇಕು."

"ತಾವು ಹೇಳುವದು ನಿಜವಿದೆ ಫಕೀರಸಾಹೇಬ; ಆದರೆ ನನ್ನನ್ನು ಒಂದು ಸಂದೇಹವು ಬಾಧಿಸಿದೆ. ರಾಜದುರ್ಗದಲ್ಲಿ ಹಿಂದುಗಳು ನಮಗೆ ಸ್ಥಳವನ್ನು ಕೊಡುವರೋ? ಅಥವಾ ನನ್ನನ್ನು ಸುಭೇದಾರನ ಕಡೆಯ ಚಾರನೆಂದು ತೊಂದರೆಗಳಿಗೆ ಒಳಪಡಿಸುವರೋ? ಈ ವರೆಗೆ ಪಠಾಣ ಅಧಿಕಾರಿಗಳು ಹಿಂದೂ ಪ್ರಜೆಗಳನ್ನು ಅನೇಕ ವಿಧದಿಂದ ಪೀಡಿಸುತ್ತಾ ಬಂದಿರುವದರಿಂದ, ರಾಜದುರ್ಗವನ್ನು ಅಧೀನಪಡಿಸಿಕೊಂಡ ವಿದ್ರೋಹಿಗಳ ಮನಸ್ಸಿನಲ್ಲಿ ಸೇಡು ತೀರಿಸಿಕೊಳ್ಳಬೇಕೆಂಬ ಆಗ್ರಹವಿರಬಹುದು. ಈ ಪ್ರತೀಕಾರ ಬುದ್ಧಿಯು ವಿದ್ರೋಹಿಗಳಲ್ಲಿರುವದಾದರೆ, ನಿಶ್ಚಯವಾಗಿಯೂ ನಾವು ಅನರ್ಥಕ್ಕೆ ಒಳಗಾಗುವೆವು."

"ಉಸ್ಮಾನ, ಚಿಂತಿಸಬೇಡ. ರಾಜದುರ್ಗದ ಸ್ಥಿತಿಗತಿಗಳನ್ನು ತಿಳಿಯದೆ ನಾನು ಆ ಕಡೆಗೆ ಹೊರಟಿಲ್ಲ. ರಾಜದುರ್ಗದಲ್ಲಿ ಪಠಾಣರ ಧಾರ್ಮಿಕ ಆಚಾರ ವಿಚಾರಗಳಿಗೆ ವಿದ್ರೋಹಿಗಳು ಯಾವ ಆತಂಕವನ್ನೂ ತಂದೊಡ್ಡಿರುವದಿಲ್ಲ. ಅಲ್ಲಿ ಪಠಾಣ ಮಹಿಳೆಯರ ಶೀಲವು ಸುರಕ್ಷಿತವಾಗಿದೆ. ಪಠಾಣ ಕುಲದಲ್ಲಿ ಜನ್ಮವೆತ್ತಿದ ತಪ್ಪಿಗಾಗಿ ಅಲ್ಲಿ ಯಾರೂ ದಂಡನೆಗೆ ಗುರಿಯಾಗುವಂತಿಲ್ಲ. ಉಸ್ಮಾನ, ನಿಮಗೆ ಇದಕ್ಕಿಂತ ಹೆಚ್ಚಾಗಿ ಬೇಕಾದುದೇನು? ಇನ್ನು ವಿದ್ರೋಹಿಗಳ ಜೀವಚೈತನ್ಯದಂತಿರುವ ಜ್ಞಾನಾನಂದನು ಬಹು ವಿವೇಕಶಾಲಿ; ಅವನು ಸತ್ಯಸ್ವರೂಪವನ್ನು ಬಲ್ಲವನಿರುತ್ತಾನೆ. ನಿಜವಾಗಿಯೂ ಅವನ ಕರ್ತವ್ಯದಕ್ಷತೆ; ತಿಳುವಳಿಕೆ, ಉದಾರಬುದ್ಧಿ ಇವುಗಳು ಸ್ತುತ್ಯಾರ್ಹವಾದವುಗಳಾಗಿವೆ; ಅವುಗಳ ಮುಂದೆ ನಾವು ಶಿರಸ್ಸುಗಳನ್ನು ತಗ್ಗಿಸಬೇಕಾಗುತ್ತದೆ. ಆ ಮನುಷ್ಯನು ವಿದ್ರೋಹಿಗಳ ನಾಯಕ ಸ್ಥಾನದಲ್ಲಿ ನಿಂತಿರುವದರಿಂದ, ಅಲ್ಲಿ ನಮ್ಮ ಜನರಿಗೆ ಯಾವ ಅಪಾಯವೂ ಸಂಭವಿಸದೆಂಬ ನಂಬಿಕೆಯು ನನಗಿದೆ."

ಈ ಮೇಲಿನ ಸಂಭಾಷಣೆಯಿಂದ ಆ ಇಬ್ಬರು ಪಥಿಕರು ಯಾರೆಂಬುದು ವಾಚಕರಿಗೆ ಹೊಳೆದಿರಬಹುದು. ಅವರು ನಮ್ಮ ಪರಿಚಿತರಾದ ಫಕೀರ

ಹುಸ್ಸೇನ ಮತ್ತು ಉಸ್ಮಾನಖಾನರಾಗಿರುತ್ತಾರೆ. ಅವರು ಗಮಿಸುತ್ತಿದ್ದುದು ವಿದ್ರೋಹಿಗಳ ಕೇಂದ್ರವಾದ ರಾಜದುರ್ಗಕ್ಕಾಗಿದ್ದಿತು. ಫಕೀರ ಹುಸ್ಸೇನನನ್ನು ರೂಪನಗರದ ಅವ್ಯವಸ್ಥಿತವಾದ ಆಳ್ವಿಕೆಯು ಬೇಸರಪಡಿಸಿದ್ದಿತು. ಅಲ್ಲಿ ಜೀವಿಸಲು ಅವನ ಅಂತರಾತ್ಮನು ಒಪ್ಪಲಿಲ್ಲ. ಸತ್ಯ ಮತ್ತು ಧರ್ಮಗಳಿಲ್ಲದ ಒಂದು ನಾಡಿನಲ್ಲಿ ವಾಸಮಾಡಲು ತಾನು ಸಿದ್ಧನಿಲ್ಲವೆಂದು ಅವನು ನುಡಿದನು. ಅವನು ವಿದ್ರೋಹಿಗಳ ಆಳ್ವಿಕೆಗೆ ಒಳಗಾದ ರಾಜದುರ್ಗಕ್ಕೆ ಹೊರಟನು. ಫಕೀರ ಹುಸ್ಸೇನನನ್ನು ಉಸ್ಮಾನನು ಹಿಂಬಾಲಿಸಿದನು ಅದೇಕೆಂಬುದು ಇನ್ನು ಮುಂದೆ ಓದುಗರಿಗೆ ಗೊತ್ತಾಗುವದು.

ರಾಜದುರ್ಗಕ್ಕೆ ಈ ಪ್ರವಾಸಿಗಳು ಬಂದು ತಲುಪಿದಾಗ ರಾತ್ರಿ ಎರಡನೆಯ ಯಾಮವು ಕಳೆದಿದ್ದಿತು. ಸುಧಾಂಶುವು ಪ್ರಾಚ್ಯ ದಿಶೆಯಲ್ಲಿ ಉದಿಸಿ ತನ್ನ ವದನ ಮಂಡಲದ ಒಂದು ಪಾರ್ಶ್ವವನ್ನು ಜಗತ್ತಿಗೆ ತೋರಿಸಲು ಪ್ರಯತ್ನಿಸುತ್ತಲಿದ್ದನು. ಕತ್ತಲೆಯು ತುಸ ಕಡಿಮೆಯಾಗಿ ಬೆಳಕು ವ್ಯಾಪಿಸತೊಡಗಿದ್ದಿತು. ಈ ವೇಳೆಯಲ್ಲಿ ಆ ಪ್ರವಾಸಿಗಳಿಬ್ಬರು ರಾಜದುರ್ಗಕ್ಕೆ ಬಂದು ಸೇರಿದರು. ಕೋಟೆಯ ಹೆಬ್ಬಾಗಿಲುಗಳು ಬಂಧಿಸಲ್ಪಟ್ಟಿದ್ದುದರಿಂದ ನಗರ ಪ್ರವೇಶವನ್ನು ಮಾಡಲು ಆ ಪಥಿಕರಿಗೆ ಸಾಧ್ಯವಾಗಲಿಲ್ಲ. ಅವರು ಹೆಬ್ಬಾಗಿಲ ಹತ್ತರ ಬಂದು ನಿಂತರು. ಅಲ್ಲಿ ಬಾಗಿಲುಗಳ ಒಳಬದಿಗೆ ಉರಿಯುತ್ತಿದ್ದ ಬೆಂಕಿಯ ಮುಂದೆ ಒಬ್ಬ ಪಹರೆಯವನು ಕುಳಿತಿರುವದು ಪ್ರವಾಸಿಗಳಿಗೆ ದೃಗ್ಗೋಚರವಾಯಿತು. ನಿದ್ದೆಯಿಂದ ಪಹರೆಯವನ ಮಸ್ತಕವು ಭಾರವಾಗಿದ್ದಿತು. ಆದುದರಿಂದ ಅವನು ಫಕೀರ ಹುಸ್ಸೇನ-ಉಸ್ಮಾನರು ಬಂದು ನಿಂತುದುದನ್ನು ಕಾಣಲಿಲ್ಲ. ಅವರು ಅವನನ್ನು ಕರೆದು ಎಬ್ಬಿಸಿದರು. ಪಹರೆಗಾರನಿಗೆ ಎಚ್ಚರವಾಗಲು ಅವನು ತನ್ನ ಪಕ್ಕದಲ್ಲಿದ್ದ ಕತ್ತಿಗೆ ಕೈ ಹಾಕಿದ. ಪಹರೆಯವನ ಈ ಕೆಲಸವನ್ನು ನೋಡಿದ ಫಕೀರ ಹುಸ್ಸೇನನು ಹೇಳಿದ. "ಅಣ್ಣಾ, ನಾವು ಶತುಗಳಲ್ಲ."

ಪಹರೆಯವನು ತನ್ನ ಕಣ್ಣುಗಳನ್ನು ಉಜ್ಜುತ್ತಾ ಎದ್ದು ನಿಂತುದಾಯಿತು. ಆ ಮೇಲೆ ಅವನು ತನ್ನ ದೃಷ್ಟಿಯನ್ನು ಹೊರಕಡೆಗೆ ಹೊರಳಿಸಿದ. ಹೊರಗೆ ನಿಂತಿದ್ದ ಪ್ರವಾಸಿಗಳಿಬ್ಬರು ಅವನಿಗೆ ಗೋಚರಿಸಿದರು. "ನೀವಾರು? ಈ ನಡುರಾತ್ರಿಯಲ್ಲಿ ಬಂದುದೇಕೆ?" ಈ ಪ್ರಶ್ನೆಗಳು ಪಹರೆಯವನ ತುಟಿಗಳಿಂದ ಉದುರಿದವು.

"ನಾವು ಪ್ರವಾಸಿಗಳು. ದಯವಿಟ್ಟು ಕದಗಳನ್ನು ಬಿಚ್ಚಿರಿ." ವಿನಯ

ಸ್ವರದಲ್ಲಿ ಫಕೀರನು ಹೇಳಿದ.

"ಈ ನಡುರಾತ್ರಿಯಲ್ಲಿ ಕದಗಳನ್ನು ತೆರೆಯಲು ಸಾಧ್ಯವಾಗದು. ನೀವು ಯಾರಿರುವಿರೆಂಬದು ಮೊದಲು ನಮಗೆ ತಿಳಿಯಬೇಕು." ಕದಗಳನ್ನು ತೆರೆಯಲು ಪಹರೆಯವನು ಒಪ್ಪಲಿಲ್ಲ.

"ಅಣ್ಣಾ, ನಾವೇನೂ ಶತ್ರುಗಳಲ್ಲ. ನಿಮ್ಮ ಜ್ಞಾನಾನಂದ ಸ್ವಾಮಿಗಳನ್ನು ಕಾಣಲು ಬಂದವರಾಗಿರುತ್ತೇವೆ. ನಾವು ನುಡಿಯುವದು ಸುಳ್ಳೆಂದು ತೋರಿದರೆ ನಮ್ಮ ಜೊತೆಯಲ್ಲಿ ನಿಮ್ಮ ಕಡೆಯ ಒಬ್ಬ ದಂಡಾಳು ಬರಲಿ."

ಜ್ಞಾನಾನಂದನ ಹೆಸರನ್ನು ಕೇಳುತ್ತಲೆ ಪಹರೆಗಾರನು ಆಲೋಚಿಸ ತೊಡಗಿದ. "ಇವರು ಪಠಾಣರು, ಜ್ಞಾನಾನಂದನನ್ನು ಕಾಣಬಂದಿರುತ್ತಾರಂತೆ-ಇದು ತುಂಬಾ ವಿಚಿತ್ರ!" ಹೀಗೆ ಅವನು ಚಿಂತಿಸಿದ. ಇಸ್ಲಾಮಿಗಳ ರಾಜ್ಯವನ್ನು ಕಿಡಿಮೇಲು ಮಾಡ ಹೊರಟ ಜ್ಞಾನಾನಂದನಿಗೆ ಈ ಇಬ್ಬರು ಪಠಾಣರು ಗಂಟು ಬಿದ್ದುದು ತುಂಬಾ ವಿಚಿತ್ರವಾಗಿ ತೋರಿತು. ಜ್ಞಾನಾನಂದನೆಂದರೆ ಅಸಾಧಾರಣ ಪುರುಷ. ಅವನನ್ನು ಕಾಣಲು ಯಾವ ಹೊತ್ತಿನಲ್ಲಿ ಯಾವ ಊರಿನಿಂದ ಯಾರೆಲ್ಲಾ ಬರುವರೆಂದು ಹೇಳಲು ಸಾಧ್ಯವಾಗದು. ಈ ಪಠಾಣರ ನುಡಿಯೂ ಅವೇಕೆ ಸತ್ಯವಾಗಬಾರದು? ಹೀಗೆ ಹಲವು ವಿಚಾರಗಳು ಪಹರೆಯವನ ಮೆದುಳಿನಲ್ಲಿ ಆವಿರ್ಭವಿಸಿದವು. ಅವನು ಹೀಗೆ ಹೇಳಿದ: "ಒಳ್ಳೆಯ ಜನರೇ, ಈ ನಡುರಾತ್ರಿಯಲ್ಲಿ ಜ್ಞಾನಾನಂದರು ಸೋದಸಿಗುವಂತಿಲ್ಲ. ಬೆಳಗಿನ ಹೊತ್ತು ಅವರು ಕಾಣಸಿಗುವರು. ಆದುದರಿಂದ ನಾನು ಹೇಳುವದನ್ನು ಕೇಳಿರಿ. ಇಲ್ಲಿ ಬೆಂಕಿಯಿದೆ. ಒಂದು ದುಪ್ಪಟಿಯನ್ನು ಬೇಕಾದರೆ ಕೊಡುವೆ-ಇಲ್ಲಿ ಬೆಳಗಿನ ತನಕ ನಿದ್ರಿಸಿ ವಿಶ್ರಮಿಸಿಕೊಳ್ಳಿರಿ. ಬೆಳಗಾದ ಮೇಲೆ ನೀವು ಅಲ್ಲಿಗೆ ಹೋಗಬಹುದು."

ಫಕೀರ ಹುಸ್ಸೇನನಿಗೆ ಪಹರೆಯವನಾಡಿದ ಮಾತುಗಳು ಸರಿದೋರಿದವು ರಾತ್ರಿ ಹೊತ್ತು ಜ್ಞಾನಾನಂದನ ವಸತಿಗೆ ತೆರಳಿ, ಅವನನ್ನು ತೊಂದರೆಪಡಿಸುವದು ಫಕೀರನಿಗೆ ಸಮಂಜಸವಾಗಿ ತೋರಲಿಲ್ಲ. ಆದುದರಿಂದ ಅವನು ಪಹರೆಯವನ ಸಲಹೆಯನ್ನು ಸ್ವೀಕರಿಸಿದ; ಪಹರೆಯವನು ಹೆಬ್ಬಾಗಿಲುಗಳನ್ನು ತೆರೆದುದಾಯಿತು. ಪ್ರವಾಸಿಗಳಿಬ್ಬರೂ ಒಳಗೆ ಪ್ರವೇಶಿಸಿದರು. ಅವರಿಗೆ ಹಾಸಡಿಸಲು ಪಹರೆಯವನು ಎರಡು ಚಾಪೆಗಳನ್ನು ತಂದುಕೊಟ್ಟನು. ಯಾತ್ರಿಕರು ತಮ್ಮ ದೂರದ ಪಯಣದಿಂದ ಬಹಳ ದಣಿದಿದ್ದರು. ಪಹರೆಯವನಾದರೋ

ದಯಾಬುದ್ಧಿಯುಳ್ಳವನಾಗಿದ್ದನು. ಯಾತ್ರಿಕರನ್ನು ಅವಲೋಕಿಸಿದೊಡನೆಯೇ ಅವರು ಬಹಳ ದಣಿದಿದ್ದಾರೆಂಬುದು ಅವನಿಗೆ ಹೊಳೆದಿತು. ಪಕ್ಕದ ಕೋಣೆಯೊಳಕ್ಕೆ ತೆರಳಿ ಕೆಲವು ಹಣ್ಣು-ಹಂಪಲಗಳನ್ನೂ ಒಂದು ಪಾತ್ರೆ ತುಂಬ ಸಿಹಿನೀರನ್ನೂ ತಂದು ಅವನು ಯಾತ್ರಿಕರ ಮುಂದೆ ಮಡಗಿದನು.

"ಬಹಳ ಉಪಕಾರವಾಯಿತಣ್ಣ." ಪಹರೆಯವನು ಹಾಸಿದ ಚಾಪೆಯ ಮೇಲೆ ಕುಳಿತುಕೊಳ್ಳಲುದ್ಯಮಿಸುತ್ತಾ ಫಕೀರ ಹುಸ್ಸೇನನು ನುಡಿದ: "ನಾವು ಬಹಳವಾಗಿ ಹಸಿದಿರುವೆವು. ನಿನ್ನ ಈ ಉಪಹಾರವನ್ನು ವಿಸ್ಮರಿಸಲು ಸಾಧ್ಯವಿಲ್ಲ."

"ನಾವು ಮನುಷ್ಯರು; ಅನ್ಯರ ಕಷ್ಟಗಳನ್ನು ತಿಳಿದು ಅವರಿಗೆ ಸಹಾಯ ಮಾಡಬೇಕಾದುದು ನಮ್ಮ ಕರ್ತವ್ಯವಾಗಿರುತ್ತದೆ." ಈ ಮಾತುಗಳು ಪಹರೆಯವನ ತುಟಿಗಳಿಂದ ಉದುರಿದವು.

"ನೋಡು, ಉಸ್ಮಾನ, ಪಹರೆಯವನ ವರ್ತನೆಯನ್ನು" ಸಿಹಿನೀರಿನಿಂದ ತನ್ನ ಪಿಪಾಸೆಯನ್ನು ಶಾಂತಗೊಳಿಸುತ್ತಾ ಫಕೀರನು ಉಸ್ಮಾನನ ಕಿವಿಗಳಲ್ಲಿ ಉಸುರಿದನು: "ಈ ಪಹರೆಯವನೇನೂ ನಮಗೆ ಪರಿಚಯದವನಲ್ಲ. ಆದರೆ ನೋಡು ಅವನ ಮನಃಸ್ಥಿತಿಯನ್ನು! ನಮ್ಮ ಬಳಲಿಕೆಯನ್ನು ಅವನು ಎಷ್ಟು ಬೇಗನೆ ತಿಳಿದ! ಇದು ಜ್ಞಾನಾನಂದನ ಜಾಣ್ಮೆಯ ಹೆಗ್ಗುರುತಾಗಿದೆ. ಅವನ ಕೈಕೆಳಗೆ ಕೆಲಸ ಮಾಡತಕ್ಕವರು ಚತುರರು, ಜಾಣರು; ಮತ್ತು ದಯಾಶಾಲಿಗಳಾಗಿರುತ್ತಾರೆ; ಆದರೆ ನಮ್ಮ ಪಠಾಣ ಪ್ರಭುತ್ವದಲ್ಲಿ ಜನರ ದುಃಖಗಳನ್ನು ಅರಿತು ಪರಿಹಾರ ಮಾಡಲು ಹೊರಡುವ ಔದಾರ್ಯವಿರುವ ಅಧಿಕಾರಿಗಳು ಎಷ್ಟು ಮಂದಿ ಇದ್ದಾರೆ? ಜ್ಞಾನಾನಂದನು ಅನ್ಯ ಧರ್ಮಾವಲಂಬಿಯಾದರೇನು? ಅವನ ಈ ಕಾರ್ಯದಕ್ಷತೆ, ದಯಾಬುದ್ಧಿಗಳನ್ನು ಮೆಚ್ಚದಿರಲು ಸಾಧ್ಯವೇ?"

ಫಕೀರನಾಡುತ್ತಿದ್ದ ನುಡಿಗಳನ್ನು ಉಸ್ಮಾನನು ಆಶ್ರಾವಿಸುತ್ತಿದ್ದ. ಹಣ್ಣುಗಳಿಂದ ತನ್ನ ಕ್ಷುದ್ಬಾಧೆಯನ್ನು ಪರಿಹರಿಸಿಕೊಳ್ಳುವದಾಗಿದ್ದಿತು ಅವನು ಆಗ ಮಾಡುತ್ತಿದ್ದ ಕೆಲಸವು. ಆತನು ಬಹುವಾಗಿ ದಣಿದಿದ್ದುದರಿಂದ ಮಾತಾಡಲು ಉತ್ಸಾಹವು ಅವನಲ್ಲಿರಲಿಲ್ಲ. ಉಸ್ಮಾನನಂತೆಯೇ ಫಕೀರನೂ ದಣಿದಿದ್ದನು. ಹಣ್ಣು ಹಂಪಲಗಳು ಅವರ ಉದರಗಳನ್ನು ಸೇರಿದವು. ಸಿಹಿನೀರಿನಿಂದ ಅವರು ತಮ್ಮ ನೀರಡಿಕೆಯನ್ನು ಹೋಗಲಾಡಿಸಿಕೊಂಡರು.

ಇಬ್ಬರೂ ಚಾಪೆಯ ಮೇಲೆ ಆಸೀನರಾಗಿ ದೇವರನ್ನು ನೆನೆಸಿದರು. ಕೆಲವು ನಿಮಿಷಗಳ ವರೆಗೆ ಅವರ ಆತ್ಮಗಳು ಧ್ಯಾನಮಗ್ನವಾದವು. ಅನಂತರ ಅವರು ಚಾಪೆಗಳ ಮೇಲೆ ಪವಡಿಸಿದರು. ಪಕ್ಕದಲ್ಲಿ ಬೆಂಕಿಯು ಉರಿಯುತ್ತಿದ್ದುದ ರಿಂದ ಚಳಿಯ ಬಾಧೆಯು ಇರಲಿಲ್ಲ. ಅವರು ಪಯಣದಿಂದ ದಣಿದುದರಿಂದ ನಿದ್ರಾಂಗನೆಯನ್ನು ಪ್ರಸನ್ನೀಕರಿಸಲು ಹೆಚ್ಚಿಗೆ ತೊಂದರೆಪಡಬೇಕಾಗಲಿಲ್ಲ. ಅವಳು ಅವರ ಕಡೆಗೆ ತನ್ನ ಕೃಪಾಕಟಾಕ್ಷವೀಕ್ಷಣವನ್ನು ಚೆಲ್ಲಿ ಅವರಿಬ್ಬರಿಗೆ ಸಪುಸಿಸ್ವೆಯ ಪೀಯೂಷವನ್ನು ನೀಡಿದಳು.

ಬೆಳಕು ಹರಿದಿತು. ನಿದ್ದೆಯಲ್ಲಿ ಬಿದ್ದಿದ್ದ ಜೀವರಾಶಿಗಳು ಜಾಗೃತವಾ ದವು. ಪ್ರಪಂಚವು ತನ್ನ ಶಾಂತತೆಯನ್ನು ಉಪೇಕ್ಷಿಸಿ ಕೋಲಾಹಲ ಪರಿ ಪೂರ್ಣವಾಗತೊಡಗಿತು. ಜನರು ತಮ್ಮ ದೈನಂದಿನ ಕೆಲಸಗಳನ್ನು ಪ್ರಾರಂ ಭಿಸಿದರು. ದೇಗುಲಗಳಲ್ಲಿ ಉಷಾಪೂಜೆಯ ಘಂಟಾನಾದಗಳು ಮೊಳಗಿದವು. ಪಹರೆಯವನ ಆತಿಥ್ಯವನ್ನು ಸ್ವೀಕರಿಸಿದ್ದ ಫಕೀರ ಹುಸ್ಸೇನ, ಉಸ್ಮಾನರು ಎಚ್ಚತ್ತರು. ಅವರು ಆ ದಿನ ಮಾಡಲು ನಿಶ್ಚಯಿಸಿದ ಮೊದಲನೆಯ ಕೆಲಸವು ಜ್ಞಾನಾನಂದನ ವಸತಿಗೆ ತೆರಳುವುದಾಗಿತ್ತು. ಪಹರೆಯವನ ಸೂಚನೆ ಯಂತೆ ಅವರಿಗೆ ದಾರಿಯನ್ನು ತೋರಿಸಿಕೊಡಲು ಒಬ್ಬ ದಂಡಾಳು ಹೊರ ಟನು. ಅವನ ಉದ್ದೇಶವು ದಾರಿಯನ್ನು ಕಾಣಿಸಿಕೊಡುವುದು ಮಾತ್ರವಾಗಿ ರಲಿಲ್ಲ. ಈ ಯಾತ್ರಿಕರಿಬ್ಬರು ಶತ್ರುಪಕ್ಷದ ಚಾರರಿರಬಹುದೆಂಬ ಸಂಶಯವು ಪಹರೆಯವನಿಗಿದ್ದಿತು. ಆದುದರಿಂದ ಸೈನಿಕನೊಬ್ಬನು ಅವರನ್ನು ಹಿಂಬಾಲಿಸಿ ರುವುದೊಳ್ಳೆಯದೆಂದು ಅವನು ನಿರ್ಧರಿಸಿದ. ಅವನ ಸಲಹೆಯಂತೆ ಸೈನಿಕ ನೊಬ್ಬನು ದಾರಿಯನ್ನು ತೋರಿಸಿಕೊಡುವ ನೆಪವನ್ನು ಹೇಳಿ ಆ ಯಾತ್ರಿಕ ರನ್ನು ಹಿಂಬಾಲಿಸಿದನು ಫಕೀರ ಹುಸ್ಸೇನನೂ, ಉಸ್ಮಾನನೂ ಶತ್ರುಪಕ್ಷದ ಚಾರರಲ್ಲದಿದ್ದುದರಿಂದ ತಮ್ಮನ್ನು ಒಬ್ಬ ಸೈನಿಕನು ಹಿಂಬಾಲಿಸುತ್ತಿರುವನೆಂದು ಭಯಪಡಬೇಕಾಗಿರಲಿಲ್ಲ.

ಯಾತ್ರಿಕರಿಬ್ಬರು ಸೈನಿಕನೊಡನೆ ಜ್ಞಾನಾನಂದನ ವಸತಿಗೆ ತಲುಪಿ ದರು. ಜ್ಞಾನಾನಂದನು ತನ್ನ ಉಷಃಕಾಲದ ಪ್ರಾರ್ಥನೆಯನ್ನು ಮುಗಿಸಿ ತನ್ನ ಅನುಯಾಯಿಗಳಿಗೆ ರಾಜಕಾರಣಕ್ಕೆ ಸಂಬಂಧಿಸಿದ ಸಲಹೆಗಳನ್ನು ನೀಡು ತ್ತಿದ್ದನು. ಇಪ್ಪತ್ತು-ಮೂವತ್ತು ಮಂದಿ ತರುಣರು ಅವನ ಸುತ್ತಲೂ ನೆರೆ ದಿದ್ದರು. ಕದಗಳ ಬಳಿಯಲ್ಲಿ ನಿಂತಿದ್ದ ಪಹರೆಗಾರನು ಆ ಯಾತ್ರಿಕರಿಬ್ಬರನ್ನು

ಒಳಗೆ ಕರೆದುಕೊಂಡು ಹೋದ. ಅಪರಿಚಿತರಾಗಿ ಮನೆಯೊಳಗೆ ಇಬ್ಬರು ಪಠಾಣರು ಪ್ರವೇಶಿಸಿದುದನ್ನು ನೋಡಿ ಅಲ್ಲಿ ನೆರೆದಿದ್ದವರು ಆಶ್ಚರ್ಯಸಂಭ್ರಾಂತರಾದರು. ಕೆಲವರು ಇವರು ಶತ್ರುಪಕ್ಷದವರಿರಲಿಕ್ಕೆ ಸಾಕೆಂದು ಮನಸ್ಸಿನಲ್ಲಿಯೇ ತರ್ಕಿಸಿದರು. ಇನ್ನು ಕೆಲವರು ಇವರನ್ನು ಒಳಗೆ ಬಿಟ್ಟುದುದಕ್ಕೆ ಪಹರೆಯುವನೊಡನೆ ಸಿಟ್ಟುಮಾಡಿದರು.

ಜ್ಞಾನಾನಂದನು ಆಗಂತುಕರ ಕಡೆಗೆ ತನ್ನ ದೃಷ್ಟಿಯನ್ನು ತಿರುಗಿಸಿದ. ಫಕೀರ ಹುಸ್ಸೇನನನ್ನು ಕಂಡು ತನ್ನ ಆಸನದಿಂದ ಎದ್ದು ನಿಂತ. ಅವನು ಫಕೀರನ ಬಳಿಗೆ ಸರಿದು ತನ್ನ ಪ್ರಣಾಮಗಳನ್ನು ಅರ್ಪಿಸಿದ. ಫಕೀರನೂ ಜ್ಞಾನಾನಂದನಿಗೆ ಪ್ರತಿ ವಂದನೆಗಳನ್ನು ಸಮರ್ಪಿಸದಿರಲಿಲ್ಲ. ಜ್ಞಾನಾನಂದನು ಫಕೀರನ ಹಸ್ತವನ್ನು ಹಿಡಿದುಕೊಂಡು ಸ್ನೇಹಪೂರ್ಣಸ್ವರದಲ್ಲಿ ಹೀಗೆ ಹೇಳಿದ: "ಈ ಕಡೆಗೆ ನೀವು ನಿಮ್ಮ ದೃಷ್ಟಿಯನ್ನು ತಿರುಗಿಸದಿದ್ದುದನ್ನು ಕಂಡು, ನೀವು ನಮ್ಮನ್ನೆಲ್ಲಾ ಮರೆತಿರಬಹುದೆಂದು ವಿಚಾರಿಸಿದ್ದೆ."

"ಸ್ವಾಮಿಜೀ," ಫಕೀರನ ತುಟಿಗಳ ಮೇಲೆ ಒಂದು ಕಿರುನಗೆಯು ಸುಳಿಸಿತು. "ನಿಮ್ಮನ್ನು ಮರೆವುವೇ? ನಿಮ್ಮ ದರ್ಶನತೆಗೆದುಕೊಳ್ಳಬೇಕೆಂಬ ಹಂಬಲದಿಂದಲೇ ರೂಪನಗರದಿಂದ ಇಲ್ಲಿಯವರೆಗೆ ನಡೆದು ಬಂದಿದ್ದೇವೆ."

"ಸಂತೋಷವಾಯಿತು. ಕುಳಿತುಕೊಳ್ಳಿ. ಹೇಮಚಂದ್ರ, ಫಕೀರಸಾಹೇಬರಿಗೆ ಕುಳಿತುಕೊಳ್ಳಲು ಒಂದು ಚಾಪೆಯನ್ನು ಕೊಡು."

ಹೇಮಚಂದ್ರನು ಒಂದು ಚಾಪೆಯನ್ನು ಹಾಸಿದ. ಫಕೀರ ಮತ್ತು ಉಸ್ಮಾನರು ಅದರ ಮೇಲೆ ಆಸೀನರಾದರು. ಜ್ಞಾನಾನಂದನು ಫಕೀರನ ಕಡೆಗೆ ತನ್ನ ಮೋರೆಯನ್ನು ತಿರುಗಿಸಿದ. "ಫಕೀರಸಾಹೇಬ, ರೂಪನಗರದಲ್ಲಿ ಜನರು ಕ್ಷೇಮದಿಂದಿರುವರೇ?"

"ಸ್ವಾಮಿಜೀ," ಫಕೀರನ ನಿರಾಸೆಯಿಂದ ತುಂಬಿದ ಸ್ವರವು ಹೊರಟಿತು. "ನಮ್ಮನ್ನು ಅಣಕಿಸುವುದಕ್ಕಾಗಿ ಈ ಪ್ರಶ್ನೆಯನ್ನು ಹಾಕಿದಂತಿದೆ. ಸತ್ಯ ಮತ್ತು ನ್ಯಾಯಗಳು ನೆಲಿಸದಲ್ಲಿ ಪ್ರಜಾಕ್ಷೇಮವು ಹೇಗೆ ಇರಬಲ್ಲದು? ಆ ದಿನ ನಾನು ನಿಮ್ಮೊಡನೆ ತರ್ಕಿಸಿದೆ. ಈ ದಿನ ನಾನು ನನ್ನ ಸೋಲನ್ನು ಒಪ್ಪಿಕೊಳ್ಳುತ್ತೇನೆ. ಇಂದಿನ ಶಾಸನದಲ್ಲಿ ಒಂದು ಪರಿವರ್ತನೆಯುಂಟಾಗಬೇಕೆಂಬ ವಾದವನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳುವೆ. ಸ್ವಾಮಿಜೀ, ಮನುಷ್ಯತ್ವವು ಎಷ್ಟು ಘೋರ ಪಾಪಗಳಿಂದ ಆವೃತ್ತವಾಗಿದ್ದರೂ, ಅದು ಕೊನೆಗೆ ಬೆಳಕಿ

ವ್ವಲ್ಲಿಗೆ ಬಂದುಸೇರಲು ಸಾಧ್ಯವಾಗಬಹುದೆಂದು ನನ್ನ ಇದುವರೆಗಿನ ವಿಶ್ವಾಸ ವಾಗಿದ್ದಿತು; ಆದರೆ ರೂಪನಗರದ ಅಧಿಕಾರಿಗಳ ಈಗಿನ ಧೋರಣೆಯನ್ನು ನಿರೀಕ್ಷಿಸುವಾಗ, ಈ ಹೃದಯ ಪರಿವರ್ತನೆಯು ಅಸದಳವಾಗಿ ತೋರು ತ್ತದೆ. ಸೌಹಾರ್ದವನ್ನು ಅಲ್ಲಿ ನೋಡುವಂತಿಲ್ಲ. ಆದುದರಿಂದ ಅನ್ಯಾಯದ ತಿಳ್ವಿಕೆಗೆ ಬೇಸತ್ತು ನಿಮ್ಮನ್ನು ಶರಣುಹೊಂದಲು ಬಂದಿರುತ್ತೇನೆ. ಎಲ್ಲಿ ಸತ್ಯ ನ್ಯಾಯಗಳಿರುವುವೋ ಅದಾಗಿದೆ ನನ್ನಊರು; ಯಾರು ಸತ್ಯಪಥದಲ್ಲಿ ಸಂಚರಿ ಸುವವರೋ ಅವರಾಗಿದ್ದಾರೆ ನನ್ನ ಜನರು!"

"ಫಕೀರಸಾಹೇಬ, ನಿಮ್ಮ ವಿಶಾಲ ಹೃದಯುವನ್ನು ನೋಡುವಾಗ ನನಗೆ ತುಂಬ ಸಂತೋಷವಾಗುತ್ತದೆ. ಈ ಜಗತ್ತಿನಲ್ಲಿ ನಿಮಗಿಂತ ಮಿಗಿಲಾದ ಆಪ್ತರು ನನಗೆ ಬೇರೊಬ್ಬರಿಲ್ಲ. ನೀವು ಜನರಿಗೆ ಮಾಡಿದ ಸಾಹಸವು ಅಪಾ ರವಾದದ್ದು. ರೂಪನಗರದಲ್ಲಿ ನಮ್ಮ ದೇವಾಲಯುವನ್ನು ರಕ್ಷಿಸಲು ನೀವು ನಿಷ್ಠುರಾದಿರಿ; ನಿಮ್ಮ ಜೀವದ ಹಂಗುತೊರೆದು ತ್ಯಾಗಕ್ಕೆ ಹೊರಟಿರಿ. ಮನುಷ್ಯ ಸಮಾಜವನ್ನು ಪ್ರೀತಿಸುತ್ತಿರುವ ನಿಮ್ಮಂಥ ಒಬ್ಬಿಬ್ಬರು ಮಹಾನುಭಾವ ರನ್ನು ನೋಡುವಾಗ ನಮ್ಮ ನಾಡಿಗೆ ಒಂದು ಭಾಸುರ ಭವಿಷ್ಯವಿದೆಯೆಂಬ ನನ್ನ ವಿಶ್ವಾಸವು ಸದೃಢವಾಗುತ್ತಲಿದೆ!"

"ಸ್ವಾಮಿಜೀ, ನಿಮ್ಮ ಅಭಿಪ್ರಾಯಗಳೊಡನೆ ನಾನು ಯೋಚಿಸುತ್ತೇನೆ. ನಾವು ಎರಡು ಸಮುದಾಯದವರು ಕಲಹಿಸುವದರಿಂದ ಜನರಿಗೆ ಕೇಡಲ್ಲದೆ ಗುಣವಿಲ್ಲ. ನಾವು ಸೌಹಾರ್ದ ಬುದ್ಧಿಯಿಂದ ವರ್ತಿಸಬೇಕಾಗಿದೆ. ಪರಸ್ಪರ ಆಚಾರ ವಿಚಾರಗಳನ್ನು ಅನ್ಯೋನ್ಯ ಗೌರವದೃಷ್ಟಿಯಿಂದ ಕಾಣಬೇಕಾಗಿದೆ."

"ನಿಜ. ನಿಮ್ಮ ತತ್ವವು ನನಗೆ ಮಾನ್ಯವಿದೆ; ಆದರೆ ಫಕೀರಸಾಹೇಬ, ಆಳುವವರ ಬುದ್ಧಿಯು ನಿರ್ಮಲವಾಗಿರಬೇಕು. ಅವರ ಹೃದಯವು ವಿಶಾಲ ವಾಗಿರಬೇಕು. ಸೌಹಾರ್ದ ದೃಷ್ಟಿಯಿಂದ ಅವರು ವರ್ತಿಸುತ್ತಿರಬೇಕು. ಹಾಗಾ ದ ನಿಮ್ಮ ತತ್ವವು ಪ್ರಯೋಗರೂಪವನ್ನು ಪಡೆಯಬಹುದು; ಆದರೆ ಆಳು ವವರು ಸಂಕುಚಿತ ದೃಷ್ಟಿಯವರಾಗಿ, ಪಕ್ಷಪಾತ ದೃಷ್ಟಿಯಿಂದ ಇನ್ನೊಂದು ಪಕ್ಷದವರಿಗೆ ಕೇಡನ್ನು ಬಗೆಯಹೊರಟರೆ, ಜನತೆಯ ಜೀವನದಲ್ಲಿ ಸೌಹಾರ್ದ, ಸುಖ, ಶಾಂತಿಗಳು ಗೋಚರಿಸವು. ಸ್ವಾಭಾವಿಕವಾಗಿಯೇ ಆಳುವವರಿಂದ ಬಂದೊದಗಿದ ಪೀಡನೆಗಳಿಗೆ ತಕ್ಕ ಪ್ರತೀಕಾರವನ್ನು ಮಾಡಬೇಕೆಂಬ ಬುದ್ಧಿ ಯು ಜನರಲ್ಲಿ ಹುಟ್ಟುತ್ತದೆ ಆದುದರಿಂದ ನೀತಿ ನ್ಯಾಯಗಳಿಗೆ ಹೊರಗಾದ

ಇಂದಿನ ಶಾಸನ ಪದ್ಧತಿಯನ್ನು ನಿರ್ಮೂಲಗೊಳಿಸದೆ, ಸೌಹಾರ್ದವನ್ನು ಜನತೆಯ ಮಧ್ಯದಲ್ಲಿ ನೆಟ್ಟು ಬೆಳಸಲು ಸಾಧ್ಯವಿಲ್ಲ. ಆದುದರಿಂದಲೇ ಇಂದಿನ ಶಾಸನ ವ್ಯವಸ್ಥೆಗಳನ್ನು ಚೂರ್ಣೀಕರಿಸಲು ನಾನು ಹೊರಟಿರುತ್ತೇನೆ. ಮುರಿದು ಬೀಳಲಾಗಿರುವ ಹಳೇ ಮನೆಯನ್ನು ನೆಲಸಮ ಮಾಡದೆ ಅಲ್ಲಿ ರಮ್ಯ ಹರ್ಮ್ಯವನ್ನು ನಿರ್ಮಿಸಲು ಸಾಧ್ಯವಾಗುವಂತಿಲ್ಲ. ಈಗಿನ ದುಷ್ಪ್ರಭುತ್ವವು ಹೋಗಬೇಕು. ನೀತಿ ನ್ಯಾಯಗಳನ್ನು ತಳಹದಿಯಾಗಿ ಸ್ವೀಕರಿಸುವ ಒಂದು ನೂತನ ಶಾಸನ ಸಂಸ್ಥೆಯು ಸಂಸ್ಥಾಪಿತದಾಗಬೇಕು. ಈ ಒಂದು ಕೆಲಸಕ್ಕಾಗಿ,-ಈ ಒಂದು ಉದ್ದೇಶಸಾಧನೆಗಾಗಿ,-ನಾನು ಹೆಣಗುತ್ತಿದ್ದೇನೆ. ಈ ನನ್ನ ಪ್ರಯತ್ನವನ್ನು ಯಶಸ್ವಿಯಾಗುವಂತೆ ಮಾಡು ಎಂಬುವೇ ಸರ್ವ ಶಕ್ತನೊಡನೆ ನನಗಿರುವ ಪ್ರಾರ್ಥನೆಯಾಗಿದೆ."

"ಸ್ವಾಮಿಜೀ, ನಿಮ್ಮ ಉದ್ದೇಶವು ಪವಿತ್ರವಾದುದು. ಸ್ವಾರ್ಥತೆಯ ಸ್ಪರ್ಶನವದರಲ್ಲಿಲ್ಲ. ಜನರ ಹಿತಸಾಧನೆಗಾಗಿ ನೀವು ಜರುಗಿಸುತ್ತಿರುವ ಪ್ರಯತ್ನವು ಯಶಸ್ವಿಯಾಗಲಿ." ಫಕೀರನು ತನ್ನ ಮಾತುಗಳನ್ನು ಮುಂದುವರಿಸಿದನು. "ಸ್ವಾಮಿಜೀ, ಈ ಔಪಚಾರಿಕದ ಮಾತುಕತೆಗಳಿಂದ ಇನ್ನು ನಮ್ಮ ದೃಷ್ಟಿಗಳನ್ನು ಕಾರ್ಯದ ಕಡೆಗೆ ತಿರುಗಿಸುವಾ. ಒಂದು ಮಹತ್ವದ ಕೆಲಸಕ್ಕಾಗಿ ನಾನು ಇಷ್ಟು ದೂರ ಬಂದಿರುವೆನು."

"ಫಕೀರಸಾಹೇಬ, ನಿಮ್ಮ ಕೆಲಸದಲ್ಲಿ ನನ್ನಿಂದ ಸಾಧ್ಯವಾಗಬಹುದಾದ ಎಲ್ಲಾ ಸಹಾಯ-ಸಲಕರಣೆಗಳನ್ನು ನೀಡಲು ಸಿದ್ಧನಿದ್ದೇನೆ." ಜ್ಞಾನಾನಂದನು ನುಡಿದನು. "ನಿಮ್ಮನ್ನು ಇಲ್ಲಿಗೆ ಬರುವಂತೆ ಮಾಡಿದ ಆ ಮಹತ್ವದ ಕೆಲಸವು ಯಾವುದು?"

"ನನ್ನ ಸಂಗಡ ಬಂದ ಈ ತರುಣನ ಪರಿಚಯವು ಸ್ವಾಮಿಜಿಯವರಿಗೆ ಇಲ್ಲವೆಂದು ತೋರುತ್ತದೆ."

"ಇಲ್ಲ; ನಿಮ್ಮ ಸಂಗಡಿಗರನ್ನು ನಾನು ತಿಳಿದಿಲ್ಲ."

"ಈ ತರುಣನ ಹೆಸರು ಉಸ್ಮಾನಖಾನನೆಂದು. ಇವನು ಈ ಮೊದಲು ಸುಭೇದಾರ ಯಾಕೂಬಖಾನನ ಕೈಕೆಳಗೆ ಒಬ್ಬ ಸುಭೇದಾರನಾಗಿದ್ದನು; ಆದರೆ ಇವನೂ ಇವನ ತಂದೆಯೂ ಸತ್ಯನಿಷ್ಠರೂ, ದಯಾರ್ದ್ರ ಹೃದಯರೂ ಆಗಿರುತ್ತಾರೆ. ಈ ಕ್ಷಾಮಕಾಲದಲ್ಲಿ ಕರವಸೂಲಿಯ ಬಗ್ಗೆ ಪ್ರಜೆಗಳನ್ನು ಯಾವ ರೀತಿಯಲ್ಲಿ ಹಿಂಸಿಸಿದರೂ ಚಿಂತೆಯಿಲ್ಲವೆಂಬ ನಿರೂಪವನ್ನು ಸುಭೇದಾರರು

ಹೊರಡಿಸಿದರು; ಆದರೆ ದಯೆ ಮತ್ತು ಜನರ ಹಿತಚಿಂತನೆ ಇವುಗಳಿಂದ ಕೂಡಿದ ಇವನ ಮನಸ್ಸಾಕ್ಷಿಯು ಈ ಕ್ರೂರ ಕೃತ್ಯವನ್ನು ಒಪ್ಪಲಿಲ್ಲ. ಆದುದರಿಂದ ಉಸ್ಮಾನನು ತನ್ನ ಉದ್ಯೋಗವನ್ನು ಪರಿತ್ಯಜಿಸಿದನು."

"ಫಕೀರಸಾಹೇಬ, ಪಠಾಣರಲ್ಲಿಯೂ ಸತ್ಯ ಮತ್ತು ನ್ಯಾಯಬುದ್ಧಿಯಿಂದ ಕೂಡಿದ ಕೆಲವು ಮಂದಿ ಇದ್ದಾರೆಂಬುದನ್ನು ತಿಳಿಯಲು ನನಗೆ ತುಂಬಾ ಸಂತೋಷವಾಯಿತು. ಉಸ್ಮಾನಖಾನ, ನಾನು ನಿಮ್ಮ ನಿಃಸ್ವಾರ್ಥ ಬುದ್ಧಿಯನ್ನು ಮೆಚ್ಚಿರುವೆ." ಜ್ಞಾನಾನಂದನು ಉಸ್ಮಾನನನ್ನು ಅಭಿನಂದಿಸಿದ.

"ಇಷ್ಟು ಮಾತ್ರವಲ್ಲ;" ಫಕೀರನು ತನ್ನ ನುಡಿಗಳನ್ನು ಮುಂದುವರಿಸಿದನು: "ಈಗ ಕೆಲವು ವಾರಗಳ ಹಿಂದೆ ನಮ್ಮ ಸುಭೇದಾರರು ದುರ್ಜಯಸಿಂಹನೆಂಬುವವನ ಸಹಾಯದಿಂದ ಒಬ್ಬ ಕುಲಯುವತಿಯ ಶೀಲವನ್ನು ಭಂಗಪಡಿಸಲು ಉದ್ಯುಕ್ತರಾಗಿದ್ದರು. ಈ ದುರ್ಜಯನ ಮಡದಿಯು ಸದ್ಗುಣಸಂಪನ್ನಳಾದ ಒಬ್ಬ ಸಾಧ್ವಿಯಿರುತ್ತಾಳೆ. ಅವಳು ಸುಭೇದಾರ ಮತ್ತು ದುರ್ಜಯ ಇವರ ಗೂಢ ತಂತ್ರವನ್ನು ನಮಗೆ ಅರುಹಿದಳು. ಉಸ್ಮಾನನ ಸಹಾಯದಿಂದ ಆ ಕುಲವನಿತೆಯನ್ನು ಸುಭೇದಾರನ ಹಸ್ತದಿಂದ ಕಾಪಾಡಲು ನನಗೆ ಸಾಧ್ಯವಾಯಿತು. ತನ್ನ ಆಮೋದ-ಪ್ರಮೋದಗಳನ್ನು ಉಸ್ಮಾನನು ಆತಂಕಪಡಿಸಿದನೆಂದು ಸುಭೇದಾರನಿಗೆ ಉಸ್ಮಾನನ ಮೇಲೆ ವಿದ್ವೇಷವಿದೆ. ಸುಭೇದಾರನು ಉಸ್ಮಾನನನ್ನು ಇಲ್ಲದಾಗಿಸಬೇಕೆಂದು ಎರಡು ಮೂರು ಸಲ ಪ್ರಯತ್ನಿಸದಿರಲಿಲ್ಲ; ಆದರೆ ಉಸ್ಮಾನನು ಜಾಗರೂಕನಾಗಿದ್ದುದರಿಂದ ಸುಭೇದಾರನ ಉದ್ಯಮವು ಫಲಿಸಲಿಲ್ಲ. ಕೊನೆಗೆ ಸುಭೇದಾರನು ಉಸ್ಮಾನನ ಮೇಲೆ ತನಗಿದ್ದ ವೈರವನ್ನು ಉಸ್ಮಾನನ ತಂದೆಯ ಕಡೆಗೆ ತಿರುಗಿಸಿದನು."

"ಈ ತರುಣರ ತಂದೆಯವರಿಗೆ ಆಪತ್ತು ಬಂದೊದಗಿತೇ?" ಜ್ಞಾನಾನಂದನು ಪ್ರಶ್ನಿಸಿದ.

"ಅಹುದು; ಯಾವ ಗೊಂದಲದಲ್ಲಿಯೂ ಕೈ ಹಾಕದೆ ತನ್ನ ನಿಕೇತನದ ವಿಶ್ರಾಮವನ್ನು ಅನುಭವಿಸುತ್ತಲಿದ್ದ ಆ ಮುದುಕನು ಸುಭೇದಾರನ ಬಂಧನಕ್ಕೊಳಗಾದನು, ಎಂದು ಮಾತ್ರವಲ್ಲ, ಸುಭೇದಾರನು ಆ ವೃದ್ಧನ ಎರಡೂ ಕಣ್ಣುಗಳನ್ನು ಕೀಳಿಸಿದನು!"

"ಈ ಭಯಾನಕ ಕೃತ್ಯದಲ್ಲೇಕೆ ಸುಭೇದಾರನು ಉದ್ಯುಕ್ತನಾದ? ಆತನಿಗೆ ಸಠಾಣರ ಮೇಲೆ ಸ್ನೇಹ-ಮಮತೆಗಳು ಅಪಾರವಾಗಿವೆಯೆಂದಿದ್ದೆ."

"ಅದು ಜೊಳ್ಳು ಮಾತು; ಉಸ್ಮಾನನಿರುವದೆಲ್ಲಿ ಎಂಬುದನ್ನು ಸುಭೇದಾರನಿಗೆ ಅರುಹದಿದ್ದುದಕ್ಕಾಗಿದೆ ಈ ರೌದ್ರವಾದ ಶಿಕ್ಷೆಯು. ಕಣ್ಣುಗಳೆರಡನ್ನೂ ಕಳೆದುಕೊಂಡು ಬಂಧನದಲ್ಲಿ ನರಳುತ್ತಿರುವ ತನ್ನ ತಂದೆಯನ್ನು ಮರಳಿ ಪಡೆಯುವ ಕೆಲಸದಲ್ಲಿ ನಿಮ್ಮ ಸಹಾಯವನ್ನು ಕಾಂಕ್ಷಿಸಿ ಉಸ್ಮಾನನು ಇಲ್ಲಿಗೆ ಬಂದಿರುತ್ತಾನೆ. ಈ ಮೇಲಿನ ಎಲ್ಲಾ ಸಂಭವಗಳಿಂದ ಅವನಿಗೆ ಆಳುವವರ ಮೇಲಿದ್ದ ವಿಶ್ವಾಸವು ಅಳಿಸಿದೆ. ಆದುದರಿಂದ ಸತ್ಯದ ದಾರಿಯನ್ನು ಅವಲಂಬಿಸಿ ನಡೆಯುತ್ತಿರುವ ಅನ್ಯಧರ್ಮದ ಬಾಂಧವರೊಡನೆ ಒಂದುಗೂಡಲು ಇವನು ಬಯಸುತ್ತಿದ್ದಾರೆ. ಈ ತರುಣನಿಗೆ ನಿಮ್ಮ ಕೈಲಾದ ಸಹಾಯವನ್ನು ಮಾಡಬೇಕೆಂಬುದು ನನ್ನ ಅಪೇಕ್ಷೆಯಾಗಿದೆ. ನಾನು ರಾಜಕಾರಣದ ರಂಗದಲ್ಲಿ ಪ್ರವೇಶಿಸಲು ಬಯಸುವದಿಲ್ಲ; ಆದರೆ ಒಂದು ದೇಶದ ಅಭ್ಯುನ್ನತಿಯನ್ನು ಕಾಂಕ್ಷಿಸಿ ನೀವು ನಡೆಯುತ್ತಿರುವ ಸ್ವಾತಂತ್ರ್ಯಸಾಧನೆಗೆ ನನ್ನ ಪರಿಪೂರ್ಣವಾದ ಆತ್ಮೀಯ ಬೆಂಬಲವಿದೆ; ಸಹಾನುಭೂತಿಯಿದೆ."

ಫಕೀರನು ಉಸ್ಮಾನನ ವೃತ್ತಾಂತವನ್ನು ಜ್ಞಾನಾನಂದನಿಗೆ ಅರುಹಿದ ಅನಂತರ ತನ್ನ ಮಾತುಗಳನ್ನು ನಿಲ್ಲಿಸಿದ. ಜ್ಞಾನಾನಂದನು ಸ್ವಲ್ಪ ಸಮಯದವರೆಗೆ ಆಲೋಚನಾ ನಿರತನಾದನು. ಆ ಮೇಲೆ ಅವನ ತೀಕ್ಷ್ಣದೃಷ್ಟಿಯು ಉಸ್ಮಾನನ ಕಡೆಗೆ ಚಲಿಸಿ, ಅವನ ಮುಖಭಾವಗಳಿಂದ ಅವನ ಸ್ವಭಾವಗಳೇನೆಂಬುದನ್ನು ತಿಳಿಯಲೆತ್ನಿಸಿತು. ಅಲ್ಲಿ ಶೂರತನ, ಸತ್ಯನಿಷ್ಠೆ, ಕರುಣೆ ಇವುಗಳಲ್ಲದೆ ಬೇರೆ ಯಾವದೂ ಗೋಚರಿಸಲಿಲ್ಲ. ಉಸ್ಮಾನನ ಮೋರೆಯನ್ನು ನೋಡಲು ಜ್ಞಾನಾನಂದನಿಗೆ ಈ ತರುಣನನ್ನು ನಂಬಬಹುದು ಎಂದೆನಿಸಿತು. ಅವನು ಉಸ್ಮಾನನ ಕಡೆಗೆ ತನ್ನ ದೃಷ್ಟಿಯನ್ನು ಓಡಿಸುತ್ತಾ ಹೀಗೆ ಹೇಳಿದ: "ಉಸ್ಮಾನಖಾನ, ನಿಮಗೆ ಬಂದೊದಗಿದ ಆಪತ್ತನ್ನು ತಿಳಿದು ನಾನು ವಿಷಾದಿಸುತ್ತೇನೆ. ನೀವು ತಿಳುವಳಿಕೆಯುಳ್ಳವರಿರುತ್ತೀರಿ. ಸ್ವಾರ್ಥತತ್ಪರತೆಯಿಂದ ಪರಿಪೂರ್ಣವಾದ ದುಷ್ಪ್ರಭುತ್ವದಲ್ಲಿ ಆಗಾಗ ಗೋಚರಿಸುತ್ತಿರುವ ಈ ಧರ್ಮಾಭಿಮಾನವು ಹುರುಳಿಲ್ಲದುದಾಗಿದೆ, ಎಂಬುದು ನಿಮಗೆ ಬಂದೊದಗಿದ ಆಪತ್ತಿನಿಂದ ವ್ಯಕ್ತವಾಗುತ್ತದೆ. ಪೈಶಾಚಿಕವಾದ ತಮ್ಮ ಸ್ವಾರ್ಥತೆಯನ್ನು ಪೂರೈಸಲು ಅಧಿಕಾರಿಗಳು ನಡೆಸುತ್ತಲಿರುವ ಹೀನಾಚರಣೆಗಳಿಗೆ ಅವರು ಧರ್ಮದ ಮುಸುಕು ಹಾಕುತ್ತಿದ್ದಾರಲ್ಲದೆ, ಅವರ ಈ ಹೀನ ಕೆಲಸಗಳಿಗೆ ಯಾವ ಧಾರ್ಮಿಕ ತಳಹದಿಯೂ ಇಲ್ಲವೆಂಬುದು ಈ ಸಂಭವದಿಂದ ಪ್ರತ್ಯಕ್ಷವಾಗುತ್ತದೆ. ಜನ

ಹಿತದ ಕಡೆಗೆ ನೀವು ನಿಮ್ಮ ದೃಷ್ಟಿಯನ್ನು ತಿರುಗಿಸದಿದ್ದರೆ; ಸುಭೇದಾರನ ಪೈಶಾಚಿಕ ಆಗ್ರಹಕ್ಕೆ ಬಲಿಯಾಗಲಿದ್ದ ಆ ಕುಲವನಿತೆಯನ್ನು ಕಾಪಾಡಲು ನೀವು ಹೊರಡದಿದ್ದರೆ, ನಿಮಗೆ ಈ ಆಪತ್ತು ಬರುತ್ತಿರಲಿಲ್ಲ. ಮನುಷ್ಯ ಸಹಜನಾದ ದಯಾಬುದ್ಧಿಯನ್ನು ಪ್ರದರ್ಶಿಸುವದು, ಮಹಿಳೆಯರ ಮಾನವನ್ನು ಕಾಯ್ವುದು ಇವುಗಳು ಇಂದಿನ ಆಳ್ವಿಕೆಯಲ್ಲಿ ದಂಡನಾರ್ಹವೆನಿಸಿದ ಅಪರಾಧಗಳಾಗಿ ಪರಿಣಮಿಸಿವೆ. ಇಂಥ ಒಂದು ದುಷ್ಪ್ರಭುತ್ವವನ್ನು ಇಲ್ಲದಾಗಿಸಬೇಕಾಗಿದೆ. ಅಲ್ಲದಿದ್ದರೆ ಜನರ ಕಷ್ಟಗಳು ಪರಿಹಾರವಾಗುವಂತಿಲ್ಲ. ಮಹಿಳೆಯರ ಶೀಲವು ಸುರಕ್ಷಿತವಾಗಿರುವಂತಿಲ್ಲ! ಒಂದುವೇಳೆ ನಿಮಗೆ ನಾನು ಹೇಳುವುದು ಸರಿದೋರದಿರಲಿಕ್ಕೆ ಸಾಕು; ನಾವು ಹೊರಟಿರುವದು ಈ ಪೈಶಾಚಿಕ ಆಡಳಿತದ ಅವತಾರವನ್ನು ಸಮಾಪ್ತಿಗೊಳಿಸುವದಕ್ಕಾಗಿರುತ್ತದೆ. ನಮ್ಮ ಆಡಳಿತದಲ್ಲಿ ಧರ್ಮದ ಹೆಸರಿನಿಂದ ಯಾರಿಗೂ ಪೀಡನೆಯುಂಟಾಗದು. ಸತ್ಯ ಮತ್ತು ನ್ಯಾಯಗಳನ್ನು ಅವಲಂಬಿಸಿ ಜೀವಿಸುತ್ತಿರುವ ಪ್ರತಿಯೊಬ್ಬ ನರಜೀವಿಯ ಕ್ಷೇಮದ ಕಡೆಗೆ ನಾವು ದೃಷ್ಟಿಯನ್ನು ಮಡಗಿದ್ದೇವೆ. ಪಠಾಣ ಜನರ ಮೇಲೆ ನಮಗೆ ಯಾವ ವಿದ್ವೇಷವೂ ಇಲ್ಲ. ಇಲ್ಲಿ ಅವರ ಆಚಾರ ವಿಚಾರಗಳಿಗೆ ಯಾವ ತರದ ಆತಂಕವನ್ನೂ ತಂದೊಡ್ಡುವದಿಲ್ಲ. ಈ ಎರಡು ಸಮಾಜದವರೂ ಪರಸ್ಪರ ಸೌಹಾರ್ದದಿಂದ ವರ್ತಿಸಬೇಕೆಂಬುದು ನಮ್ಮ ಆಕಾಂಕ್ಷೆಯಾಗಿದೆ. ನೀವು ನಮ್ಮ ಪಾಳಯಕ್ಕೆ ಬರುವದಾದರೆ ನಿಮ್ಮನ್ನು ನಾವು ಆದರದಿಂದ ಸ್ವೀಕರಿಸುವೆವು. ನಿಮ್ಮ ತಂದೆಯವರ ಬಂಧಮೋಚನದ ಬಗ್ಗೆ ನಮ್ಮಿಂದಾಗಬಹುದಾದ ಎಲ್ಲಾ ಸಹಾಯವನ್ನು ಮಾಡುವೆವೆಂದು ಭರವಸೆಯನ್ನು ನೀಡುತ್ತೇವೆ. ನಮ್ಮ ಸಂಗಡ ನೀವು ಜೀವಿಸಬಹುದು; ಮೈತ್ರಿಯಿಂದ ಬಾಳಬಹುದು."

ಇದುವರೆಗೆ ಮೌನವನ್ನವಲಂಬಿಸಿ ಕುಳಿತಿದ್ದ ಉಸ್ಮಾನನು ಹೇಳಿದ: "ಸ್ವಾಮಿಜೀ, ನಿಮ್ಮ ಉದಾತ್ತ ಧ್ಯೇಯವನ್ನೂ, ನಿಮ್ಮ ಪಾವನ ಸಾಧನೆಯನ್ನೂ ಈ ಮೊದಲೇ ಫಕೀರ ಸಾಹೇಬರಿಂದ ಕೇಳಿ ತಿಳಿದಿದ್ದೆ. ಈಗ ತಮ್ಮ ದರ್ಶನವನ್ನು ಪಡೆದು ತಮ್ಮ ಧ್ಯೇಯ ಮತ್ತು ಸಾಧನೆಗಳನ್ನು ಪ್ರತ್ಯಕ್ಷವಾಗಿ ನೋಡುವ ಸುಯೋಗವು ನನಗೆ ದೊರಕಿತು. ಫಕೀರ ಸಾಹೇಬರು ನುಡಿದಂತೆ ನಿಮ್ಮ ಆಶ್ರಯವನ್ನು ಕಾಂಕ್ಷಿಸಿ ನಾನು ಇಲ್ಲಿಗೆ ಬಂದಿರುವೆನು. ಕಳೆದ ಕೆಲವು ತಿಂಗಳುಗಳಿಂದ ಜರುಗುತ್ತಲಿರುವ ಸಂಭವಗಳಿಂದ ಸ್ವಧರ್ಮೀಯರಾದ ಇಂದಿನ ಶಾಸಕರಲ್ಲಿದ್ದ ನನ್ನ ಸ್ನೇಹ ವಿಶ್ವಾಸಗಳು ಅಳಿದು ಹೋಗಿವೆ. ನನ್ನ ತಂದೆ

ಯವರಿಗೆ ಬಂದೊದಗಿದ ವಿಪತ್ತನ್ನು ವಿಚಾರಿಸುವಾಗ ನನ್ನ ಎದೆಯು ಕುದಿಯುತ್ತಲಿದೆ. ತಪ್ಪು ಮಾಡಿದವನು ನಾನು; (ನಾನು ಆಚರಿಸಿದುದು ತಪ್ಪಾಗಿದ್ದರೆ) ಆದರೆ ದಂಡನೆಯನ್ನು ಅನುಭವಿಸಿದುದು ನಿರಪರಾಧಿಯಾದ ನನ್ನ ತಂದೆಯು! ಇದರಲ್ಲಿ ಯಾವ ನ್ಯಾಯುವಿದೆ? ನನ್ನ ತಂದೆಯ ಕಣ್ಣುಗಳನ್ನು ಕೀಳಿಸಿದ ಸುಭೇದಾರನಿಗೆ ಯೋಗ್ಯ ಪ್ರತೀಕಾರವನ್ನು ಮಾಡಬೇಕೆಂದು ನಾನು ನಿರ್ಧರಿಸಿರುತ್ತೇನೆ. ನೀವು ನಿಮ್ಮ ದಂಡಿನಲ್ಲಿ ನನಗೊಂದು ಕೆಲಸವನ್ನು ನೀಡಬೇಕು. ಹೊಸ ಜನಾಂಗವನ್ನು ನಿರ್ಮಿಸುವ ಕೆಲಸದಲ್ಲಿ ನನ್ನ ಕೈಯಿಂದಾಗುವ ಸೇವೆಯನ್ನು ಸಲ್ಲಿಸಿ. ಎರಡೂ ಸಮಾಜಗಳ ನಡುವೆ ಸೌಹಾರ್ದವನ್ನು ಹರಡಲು ಪ್ರಯತ್ನಿಸುತ್ತೇನೆ. ಆದುದರಿಂದ ಸ್ವಾಮೀಜಿಯುವರು ನನ್ನ ಅಪೇಕ್ಷೆಯನ್ನು ಅಂಗೀಕರಿಸಬೇಕು."

"ಉಸ್ಮಾನಖಾನ," ಜ್ಞಾನಾನಂದನ ವದನಮಂಡಲದಲ್ಲಿ ಒಂದು ಎಳೆ ನಗೆಯು ಮೂಡಿತು. "ನಿಮ್ಮಂಥ ತರುಣರ ಸಹಾಯವು ಅತ್ಯಗತ್ಯವಾಗಿದೆ. ಈ ಮುನ್ನ ನುಡಿದಂತೆ, ವರ್ಣಮನಸ್ಸಿನಿಂದ ಅನ್ಯ ಧರ್ಮಾವಲಂಬಿಗಳನ್ನು ನಿರಾಕರಿಸತಕ್ಕವನು ನಾನಲ್ಲ. ನಮ್ಮ ದಳದಲ್ಲಿ ಹಿಂದುಗಳಿಗೆ ಯಾವ ಸ್ಥಾನವಿದೆಯೋ, ಆ ಸ್ಥಾನವು ಜನಹಿತಕಾಂಕ್ಷಿಗಳಾದ ಪಠಾಣರಿಗೂ ಇದ್ದೇ ಇದೆ. ನಾವು ಸ್ಥಾಪಿಸಹೊರಟ ಜನಾಂಗವು ಹಿಂದುಗಳದೋ, ಅಥವಾ ಪಠಾಣರದೋ ಆಗಕೂಡದು. ಅದು ಭಾರತೀಯರದು; ಭಾರತ ವರ್ಷದಲ್ಲಿ ಜನಿಸಿದ ಪ್ರತಿಯೊಬ್ಬನ ಕ್ಷೇಮವನ್ನು ಚಿಂತಿಸತಕ್ಕ ಜನಾಂಗವು ಅದಾಗಿರಬೇಕು!"

"ಸ್ವಾಮಿಜೀ," ಭಕ್ತಿ ಮತ್ತು ಗೌರವಯುಕ್ತ ವಾಣಿಯಲ್ಲಿ ಉಸ್ಮಾನನು ನುಡಿದ. "ಈ ತನಕ ತಮ್ಮ ಹೃದಯುವು ಇಷ್ಟು ವಿಶಾಲವಾದುದೆಂದು ನಾನು ತಿಳಿದಿರಲಿಲ್ಲ. ತಾವು ಪೂಜಾರ್ಹರು!"

"ನಾವೆಲ್ಲರೂ ಮನುಷ್ಯರಿರುತ್ತೇವೆ ಎಂಬುದನ್ನು ನಾವು ಮರೆಯಕೂಡದು." ಈ ಮಾತುಗಳು ಜ್ಞಾನಾನಂದನ ತುಟಿಗಳಿಂದ ಉದುರಿದವು. "ಮನುಷ್ಯಸಮಾಜದ ಹಿತವನ್ನು ಇಚ್ಛಿಸಿ ನಾವು ಪ್ರಯತ್ನಿಸಬೇಕಾಗಿದೆ." ಆ ಮೇಲೆ ಜ್ಞಾನಾನಂದನು ತನ್ನ ದೃಷ್ಟಿಯನ್ನು ಅಲ್ಲಿದ್ದ ಕುಮಾರ ಅಮರಸಿಂಹನ ಕಡೆಗೆ ತಿರುಗಿಸಿದ: "ಕುಮಾರ, ಉಸ್ಮಾನಖಾನರು ನಮ್ಮ ದಳಕ್ಕೆ ಸೇರಿ ನಾಡಸೇವೆ ಮಾಡಲು ಹೋರಟಿದ್ದಾರೆ! ಇವರ ಸೌಕರ್ಯಗಳ ಕಡೆಗೆ ನಮ್ಮ ದೃಷ್ಟಿಯನ್ನು ಮಡಗುವದು ನಮ್ಮೆಲ್ಲರ ಕರ್ತವ್ಯವಾಗಿದೆ. ನೀವೆಲ್ಲರೂ ಇವರೊ

ಡನೆ ಬಾಂಧವರಂತೆ ವರ್ತಿಸಬೇಕು."

"ಅಪ್ಪಣೆ." ಎಂದು ಕುಮಾರನು ಶಿರಬಾಗಿದನು.

"ಉಸ್ಮಾನಖಾನ, ಈತ ಕುಮಾರ ಅಮರಸಿಂಹನು. ನಮ್ಮ ದಲದ ನಾಯಕನು. ನೀವು ನಮ್ಮ ದಲದಲ್ಲಿ ಈತನ ಸಲಹೆಯಂತೆ ವರ್ತಿಸಬೇಕು."

"ತಮ್ಮ ಮಾತಿನಂತೆ ವರ್ತಿಸುತ್ತೇನೆ." ಜ್ಞಾನಾನಂದನ ನುಡಿಯನ್ನು ಉಸ್ಮಾನನು ಒಪ್ಪಿದ.

"ಫಕೀರಸಾಹೇಬ, ನೀವು ಪಯಣದಿಂದ ದಣಿದಿರಬಹುದು. ನಿಮ್ಮ ವಾಸದ ಬಗ್ಗೆ ಒಂದು ಪ್ರತ್ಯೇಕ ವಸತಿಯನ್ನು ಏರ್ಪಡಿಸಿರುತ್ತೇನೆ. ನೀವು ಅಲ್ಲಿಗೆ ತೆರಳಿ ಆಹಾರ ವಿಶ್ರಾಂತಿಗಳನ್ನು ಪಡೆಯಿರಿ. ನಾವು ಅನಂತರ ಮಾತಾಡ ಬಹುದು."

ಆ ಮೇಲೆ ಜ್ಞಾನಾನಂದನು ಭೃತ್ಯನೊಬ್ಬನನ್ನು ಕರೆದು ಫಕೀರನಿಗೆ ಪ್ರತ್ಯೇಕವಾದ ವಸತಿಯೊಂದನ್ನು ಏರ್ಪಡಿಸಲು ಆಜ್ಞಾಪಿಸಿದ. ಅದರಂತೆಯೇ ಕುಮಾರ ಅಮರಸಿಂಹನು ಉಸ್ಮಾನನ ಆಹಾರ ವಿಶ್ರಾಂತಿಗಳಿಗೆ ಬೇಕಾದ ಸೌಕರ್ಯಗಳನ್ನು ಒದಗಿಸಿದ.

---

## ೨೦ ಯುದ್ಧ ಸನ್ನಾಹ

ಸುಭೇದಾರ ಯಾಕೂಬಖಾನನು ರಾಜದುರ್ಗವನ್ನು ವಿದ್ರೋಹಿಗಳು ವಶಪಡಿಸಿಕೊಂಡ ವಾರ್ತೆಯನ್ನು ತಿಳಿದಿರಲಿಲ್ಲ. ವಿದ್ರೋಹಿಗಳನ್ನು ದಂಡಿಸಿ, ಕೋಟೆಯನ್ನು ಪುನಃ ತೆಗೆದುಕೊಳ್ಳಬೇಕೆಂಬುದು ಅವನ ನಿರ್ಧರವಾಗಿ ದ್ದಿತು. ಒಂದು ದಂಡಯಾತ್ರೆಗೆ ಬೇಕಾದ ಸಿದ್ಧತೆಗಳನ್ನು ಅವನು ಮಾಡ ತೊಡಗಿದ. ಸೈನಿಕರು ರೂಪನಗರದಲ್ಲಿ ಬಂದು ಸೇರತೊಡಗಿದರು. ಆಯುಧ ಗಳ ಸಂಗ್ರಹವು ನಡೆಯತೊಡಗಿತು. ಆಹಾರಸಾಮಗ್ರಿಗಳನ್ನು ಸಿದ್ಧಪಡಿ ಸುವ ಉದ್ಯಮವು ಜಾಗ್ರತೆಯಿಂದ ಸಾಗಿತು. ಒಂದು ಮಹತ್ತರವಾದ ಸೇನಾ ಬಲದೊಡನೆ ರಾಜದುರ್ಗದ ಕಡೆಗೆ ಸಾಗಿಹೋಗಿ, ಒಂದೆರಡು ದಿನಗಳ ಹೋ ರಾಟದಿಂದ ಬಂಡುಗಾರರನ್ನು ಧ್ವಂಸಗೊಳಿಸುವುದಾದರೆ, ಪಠಾಣರ ಬಗ್ಗೆ ಜನರಲ್ಲಿ ಭೀತಿಯುದ್ಭವಿಸುವುದೆಂದೂ ಆ ಮೂಲಕ ಇನ್ನು ಹೊಸ ಬಂಡಾ ಯಗಳು ಉದ್ಭವಿಸಲಾರವೆಂದೂ ಸುಭೇದಾರನ ವಿಚಾರಗಳಾಗಿದ್ದವು. ಆದು

ದರಿಂದ ಆ ವ ತ್ಯ ಕ್ಕಿಂ ತ ಲೂ ಹೆ ಚ್ಚು ಪ್ರಮಾಣದಲ್ಲಿ ಸೈನ್ಯಸಂಗ್ರಹವನ್ನು ಮಾಡತೊಡಗಿದ. ತರುಣರಾದ ಪಠಾಣರೆಲ್ಲರೂ ದಂಡಿನಲ್ಲಿ ಸೇರಬೇಕೆಂಬ ನಿರೋಪವನ್ನು ಹೊರಡಿಸಿದ.

ದಂಡಯಾತ್ರೆಯೆಂದರೆ ಸೈನಿಕರಿಗೆಲ್ಲರಿಗೂ ಉತ್ಸಾಹ. ಯುದ್ಧವಿಲ್ಲದ ಕಾಲದಲ್ಲಿ ಕೊಳ್ಳೆ-ಸುಲಿಗೆಗಳಿಗೆ ಹೆಚ್ಚಿನ ಸಂದರ್ಭಗಳು ದೊರಕುವದಿಲ್ಲ; ಆದರೆ ಯುದ್ಧಕಾಲದಲ್ಲಿ ಸೈನಿಕನೇ ಅರಸನಾಗಿರುತ್ತಾನೆ. ಅವನು ಏನು ಮಾಡಿದರೂ ಯಾರೂ ಏನನ್ನೂ ಪ್ರಶ್ನಿಸುವಂತಿಲ್ಲ. ನಡುಹಗಲೆಲ್ಲ ಕಳವು ಸುಲಿಗೆಗಳನ್ನು ಜರುಗಿಸಬಹುದು; ಅನ್ಯ ಮಹಿಳೆಯರನ್ನು ಬಲಾತ್ಕರಿಸಿ ತನ್ನ ಕಾಮವಿಕಾರಗಳನ್ನು ಸಂತೃಪ್ತಗೊಳಿಸಬಹುದು! ಆದುದರಿಂದ ಸೈನಿಕರು ಯುದ್ಧ ಕಾಲವನ್ನು ಮೆಚ್ಚುತ್ತಾರೆ. ದಂಡಯಾತ್ರೆಗೆ ಹೊರಡಬೇಕೆಂಬ ಸುಭೇದಾರನ ನಿರೂಪವು ಸೈನಿಕರನ್ನು ಹರ್ಷಭರಿತರನ್ನಾಗಿ ಮಾಡಿತು.

ಒಂದು ದಿನ ಮುಂಜಾನೆ ಪಠಾಣರು ದಂಡಯಾತ್ರೆಗೆ ಹೊರಟರು. ಊರ ಜನರು ಕೌತುಕ ದೃಷ್ಟಿಯಿಂದ ಬೀದಿಯಲ್ಲಿ ಹೋಗುತ್ತಿದ್ದ ಸೈನ್ಯವನ್ನು ನೋಡಿದರು. ಸೈನಿಕರ ಕರಗಳಲ್ಲಿ ಕತ್ತಿಗಳು ಹೊಳೆಯುತ್ತಿದ್ದವು. ಕುದುರೆಗಳು ಭಟರನ್ನು ತಮ್ಮ ಬೆನ್ನುಗಳ ಮೇಲೆ ಹೊತ್ತುಕೊಂಡು ನೆಗೆಯುತ್ತಿದ್ದವು. ಆಹಾರ ಸಾಮುಗ್ರಿಗಳ ಹೊರೆಗಳನ್ನು ಹೊತ್ತಿದ್ದ ಕತ್ತೆಗಳು ಮುಂದೆ ಹೆಜ್ಜೆಗಳನ್ನು ಹಾಕುತ್ತಿದ್ದವು. ವಾದ್ಯಗಳು ಮೊಳಗುತ್ತಿದ್ದವು. ಭಟರನ್ನು ಸಂತೋಷಗೊಳಿಸುವದಕ್ಕಾಗಿ ಗಾಯಕರು ಹಾಡುತ್ತಿದ್ದರು. ಅಂತು ವಿಜೃಂಭಣೆಯಿಂದ ಆ ದಂಡಯಾತ್ರೆಯು ರೂಪನಗರದಿಂದ ಹೊರಟಿತು. ಸೇನೆಯ ಮಧ್ಯದಲ್ಲಿ ಒಂದು ಬಿಳೀ ಕುದುರೆಯ ಮೇಲೆ ಸುಭೇದಾರ ಯಾಕೂಬಖಾನ ನಿದ್ದನು. ವಿದ್ರೋಹಿಗಳ ಕು ಲ ವ ನ್ನು ನಿರ್ನಾಮಗೊಳಿಸಬೇಕೆಂಬ ದೃಢ ಸಂಕಲ್ಪದಿಂದ ಸ್ವತಃ ಸುಭೇದಾರನೇ ದಂಡಯಾತ್ರೆಗೆ ಹೊರಟಿದ್ದನು. ಅವನ ಬಲಗಡೆಯಲ್ಲಿ ಅವನ ವಿಶ್ವಸ್ತ ಮಿತ್ರನಾದ ದುರ್ಜಯನಿದ್ದನು.

ದಂಡು ಮುಂದೆ ಸಾಗಿತು. ಒಂದು ದಿನಕ್ಕೆ ಎರಡು ಮೂರು ಹರದಾರಿಗಳಷ್ಟು ದೂರವಲ್ಲದೆ ಅದಕ್ಕಿಂತ ಹೆಚ್ಚುದೂರ ಸಾಗಲು ಸಾಧ್ಯವಿಲ್ಲ. ಪ್ರತಿ ದಿನವು ಕತ್ತಲೆಯಾಯಿತೆಂದರೆ ತಮ್ಮ ಪಾಳಯವನ್ನು ಹೊಡೆದು ಆ ರಾತ್ರಿಯನ್ನು ಅಲ್ಲಿ ಕಳೆಯುತ್ತಿದ್ದರು. ಅವರು ತಮ್ಮ ದಂಡಯಾತ್ರೆಯ ಮೊದಲೇ ಇರುಳನ್ನು ರೂಪನಗರದಿಂದ ಮೂರು ಹರದಾರಿಗಳ ದೂರದಲ್ಲಿದ್ದ ಒಂದು

ಹಳ್ಳಿಯಲ್ಲಿ ಕಳೆಪರು. ಗ್ರಾಮವಾಸಿಗಳು ಇವರಿಗೆ ಬೇಕಾದ ಸುಖ-ಸೌಕರ್ಯ ಗಳನ್ನು ಒದಗಿಸಿ ಕೊಡಬೇಕಾಗುತ್ತಿದ್ದಿತು. ಇಲ್ಲದಿದ್ದರೆ ಸೈನಿಕರು ಬಲಾತ್ಕಾರ ದಿಂದ ಕಸಿದುಕೊಳ್ಳುತ್ತಿದ್ದರು. ದಂಡಿಗೆ ಅವಶ್ಯವಿರುವ ಆಹಾರ ಸಾಮುಗ್ರಿ ಗಳನ್ನು ಒದಗಿಸಿಕೊಡಬೇಕೆಂದು ಸುಭೇದಾರನು ಗ್ರಾಮವಾಸಿಗಳೊಡನೆ ಆಜ್ಞಾಪಿಸಿದನು. ಇಲ್ಲದಿದ್ದರೆ ಸೈನಿಕರು ಜನರ ವಸತಿಗಳೊಳಗೆ ಪ್ರವೇಶಿಸಿ ತಮಗೆ ಬೇಕಾದುದನ್ನು ಸೆಳೆದೊಯ್ಯುವರೆಂದು ಜನರನ್ನು ಸುಭೇದಾರನು ಅಂಜಿಸಿದನು. ಸುಲ್ತಾನನ ಕಡೆಯ ಸೈನಿಕರವರು; ಅವರಿಗೆ ಒಲ್ಲೆವೆಂದು ಹೇಳಿ ದರೆ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲವೆಂದು ಜನರು ತಿಳಿದಿದ್ದರು. ಸಾವಿರಾರು ಮಂದಿ ಸೈನಿಕರು ಗ್ರಾಮದೊಳಗೆ ಪ್ರವೇಶಿಸಿ ಸುಲಿಗೆಗೆ ಹೊರಟರೆ ಮಾಡುವು ವೇನು? ಹೊರಗಿನ ಮಾರಿಯನ್ನು ಊರೊಳಗೆ ಕರೆದು ತರುವುದು ವಿಹಿತವಲ್ಲ ವೆಂದು ಜನರು ಭಾವಿಸಿದರು. ಸೈನ್ಯಕ್ಕೆ ಅವಶ್ಯವಿರುವ ಆಹಾರ ಸಾಮುಗ್ರಿ ಗಳನ್ನು ಅವರು ತಂದುಕೊಟ್ಟರು. ಸೈನ್ಯಕ್ಕೆ ನೀಡಿದ ಸರಕುಗಳಿಗೆ ಬೆಲೆಯು ಸಿಗುವಂತಿರಲಿಲ್ಲ. ಒಳ್ಳೆಯ ಮಾತು; ಅಧಿಕಾರಿಗಳಿಗೆ ಬೇಕಾಗಿಯಲ್ಲವೇ ಜನರು ಜೀವಿಸುತ್ತಿರುವುದು? ಆದುದರಿಂದ ದಂಡಿಗೆ ಬೇಕಾದ ಆಹಾರ ಸಾಮುಗ್ರಿಗಳನ್ನು ಪೂರೈಸುವುದು ಜನರ ಕರ್ತವ್ಯವಲ್ಲವೇ?

ಹೀಗೆ ಜನರು ಸೈನಿಕರಿಗೆ ಬೇಕಾದ ಸರಕುಗಳನ್ನು ಒದಗಿಸಿದರೂ ತೊಂದರೆಗಳು ತಪ್ಪಲಿಲ್ಲ. ಕೆಲವು ಮಂದಿ ಸೈನಿಕರು ಊರೊಳಗೆ ತೆರಳಿ ಹೆಂಗಸರನ್ನು ತೊಂದರೆಪಡಿಸುತ್ತಿದ್ದರು. ಇನ್ನು ಕೆಲವರು ಜನರ ದನ-ಕರ ಗಳನ್ನು ಬಲಾತ್ಕಾರದಿಂದ ಕಿತ್ತುಕೊಳ್ಳುತ್ತಿದ್ದರು. ಇನ್ನು ಹಲವರು ಹೆಂಗಸರು-ಮಕ್ಕಳು ಧರಿಸಿದ ರತ್ನಾಭರಣಗಳನ್ನು ತಮಗೆ ಕೊಡಬೇಕೆಂದೂ ಇಲ್ಲದಿದ್ದರೆ ಬಲಪ್ರಯೋಗದಿಂದ ಕಸಿದುಕೊಳ್ಳುವೆವೆಂದೂ ಹೆದರಿಸುತ್ತಿದ್ದರು. ಅಂತು ಬೆಕ್ಕಿಗೆ ಆಟ; ಇಲಿಗೆ ಪ್ರಾಣಸಂಕಟ ಎಂಬದಂತಾಯಿತು ಜನರ ಅವಸ್ಥೆಯು! ಸೈನಿಕರಿಂದ ಬಂದೊದಗತಕ್ಕ ಪೀಡನೆಗಳನ್ನು ಮೌನದಿಂದ ಸಹಿಸಬೇಕಲ್ಲದೆ ಬೇರೆ ಯಾವ ಉಪಾಯವಿರಲಿಲ್ಲ. ಸೈನಿಕರಾದರೋ ಸಂಸ್ಕಾರವಿಲ್ಲದವರು; ಮೃಗೀಯ ಮನಃಸ್ಥಿತಿಯ ಜನರು ಅವರಾದುದರಿಂದ ಅವರ ಹೃದಯಗಳಲ್ಲಿ ದಯೆಗೆ ಸ್ಥಾನವಿರಲಿಲ್ಲ. ಮಾನುಷ ಬುದ್ಧಿಯನ್ನು ನಡುಗಿಸತಕ್ಕ ಅದೆಷ್ಟೋ ಭಯಾನಕ ಕೃತ್ಯಗಳನ್ನು ಜರಗಿಸಲು ಅವರಿಗೆ ಯಾವ ಸಂಕೋಚವೂ ಇರಲಿಲ್ಲ ವಲ್ಲದೆ ದಂಡಿನ ಮುಂದಾಳುಗಳು ಸುಲಿಗೆಗಳಿಗೂ ಪ್ರೋತ್ಸಾಹ ನೀಡುತ್ತಿದ್ದರು!

ಮೇಲೆ ಹೇಳಿದುದೆಲ್ಲಾ ಉತ್ಪ್ರೇಕ್ಷೆಯೆಂದು ಓದುಗರು ಒಂದುವೇಳೆ ವಿಚಾರಿಸಬಹುದು; ಆದರೆ ಲೋಕದ ವಿವಿಧ ಜನಾಂಗಗಳ ಚರಿತ್ರೆಗಳನ್ನು ಬಿಚ್ಚಿ ನೋಡಿದರೆ, ಅವರಿಗೆ ನಿಜವು ತಿಳಿಯುವುದು. ಅದರಲ್ಲೂ ಸಾಮ್ರಾಜ್ಯವಾದೀ ಜನಾಂಗಗಳಲ್ಲಿ ಸೈನಿಕರು ನಿರಪರಾಧಿಗಳಾದ ಸಾಮಾನ್ಯ ಜನರನ್ನು ಪೀಡಿಸಿದ ಭಯಂಕರ ಚಿತ್ರಗಳು ವಿಶ್ವಚರಿತ್ರೆಯಲ್ಲಿ ಧಾರಾಳವಾಗಿ ನೋಡಲು ಸಿಗುತ್ತವೆ. ದುಷ್ಪ್ರಭುತ್ವದವರಿಗೆ ತಾವು ಇರುವುದು ಜನರ ಹಿತಸಂರಕ್ಷಣೆಯ ಸಲುವಾಗಿರುತ್ತದೆ ಎಂಬ ಬೋಧವೇ ಇರುವುದಿಲ್ಲ. ಕೆಲವರು ತಮ್ಮ ಸ್ವಾರ್ಥತೆಗಳನ್ನು ಸಂತೃಪ್ತಿಗೊಳಿಸುವುದಕ್ಕಾಗಿ ಜನರನ್ನು ಯಾವಾಗಲೂ ಪೀಡಿಸುತ್ತಿರುತ್ತಾರೆ. ಈ ದುಷ್ಪ್ರಭುತ್ವವನ್ನು ಸಂರಕ್ಷಿಸಿಕೊಳ್ಳಲು ಇರತಕ್ಕ ಸೈನ್ಯಗಳಲ್ಲಿ ತಿಳುವಳಿಕೆ, ನೀತಿಬುದ್ಧಿ, ದಯೆ ಎಂಬುವುಗಳು ಇರುವುದಾದರೂ ಹೇಗೆ? ದುಷ್ಪ್ರಭುತ್ವದ ಬೆನ್ನ ಹಿಂದಿರುವ ಸೈನಿಕರು ವಿಚಾರಶಕ್ತಿ, ಧಾರ್ಮಿಕ ಮತ್ತು ಸನ್ಮಾರ್ಗ ಬೋಧ ಇವುಗಳಿಲ್ಲದ ಗುಂಡಾ ಜನರಾಗಿರುತ್ತಾರೆ. ವಿವೇಕ, ಚಿಂತನಾಶಕ್ತಿ ಇವುಗಳಿರತಕ್ಕವರು ಜನಮರ್ದನೆಯನ್ನೇ ಯೇ ತನ್ನ ಧ್ಯೇಯವೆಂದು ಬಗೆದ ದುಷ್ಪ್ರಭುತ್ವದ ಪಕ್ಷವನ್ನು ವಹಿಸಲಾರರು. ಹೃದಯವಾಗಲೀ, ಬುದ್ಧಿಯಾಗಲೀ ಇಲ್ಲದ ಈ ಸೈನಿಕರಿಂದ ಕೆಡುಕನ್ನಲ್ಲದೆ ಒಳ್ಳೆಯದನ್ನು ಪ್ರತೀಕ್ಷಿಸುವುದು ಅಬದ್ಧವಾಗಿದೆ ಹೀಗೆ ಅತ್ಯಂತ ಹೀನ ಮನಸ್ಥಿತಿಯ ಸೈನಿಕರು ತಮ್ಮ ದಂಡಯಾತ್ರೆಯಲ್ಲಿ ಗ್ರಾಮವಾಸಿಗಳ ದವಸ--ಧಾನ್ಯಗಳನ್ನು ಸುಲಿದರೆಂದು ಹೇಳಿದರೆ ಅದಕ್ಕಾಗಿ ಆಶ್ಚರ್ಯಪಡಬೇಕಾಗಿಲ್ಲ.

ಅನೇಕ ಗ್ರಾಮಗಳನ್ನು ಸುಲಿದು, ಜನರನ್ನು ನಾನಾ ವಿಧದ ತೊಂದರೆಗಳಿಗೆ ಒಳಪಡಿಸುತ್ತಾ ಯಾಕೂಬಖಾನನ ದಂಡು ರಾಜದುರ್ಗದ ಕಡೆಗೆ ತನ್ನ ಪಯಣವನ್ನು ಮುಂದುವರಿಸಿತು. ಸೈನ್ಯವು ಮಹತ್ತರವಾಗಿದ್ದುದರಿಂದ ಸುಭೇದಾರನಿಗೆ ಮುಂಬರುವ ಕಾಳಗದಲ್ಲಿ ಸೋಲಾಗಬಹುದೆಂಬ ಭಯವೇ ಇರಲಿಲ್ಲ. ವಿದ್ರೋಹಿಗಳ ಪಕ್ಷವನ್ನು ಹಿಡಿದ ಜನರನ್ನು ಚಿತ್ರಹಿಂಸೆಗೆ ಗುರಿಪಡಿಸಿ, ಜನರ ವಿದ್ರೋಹ ಮನಸ್ಥಿತಿಯನ್ನು ಹೋಗಲಾಡಿಸುವುದು ಅವನ ಪ್ರಧಾನ ಚಿಂತನಾ ವಿಷಯವಾಗಿದ್ದಿತು. ಒಂದು ಭಯಾನಕ ಮನುಷ್ಯ ಬೇಟೆಯಿಂದ ಬಂಡುಗಾರರ ಹುಟ್ಟನ್ನು ಅಡಗಿಸಬೇಕೆಂದು ಅವನ ದೃಢಸಂಕಲ್ಪವಾಗಿದ್ದಿತು. ತನ್ನ ಆಡಳಿತದಲ್ಲಿರುವ ಕುಂದು-ಕೊರತೆಗಳಾಗಿವೆ ಈ ವಿದ್ರೋಹವುಂಟಾಗಲಿಕ್ಕೆ ಕಾರಣವೆಂಬ ಪರಿಜ್ಞಾನವು ಅವನಿಗಿರಲಿಲ್ಲ. ತನ್ನ ಆಡಳಿತ

ದಿಂದ ಜನರು ಅನುಭವಿಸಬೇಕಾಗಿ ಬಂದ ತಾಳಲಾಗದ ಸಂಕಟಗಳೇ ಈ ವಿದ್ರೋಹದ ಬೀಜಗಳಾದುವೆಂಬ ಪರಿಜ್ಞಾನವು ಅವನಿಗೆ ಇದ್ದಿದ್ದರೆ, ಈ ದಂಡಯಾತ್ರೆಗೇ ಅವನು ಹೊರಡುತ್ತಿರಲಿಲ್ಲ. ತನ್ನ ಕುಂದು-ಕೊರತೆಗಳನ್ನು ಅವನು ನೋಡಲಿಲ್ಲ. ಅವನ ಕಣ್ಣುಗಳು ಕುರುಡಾಗಿದ್ದವು. ಸ್ವಲ್ಪ ವಿವೇಕ, ಉದಾರ ಬುದ್ಧಿ, ಸಹನೆ ಇವುಗಳು ಸುಭೇದಾರನಲ್ಲಿದ್ದಿದ್ದರ ಜನರ ಬದುಕುಗಳು ನರಕದ ಬಾಳುಗಳಾಗುತ್ತಿರಲಿಲ್ಲ; ನಾಡಿನಲ್ಲಿ ದಾರಿದ್ರ್ಯದೇವತೆಯು ತಾಂಡವ ವಾಡುತ್ತಿರಲಿಲ್ಲ; ಮತದ್ವೇಷವು ತನ್ನ ನಗ್ನರೂಪವನ್ನು ತೋರಿಸುತ್ತಿರಲಿಲ್ಲ.

ರಾಜದುರ್ಗವನ್ನು ಸಮೀಪಿಸಿದಂತೆ ಅಲ್ಲಿ ತನ್ನನ್ನು ಎದುರಿಸಲು ಒಂದು ಪ್ರಬಲಶಕ್ತಿಯು ಕಾದು ನಿಂತಿದೆಯೆಂಬುದು ಸುಭೇದಾರನಿಗೆ ಮನನವಾಗ ತೊಡಗಿತು. ಗ್ರಾಮವಾಸಿಗಳು ದಿಟ್ಟತನದಿಂದ ಸೈನಿಕರ ಆಜ್ಞೆಗಳನ್ನು ನಿರಾ ಕರಿಸತೊಡಗಿದ ಚಿತ್ರಗಳು ದಾರಿಯಲ್ಲಿ ಕಂಡು ಬರತೊಡಗಿದವು. ಅವರು ಆಹಾರ ಸಾಮಗ್ರಿಗಳನ್ನು ದಂಡಿಗೆ ಅರ್ಪಿಸಲು ಸಿದ್ಧರಾಗಲಿಲ್ಲ. ಈ ಜನರ ಈ ದಿಟ್ಟತನವನ್ನು ನೋಡಿದಾಗ ಸುಭೇದಾರನಿಗುಂಟಾದ ಕೋಪಕ್ಕೆ ಮೇರೆಯಿರ ಲಿಲ್ಲ. ಅವನು ಗ್ರಾಮದೊಳಗೆ ಪ್ರವೇಶಿಸಿ ಜನರ ಮನೆ-ಮಾರುಗಳನ್ನು ಸುಲಿ ಯಲು ಸೈನಿಕರಿಗೆ ಆಜ್ಞಾಪಿಸಿದನು. ಈ ಆಜ್ಞೆಯು ಜನರನ್ನು ಭಯಪಡಿಸ ಲಿಲ್ಲ. ಸೈನಿಕರು ಬಂದು ತಮ್ಮ ಮನೆಮಾರುಗಳನ್ನು ಸುಲಿಯಲು ಹೊರಡುವ ಮುನ್ನ, ಜನರು ತಮ್ಮ ಮನೆ-ಮಾರುಗಳಿಗೆ ಬೆಂಕಿಕೊಟ್ಟು ತಮ್ಮಲ್ಲಿದ್ದ ದವಸ-ಧಾನ್ಯಗಳನ್ನು ತಾವಾಗಿಯೇ ನಶಿಸುತ್ತಿದ್ದರು. ಜನರ ಈ ವರ್ತನೆಯ ಉದ್ದೇಶವು ತಮ್ಮ ಮನೆಮಾರುಗಳು ನಷ್ಟವಾದರೂ ಚಿಂತೆಯಿಲ್ಲ; ತಮ್ಮ ಧನ ಧಾನ್ಯಗಳು ಪಠಾಣರಿಗೆ ಸಿಗಕೂಡದೆಂದಾಗಿದ್ದಿತು. ಹೀಗೆ ತಮ್ಮ ವಸತಿಗಳನ್ನು ಯಜ್ಞನಾರಾಯಣನಿಗೆ ಸಮರ್ಪಿಸಿ ಜನರು ತಮ್ಮ ಕುಟುಂಬಗಳೊಡನೆ ಅರಣ್ಯವನ್ನು ಪ್ರವೇಶಿಸುತ್ತಿದ್ದರು. ಈ ಕಷ್ಟಾನುಭವಗಳಿಗೆ ಜನರು ಸಿದ್ಧರಾದ ಕಾರಣ ತಾವು ಪಠಾಣ ಸೈನಿಕರಿಗೆ ಆಹಾರಸಾಮಗ್ರಿಗಳನ್ನು ಒದಗಿಸಿಕೊಡು ವದೆಂದರೆ, ರಾಜದುರ್ಗದ ವಿದ್ರೋಹಿಗಳ ಶಕ್ತಿಯನ್ನು ಕುಂದಿಸಲು ಪ್ರಯತ್ನಿ ಸಿದ ಹಾಗೆ ಎಂಬ ತಿಳುವಳಿಕೆಯಾಗಿದ್ದಿತು. ಆದುದರಿಂದ ಅವರು ಪಠಾಣರಿಗೆ ಸಹಾಯ ಮಾಡಲು ಒಪ್ಪಲಿಲ್ಲ. ಅವರು ಅಪಾರ ಕಷ್ಟಗಳನ್ನು ಅನುಭವಿಸಲು ಸಿದ್ಧರಾದರು. ಗ್ರಾಮಗಳನ್ನು ಪಠಾಣರ ದಂಡು ಪ್ರವೇಶಿಸಿದಾಗ, ಅವರಿಗೆ ಗೋಚರಿಸುತ್ತಿದ್ದ ದೃಶ್ಯವು ತಮ್ಮ ಮನೆಮಾರುಗಳನ್ನು ಯಜ್ಞೇಶ್ವರನಿಗೆ ಸಮ

ರ್ಪಿಸಿ ಜನರು ಗ್ರಾಮುಗಳನ್ನು ಪರಿತ್ಯಜಿಸಿದ ಚಿತ್ರವಾಗಿದ್ದಿತು.

ಈ ಅಸಾಧಾರಣ ಸಂಭವಗಳಿಂದ, ಜನರಲ್ಲಿ ಗೋಚರಿಸುತ್ತಿದ್ದ ಈ ಧೀರತೆಯಿಂದ ರಾಜದುರ್ಗದಲ್ಲಿ ತಾವು ಎದುರಿಸಬೇಕಾಗಿರುವದು ಒಂದು ಪ್ರಬಲಶಕ್ತಿಯನ್ನಾಗಿದೆ ಎಂಬುದನ್ನು ಅರಿವುದು ಪಠಾಣ ಸೈನಿಕರಿಗೆ ಪ್ರಯಾಸವಾಗಿರಲಿಲ್ಲ. ರಾಜದುರ್ಗದ ಸಮೀಪದ ಗ್ರಾಮುಗಳಲ್ಲಿ ಜರುಗಿದ ಸಂಭವಗಳಿಂದ ವಿದ್ರೋಹಿಗಳಿಗೆ ಅಸಾಮಾನ್ಯವಾದ ಸ್ವಾಧೀನಶಕ್ತಿಯಿದೆಯೆಂಬುವನ್ನು ಸುಭೇದಾರನು ತಿಳಿದುಕೊಂಡನು. ಆದರೂ ಅವನಿಗೆ ಅಂಜಿಕೆ ಇರಲಿಲ್ಲ. ಐದು ಸಾವಿರ ಮಂದಿ ಧೀರ ಪಠಾಣರ ಮುಂದೆ ವಿದ್ರೋಹಿಗಳ ಆಟ ಸಾಗದು, ಎಂಬ ನಂಬಿಕೆಯು ಅವನಿಗಿದ್ದಿತು. ಸ್ವಲ್ಪ ಕಾಲವಿಳಂಬವಾಗಬಹುದು; ಆದರೆ ವಿದ್ರೋಹಿಗಳನ್ನು ಸಂಪೂರ್ಣವಾಗಿ ಅಡಗಿಸಬಹುದೆಂದು ಅವನು ನಂಬಿದ್ದನು. ಯುದ್ಧದಲ್ಲಿ ಜಯವನ್ನು ಸಂಪಾದಿಸಿದ ಅನಂತರ ತಮ್ಮನ್ನು ಧಿಃಕರಿಸಿದ ಗ್ರಾಮವಾಸಿಗಳಿಗೆ ಒಂದು ಪಾಠವನ್ನು ಕಲಿಸಬೇಕೆಂದು ಸುಭೇದಾರನು ಸಂಕಲ್ಪಿಸಿದ. ಹೀಗೆ ವಿದ್ರೋಹಿಗಳನ್ನು ನಿರ್ಮೂಲಗೊಳಿಸುವ ನಾನಾ ಉಪಾಯಗಳನ್ನು ಕುರಿತು ಅವನ ಬುದ್ಧಿಯು ಚಿಂತಿಸುತ್ತಲಿದ್ದರೂ, ಅವನ ಬುದ್ಧಿಗೆ ತಾನು ಈ ತನಕ ಗೈದುದು ನೀತಿಬಾಹಿರವಾದುದೆಂಬುದು ಹೊಳೆಯಲಿಲ್ಲ. ಕತ್ತಲೆಯಿಂದಾವೃತರಾದವರಿಗೆ ಬೆಳಕು ಗೋಚರಿಸುವುದು ಹೇಗೆ?

ರಾಜದುರ್ಗದಲ್ಲಿ ವಿದ್ರೋಹಿಗಳು ತಮ್ಮ ಚಾರರ ಮುಖದಿಂದ ಶತ್ರುಗಳ ದಂಡಯಾತ್ರೆಯ ವಿವರವನ್ನು ತಿಳಿದಿದ್ದರು. ಈ ಸಂಗತಿಯು ಅವರಿಗೆ ಒಂದು ಆಶ್ಚರ್ಯವಾಗಿ ತೋರಲಿಲ್ಲ. ರಾಜದುರ್ಗ ಕೋಟೆಯನ್ನು ವಿದ್ರೋಹಿಗಳು ವಶಪಡಿಸಿಕೊಂಡಾಗಲೇ ಪಠಾಣರ ಪ್ರಮುಖ ಬಲವನ್ನು ತಾವು ಇದಿಸಬೇಕಾಗಿ ಬರುವದೆಂದು ಅವರು ಅರಿತಿದ್ದರು. ಈ ಕಾದಾಟವು ಬಂದೊದಗುವುದು ಯಾವಾಗ ಎಂಬುದನ್ನಾಗಿದ್ದಿತು ಅವರು ನಿರೀಕ್ಷಿಸುತ್ತಿದ್ದುದು. ಈ ಸತ್ವಪರೀಕ್ಷೆಯಲ್ಲಿ ತಾವು ವಿಜಯಿಗಳಾದರೆ, ಇದುವರೆಗೆ ಕನಸು ಕಾಣುತ್ತಿದ್ದ ಸ್ವತಂತ್ರ ರಾಜ್ಯವನ್ನು ಸೃಷ್ಟಿಸುವದು ತಮ್ಮಿಂದ ಸಾಧ್ಯವಾಗಬಹುದೆಂದು ಅವರು ಬಗೆದಿದ್ದರು. ಅವರು ತಮ್ಮ ಶಕ್ತಿಯನ್ನು ಹೆಚ್ಚಿಸಲು ಪ್ರಯತ್ನಿಸುತ್ತಲಿದ್ದರು. ಹಿಂದಿನ ಪರಿಚ್ಛೇದಗಳಲ್ಲಿ ಅವರ ಕರ್ಮಪದ್ಧತಿಯ ಬಾಹ್ಯ ಸ್ವರೂಪವನ್ನು ವಿವರಿಸಿರುವದರಿಂದ ಆ ಬಗ್ಗೆ ಮತ್ತೆ ಹೇಳಬೇಕಾಗಿಲ್ಲ.

ರಾಜದುರ್ಗವು ಒಂದು ಘನಘೋರ ಸಂಗ್ರಾಮರಂಗವಾಗಿ ಪರಿಣಮಿಸಿ

ತೆಂದು ಹೇಳಬಹುದು. ರೂಪನಗರದ ಆಧಿಪತ್ಯಕ್ಕೆಂದು ಎರಡು ಶಕ್ತಿಗಳು ಬಲಪರೀಕ್ಷೆಯನ್ನು ಮಾಡಲು ಹೊರಟಿದ್ದವು. ಅದು ಜನತೆಯೂ ಪ್ರಭುತ್ವವೂ ತಮ್ಮಲ್ಲಿ ನಡೆದ ಒಂದು ಸಂಗ್ರಾಮವಾಗಿದ್ದಿತೆಂದು ಹೇಳಬಹುದು. ಈ ಎರಡು ಶಕ್ತಿಗಳೂ ಪರಸ್ಪರ ವಿರುದ್ಧವಾದವುಗಳು; ಒಂದು ತನ್ನ ಸ್ವಾರ್ಥತೆಯ ಸಾಧನೆಗಾಗಿ ಮನುಷ್ಯಾತ್ಮಗಳನ್ನು ಕತ್ತಲೆಯ ಗವಿಯಲ್ಲಿ ಬಂಧಿಸುವದಕ್ಕಾಗಿ ಪ್ರಯತ್ನಿಸುತ್ತಿದ್ದಿತು. ಎರಡನೆಯದು ಒಂದು ಪವಿತ್ರ ಧ್ಯೇಯ ಸಾಧನೆಗಾಗಿ ಬಂಧಿಸಿದ ಕಟ್ಟುಗಳನ್ನು ಹರಿಮೊಗೆವುದಕ್ಕಾಗಿ, ಕತ್ತಲೆಯಿಂದ ಬೆಳಕಿಗೆ ಬರುವುದಕ್ಕಾಗಿ ಹೆಣಗುತ್ತಿದ್ದಿತು. ಮೊದಲನೆಯ ಶಕ್ತಿಯು ವಿಜಯವನ್ನು ಸಂಪಾದಿಸಿದರೆ, ಜನರ ಕಾಲುಗಳನ್ನು ಬಂಧಿಸಿದ್ದ ಸಂಕೋಲೆಗಳು ಇನ್ನಿಷ್ಟು ಬಿಗಿಯಾಗುವವು. ಅವರ ಆತ್ಮಗಳು ಇನ್ನಿಷ್ಟು ಕತ್ತಲೆಯಲ್ಲಿ ಬೀಳುವವು. ಮನುಷ್ಯರು ಮೃಗಗಳ ಮೆಟ್ಟಿಲುಗಳಿಗೆ ಇಳಿಯುವರು. ಈ ಬಲ ಪರೀಕ್ಷೆಯಲ್ಲಿ ಎರಡನೆಯದು ವಿಜಯವನ್ನು ಸಾಧಿಸಿದರೆ, ಇದುವರೆಗೆ ಜನರ ಮನದಲ್ಲಿದ್ದ ಕನಸುಗಳು ನಿಜವಾಗುವವು. ಕತ್ತಲೆಯು ಹಿಂದಕ್ಕೆ ಸರಿಯುವದು. ಸ್ವಾತಂತ್ರ್ಯಭಾಸ್ಕರನು ಉದಯವನ್ನು ಹೊಂದುವನು; ಬಂಧನವು ಇಲ್ಲದಾಗುವದು. ಅಂತು ಈ ಕದನದಲ್ಲಿ ಒಂದು ದೇಶದ ಉದಯಾಸ್ತಗಳೆರಡೂ ಅಡಗಿದ್ದವು. ವಿದ್ರೋಹಿಗಳು ವಿಜಯಿಗಳಾದರೆ ಅದು ಉದಯ; ಯಾಕೂಬಖಾನನು ವಿಜಯಿಯಾದರೆ ಅದೇ ಅಸ್ತಮಾನ! ರೂಪನಗರದ ಭಾಗ್ಯವಿಧಾತನ ಲೀಲೆ ಯಾವ ಪರಿಯಲ್ಲೆಂದು ಜನರು ಉತ್ಸುಕತೆಯಿಂದ ನಿರೀಕ್ಷಿಸತೊಡಗಿದರು.

ಯಾಕೂಬಖಾನನಿಗೆ ಅಪರಿಮಿತ ಸೇನಾಬಲವಿದ್ದಿತು. 'ನರಹತ್ಯೆ'ಯಲ್ಲಿ ವಿದಗ್ಧರೆನಿಸಿಕೊಂಡ ದಂಡಾಳುಗಳು ಅವರಾಗಿದ್ದರು; ಆದರೆ ಅವರಿಗೆ ಜನತೆಯ ಬೆಂಬಲವಿರಲಿಲ್ಲ; ಸಹಾನುಭೂತಿಯಿರಲಿಲ್ಲ. ಜನರ ಅಂತರಂಗದಿಂದ ಹೊರಟ ಶಾಪಗಳು ಪಠಾಣ ದಂಡನ್ನು ಸುತ್ತಿದ್ದವು. ಎಲ್ಲದಕ್ಕಿಂತಲೂ ಹೆಚ್ಚಾದ ಕೊರತೆಯು ಯಾಕೂಬನಿಗೆ ಧಾರ್ಮಿಕ ಬೆಂಬಲವಿರಲಿಲ್ಲ. ಸತ್ಯ ಮತ್ತು ನ್ಯಾಯಗಳು ಅವನ ಕೈಯನ್ನು ಬಿಟ್ಟಿದ್ದವು. ಆದುದರಿಂದ ಅವನಲ್ಲಿದ್ದುದು ಮೃಗೀಯವಾದ ಬಲವಾಗಿದ್ದಿತು. ಈ ಹೋರಾಟದಲ್ಲಿ ಯಾಕೂಬನು ಜಯಿಸುವದಾದರೆ ಅದು ಮೃಗೀಯ ಮನಸ್ಥಿತಿಯ ವಿಜಯವಾಗಿದ್ದಿತು. ಅದರ ತಾತ್ಪರ್ಯವು ಪೈಶಾಚಿಕ ಸ್ವಭಾವದ ಮುಂದೆ ಸತ್ಯ ಮತ್ತು ಧರ್ಮಗಳು ಶಿರಗಳನ್ನು ಬಾಗಿಸಿದಂತಾಗುತ್ತಿದ್ದಿತು.

ವಿದ್ರೋಹಿಗಳ ಸೇನಾಬಲವು ಅಷ್ಟು ದೊಡ್ಡದಲ್ಲ. ಪಠಾಣ ದಂಡಾಳುಗಳಂತೆ ಯುದ್ಧ ಕಲೆಯಲ್ಲಿ ಅಷ್ಟು ಸುಶಿಕ್ಷಿತರಾದವರಲ್ಲ. ವಿದ್ರೋಹಿಗಳ ಆಯುಧಗಳೂ ಪಠಾಣರವಕ್ಕಿಂತ ಕಡಿಮೆ ದರ್ಜೆಯವುಗಳಾಗಿದ್ದವು. ಈ ದೃಷ್ಟಿಯಿಂದ ಈಕ್ಷಿಸುವದಾದರೆ ಕದನದಲ್ಲಿ ವಿದ್ರೋಹಿಗಳು ಜಯವನ್ನು ಸಂಪಾದಿಸುವದು ಸಂದೇಹಾಸ್ಪದವಾಗಿದ್ದಿತು; ಆದರೆ ವಿದ್ರೋಹಿಗಳಲ್ಲಿ ಅನುಪಮ ಉತ್ಸಾಹವಿದ್ದಿತು. ಒಂದು ಉದಾತ್ತ ಧ್ಯೇಯಸಾಧನೆಗಾಗಿ ಅವರು ಣಗುತ್ತಲಿದ್ದುದರಿಂದ ಅವರಲ್ಲಿ ಅಚಲವಾದ ಆತ್ಮವಿಶ್ವಾಸವಿದ್ದಿತು. ಪಠಾಣರಲ್ಲಿ ಇಲ್ಲದಿದ್ದ ಧಾರ್ಮಿಕ ಮತ್ತು ನೈತಿಕ ಬಲಗಳು ವಿದ್ರೋಹಿಗಳಲ್ಲಿದ್ದವು. ವಿದ್ರೋಹಿಗಳು ಜನರ ಅನುಗ್ರಹವನ್ನು ಪಡೆದಿದ್ದರು. ವಿದ್ರೋಹಿಗಳು ಜಯಿಸಬೇಕೆಂಬ ಹಂಬಲವು ಜನರ ಮಧ್ಯದಲ್ಲಿ ಬೆಳೆದು ಬರುತ್ತಿದ್ದಿತು. ಗ್ರಾಮಾಂತರಗಳಲ್ಲಿ ವಿದ್ರೋಹಿಗಳ ಪಕ್ಷವನ್ನು ಹಿಡಿಯಲು ಭೈರವಿಯಂಥವರು ಜನರಿಗೆ ಉಪದೇಶಗಳನ್ನು ನೀಡುತ್ತಿದ್ದರು. ಪಠಾಣ ಜನರ ಆರಾಧನೆಗಳಿಗೆ ಪಾತ್ರನಾದ ಫಕೀರ ಹುಸ್ಸೇನನು ವಿದ್ರೋಹಿಗಳನ್ನು ಆಶೀರ್ವದಿಸಿ, ಅವರ ಉದ್ಯಮಗಳಿಗೆ ತನ್ನ ಆತ್ಮೀಯ ಬೆಂಬಲವನ್ನು ನೀಡಿದನು. ಫಕೀರನ ಈ ಕೃತ್ಯವು. ಪ್ರಬುದ್ಧರಾದ ಪಠಾಣ ಜನರ ಅಂತರಂಗದಲ್ಲಿ ವಿದ್ರೋಹಿಗಳ ಬಗ್ಗೆ ಇದ್ದ ವಿದ್ವೇಷವನ್ನು ಇಲ್ಲದಾಗುವಂತೆ ಮಾಡಿತು. ಉಸ್ಮಾನನಂಥ ಒಬ್ಬಿಬ್ಬ ಪಠಾಣ ತರುಣರು ವಿದ್ರೋಹಿಗಳ ಪಕ್ಷವನ್ನು ಪ್ರತ್ಯಕ್ಷವಾಗಿ ಹಿಡಿಯಲು ಹಿಂಜರಿಯಲಿಲ್ಲ. ವಿದ್ರೋಹಿಗಳು ವಿಜಯಿಗಳಾಗುವದೆಂದರೆ ಅದು ಸತ್ಯ ಮತ್ತು ಧರ್ಮಗಳ ವಿಜಯವಾಗಿದ್ದಿತು. ವಿದ್ರೋಹಿಗಳ ಸೇನೆಯು ಅಷ್ಟು ಪ್ರಬಲವಾಗಿರದಿದ್ದರೂ, ಇತರ ಹಲವು ಶಕ್ತಿಗಳು ಅವರ ಪಕ್ಷವನ್ನು ಹಿಡಿದು ಕೆಲಸ ಮಾಡುತ್ತಿದ್ದವು. ಇವುಗಳನ್ನೆಲ್ಲಾ ಚಿಂತಿಸುವದಾದರೆ, ಈ ಕದನದಲ್ಲಿ ಪಠಾಣರಿಗೆ ಜಯ ದೊರಕುವದು ಸಂದೇಹಾಸ್ಪದವಾಗಿದ್ದಿತು

ಒಂದು ಸಂಗತಿ ಮಾತ್ರ ನಿಶ್ಚಯ. ರೂಪನಗರದ ಭವಿಷ್ಯವು ಈ ಕದನವನ್ನು ಅನುಸರಿಸಿ ನಿಂತಿದ್ದಿತು. ರೂಪನಗರದ ಭಾಗ್ಯವಿಧಾತನ ಇಚ್ಛೆಯು ಯಾವ ಪರಿಯಲ್ಲಿ ಎಂದು ಹೇಳಲು ಸಾಧ್ಯವಿರಲಿಲ್ಲ. ಪರಸ್ಪರ ವಿರುದ್ಧವಾದ ಎರಡು ಶಕ್ತಿಗಳ ಸತ್ವಪರೀಕ್ಷೆಯು ರಾಜದುರ್ಗದಲ್ಲಿ ನಡೆಯಬೇಕೆಂದು ವಿಧಿಯ ಇಚ್ಛೆಯಾಗಿದ್ದಿತು. ಆ ಸತ್ವಪರೀಕ್ಷೆಯ ವಿವರಣೆಗಳನ್ನು ಓದುಗರು ಮುಂದಿನ ಅಧ್ಯಾಯಗಳಲ್ಲಿ ನೋಡಬಹುದು.

---

# ೨೧ ಹೋರಾಟ

ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ ತಮ್ಮ ಶಕ್ತಿಗಳನ್ನು ಪರೀಕ್ಷಿಸಲು ಆ ಎರಡೂ ದಳಗಳು ರಾಜದುರ್ಗದಲ್ಲಿ ನೆರೆದವು.

ಪಠಾಣರ ದಂಡು ರಾಜದುರ್ಗವನ್ನು ಆವರಿಸಿತು. ಯಾಕೂಬಖಾನನು ಕೋಟೆಗೆ ಮುತ್ತಿಗೆ ಹಾಕಿದನು. ಐದು ಸಾವಿರ ಮಂದಿಗಳಿದ್ದ ಆ ದಂಡು ದುರ್ಗವನ್ನು ಸುತ್ತುಗಟ್ಟಿತು.

ವಿದ್ರೋಹಿಗಳು ಪಠಾಣರ ಸಮರಾಹ್ವಾನವನ್ನು ಸ್ವೀಕರಿಸಿದರು. ಮುತ್ತಿಗೆಯನ್ನು ಇದಿರಿಸಲು ಹೊರಟರವರು. ಉಷಃಕಾಲದಲ್ಲಿ ವಿದ್ರೋಹಿಗಳೆಲ್ಲರೂ ಕೋಟೆಯೊಳಗಿನ ಮೈದಾನದಲ್ಲಿ ನೆರೆದರು. ಅವರ ಮಧ್ಯದಲ್ಲಿ ಕುಳಿತು ಜ್ಞಾನಾನಂದನು ಧ್ಯಾನಮಗ್ನನಾದ. ಇತರರೂ ಅವನ ಸುತ್ತಲೂ ಮಂಡಿಸಿ ಧ್ಯಾನನಿಷ್ಠರಾದರು. ಎಲ್ಲೆಲ್ಲಿಯೂ ಮೌನ. ಸದ್ದು ಮಾಡದೆ ಗಾಳಿಯು ಮುಂದೆ ತನ್ನ ಹೆಜ್ಜೆಗಳನ್ನಿಡುತ್ತಿದ್ದಿತು. ಮುಂಜಾನೆಯ ಮಂದಮಾರುತನು ವಿದ್ರೋಹಿಗಳ ಬೆನ್ನುಗಳನ್ನು ಸವರುತ್ತಿದ್ದನು. ಪ್ರತಿಯೊಬ್ಬ ವಿದ್ರೋಹಿಯು ಆ ಅಂಗಣದಲ್ಲಿ ಕುಳಿತು ತನ್ನ ಇಷ್ಟ ದೇವತೆಯನ್ನು ಪ್ರಾರ್ಥಿಸುತ್ತಲಿದ್ದನು. ಜ್ಞಾನಾನಂದನ ವದನಮಂಡಲವು ತೇಜೋಮಯವಾಗಿದ್ದಿತು. ಅವನ ನೇತ್ರಗಳು ಕಾಂತಿಯುಕ್ತವಾಗಿದ್ದವು. ಅವನ ಆತ್ಮಪಕ್ಷಿಯು ಎಷ್ಟು ಎತ್ತರದಲ್ಲಿ ಹಾರಾಡುತಿದ್ದಿತೆಂಬುದನ್ನು ಬಲ್ಲವರಾರು?

ಕೆಲವು ನಿಮಿಷಗಳು ಗತಿಸಿದವು; ಜ್ಞಾನಾನಂದನು ತನ್ನ ಧ್ಯಾನದಿಂದ ಎಚ್ಚತ್ತನು. ಅವನ ಮೋರೆಯು ಪ್ರಸನ್ನತೆಯ ಕಳೆಯನ್ನು ತಳೆದಿತ್ತು. ಅಶಾಂತತೆ ಮತ್ತು ಭೀತಿ ಇವುಗಳ ಯಾವ ಲಕ್ಷಣಗಳೂ ಅಲ್ಲಿರಲಿಲ್ಲ. ಅವನು ತನ್ನ ದೃಷ್ಟಿಯನ್ನು ಅನುಯಾಯಿಗಳ ಕಡೆಗೆ ತಿರುಗಿಸಿದ. ಅವರೆಲ್ಲರೂ ತಮ್ಮ ಧ್ಯಾನಗಳನ್ನು ಪೂರೈಸಿದ್ದರು. ಜ್ಞಾನಾನಂದನ ಮುಖದಿಂದ ಗಂಗಾಪ್ರವಾಹದಂತೆ ನುಡಿಗಳು ಹೊರಬೀಳತೊಡಗಿದವು. ಇದುವರೆಗೆ ಇಷ್ಟು ಸ್ನೇಹಪೂರ್ಣವಾದ ಸ್ವರದಲ್ಲಿ,-ಇಷ್ಟು ಮೃದುವಾಣಿಯಲ್ಲಿ-ಅವನು ಮಾತಾಡಿದುದನ್ನು ಯಾರೂ ನೋಡಿರಲಿಲ್ಲ. ಎಲ್ಲರೂ ಅತ್ಯಂತ ಶ್ರದ್ಧೆಯಿಂದ ಅವನ ನುಡಿಗಳನ್ನು ಆಶ್ರಾವಿಸತೊಡಗಿದರು. ಜ್ಞಾನಾನಂದನು ತನ್ನ ನುಡಿಗಳನ್ನು ಹೀಗೆ ಹೇಳಿದ:

"ಗೆಳೆಯರೇ, ಯಾವ ಮುಹೂರ್ತವನ್ನು ಇಷ್ಟುದಿನಗಳಿಂದ ನಾವು

ಇದಿರು ನೋಡುತ್ತಿದ್ದೆವೋ, ಅದೀಗ ಬಂದೊದಗಿದೆ. ಇದೊಂದು ಅಗ್ನಿಪರೀಕ್ಷೆಯಾಗಿವೆಯೆಂಬುದನ್ನು ಪ್ರತಿಯೊಬ್ಬನೂ ನೆನಪಿನಲ್ಲಿಡಬೇಕು. ನಮಗೆ ನಮ್ಮ ಧ್ಯೇಯದಲ್ಲಿರುವ ವಿಶ್ವಾಸವೆಷ್ಟು? ಯಾವ ಯಾವ ತ್ಯಾಗಗಳನ್ನು ಮಾಡಲು ನಾವು ಸಿದ್ಧರಿದ್ದೇವೆ? ಈ ಪ್ರಶ್ನೆಗಳಿಗೆ ಕೆಲಸಗಳ ಮೂಲಕ ಈಗ ನಾವು ಉತ್ತರಿಸಬೇಕಾಗಿದೆ. ಈತನಕ ನಾವು ಮಾತಾಡುತ್ತಿದ್ದೆವು; ಚಿಂತಿಸುತ್ತಿದ್ದೆವು; ತರ್ಕಿಸುತ್ತಿದ್ದೆವು. ಈಗ ಆ ಕಾಲವು ಕಳೆದಿದೆ. ಇದುವರೆಗೆ ನಾವು ಮಾತಾಡಿದುದನ್ನು, ಚಿಂತಿಸಿದ್ದನ್ನು, ತರ್ಕಿಸಿದುದನ್ನು ಉದ್ಯಮರೂಪದಲ್ಲಿ ತೋರಿಸಬೇಕಾಗಿವೆ. ನಾನು ಪ್ರಶ್ನಿಸುವುದಿಷ್ಟೆ, ನಿಮ್ಮ ಧ್ಯೇಯದಲ್ಲಿ ನಿಮಗೆ ವಿಶ್ವಾಸವಿದೆಯೋ? ನಾಡಸೇವೆಯ ಬಲಿಪೀಠದಲ್ಲಿ ದೇಹವಿಸರ್ಜನೆ ಮಾಡುವ ಧೈರ್ಯವು ನಿಮ್ಮಲ್ಲಿವೆಯೇ? ಈಗ ಪ್ರತಿಯೊಬ್ಬ ವಿದ್ರೋಹಿಯೂ ತನ್ನ ಎದೆಯನ್ನು ಬಿಚ್ಚಿ ಒಂದು ಆತ್ಮಪರೀಕ್ಷೆಯನ್ನು ಜರುಗಿಸಲಿ! ಯಾರಿಗೆ ತಮ್ಮ ಆದರ್ಶದಲ್ಲಿ ನಂಬಿಕೆಯಿಲ್ಲ; ಪ್ರಾಣಾರ್ಪಣೆಮಾಡಲು ಯಾರಿಗೆ ಧೈರ್ಯವಿಲ್ಲ ಅಂಥವರು ಈ ಅಗ್ನಿಪರೀಕ್ಷೆಯಿಂದ ದೂರ ನಿಲ್ಲಲಿ! ಏಕೆಂದರೆ ಆ ಸನ್ನದ್ಧತೆಯಿಲ್ಲವೆ ನಾವು ಸಮರಾಂಗಣಕ್ಕಿಳಿದರೆ ನಮ್ಮ ಪ್ರಯತ್ನವು ಯಶಸ್ವಿಯಾಗದು. ಜಯ ದೊರಕುವದೆಂಬ ಆಶೆಯಿಂದ ಕಾದಾಟಕ್ಕೆ ಇಳಿಯಕೂಡದು. ಭಯಂಕರ ಪರಾಜಯವು ಬಂದೊದಗಿದರೂ, ಕರ್ಮಯೋಗಿಗಳಂತೆ ಅದನ್ನು ಅಭಿಮುಖೀಕರಿಸಲು ನಾವು ಸಿದ್ಧರಾಗಿರಬೇಕು. ಈ ದೃಢನಿಶ್ಚಯವು ನಮ್ಮಲ್ಲಿಲ್ಲವೆ ಹೋದರೆ ಸ್ವಾತಂತ್ರ್ಯವನ್ನು ಅವಕಾಶಪಡಲು ನಮಗೆ ಯೋಗ್ಯತೆಯಿಲ್ಲದಾಗುತ್ತದೆ. ಇದುವರೆಗೆ ಒಂದು ಗುರಿಯನ್ನು ಹಿಡಿದು ಅದರ ಸಾಧನೆಗಾಗಿ ಪ್ರಯತ್ನಿಸುತ್ತಾ ಬಂದಿದ್ದೇವೆ. ಆ ದಾರಿಯಲ್ಲಿದ್ದ ಎಡರುಗಳನ್ನೆಲ್ಲಾ ನಿವಾರಿಸಿ ಈಗ ಇಲ್ಲಿಗೆ ಬಂದು ತಲುಪಿದ್ದೇವೆ. ಈಗ ಕೊನೆಯದಾದ ಅಗ್ನಿಪರೀಕ್ಷೆಯನ್ನು ನಾವು ಅಭಿಮುಖೀಕರಿಸಬೇಕಾಗಿವೆ. ಈಗ ನಾವು ಇಡಗುತ್ತಲಿರುವ ಪ್ರತಿಯೊಂದು ಹೆಜ್ಜೆಯೂ ಸ್ವಾತಂತ್ರ್ಯಸೌಧದ ಕಡೆಗಾಗಿದೆ. ನಮ್ಮ ದೇಹಗಳಲ್ಲಿ ಪ್ರಾಣವಿರುವತನಕ ನಾವು ಕಾದಾಡಬೇಕು. ಪ್ರತಿಯೊಂದು ಜೀವವೂ ಸ್ವಾತಂತ್ರ್ಯಯಜ್ಞದಲ್ಲಿ ನಿವೇದಿಸಲಿರುವ ಒಂದೊಂದು ಆಹುತಿಯಾಗೀಯಲಿ! ನಾನು ಹೆಚ್ಚಿಗೇನೂ ಹೇಳುವದಿಲ್ಲ; ನಿಮಗೆಲ್ಲರಿಗೂ ಬುದ್ಧಿಯಿದೆ; ಆಲೋಚಿಸುವ ಶಕ್ತಿಯಿದೆ. ಆಲೋಚಿಸಿರಿ ತ್ಯಾಗಸನ್ನದ್ಧತೆಯು ಯಾರಲ್ಲಿಲ್ಲವೋ ಅಂಥವರು ಈ ಯಜ್ಞಕುಂಡದಿಂದ ದೂರ ನಿಲ್ಲಲಿ. ಅವರಿಗೆ

ಇಲ್ಲಿಂದ ತೆರಳಲು ಪರಿಪೂರ್ಣ ಸಮ್ಮತವನ್ನು ನೀಡಿರುತ್ತೇನೆ. ಇನ್ನು ಕಾದಾಡುವವರ ಸಂಗತಿಯನ್ನು ಕುರಿತು ಎರಡು ಮಾತುಗಳನ್ನು ಹೇಳಬೇಕಾಗಿದೆ. ಧೈರ್ಯ ಮತ್ತು ಯುಕ್ತಿ ಇವುಗಳೆರಡೂ ನಮ್ಮಲ್ಲಿ ಅತ್ಯಾವಶ್ಯಕವಾಗಿರಬೇಕು. ಮೂಢ ಧೈರ್ಯವನ್ನು ಯಾರೂ ಅವಲಂಬಿಸಕೂಡದು. ಪ್ರತಿಯೊಬ್ಬನೂ ತನ್ನ ಜೀವನದ ಬೆಲೆಯನ್ನು ಅರಿತಿರಬೇಕು. ಅವಶ್ಯಕವಾಗಿ ಬಂದ ಹೊರತು ಇತರ ಸಂದರ್ಭದಲ್ಲಿ ಈ ಬೆಲೆಯುಳ್ಳ ಸಾಮಗ್ರಿಯನ್ನು ದುರುಪಯೋಗ ಪಡಿಸಕೂಡದು. ಎರಡು ಹೆಜ್ಜೆಗಳನ್ನು ಮುಂದಿಡುವದಕ್ಕಾಗಿ, ಒಂದು ಹೆಜ್ಜೆಯಷ್ಟು ದೂರ ಹಿಂದೆ ಸರಿಯಬೇಕಾಗಿ ಬರಬಹುದು. ಹಾಗೆ ಹಿಂಜರಿಯುವದು ಭೀರುತನದ ಲಕ್ಷಣವಲ್ಲ. ಅವಶ್ಯಕವೆನಿಸಿದ ಸ್ಥಳದಲ್ಲಿ ತಂತ್ರಗಳನ್ನು ಉಪಯೋಗಿಸಲು ಹಿಂದುಮುಂದೆ ನೋಡಕೂಡದು; ಆದರೆ ಆತ್ಮ ಗೌರವಕ್ಕೆ ಕುಂದನ್ನು ತರತಕ್ಕ ಯಾವ ಕೆಲಸವಲ್ಲಿಯೂ ರಣಾಂಗಣದಲ್ಲಿ ಕೈ ಹಾಕಬಾರದು. ಎರಡನೆಯದು ಶಿಸ್ತು; ನಾಯಕನ ಆಜ್ಞೆಯನ್ನು ಪ್ರತಿಯೊಬ್ಬನೂ ಪಾಲಿಸಲೇಬೇಕು. ಒಂದುವೇಳೆ ಅವನ ಆಜ್ಞೆಯು ಸೈನಿಕನಿಗೆ ವಿಪರೀತವಾಗಿ ತೋರಬಹುದು. ಆಗಲೂ ಏಕೆಂದು ಪ್ರಶ್ನಿಸದೆ ದಳಪತಿಯ ನುಡಿಯನ್ನು ಅನುಸರಿಸಬೇಕಾಗುತ್ತದೆ. ವ್ಯವಸ್ಥೆಯಿಲ್ಲದಿದ್ದರೆ ನಮ್ಮ ಕೆಲಸವು ಯಶಸ್ವಿಯಾಗದು. ಮುಂದೇನಾಗುವದು? ಜಯ ಸಿಗಬಹುದೇ? ಹೀಗೆ ಆಲೋಚಿಸದಿರಿ. ನಾವು ಕರ್ಮವನ್ನು ಆಚರಿಸಲು ಮಾತ್ರ ಅಧಿಕಾರವುಳ್ಳವರಾಗಿರುತ್ತೇವೆ. ಸೋಲು-ಗೆಲುವುಗಳನ್ನು ಚಿಂತಿಸಬೇಕಾದುದಿಲ್ಲ. ನೀವು ಮಾಡುವ ಕೆಲಸವು ನಿಮ್ಮ ಅಂತರಾತ್ಮನಿಗೆ ಸಮ್ಮತವಾಗಿರಬೇಕು."

ಹೀಗೆ ದೀರ್ಘವಾದ ಒಂದು ಉಪದೇಶವನ್ನು ಜ್ಞಾನಾನಂದನು ತನ್ನ ಅನುಯಾಯಿಗಳಿಗೆ ನೀಡಿದನು. ಕುಮಾರ ಅಮರಸಿಂಹನು ಪ್ರಸನ್ನಚಿತ್ತದಿಂದ ಹೀಗೆ ಹೇಳಿದನು: "ನಮ್ಮ ತ್ಯಾಗಸನ್ನದ್ಧತೆಯ ಬಗ್ಗೆ ತಾವು ಸಂದೇಹವನ್ನು ತಾಳಬೇಕಾಗಿಲ್ಲ. ನಾವು ಪ್ರತಿಯೊಬ್ಬರೂ ನಮ್ಮ ಪ್ರಾಣಗಳನ್ನು ಸ್ವಾತಂತ್ರ್ಯಯಜ್ಞದಲ್ಲಿ ಆಹುತಿಗಳಾಗಿ ಸಮರ್ಪಿಸಲು ಸಿದ್ಧರಿರುತ್ತೇವೆ. ಕೊನೆಯತನಕ ಹೋರಾಡುವೆವೆಂಬುದು ನಮ್ಮ ದೃಢಸಂಕಲ್ಪವಾಗಿದೆ."

ತತ್‌ಕ್ಷಣವೇ ಇನ್ನಿತರ ವಿದ್ರೋಹಿಗಳ ಕಂಠಸ್ವರಗಳು ಮೊಳಗಿದವು: "ಕುಮಾರನು ಆಡುವದು ಸತ್ಯವಾಗಿದೆ. ನಾವೆಲ್ಲರೂ ಬಲಿಪೀಠದಲ್ಲಿ ಪ್ರಾಣಗಳನ್ನು ನಿವೇದಿಸಲು ಸಿದ್ಧರಿರುತ್ತೇವೆ."

"ಗೆಳೆಯರೇ," ಜ್ಞಾನಾನಂದನ ತುಟಿಗಳ ಮೇಲೆ ಒಂದು ಮಂದಸ್ಮಿತವು ವರ್ತಿಸಿತು. "ನೀವೆಲ್ಲರೂ ತ್ಯಾಗಕ್ಕೆ ಸಿದ್ಧರಾಗಿರುವಿರೆಂಬುದನ್ನು ನಾನು ಬಲ್ಲೆ. ಆ ಬಗ್ಗೆ ಇನ್ನು ಹೆಚ್ಚಿಗೆ ಮಾತಾಡುವದರಿಂದ ಪ್ರಯೋಜನವಿಲ್ಲ. ಸಮರಾಂಗಣದಲ್ಲಿ ನಮ್ಮ ತ್ಯಾಗಸನ್ನದ್ಧತೆಯು ಎಷ್ಟರಮಟ್ಟಿಗಿದೆಯೆಂಬುದು ಪ್ರತ್ಯಕ್ಷವಾಗುವದು. ಈಗ ನಮ್ಮ ಮುಂದಿನ ಕೆಲಸಗಳನ್ನು ಕುರಿತು ನಾವು ಚಿಂತಿಸಬೇಕಾಗಿದೆ. ಶತ್ರುಗಳು ಐದು ಸಾವಿರ ಮಂದಿ ಇರುತ್ತಾರೆ. ನಮ್ಮ ಬಲವಾದರೋ ಮೂರು ಸಾವಿರಕ್ಕಿಂತ ಹೆಚ್ಚು ಇರುವದಿಲ್ಲ. ಆದುದರಿಂದ ಪ್ರಥಮದೃಷ್ಟಿಯಲ್ಲಿಯೇ ನಮ್ಮ ಬಲವು ಪಠಾಣರನ್ನು ಎದುರಿಸಲು ಅಪರ್ಯಾಪ್ತವಾಗಿವೆಯೆಂಬುದು ಹೊಳೆಯದಿರಲಾರದು. ಆದುದರಿಂದ ಶತ್ರುಗಳ ಮೇಲೆ ಸಾಗಿ ಹೋಗುವ ಮುನ್ನ ನಾವು ಆಲೋಚಿಸಬೇಕಾಗಿದೆ. ಬರೀ ಮೂಢ ಧೈರ್ಯದಿಂದ ಯಾವ ಕೆಲಸವೂ ಸಾಧ್ಯವಾಗುವಂತಿಲ್ಲ. ಆದುದರಿಂದ ಈ ಕದನದಲ್ಲಿ ನಾವು ಬುದ್ಧಿಪೂರ್ವಕವಾಗಿ ಪ್ರಯುತ್ನಿಸತಕ್ಕದ್ದು. ಇನ್ನೊಂದು ಮಾತು; ನಾವು ಕಾದಾಡ ಹೊರಟಿರುವದು ಸ್ವಾರ್ಥಸಾಧನೆಯ ಉದ್ದೇಶದಿಂದಲ್ಲ. ಒಂದು ನಾಡಿನ ಅಭ್ಯುದಯವನ್ನು ಕಾಂಕ್ಷಿಸಿ ಈ ಅಗ್ನಿಪರೀಕ್ಷೆಗೆ ನಾವು ಒಳಗಾಗಿದ್ದೇವೆ. ತಾಯಿ ಅಂಬಿಕೆಯು ನಮ್ಮ ಬಾಹುಗಳಿಗೆ ಶಕ್ತಿಯನ್ನು ನೀಡಲಿ! ನಾಡಸೇವೆಗೆ ಹೊರಟವರ ಎದೆಗಳಲ್ಲಿ ಶೌರ್ಯಸಂಜೀವನವನ್ನು ದುರ್ಗೆಯು ತುಂಬಲಿ! ನಾವು ನಿರಾಶರಾಗಬೇಕಾಗಿಲ್ಲ. ಒಂದುವೇಳೆ ಬಲಿಪೀಠದಲ್ಲಿ ಪ್ರಾಣಗಳನ್ನು ವಿಸರ್ಜಿಸಬೇಕಾಗಿ ಬರಬಹುದು; ಆದರೆ ಲೋಕವು ನಾವು ಒಂದು ಉತ್ಕೃಷ್ಟ ಧ್ಯೇಯ ಸಾಧನೆಗಾಗಿ ಸಾವನ್ನು ಇದಿರುಗೊಳ್ಳಲು ಹೊರಟಿವೆಂಬುದನ್ನು ಮರೆಯದು. ಅಹುದು, ನಾವು ಮನುಷ್ಯರಾಗಿ ಹುಟ್ಟಿದ್ದೇವೆ; ಆಲೋಚಿಸುವ ಶಕ್ತಿಯನ್ನು ಜಗದೀಶ್ವರನು ನಮಗೆ ದಯಪಾಲಿಸಿದ್ದಾನೆ. ನಮ್ಮ ನಾಡಿನ ಲಕ್ಷಾಂತರ ಜನರ ಹಿತಕ್ಕಾಗಿ ನಮ್ಮ ಭೌತಿಕ ದೇಹಗಳನ್ನು ಪರಿತ್ಯಜಿಸುವದು ಮನುಷ್ಯೋಚಿತ ಧರ್ಮವಾಗಿದೆ. ಇನ್ನು ಹೆಚ್ಚಿಗೇನೂ ಹೇಳಲಾರೆ. ನೀವು ನಿಮ್ಮ ಕರ್ತವ್ಯಗಳನ್ನು ಮಾಡಿರಿ."

"ದೇವಿ ದುರ್ಗೆಯು ಜಯವನ್ನು ನೀಡಲಿ!" ಎಂಬ ಜಯಜಯಕಾರವು ಅಲ್ಲಿ ನೆರೆದಿದ್ದ ವೀರಭಟರ ಕಂಠಗಳಿಂದ ಹರಿದು ಒಂದು ನಭೋವಲಯದಲ್ಲಿ ಪಸರಿಸಿತು. ತರುಣರು ಜ್ಞಾನಾನಂದನಿಗೆ ವಂದಿಸಿ ರಣಾಂಗಣಕ್ಕೆ ಹೊರಟರು.

ವಿದ್ರೋಹಿಗಳ ಸಂಖ್ಯೆಯು ಮೂರು ಸಾವಿರವಿರಬಹುದು. ಈ ಮೂರು ಸಾವಿರ ಮಂದಿಗಳ ದಂಡನ್ನು ಜ್ಞಾನಾನಂದನು ಐದು ದಳಗಳಾಗಿ ವಿಂಗಡಿಸಿದ್ದನು. ಆ ಐದೂ ಪಂಗಡಗಳ ಮುಂದಾಳು ಕುಮಾರ ಅಮರಸಿಂಹನಾಗಿದ್ದನು. ಇದಲ್ಲದೆ ಪ್ರತಿಯೊಂದು ಬಣಕ್ಕೂ ಒಬ್ಬೊಬ್ಬ ಪ್ರತ್ಯೇಕ ನಾಯಕನಿದ್ದನು. ದಂಡು ಮಾಡಬೇಕಾದ ಕೆಲಸಗಳನ್ನು ಕುಮಾರನು ಜ್ಞಾನಾನಂದನ ಉಪದೇಶದಂತೆ ತೀರ್ಮಾನಿಸುತ್ತಿದ್ದ. ಈ ಹಂಚಿಕೆಯನ್ನು ದಂಡು ಸರಿಯಾಗಿ ನೆರವೇರಿಸುವಂತೆ ನೋಡಿಕೊಳ್ಳುವದು ಕುಮಾರ ಅಮರಸಿಂಹನ ಹೊಣೆಗಾರಿಕೆಯಾಗಿದ್ದಿತು. ಕುಮಾರ ಅಮರಸಿಂಹನ ನಿರ್ದೇಶದಂತೆ ತಮ್ಮ ಪಂಗಡಗಳು ಮಾಡಬೇಕಾದ ಕಾರ್ಯಗಳನ್ನು ಸರಿಯಾಗಿ ಜರುಗುವಂತೆ ನೋಡಿಕೊಳ್ಳುವದು ಆಯಾ ಪಂಗಡದ ನಾಯಕನ ಕೆಲಸವಾಗಿದ್ದಿತು. ಕದನವು ಪ್ರಾರಂಭವಾಗಲು ಪ್ರತಿಯೊಂದು ಪಂಗಡದ ಕೆಲಸಗಳೂ ಹೆಚ್ಚಿದವು. ಅದರಂತೆಯೆ ನಾಯಕರ ಹೊಣೆಗಾರಿಕೆಗಳೂ ವರ್ಧಿಸಿದವು. ಪ್ರತಿಯೊಬ್ಬನೂ ಕರ್ತವ್ಯಬೋಧದೊಡನೆ ಕೆಲಸ ಮಾಡಬೇಕಾಗಿದ್ದಿತು. ಈ ಐದು ಬಣಗಳಲ್ಲಿ ಎರಡು ಪಂಗಡಗಳು ಕೋಟೆಯ ಬಹಿಃಪ್ರದೇಶಕ್ಕೆ ತೆರಳಿ ಶತ್ರುಗಳೊಡನೆ ಪ್ರತ್ಯಕ್ಷವಾಗಿ ಹೋರಾಡಬೇಕಾಗಿದ್ದಿತು. ಇನ್ನುಳಿದ ಪಂಗಡಗಳು ಕೋಟೆಯೊಳಗೆ ನಿಂತು ವೈರಿಗಳು ಒಳಗೆ ಪ್ರವೇಶಿಸದಂತೆ ನೋಡಿಕೊಳ್ಳಬೇಕಾಗುವದು. ಹೊರಗೆ ಕಾದಾಡಲು ತೆರಳಿದ ಎರಡು ಪಂಗಡಗಳು ದಣಿದು ತಮ್ಮ ಕಾದಾಟವನ್ನು ಸಾಕು ಮಾಡಿದರೆ, ಕೋಟೆಯೊಳಗಿರುವ ಇನ್ನೆರಡು ಬಣಗಳು ಹೊರಗೆ ತೆರಳಿ, ಸಮರವನ್ನು ಮುಂದುವರಿಸುತ್ತಿದ್ದವು. ಕಾದಾಟವು ಹೀಗೆ ನಾಲ್ಕು ಬಣಗಳ ಕೆಲಸವಾಗಿದ್ದಿತು. ಐದನೆಯ ಬಣವು ಕಾದಾಟದಲ್ಲಿ ಪ್ರತ್ಯಕ್ಷ ಭಾಗವನ್ನು ವಹಿಸುತ್ತಿರಲಿಲ್ಲ. ಗಾಯ ಹೊಂದಿದವರಿಗೆ ಚಿಕಿತ್ಸೆ ಮಾಡುವದು, ಕಾದಾಡುವವರಿಗೆ ಆಹಾರವನ್ನು ಪೂರೈಸುವದು, ಮುರಿದು ಹೋದ ಆಯುಧಗಳನ್ನು ಸರಿಪಡಿಸುವದು, ಚಾರರ ಮೂಲಕ ಶತ್ರುಗಳ ರಹಸ್ಯಗಳನ್ನು ತಿಳಿದುಕೊಳ್ಳುವದು ಇವು ಐದನೆಯ ಪಂಗಡದವರಿಗೆ ಸೇರಿದ ಕೆಲಸಗಳಾಗಿದ್ದವು. ಈ ಬಣದ ನಾಯಕನು ಹೇಮಚಂದ್ರನಾಗಿದ್ದನು. ಈ ಬಣವು ಪ್ರತ್ಯಕ್ಷವಾಗಿ ಕಾದಾಡದಿದ್ದರೂ, ಇತರ ಸೇನಾ ವಿಭಾಗಗಳಂತೆ ಇದೂ ಪ್ರಾಮುಖ್ಯವಾದ ಒಂದಾಗಿದ್ದಿತು. ಈ ದಳದ ಕೆಲಸಗಳು ಸ್ವಲ್ಪ ಹೆಚ್ಚುಕಡಿಮೆಯಾದರೆ, ಇತರ ಎಲ್ಲಾ ವಿಭಾಗಗಳಲ್ಲಿಯೂ ಅವ್ಯವಸ್ಥೆಯು ಬಾಧಿಸದೆ ಇರುತ್ತಿರಲಿಲ್ಲ. ಅದು

ದರಿಂದ ಈ ದಳವು ಅತ್ಯಂತ ಜಾಗ್ರತೆಯಿಂದ, ಸುವ್ಯವಸ್ಥೆಯಿಂದ ಉದ್ಯಮಿಸ ಬೇಕಾಗಿದ್ದಿತು.

ಹೋರಾಟವು ಪ್ರಾರಂಭವಾಯಿತು. ಐದು ಸಾವಿರ ಮಂದಿ ಪಠಾಣರು ಒಂದು ಪಾರ್ಶ್ವದಲ್ಲಿದ್ದರು. ಇನ್ನೊಂದು ಭಾಗದಲ್ಲಿದ್ದುದು ಸಾವಿರದಿನ್ನೂರು ಮಂದಿಗಳ ಒಂದು ಪುಟ್ಟ ಸೈನ್ಯವಾಗಿದ್ದಿತು. ಈ ಎರಡು ಸೇನಾಬಲಗಳ ನಡುವೆ ಅಜಗಜಾಂತರ ವ್ಯತ್ಯಾಸವಿದ್ದಿತು. ತನ್ನ ಸೇನಾಬಲವು ಹೆಚ್ಚಾಗಿದ್ದು ದರಿಂದ ಕದನದಲ್ಲಿ ತನಗೆ ಸೋಲಾಗುವವೆಂಬ ಭೀತಿಯು ಯಾಕೂಬನಿಗೆ ಇರ ಲಿಲ್ಲ. ಸಾವಿರ ಮಂದಿ ಪುಂಡರನ್ನು ಸುಲಭದಲ್ಲಿ ಅಡಗಿಸಬಹುದು, ಎಂದು ಅವನು ಭಾವಿಸಿದ; ಆದರೆ ತನಗೆ ನೈತಿಕ ಮತ್ತು ಧಾರ್ಮಿಕ ಬಲವಿಲ್ಲವೆಂಬು ದನ್ನು ಅವನು ತಿಳಿಯಲಿಲ್ಲ.

ಪಠಾಣರೂ ವಿದ್ರೋಹಿಗಳೂ ಕತ್ತಿಗಳನ್ನು ಹಿರಿದು ಕಾದಾಡಿದರು. ಮನುಷ್ಯನು ಮನುಷ್ಯನನ್ನು ವಧಿಸುವ ಆ ಚಿತ್ರಗಳು ಭಯಾನಕವಾಗಿದ್ದವು. ಮನುಷ್ಯನು ಇನ್ನೊಬ್ಬ ಮನುಷ್ಯನ ಎದೆಯನ್ನು ಶೀಳಲು ಸನ್ನದ್ಧನಾಗಿದ್ದನು. ಜೀವವಿದ್ದ ಮನುಷ್ಯನು ಇನ್ನೊಂದು ಕ್ಷಣದಲ್ಲಿ ನಿರ್ಜೀವನಾಗಿ ನೆಲದ ಮೇಲೆ ಪತಿಸುತ್ತಿದ್ದನು. ಶತ್ರುವಿನ ಕತ್ತಿಯ ಆಘಾತಕ್ಕೆ ಗುರಿಯಾಗಿ ತನ್ನ ಕೈಕಾಲು ಗಳನ್ನು ಕಳೆದುಕೊಂಡು ನರಳುತ್ತಿದ್ದನು. ಇದೆಲ್ಲಾ ಏಕೆ? ಈ ನರಹತ್ಯೆ ಯಿಲ್ಲದೆ ಜೀವಿಸಲು ಮನುಷ್ಯನಿಗೆ ಸಾಧ್ಯವಾಗುವದಿಲ್ಲವೇ? ಎಂಬ ಚಿಂತೆಗಳು ನಮ್ಮ ಮೆದುಳುಗಳನ್ನು ಬಾಧಿಸದೆ ಇರಲಾರವು; ಆದರೆ ಸಂಕುಚಿತ ಮನ ಸ್ಥಿತಿಯ ಗೋಡೆಗಳಿಂದ ಮನುಷ್ಯನು ಆವೃತವಾಗಿರುವತನಕ ಈ ಭೀಕರ ನರ ಹತ್ಯೆ-ಯುದ್ಧಗಳು ಇಲ್ಲದಾಗವು. ಮನುಷ್ಯನು ಸ್ವಾರ್ಥಿಯಾಗಿ, ಇನ್ನೊಬ್ಬ ನನ್ನು ತನ್ನ ಕಾಲುಗಳಡಿಯಲ್ಲಿ ತುಳಿಯುವ ಪೈಶಾಚಿಕ ಸ್ವಭಾವವನ್ನು ಪರಿ ತ್ಯಜಿಸುವ ತನಕ, ನೆತ್ತರ ನದಿಗಳು ಈ ಲೋಕದಲ್ಲಿ ಹರಿಯದೆ ನಿರ್ವಾಹವಿಲ್ಲ. ಒಂದು ಸಮುದಾಯವು ಇನ್ನೊಂದು ಸಮುದಾಯವನ್ನು ತನ್ನ ದಾಸ್ಯದಲ್ಲಿ ಟ್ಟುಕೊಳ್ಳಲು ಪ್ರಯತ್ನಿಸುತ್ತಿರುವಾಗ, ಒಂದು ಜನಾಂಗವು ಇನ್ನೊಂದು ಜನಾಂಗದಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸುತ್ತಲಿರುವಾಗ, ನಿಶ್ಚಯವಾಗಿಯೂ ಮೃಗೀಯ ಹಿಂಸೆಯ ನಗ್ನರೂಪವು ಪ್ರತ್ಯಕ್ಷವಾಗಲೇಬೇಕಾಗುತ್ತದೆ. ಅದರಂ ತೆಯೇ ಒಮ್ಮೆ ದಾಸ್ಯಶೃಂಖಲೆಗಳಲ್ಲಿ ಸಿಲುಕಿದವರು ಎಂದೆಂದಿಗೂ ಆ ಬಂಧನ ದಲ್ಲಿಯೇ ಇರಲಾರರು, ಅವರ ಆತ್ಮಾಭಿಮಾನವು, ಸ್ವಾತಂತ್ರ್ಯಬೋಧವು,

ಅವರ ಇಕ್ಕಟ್ಟುಗಳನ್ನು ಮುರಿಯಲು ಪ್ರಯತ್ನಿಸುತ್ತವೆ. ದಾಸ್ಯ ಜನಾಂಗವು ಜಾಗೃತಿಯನ್ನು ಪಡೆದು, ಆಳುವವರನ್ನು ಇದಿರಿಸಲು ಪ್ರಯತ್ನಿಸುತ್ತದೆ. ಇವು ಗಳಿಂದ ನಾವು ಒಂದು ಸಂಗತಿಯನ್ನು ತಿಳಿದುಕೊಳ್ಳಬಹುದು. ಒಂದು ನಾಡು ಇನ್ನೊಂದು ದೇಶವನ್ನು ಆಕ್ರಮಿಸಿ ಅಲ್ಲಿ ಸಾಮ್ರಾಜ್ಯವನ್ನು ಸ್ಥಾಪಿಸುವದಾದರೆ, ಅನಂತರ ಆಕ್ರಮಣಕ್ಕೊಳಗಾದ ದೇಶದೊಡನೆ ಕಾದಾಡಲೇಬೇಕಾಗಿ ಬರು ತ್ತವೆ. ಇದನ್ನು ನಾವು ಚರಿತ್ರೆಯಲ್ಲಿ ಪ್ರತ್ಯಕ್ಷವಾಗಿ ನೋಡಬಹುದು. ಆದು ದರಿಂದ ಜಗತ್ತಿನಲ್ಲಿ ಜರುಗುತ್ತಲಿರುವ ಯುದ್ಧಗಳ ಮೂಲ ಕಾರಣವು ಸಾಮ್ರಾಜ್ಯಮೋಹವಾಗಿವೆ. ಮನುಷ್ಯನ ಸಂಕುಚಿತ ಬುದ್ಧಿಯಾಗಿದೆ. ಇದರಂ ತೆಯೇ ರೂಪನಗರದಲ್ಲಿ ಪಠಾಣರು ತಮ್ಮ ನಿರಂಕುಶ ಪ್ರಭುತ್ವದಿಂದ ಜನರನ್ನು ಪೀಡಿಸದಿದ್ದಿದ್ದರೆ ಈ ಹೋರಾಟವು ಆವಿರ್ಭವಿಸುತ್ತಿರಲಿಲ್ಲ. ಸೌಹಾರ್ದ ಮತ್ತು ಉದಾರಬುದ್ಧಿಯನ್ನು ಸ್ವೀಕರಿಸಿದ್ದರೆ, ವಿದ್ರೋಹವು ಹುಟ್ಟುತ್ತಿರಲಿಲ್ಲ, ಆದರೆ ಅಧಿಕಾರೋನ್ಮತ್ತತೆಯಿಂದ ಕುರುಡರಾದವರಿಗೆ ಈ ವಿಶಾಲದೃಷ್ಟಿಯೆಲ್ಲಿ ರುವದು? ವಿವೇಕ ಬುದ್ಧಿಯು ಅವರಲ್ಲಿಲ್ಲವಿದ್ದುದರಿಂದ ರಾಜಮಾರ್ಗದಲ್ಲಿ ನೆತ್ತ ರಿನ ನದಿಯು ಹರಿಯಬೇಕಾಗಿ ಬಂದಿತು. ಮಾನವ ಜೀವಿಗಳು ಸಹಸ್ರಗಟ್ಟಲೆ ತಮ್ಮ ಪ್ರಾಣಗಳನ್ನು ಬಲಿನೀಡಿ ಸಮರದೇವನನ್ನು ಸಂತೃಪ್ತಿಗೊಳಿಸಬೇಕಾಗಿ ಬಂದಿತು.

ಶತ್ರುಗಳು ಅಸಂಖ್ಯಾಕರಿದ್ದರೆಂದು ವಿದ್ರೋಹಿಗಳು ಭಯಪಡಲಿಲ್ಲ. ಅವರು ತಮ್ಮ ಕಾರ್ಮುಕಗಳಲ್ಲಿ ಬಾಣಗಳನ್ನು ಹೂಡಿ ಶರವರ್ಷವನ್ನು ಕರೆಯ ತೊಡಗಿದರು. ವಿದ್ರೋಹಿಗಳು ಪಠಾಣರಿಗಿಂತ ಮೇಲ್ತರಗತಿಯ ಬಿಲ್ಲಾಳು ಗಳಾಗಿದ್ದರು. ಅವರು ಹೂಡುತ್ತಿದ್ದ ಬಾಣಗಳು ಗುರಿ ತಪ್ಪುತ್ತಿರಲಿಲ್ಲ; ಸು ಯ್ಯೆಂದು ತೆರಳಿ ನರದೇಹಗಳನ್ನು ಭೇದಿಸುತ್ತಿದ್ದವು. ಕತ್ತಿಯ ಯುದ್ಧದಲ್ಲಿ ಪಠಾಣರು ಒಳ್ಳೆಯ ನಿಷ್ಣಾತರಿದ್ದರು; ಆದರೆ ವಿದ್ರೋಹಿಗಳ ಶರಗಳು ಒಂದೇಸವನೆ ಗಾಳಿಯಲ್ಲಿ ಹರಿದು ಬರುತ್ತಿದ್ದುದರಿಂದ, ಅವರ ಹತ್ತಿರ ಹೋ-ಗುವದು ಪಠಾಣರಿಗೆ ಅಸಾಧ್ಯವಾಗಿದ್ದಿತು. ಈ ಬಾಣಗಳು ಅನೇಕ ಮಂದಿ ಪಠಾಣರ ಜೀವನ ಯಾತ್ರೆಗಳನ್ನು ಪೂರೈಸಿದವು.

ಕದನದಿಂದ ವಿದ್ರೋಹಿಗಳು ದಣಿಯಲು ಅವರು ಕೋಟೆಯೊಳಗೆ ಪ್ರವೇಶಿಸಿದರು. ಕೋಟೆಯೊಳಗಿನಿಂದ ಹೊಸದೊಂದು ದಂಡು ಬಂದು ಮೊದಲಿದ್ದವರ ಸ್ಥಳವನ್ನು ಹಿಡಿದಿತು. ಅವರು ಈ ವರೆಗೆ ವಿಶ್ರಾಂತಿಯನ್ನು

ಅನುಭವಿಸಿದ್ದುದರಿಂದ ತುಂಬ ಹುರುಪುಳ್ಳವರಾಗಿದ್ದರು. ಪಠಾಣರಾದರೋ ಬೆಳಗಿನಿಂದ ಈ ವರೆಗೆ ವಿಶ್ರಾಂತಿಯಿಲ್ಲದೆ ಕಾದಾಡಿದ್ದರು. ಈ ಪರಿಶ್ರಮಗಳಿಂದ ಅವರು ದಣಿದಿದ್ದರು. ಆದುದರಿಂದ ಕೋಟೆಯೊಳಗಿನಿಂದ ಬಂದ ವಿದ್ರೋಹಿಗಳಷ್ಟು ಉತ್ಸಾಹದಿಂದಾಗಲೀ, ಹುರುಪಿನಿಂದಾಗಲೀ ಕಾದಾಡಲು ಪಠಾಣರಿಗೆ ಸಾಧ್ಯವಾಗಲಿಲ್ಲ. ಯಾಕೂಬಖಾನನು ತನ್ನ ಕುದುರೆಯ ಮೇಲೆ ಕುಳಿತು ಸೈನಿಕರನ್ನು ಉತ್ಸಾಹಪಡಿಸುತ್ತಿದ್ದನು. ಸಾವಿರ ಮಂದಿಯುಳ್ಳಿರುವ ಪುಂಡರನ್ನು ಗೆಲ್ಲುವದು ಸುಲಭದ ಕೆಲಸವೆಂದು ನುಡಿಯುತ್ತಿದ್ದನು; ಆದರೆ ಸೈನಿಕರಲ್ಲಿ ಯಾಕೂಬಖಾನನ ಉತ್ಸಾಹವಿರಲಿಲ್ಲ. ಅವರು ದಣಿದಿದ್ದರು. ಸಾಲದುದಕ್ಕೆ ಸಮೀರನ ತಾಪವು ಅಪಾರವಾಗಿದ್ದಿತು. ವಿದ್ರೋಹಿಗಳ ಶರವರ್ಷವನ್ನು ಗುರಾಣಿಗಳಿಂದ ತಡೆಯಲು ಅವರಿಗೆ ಬಹು ಪ್ರಯಾಸವಾಯಿತು.

ಸಂಜೆಯವರೆಗೆ ಕಾದಾಟವು ನಡೆದಿತು. ಅನೇಕ ಮಂದಿ ಪಠಾಣರು ಮಡಿದರು ಕೆಲವು ಮಂದಿ ವಿದ್ರೋಹಿಗಳೂ ಮೃತರಾಗದಿರಲಿಲ್ಲ. ಮೊದಲನೆ ದಿವಸದ ಹೋರಾಟದಿಂದ ಕೋಟೆಯನ್ನು ವಶಪಡಿಸಿಕೊಳ್ಳುವದು ಅಷ್ಟು ಸುಲಭದ ಕೆಲಸವಲ್ಲವೆಂಬದು ಯಾಕೂಬಖಾನನಿಗೆ ಮನನವಾಯಿತು; ಆದರೂ ಅವನು ಭಯಪಡಲಿಲ್ಲ. ತನ್ನ ಸೇನಾಬಲವು ಸಂಖ್ಯೆಯಲ್ಲಿ ಹೆಚ್ಚಿರುವದರಿಂದ ವಿದ್ರೋಹಿಗಳನ್ನು ಜಯಿಸಬಹುದೆಂದಾಗಿದ್ದಿತು ಅವನ ವಿಚಾರವು.

ಆ ದಿನದ ಯುದ್ಧವು ಪೂರೈಸಿತು. ಪಠಾಣ ಸೈನಿಕರು ರಾತ್ರಿ ಹೊತ್ತಿನಲ್ಲಿ ತಮ್ಮ ಪಾಳಯಗಳಲ್ಲಿ ನಿದ್ರಿಸುತ್ತಿದ್ದರು. ಕೆಲವು ಮಂದಿ ಮಾತ್ರ ರಾತ್ರಿ ಪಾಳಯಗಳನ್ನು ಕಾಯುತ್ತಿದ್ದರು. ಗಾಯಗೊಂಡವರು ನರಳುತ್ತಿದ್ದ ಸಪ್ಪಳವಲ್ಲದೆ ಇನ್ನಾವುದೂ ರಜನಿಯ ಶಾಂತತೆಯ ವಾತಾವರಣವನ್ನು ಭಂಜಿಸುತ್ತಿರಲಿಲ್ಲ. ಯಾಕೂಬನು ತನ್ನ ಗುಡಾರದಲ್ಲಿ ನಿದ್ರಿಸುತ್ತಿದ್ದ. ರಾತ್ರಿ ವಿಪತ್ತು ಬಂದೊದಗಬಹುದೆಂದು ಯಾರೂ ಭಾವಿಸಿರಲಿಲ್ಲ; ಆದರೆ ಅವರ ತಿಳುವಳಿಕೆ ತಪ್ಪಿತು. ಆ ರಾತ್ರಿ ಪಹರೆಯವನು ತಾವು ಆಹಾರ ಸಾಮಗ್ರಿಗಳನ್ನು ಭದ್ರಪಡಿಸಿದ ಗುಡಾರವು ಧಗಧಗನೆ ಉರಿಯುತ್ತಿರುವದನ್ನು ನೋಡಿದನು. ಗುಡಾರದ ಬಳಿಯಿಂದ ಎರಡು ಮೂರು ಮಂದಿ ಚಲಿಸುತ್ತಿದ್ದುದು ಅಗ್ನಿಯ ಪ್ರಭೆಯಲ್ಲಿ ಅವನಿಗೆ ಕಾಣದಿರಲಿಲ್ಲ. ವಿದ್ರೋಹಿಗಳಿಂದ ಬಂದ ಕೇಡಿದೆಂಬ ಭೀತಿಯು ಅವನ ಮನದಲ್ಲಿ ಮೂಡಿತು ಅವನು ದಿಗಿಲಿನಿಂದ "ಶತ್ರುಗಳು! ಶತ್ರುಗಳು!" ಎಂದು ಕಿರುಚಿದನು.

"ಶತ್ರುಗಳು!" ಎಂಬ ಸ್ವರವು ಮೊಳಗಲು ಪಠಾಣರು ಎಚ್ಚತ್ತರು. ಕೈಗೆ ಸಿಕ್ಕಿದ ಆಯುಧಗಳನ್ನು ಹಿಡಿದುಕೊಂಡು ಅವರು ಗುಡಾರದಿಂದ ಹೊರಗೆ ಬಂದರು. ಪ್ರತಿಯೊಬ್ಬನೂ ನಿದ್ದೆಯ ಮಂಕಿನಲ್ಲಿದ್ದುದರಿಂದ ಶತ್ರುಗಳೆಲ್ಲಿ? ಏನು ಮಾಡುತ್ತಿರುವರು? ಎಂಬ ಸಂಗತಿಗಳನ್ನು ತಿಳಿಯಲಾಗಲಿಲ್ಲ. ಅವರು ಕುರಿಗಳಂತೆ ಶತ್ರುಗಳು! ಎಂಬ ನಿನಾದವು ಹೊರಟ ಕಡೆಗೆ ಓಡಿದರು.

"ಶತ್ರುಗಳೆಲ್ಲಿ?" ಈ ಪ್ರಶ್ನೆಯು ಯಾಕೂಬನ ತುಟಿಗಳಿಂದ ಹೊರಬಿತು. ಪಹರೆಯವನು ಮಾತಾಡದೆ ಉರಿಯುತ್ತಿದ್ದ ಗುಡಾರದ ಕಡೆಗೆ ತನ್ನ ಬೆರಳನ್ನು ತೋರಿಸಿದ. ಎಲ್ಲರೂ ಆ ಕಡೆಗೆ ತಮ್ಮ ದೃಷ್ಟಿಗಳನ್ನು ತಿರುಗಿಸಿದರು. ಆಹಾರ ಸಾಮಗ್ರಿಗಳನ್ನು ಭದ್ರಪಡಿಸಿದ್ದ ಗುಡಾರವು ಯಜ್ಞೇಶ್ವರನಿಗೆ ಆಹುತಿಯಾಗಿದ್ದಿತು. ಈ ದೃಶ್ಯವನ್ನು ಸುಭೇದಾರನು ಈಕ್ಷಿಲು ಆ ಕಡೆಗೆ ತೆರಳಿ ಬೆಂಕಿಯನ್ನು ನಂದಿಸಲು ತನ್ನ ಕಡೆಯ ಸೈನಿಕರಿಗೆ ಆಜ್ಞಾಪಿಸಿದ. ಅವನ ನುಡಿಯಂತೆ ಅವರು ಅಲ್ಲಿಗೆ ಓಡಿದರು. ಗುಡಾರದ ಒಂದು ಭಾಗವು ಸಂಪೂರ್ಣವಾಗಿ ಉರಿದು ಹೋಗಿದ್ದಿತು. ಉಳಿದ ಭಾಗಗಳನ್ನು ಬೆಂಕಿಯಿಂದ ಉಳಿಸಲು ಸೈನಿಕರು ಪ್ರಯತ್ನ ಮಾಡಿದರು. ಕೆಲವರು ಈ ನಡುರಾತ್ರಿಯಲ್ಲಿ ಪಾಳಯಕ್ಕೆ ಕಿಚ್ಚನ್ನು ಮಡಗಿದವರು ಯಾರೆಂದು ಅರಸಲು ಹೊರಟರು; ಆದರೆ ಈ ಕೆಲಸಕ್ಕೆ ಹೊರಟವರ ಯತ್ನವು ಯಶಸ್ವಿಯಾಗಲಿಲ್ಲ. ಆ ಇರುಳಿನಲ್ಲಿ ದವಸ ಧಾನ್ಯಗಳ ಗುಡಾರಕ್ಕೆ ಬೆಂಕಿಯನ್ನು ಮಡುಗಿದವರು ಪಠಾಣರ ಕಣ್ಣುಗಳಿಗೆ ಬೀಳದೆ ಅಲ್ಲಿಂದ ಮಾಯವಾಗಿದ್ದರು. ಹೇಗೋ ಬಹು ಸಾಹಸಪಟ್ಟು ಉರಿಯುತ್ತಿದ್ದ ಕಿಚ್ಚನ್ನು ನಂದಿಸಿದುದಾಯಿತು. ಗುಡಾರದ ಅರ್ಧಕಿಂತ ಹೆಚ್ಚು ಭಾಗವು ಉರಿದು ಸಂಪೂರ್ಣ ನಾಶವಾಗಿ ಹೋಗಿದ್ದಿತು. ಆಹಾರ ಸಾಮಗ್ರಿಗಳ ಅನೇಕ ಮೂಟೆಗಳು ಬೆಂದು ಹೋಗಿದ್ದವು. ಆಹಾರ ಸಾಮಗ್ರಿಗಳಿಗೆ ಸಂಭವಿಸಿದ ಹಾನಿಯನ್ನು ಸುಭೇದಾರನು ನೋಡಿದನು. ಇದಕ್ಕೆ ಸ್ವಲ್ಪ ಮುನ್ನ ಗುಡಾರವು ಉರಿಯುತ್ತಿದ್ದಿತು; ಆದರೆ ಈಗ ಕುತ್ತುತ್ತಿದ್ದುದು ಸುಭೇದಾರನ ಎದೆಯಾಗಿದ್ದಿತು. ಯುದ್ಧರಂಗದಲ್ಲಿ ಆಹಾರ ಸಾಮಗ್ರಿಗಳು ದುರ್ಲಭವಾದರೆ ಜಯುಸಿಗುವುದು ಪ್ರಯಾಸವೆಂಬುದನ್ನು ಅವನು ಅರಿತಿದ್ದನು. ಊರ ಜನರೆಲ್ಲರೂ ಪಠಾಣರೊಡನೆ ಶತ್ರುತ್ವವನ್ನೇ ಪ್ರದರ್ಶಿಸುತ್ತದಿದ್ದರು. ಬೆಲೆ ಕೊಟ್ಟರೂ ಊರಲ್ಲಿ ಅವರಿಗೆ ಆಹಾರ ಸಾಮಗ್ರಿಗಳು ದೊರಕುವಂತಿರಲಿಲ್ಲ. ತಮ್ಮನ್ನು ಹತವೀರ್ಯರನ್ನಾಗಿ ಮಾಡಲು

ವಿದ್ರೋಹಿಗಳು ಹೂಡಿದ ತಂತ್ರವೆಂದು ಖಾನನಿಗೆ ಹೊಳೆಯದಿರಲಿಲ್ಲ. ಅವನು ತನ್ನ ಕಣ್ಣುಗಳಲ್ಲಿ ಕೆಂಡಗಳನ್ನು ಕಾರುತ್ತಾ ಸೈನಿಕರಿಗಂದನು: "ನೀವು ಕತ್ತೆಗಳು! ಸ್ವಲ್ಪ ಎಚ್ಚರಿಕೆಯಿಂದಿದ್ದರೆ ಈ ಅನಾಹುತವು ಸಂಭವಿಸುತ್ತಿರಲಿಲ್ಲ. ಆಹಾರವಿಲ್ಲದೆ ಕಾದಾಡುವುದು ಹೇಗೆ?"

"ಸಾಹೇಬ," ಸೈನಿಕರು ಹೇಳಿದರು: "ಈ ಅನಾಹುತವು ಜರುಗುವುದೆಂದು ಯಾರು ವಿಚಾರಿಸಿದ್ದರು? ಈ ಪುಂಡರು ಈ ಅನರ್ಥಕ್ಕೆ ಕೈಹಾಕುರೆಂಬುದನ್ನು ತಿಳಿದಿದ್ದರೆ, ಆ ಸೂಚನೆಯು ತಿಲಾಂಶವಷ್ಟಾದರೂ ದೊರೆತಿದ್ದರೆ, ನಾವು ಅವರನ್ನು ತಡೆಯದೆ ಇರುತ್ತಿರಲಿಲ್ಲ."

"ನಮ್ಮ ಬಲವನ್ನು ಹೀಗೆ ಮುರಿಯಬೇಕೆಂಬುದನ್ನು ಅವರು ಬಲ್ಲರು. ಹಗಲು ರಾತ್ರಿಯೆನ್ನದೆ ನಮ್ಮನ್ನು ತೊಂದರೆಗೊಳಿಸಲು ಅವರು ಹಿಂದುಮುಂದೆ ನೋಡಲಾರರು. ಈಗ ಕಳೆದುದನ್ನು ಕುರಿತು ಚಿಂತಿಸಿ ಪ್ರಯೋಜನವಿಲ್ಲ. ಇನ್ನು ಮುಂದಾದರೂ ಪಹರೆಯವರು ಜಾಗ್ರತೆಯಿಂದ ವರ್ತಿಸಬೇಕು. ತುಸ ಆಲಸತೆಯನ್ನು ತೋರಿಸಿದರೆ, ಈಗಿನಂತೆ ಅನಾಹುತಗಳು ಸಂಭವಿಸುವುದರಲ್ಲಿ ಸಂಶಯವಿಲ್ಲ. ವಿದ್ರೋಹಿಗಳೆಂದರೆ ಪಿಶಾಚಿಗಳಿಗೂ ಹೆದರದವರಾಗಿರುತ್ತಾರೆ." ಹೀಗೆ ಸೈನಿಕರಗೆ ಒಂದು ಉಪದೇಶವನ್ನು ನೀಡಲು ಹೊರಟನು ದುರ್ಜಯನು.

"ನಿಜ, ನಿಜ!" ಎಂದು ಸುಭೇದಾರನು ತನ್ನ ತಲೆಯನ್ನು ಅಲ್ಲಾಡಿಸಿದ.

ರಾತ್ರಿಯು ಕಳೆದಿತು. ಪ್ರಾಚ್ಯದಿಶೆಯಲ್ಲಿ ಭಾಸ್ಕರನು ಉದಯವನ್ನು ಹೊಂದಲು ಆತನಿಗೆ ನೆತ್ತರಿನ ಅರ್ಘ್ಯಗಳನ್ನು ನೀಡುವದಕ್ಕಾಗಿ ಬಯಲಿನಲ್ಲಿ ಎರಡೂ ಸೇನೆಗಳು ನೆರೆದವು. ಪಿಕದ ಮಧುರಾಲಾಪವಲ್ಲ ಆ ಪ್ರಭಾತದಲ್ಲಿ ಕೇಳಿಸಿದುದು; ಶತ್ರುಗಳನ್ನು ಸಂಹರಿಸಲು ಹೊರಟಿದ್ದ ವೀರರ ರಣಗರ್ಜನೆಗಳಾಗಿದ್ದವು ಮೊಳಗಿದುದು. ಹೊಲವನ್ನು ಹಸನುಮಾಡಲು ಹೊಲಕ್ಕೆ ಎತ್ತುಗಳನ್ನು ಹಟ್ಟಿಯಿಂದ ಅಟ್ಟಿಕೊಂಡು ಹೋಗತಕ್ಕ ಕೃಷಿಗಾರನಲ್ಲ ಅಲ್ಲಿ ಗೋಚರಿಸಿದುದು; ಅಲ್ಲಿ ಪ್ರತ್ಯಕ್ಷವಾದುದು ನರಹತ್ಯೆಗೆ ಹೊರಟ ನರಜೀವಿಯಾಗಿದ್ದನು. ಅಲ್ಲಿ ಮಾನವನಲ್ಲಿರತಕ್ಕ ಮೃಗೀಯ ಸ್ವಭಾವಗಳೆಲ್ಲ ಪರಿಪೂರ್ಣವಾಗಿ ಗೋಚರಿಸುತ್ತಿದ್ದವು. ಒಂದು ಪಕ್ಷದವರು ಉನ್ನತವಾದ ಒಂದು ಆದರ್ಶಕ್ಕೆ ಬೇಕಾಗಿ ಕಾದಾಡುತ್ತಿದ್ದರು; ಆದರೆ ಕಾಲಿಗೆ ತಗಲಿದ ಒಂದು ಮುಳ್ಳನ್ನು ತೆಗೆಯಲು ಇನ್ನೊಂದು ಮುಳ್ಳು ಬೇಕಾಗುವಂತೆ, ಪೈಶಾಚಿಕತೆಯನ್ನು ಇದಿ

ರಿಸಲು, ಪೈಶಾಚಿಕ ನೀತಿಯನ್ನು ಸ್ವೀಕರಿಸದೆ ಬೇರೆ ದಾರಿಯಿಲ್ಲವಷ್ಟೆ?

ಕಾಳಗದ ರಂಗದಲ್ಲಿಯೂ ಮನುಷ್ಯ ಹೃದಯದಲ್ಲಿ ಅಡಗಿರತಕ್ಕ ಕರುಣೆಯನ್ನು ನಾವು ನೋಡಬಹುದು. ಗಾಯಗೊಂಡು ಒಬ್ಬ ಪಠಾಣನು ನೆಲದಲ್ಲಿ ಬಿದ್ದಿದ್ದನು. ವಿದ್ರೋಹಿಗಳು ತಮ್ಮ ಗಾಯಗೊಂಡ ಸೈನಿಕರನ್ನು ರಕ್ಷಿಸಲು ಪ್ರತ್ಯೇಕ ಏರ್ಪಾಡುಗಳನ್ನು ಮಾಡಿದ್ದರು. ಗಾಯಗೊಂಡವರನ್ನು ಯುದ್ಧರಂಗದಿಂದ ಕೋಟೆಯೊಳಗೆ ಒಯ್ಯುತ್ತಿದ್ದರು. ಈ ಕಲಸದ ಮೇಲ್ನೋಟವನ್ನು ವಹಿಸಿದವನು ಹೇಮಚಂದ್ರನಾಗಿದ್ದನು. ಗಾಯಗೊಂಡು ನೆಲದ ಮೇಲೆ ಉರುಳಾಡುತ್ತಿದ್ದ ಪಠಾಣನು ಹೇಮಚಂದ್ರನ ಕಣ್ಣುಗಳಿಗೆ ಬಿದ್ದನು. ಆ ಬಡಪಾಯಿಯು ಸಹಿಸಲಾಗದ ಪಿಪಾಸೆಯಿಂದ ಬಳಲಿ ರೋದಿಸುತ್ತಿದ್ದನು. ಅವನ ಸಂಕಟವನ್ನು ಕಂಡು ಹೇಮಚಂದ್ರನ ಎದೆಯಲ್ಲಿ ಮರುಕವು ಹುಟ್ಟಿತು. ಅವನು ನರಳುತ್ತಿದ್ದ ಪಠಾಣನಿಗೆ ತುಸ ನೀರನ್ನು ಕೊಡಲು ತನ್ನ ಕೈಕೆಳಗಿನ ದಂಡಾಳು ಒಬ್ಬನಿಗೆ ಹೇಳಿದನು; ಆದರೆ ದಂಡಾಳು ಹೀಗೆಂದ: "ನಮ್ಮ ಜನರನ್ನು ಕೊಲ್ಲಲೆತ್ನಿಸುತ್ತಿರುವ ನೀಚನವ; ಅವನು ಸಾಯಲಿ! ಅವನ ಶುಶ್ರೂಷೆಯನ್ನು ನಾವೇಕೆ ಮಾಡಬೇಕು?"

"ಅಲ್ಲ, ನಾವು ಕಾದಾಡುತ್ತಿರುವವರೆಗೆ ಈ ಶತ್ರುಭಾವ; ವಿರೋಧಿಯು ಕಾದಾಡಿ ನೆಲದ ಮೇಲೆ ಬಿದ್ದನೆಂದರೆ, ಶತ್ರುಭಾವವನ್ನು ಮರೆಯುವದು ನಮ್ಮ ಕರ್ತವ್ಯವಾಗಿದೆ. ನೀರಡಿಕೆಯು ಪ್ರತಿಯೊಬ್ಬ ಮನುಷ್ಯನಿಗೂ ಇದ್ದೇ ಇರುತ್ತದೆ. ಅವರು ನಮ್ಮ ಶತ್ರುಗಳಾಗಿದ್ದರೂ, ಅವರೂ ಮನುಷ್ಯರಿರುತ್ತಾರೆಂಬದನ್ನು ನಾವು ವಿಸ್ಮರಿಸಕೂಡದು. ಈ ಕಾದಾಟದಲ್ಲಿ ನಾವು ನಮ್ಮ ಮನುಷ್ಯತ್ವವನ್ನು ಮರೆಯುವದು ಉಚಿತವಲ್ಲ. ಶತ್ರುವು ನೆಲದ ಮೇಲೆ ಪತಿಸಿದನೆಂದರೆ ಅವನೊಡನೆ ಸ್ನೇಹದಿಂದ ವರ್ತಿಸುವದು ನಮ್ಮ ಕರ್ತವ್ಯವಾಗಿದೆ."

ದಂಡಾಳು ಹೇಮಚಂದ್ರನ ನಿರ್ದೇಶದಂತೆ ಗಾಯಗೊಂಡು ನರಳುತ್ತಿದ್ದ ಪಠಾಣನಿಗೆ ಜಲವನ್ನು ಇತ್ತನು. ಆ ಬಡಪಾಯಿಯು ಎರಡು ಗುಟುಕು ಶೀತಲ ಸಲಿಲದಿಂದ ತನ್ನ ಗಂಟಲನ್ನು ನೆನಸಿದನು. ಅವನು ಅನುಭವಿಸುತ್ತಿದ್ದ ಯಾತನೆಯು ಅಪಾರವಾದುದಾಗಿದ್ದಿತು. ಆತನ ದೇಹದ ಮೇಲಿದ್ದ ಗಾಯಗಳು ಇನ್ನು ಕೆಲವು ನಿಮಿಷಗಳಲ್ಲಿಯೇ ಆತನು ತನ್ನ ಜೀವನಯಾತ್ರೆಯನ್ನು ಸಮಾಪ್ತಿಗೊಳಿಸುವನೆಂಬದನ್ನು ಸೂಚಿಸುತ್ತಿದ್ದವು. ದಂಡಾಳು ನೀರನ್ನು ಕೊಡುತ್ತಲೆ ಮೇಲೆ ಹೇಳಿದಂತೆ ಅವನು ಎರಡು ಗುಟುಕು ನೀರನ್ನು

ಹೀರಿದನು. ಮೃತ್ಯುವಿನ ಗವಿಯೊಳಗೆ ಹೆಜ್ಜೆಗಳನ್ನಿಡ ಹೊರಟಿದ್ದ ಆ ನರ ಜೀವಿಯ ನಾಲಿಗೆಯಿಂದ ಈ ಮಾತುಗಳು ಉದುರಿದವು: "ಅಣ್ಣಾ, ಉಪಕಾರ ವಾಯಿತು! ನೀನು ಶತ್ರುವಾದರೂ ನನ್ನ ಜೀವನದ ಕೊನೆಯ ನಿಮಿಷದಲ್ಲಿ ಎರಡು ಗುಟುಕು ನೀರನ್ನು ಕೊಟ್ಟು ನನ್ನ ಪಿಪಾಸೆಯನ್ನು ಶಮಿಸಿದೆ. ದೇವರು ನಿನಗೆ ಒಳ್ಳೆಯದನ್ನು ಮಾಡಲಿ." ಈ ಮಾತುಗಳಲ್ಲಿ ವಿದ್ವೇಷವಿಲ್ಲ; ಧಿಃಕಾರವಿಲ್ಲ. ಅವು ಸ್ನೇಹಮಯವಾದ ನುಡಿಗಳಾಗಿದ್ದವು. ಆ ಬಡಪಾಯಿಗೆ ಅವನ ಮೃತ್ಯು ಶಯ್ಯೆಯಲ್ಲಿ ಒಂದು ಮಹತ್ಕೃತ್ಯವು ಮನನವಾಯಿತು. ಮನುಷ್ಯನು ಇನ್ನೊಬ್ಬನ ಸಂಗಡ ವಿದ್ವೇಷವನ್ನು ತೋರಿಸುವದು ವ್ಯರ್ಥವೆಂಬುದಾಗಿದ್ದಿತು ಅದು. ಆತನ ಕಣ್ಣುಗಳಲ್ಲಿ ನೀರು ತುಂಬಿತು. ಅವನು ಕೊನೆಯಸಾರೆ ಜಗನ್ನಿಯಾಮಕನನ್ನು ನೆನೆದ. ಇನ್ನೊಂದು ನಿಮಿಷದಲ್ಲಿ ಅವನ ಪ್ರಾಣದೀಪವು ನಂದಿತು: ದೇಹವು ಶಾಂತಿಶೂನ್ಯವಾಗಿ ಬಿದ್ದಿತು.

ಈ ಚಿತ್ರವು ಹೇಮಚಂದ್ರನ ಎದೆಯನ್ನು ಅಳುಕುವಂತೆ ಮಾಡಿತು. ಅವನ ಮೆದುಳಿನಲ್ಲಿ ಹಲವು ವಿಚಾರಗಳು ಮೂಡಿದವು. ಯುದ್ಧವೆಂದರೆ ನರ ಹತ್ಯೆ, ಮನುಷ್ಯನ ಪೈಶಾಚಿಕ ಸ್ವಭಾವದ ನಗ್ನಪ್ರಕಾಶನ; ಹೀಗೆ ಅನೇಕ ವಿಚಾರಗಳು ಅವನ ಚಿತ್ತದಲ್ಲಿ ತೇಲಿದವು. ತನ್ನ ಮುಂದೆ ಬಿದ್ದಿದ್ದ ಪಠಾಣನ ದೇಹವನ್ನು ನೋಡುತ್ತಾ ಅವನು ನಿಂತನು. ಅವನ ಲೋಚನಗಳಲ್ಲಿ ಬಾಷ್ಪ ಸಲಿಲಗಳು ತುಂಬದಿರಲಿಲ್ಲ.

ಒಂದು ನುಡಿಯು ಅವನನ್ನು ಆ ವಿಚಾರಲೋಕದಿಂದ ಎಚ್ಚರಿಸಿತು. ಹೇಮಚಂದ್ರನು ಹಿಂದಿರುಗಿ ನೋಡಿದ. ತನ್ನ ಬೆನ್ನಹಿಂದೆ ಕುಮಾರ ಅಮರ ಸಿಂಹನು ನಿಂತಿದ್ದುದು ಹೇಮಚಂದ್ರನಿಗೆ ಗೋಚರಿಸಿತು. ಕುಮಾರನು ಹೇಮಚಂದ್ರನ ಬೆನ್ನ ಮೇಲೆ ಕೈ ಹಾಕಿ ಹೇಳಿದ: "ಹೇಮಚಂದ್ರ, ನೀನೇನು ಮಾಡುತ್ತಿರುವೆ? ಕಾಳಗದ ಪರಿವೆಯೇ ಇಲ್ಲದೆ ಏಕೆ ಶಿಲಾಪ್ರತಿಮೆಯಂತೆ ನಿಂತಿರುವೆ?"

"ನೋಡು, ಸೇನಾಪತಿ, ನೋಡು!" ನಡುಗುತ್ತಿದ್ದ ಸ್ವರದಲ್ಲಿ ಹೇಮಚಂದ್ರನು ತನ್ನ ಬೆರಳನ್ನು ನೆಲದಲ್ಲಿ ಬಿದ್ದಿದ್ದ ಆ ಪಠಾಣನ ಮೃತದೇಹದ ಕಡೆಗೆ ತೋರಿಸಿದ.

"ಏನದು? ಏಕೆ ಕಂಪಿಸುತ್ತಲಿರುವೆ?" ವಿಸ್ಮಯದಿಂದ ಕುಮಾರನು ಪ್ರಶ್ನಿಸದಿರಲಿಲ್ಲ.

"ಅಲ್ಲಿ ಕಾಣುವುದೇನು?"

"ಒಬ್ಬ ಪಠಾಣನ ಮೃತದೇಹ." ಇವು ಕುಮಾರನ ನುಡಿಗಳಾಗಿದ್ದವು.

"ಸೇನಾಪತಿ, ನಿಜವಾಗಿಯೂ ನನ್ನ ಎದೆಯು ನಡುಗುತ್ತಲಿದೆ. ನನ್ನನ್ನು ಒಂದು ಸಂಶಯವು ಆವರಿಸಿದೆ."

"ಏನದು?" ಕುಮಾರನು ಹೇಮಚಂದ್ರನ ಕಡೆಗೆ ತನ್ನ ದೃಷ್ಟಿಯನ್ನು ಹೊರಳಿಸಿದ.

"ಈ ಭೀಕರ ನರಹತ್ಯೆಯಿಂದ ಶಾಂತಿಯು ಲಭ್ಯವಾಗಬಹುದೇ?"

ಇದೇಕೆ ಹೇಮಚಂದ್ರ! ಈ ಪರಿಯಲ್ಲಿ ಪ್ರಶ್ನಿಸುತ್ತಲಿರುವೆ? ಒಂದು ಪಾವನಧ್ಯೇಯಸಾಧನೆಗಾಗಿ ನಾವೆಲ್ಲರೂ ಕಾದಾಡುತ್ತಿದ್ದೇವೆ. ಇದು ನರ ಹತ್ಯೆಯಾಗದು."

"ನಿಜ. ಸೇನಾಪತೀ, ಒಂದು ಧ್ಯೇಯಸಾಧನೆಗಾಗಿ; ಆದರೆ ನೆತ್ತರಿನ ನದಿಯನ್ನು ಹರಿಸಿದುದರಿಂದ ದೊರಕಿದ ವಿಜಯವು ಮನುಷ್ಯನಿಗೆ ಸುಖಶಾಂ ಗಳನ್ನು ನೀಡಬಹುದೇ? ಅನೇಕ ಜೀವ ದೀಪಗಳನ್ನು ನಂದಿಸುವದರಿಂದ ಇನ್ನಿಷ್ಟು ಕತ್ತಲೆಯಾಗುವದಲ್ಲದೆ ಶಾಂತಿಯು ಲಭ್ಯವಾಗುವ ಬಗೆ ಹೇಗೆ? ಈ ಸಂದೇಹವು ನನ್ನನ್ನು ಪೀಡಿಸುತ್ತಲಿದೆ."

"ಹೇಮಚಂದ್ರ, ನಿನ್ನ ಚಿಂತನೆಯು ಗಂಡಸಾದವನಿಗೆ ಹೇಳಿದುದಲ್ಲ. ನೋಡು, ನಾವು ಮನಃಪೂರ್ವಕವಾಗಿ ನರಮೇಧವನ್ನು ಆಚರಿಸಲು ಹೊರ ಟಿರುವದಿಲ್ಲ. ಅದು ಅನಿವಾರ್ಯವಾಗಿ ಬಂದಿವೆ. ಬೆಲೆಯುಳ್ಳ ಜೀವ ಕುಸುಮಗಳನ್ನು ಸಮರಾಗ್ನಿಗೆ ಆಹುತಿಯಾಗಿ ನೀಡುವದು ವಿಹಿತವಲ್ಲ. ಅದ ರಲ್ಲಿ ಪೈಶಾಚಿಕತೆಯು ತುಂಬಿವೆ; ಆದರೆ ನೋಡು, ಇವುಗಳಿಗಿಂತಲೂ ಉನ್ನತ ವಾದ ಕೆಲವು ಸತ್ಯಗಳಿರುತ್ತವೆ. ಅವುಗಳನ್ನು ನೆಲೆ ನಿಲ್ಲಿಸಲು ನಾವು ಪ್ರಯ ತ್ನಿಸದಿದ್ದರೆ, ಜಗತ್ತೇ ತಲೆಕೆಳಗಾಗಬಹುದು. ಮನುಷ್ಯಕುಟುಂಬಕ್ಕೆ ಈಗಿನದ ಕ್ಕಿಂತಲೂ ಭಯಾನಕವಾದ ವಿಪತ್ತು ಬೇರೊಂದು ಬಂದೊದಗಬಹುದು. ಮನುಷ್ಯನು ಮನುಷ್ಯನಾಗಿ ಬಾಳಬೇಕಾದರೆ, ತನ್ನ ಸ್ವಾಭಿಮಾನವನ್ನು ಸಂರ ಕ್ಷಿಸಿಕೊಳ್ಳಬೇಕಾದುದು ಅತ್ಯಗತ್ಯ. ಈ ಸ್ವಾಭಿಮಾನವನ್ನು ಸಂರಕ್ಷಿಸಿಕೊಳ್ಳಲು ಅವನು ಯಾವ ಯತ್ನವನ್ನು ಜರುಗಿಸಿದರೂ ಅದು ಪಾಪವಾಗದು. ತನ್ನ ಆತ್ಮಗೌರವವನ್ನು ರಕ್ಷಿಸಿಕೊಳ್ಳುವ ಉದ್ಯಮದಲ್ಲಿ ಅವನು ಹಿಂಜರಿದರೆ, ಅದು ಅವನ ಭೀರುತ್ವದ ಲಾಂಛನವಾಗಿದೆಯೇ ಹೊರತು, ಅದು ಅವನ ಸಹನ

ಶಕ್ತಿಯಾಗದು. ಹೇಮಚಂದ್ರ, ಕಾದಾಡದೆ ಈ ಕಾಲದಲ್ಲಿ ಜೀವಿಸಲು ಸಾಧ್ಯವಿಲ್ಲ. ಶ್ರೇಷ್ಠವೂ ಪವಿತ್ರವೂ ಆದ ಒಂದು ಕಾರ್ಯಸಾಧನೆಗಾಗಿ ಹೋರಾಡುವದು ಅತ್ಯವಶ್ಯ."

ಜಗದೇಕ ವೀರನೆಂದೆನಿಸಿಕೊಂಡ ಪಾರ್ಥನಿಗೆಕೂಡ ಸಂಶಯ ಹುಟ್ಟಿದುದು ಸಮರಾಂಗಣದಲ್ಲಾಗಿದ್ದಿತು. ಕದನಕ್ಕೆ ಸಿದ್ಧವಾಗಿ ಮೃತ್ಯುವಿನ ಗವಿಯೊಳಗೆ ಪ್ರವೇಶಿಸಲು ಹೊರಟಿದ್ದ ತನ್ನ ದಾಯಾದಿಗಳನ್ನು ಕಾಣಲು ಅವನ ಎದೆಯು ನಡುಗಿತು. ಆಗ ಶ್ರೀಕೃಷ್ಣನು ಕಿರೀಟಿಯ ಅಜ್ಞಾನವನ್ನು ಹೋಗಲಾಡಿಸಿ, ಅವನಿಗೆ ಜ್ಞಾನಪಥವನ್ನು ತೋರಿಸಿದನು. ಇದರಂತೆಯೇ ಹೇಮಚಂದ್ರನಿಗಾದರೂ ನರಹತ್ಯೆಯಿಂದ ಲಭ್ಯವಾಗಬಹುದಾದ ಜಯವು ಶಾಶ್ವತವಾದುದೇ ಎಂಬ ಸಂದೇಹವು ತೋರಿತು. ಆದುದರಿಂದಲೇ ಅವನು ಕುಮಾರ ಅಮರಸಿಂಹನನ್ನು ಮೇಲೆ ಹೇಳಿದಂತೆ ಪ್ರಶ್ನಿಸಿದನು; ಆದರೆ ಕುಮಾರನಿಂದ ಹೊರಟಿದ್ದ ಉತ್ತರದಿಂದ ಹೇಮಚಂದ್ರನ ಸಂಶಯವು ನಿವಾರಣೆಯನ್ನು ಹೊಂದಲಿಲ್ಲ. ಆದುದರಿಂದ ಅವನು ಕುಮಾರನಿಗೆ ಈ ಪ್ರಶ್ನೆಯನ್ನು ಹಾಕಿದ: "ಸೇನಾಪತಿ, ಈ ಕದನ ಮನಸ್ಥಿತಿಯು ಶೂರತನದ ಲಕ್ಷಣವೆಂದು ನಿಮ್ಮ ಅಭಿಪ್ರಾಯವಾಗಿದೆ; ಆದರೆ ಈ ನರಹತ್ಯೆಯಿಂದ ಧರ್ಮವನ್ನು ರಕ್ಷಿಸಲು ಸಾಧ್ಯವೇ? ಒಂದು ಅಧರ್ಮವು ಇನ್ನೊಂದು ಅಧಾರ್ಮಿಕ ಕೃತ್ಯದಿಂದ ಇಲ್ಲದಾಗಬಹುದೇ? ಒಂದು ವೇಳೆ ನಾವು ವಿಜಯಿಗಳಾದೆವೆಂದು ಭಾವಿಸೋಣ. ಈ ನರದೇಹಗಳಿಂದ ನಿರ್ಮಿತವಾದ ವಿಜಯಗೋಪುರವು ಶಾಶ್ವತವಾಗಬಲ್ಲುದೇ? ಅಂಜಿಕೆಯಿಂದ ಹೀಗೆ ಪ್ರಶ್ನಿಸಿದೆನೆಂದು ಭಾವಿಸಬೇಡಿರಿ; ಭೀತಿಯಲ್ಲ; ಸಂದೇಹವಾಗಿದೆ ನನ್ನನ್ನು ಈ ಪ್ರಶ್ನೆಗೆ ಪ್ರೇರಿಸಿದುದು."

"ಹೇಮಚಂದ್ರ," ಮಂದಸ್ಮಿತವೊಂದು ಮೂಡಿತು ಕುಮಾರನ ತುಟಿಗಳಲ್ಲಿ. "ಒಂದು ಗಹನವಾದ ಪ್ರಶ್ನೆಯಿದು. ತೃಪ್ತಿಕರವಾದ ಉತ್ತರವು ಲಭಿಸಬೇಕಾದರೆ ಗುರುದೇವನನ್ನು ಪ್ರಶ್ನಿಸುವದು ಒಳ್ಳೆಯದು. ತಿಳಿದ ಮಟ್ಟಿಗೆ ನಾನು ನಿನ್ನ ಸಂಶಯವನ್ನು ನಿವಾರಿಸಲು ಪ್ರಯತ್ನಿಸುತ್ತೇನೆ. ಹಿಂಸೆಯು ನಿಂದ್ಯವಾದುದೆಂಬುದಕ್ಕೆ ನಾವು ಇದಿರಲ್ಲ; ಆದರೆ ಪ್ರತಿಲೋಮಶಕ್ತಿಗಳು ನಮ್ಮ ಬೆಳವಣಿಗೆಯ ದಾರಿಯಲ್ಲಿ ಅಡ್ಡ ನಿಂತಿರುವಾಗ, ಅವುಗಳನ್ನು ಇದಿರಿಸದೆ ಇನ್ನಾವ ಉಪಾಯವಿದೆ? ಕೆಡುಕು ವರ್ಧಿಸಿ ಬರುತ್ತಿರುವಾಗ, ಒಳ್ಳೆಯವನ್ನು ಸಂರಕ್ಷಿಸಬೇಕಾದರೆ, ಕೆಡುಕನ್ನು ಇದಿರಿಸದೆ ಬೇರೆ ಗತ್ಯಂತರವಿಲ್ಲ. ಈಗ

ನಾವು ಪಠಾಣರನ್ನು ಇದಿರಿಸದಿದ್ದರೆ, ಒಂದು ದೇಶವೇ ಪರದಾಸ್ಯದ ಸಂಕಟಗಳಲ್ಲಿ ಕೊಳೆಯಬೇಕಾಗುತ್ತದೆ. ಕೆಲವು ಮಂದಿ ದಂಡಾಳುಗಳ ಪ್ರಾಣವಿಸರ್ಜನೆಯಿಂದ ಈ ಭಯಂಕರ ಸಂಕಟಗಳನ್ನು ನಿವಾರಿಸಲು ಸಾಧ್ಯವಿರುವಾಗ ನಾವೇಕೆ ಅಳುಕಬೇಕು? ಅನಾವಶ್ಯಕವಾಗಿ ಒಬ್ಬನನ್ನು ಹಿಂಸಿಸುವದು ಅಧರ್ಮವು; ಆದರೆ ಒಬ್ಬ ಮನುಷ್ಯನು ತನಗೆ ಬಂದ ಆಪತ್ತನ್ನು ನಿವಾರಿಸುವದಕ್ಕಾಗಿ ಪ್ರತಿಪಕ್ಷದವನನ್ನು ಇದಿರಿಸುವದು ಅಗತ್ಯ; ಮತ್ತು ಅದು ಅವನ ಧರ್ಮವಾಗಿದೆ. ಈ ಧರ್ಮವನ್ನು ಇಬ್ಬರು ಮಾತ್ರ ಪರಿತ್ಯಜಿಸಿ ನಡೆಯುತ್ತಾರೆ. ಮೊದಲನೆಯವನು ಪರಿಪೂರ್ಣತೆಯನ್ನು ಹೊಂದಿ ವಿಶ್ವವೇ ತನ್ನ ಕುಟುಂಬವೆಂದು ವಿಚಾರಿಸತಕ್ಕ ಪರಮಹಂಸನು; ಎರಡನೆಯವನು ತಿಳುವಳಿಕೆಯಿಲ್ಲದ ಮೂಢನು! ಮೊದಲನೆಯವನು ಭೀತಿಯನ್ನು ಗೆದ್ದಿರುತ್ತಾನೆ. ಎರಡನೆಯವನು ಜೀವನದ ಮಹಾತ್ಮ್ಯವನ್ನರಿಯದ, ಆತ್ಮವಿಶ್ವಾಸವಿಲ್ಲದ ನರಪಶುವು! ಈ ಎರಡು ಗುಂಪಿಗೂ ಸೇರದ ಸಾಮಾನ್ಯ ಮನುಷ್ಯರು ತಮಗೆ ಒಂದೊದಗಿದ ವಿಪತ್ತುಗಳನ್ನು ನಿವಾರಿಸುವದಕ್ಕಾಗಿ ಯತ್ನಿಸುವದು ಅವರ ಧರ್ಮವಾಗಿದೆ. ಹೇಮಚಂದ್ರ, ನಾವು ಪರಮಹಂಸರಲ್ಲ: ಸಾಮಾನ್ಯ ಮನುಷ್ಯರು. ಆದುದರಿಂದ ನಮ್ಮ ನಾಡಿಗೆ ಒಂದೊದಗಿದ ವಿಪತ್ತುಗಳನ್ನು ಸಾಮಾನ್ಯ ಮನುಷ್ಯರಂತೆ ನಿವಾರಿಸಲೆತ್ನಿಸುತ್ತಿರುವದು ನಮ್ಮ ಕರ್ತವ್ಯವಾಗಿದೆ."

ಕುಮಾರನು ತನ್ನ ಮಾತುಗಳನ್ನು ಮುಗಿಸಿರಲಿಲ್ಲ; ಅಷ್ಟರಲ್ಲಿ ಇನ್ನೊಂದು ಸ್ವರವು ಪಕ್ಕದಿಂದ ಕೇಳಿಸಿತು: "ಕುಮಾರ, ಏನು? ಯುದ್ಧಭೂಮಿಯಲ್ಲಿಯೂ ತತ್ವಚಿಂತನೆಯೇ?" ಸ್ವರವು ಕೇಳಿ ಬಂದ ಕಡೆಗೆ ಕುಮಾರನು ತನ್ನ ಕಣ್ಣುಗಳನ್ನು ತಿರುಗಿಸಿದ. ನಗ್ನ ಖಡ್ಗವನ್ನು ಹಿಡಿದುಕೊಂಡು ಉಸ್ಮಾನನು ತನ್ನ ಬಳಿಗೆ ಬರುತ್ತಿದ್ದುದು ಕುಮಾರನಿಗೆ ಗೋಚರಿಸಿತು. ಉಸ್ಮಾನನು ಕುಂಟುತ್ತ ಬರುತ್ತಿದ್ದ.

"ಇಲ್ಲ, ಹೇಮಚಂದ್ರನೊಡನೆ ಮಾತಾಡುತ್ತಲಿದ್ದೆ. ಏಕೆ ಖಾನಸಾಹೇಬ, ಕುಂಟುತ್ತಾ ಬರುತ್ತಿರುವಿರಿ? ಅಪಾಯವೇನಾದರೂ ಸಂಭವಿಸಿತೇ?"

"ಹೆಚ್ಚಿಲ್ಲ." ಅಶ್ರದ್ಧೆಯಿಂದ ಉಸ್ಮಾನನು ಹೇಳಿದ: "ಈ ದಿನದ ಕಾದಾಟದಲ್ಲಿ ಒಂದು ಪುಟ್ಟ ಗಾಯವಾಯಿತು." ಅವನು ತನ್ನ ಕಾಲ ಮೇಲಾದ ಗಾಯವನ್ನು ತೋರಿಸಿದುದಾಯಿತು.. ಗಾಯವು ಎರಡು ಬೆರಳಷ್ಟು ಆಳವಾಗಿದ್ದಿತು. ಆದುದರಿಂದ ಒಂದೇಸಮನೆ ನೆತ್ತರು ಹರಿಯುತ್ತಿದ್ದಿತು. ಆದರೂ

ಉಸ್ಮಾನಖಾನನು ನಿರ್ಲಕ್ಷ್ಯ ಭಾವವನ್ನು ಅವಲಂಬಿಸಿದ್ದನು.

"ಗಾಯವನ್ನು ಕಟ್ಟಿರಿ ಖಾನಸಾಹೇಬ!" ಈ ಸಲ ಮಾತಾಡಿದವನು ಹೇಮಚಂದ್ರನಾಗಿದ್ದನು. "ಇಲ್ಲದಿದ್ದರೆ ಹೆಚ್ಚಿನ ರಕ್ತಸ್ರಾವದಿಂದ ಅಪಾಯವು ಸಂಭವಿಸಬಹುದು."

"ಅಹುದು." ಎಂದು ನುಡಿದ ಕುಮಾರ.

ಹೇಮಚಂದ್ರನೂ, ಕುಮಾರನೂ ಉಸ್ಮಾನನ ಕಾಲ ಗಾಯವನ್ನು ಕಟ್ಟಿ ರಕ್ತಶ್ರಾವವನ್ನು ನಿಲ್ಲಿಸಿದರು. ರಕ್ತಸ್ರಾವವು ಸ್ವಲ್ಪ ಹೆಚ್ಚಾಗಿ ಆಗಿದ್ದುದರಿಂದ ಉಸ್ಮಾನನ ಶರೀರವು ಕಂಪಿಸುತ್ತಿದ್ದಿತು. ಆದರೂ ಅವನು ನಿಂತುಕೊಳ್ಳಲು ಪ್ರಯತ್ನಿಸುತ್ತ ಕುಮಾರನೊಡನೆ ಹೀಗೆ ಹೇಳಿದನು: "ಕುಮಾರ, ನನಗೆ ಬದುಕಬೇಕೆಂಬ ಆಶೆಯಿಲ್ಲ. ಆದರೂ ಸಾಯುವ ಮುನ್ನ ನನ್ನ ಒಂದು ಬಯಕೆಯನ್ನು ಪೂರೈಸಬೇಕೆಂದಿದ್ದೇನೆ. ಅದನ್ನು ನೆರವೇರಿಸುವದಕ್ಕಾಗಿ ಜೀವಿಸುತ್ತಿದ್ದೇನೆ."

"ಏಕೆ ಸಾಹೇಬ, ಇಷ್ಟು ನಿರಾಶೆಯನ್ನು ಹೊಂದಿರುವಿರಿ?" ಎಂದು ಹೇಮಚಂದ್ರನು ಪ್ರಶ್ನಿಸಿದ.

"ಏನೂ ಇಲ್ಲ. ನನ್ನ ಜೀವವು ಪ್ರತೀಕಾರೇಚ್ಛೆಯಿಂದ ಸುಡುತ್ತಲಿವೆ. ನನ್ನ ತಂದೆಯ ಕಣ್ಣುಗಳನ್ನು ಕೀಳಿಸಿದ ದುರಾತ್ಮನಿಗೆ ಯೋಗ್ಯ ದಂಡನೆಯನ್ನು ನೀಡಬೇಕು. ಅವನ ನೆತ್ತರಿನಿಂದ ನನ್ನ ಪ್ರತೀಕಾರ ಬೆಂಕಿಯನ್ನು ಆರಿಸಬೇಕು." ಈ ಮಾತುಗಳನ್ನು ಆಡುತ್ತಿದ್ದಾಗ ಉಸ್ಮಾನನ ಕಣ್ಣುಗಳು ಬೆಂಕಿಯನ್ನು ಕಾರಿದವು.

"ಸಾಹೇಬ; ತಿಳಿದವರು ಅಜ್ಞರ ತಪ್ಪುಗಳನ್ನು ಕ್ಷಮಿಸಬೇಕಾದುದಲ್ಲವೇ? ಅದರಂತೆ ನೀವು ಸುಭೇದಾರನ ದುಷ್ಕೃತ್ಯಗಳನ್ನು ಆದೇಕೆ ಉಪೇಕ್ಷಿಸಬಾರದು? ನಾವು ಯಾರೂ ಯಾಕೂಬನ ಮೇಲೆ ವ್ಯಕ್ತಿದ್ವೇಷವನ್ನಿಟ್ಟುಕೊಂಡು ಕಾದಾಡುತ್ತಲಿಲ್ಲ. ನಾವು ನಮ್ಮ ಸ್ವಾತಂತ್ರ್ಯವನ್ನು ಸಂರಕ್ಷಿಸಿಕೊಳ್ಳುವದಕ್ಕಾಗಿ ಹೋರಾಡುತ್ತಿದ್ದೇವೆ. ಕೇವಲ ಸೇಡನ್ನು ತೀರಿಸಲು ಹೊರಟು, ಆತ್ಮವನ್ನು ಕೆಡಹುವುದು ಸರಿಯಲ್ಲವೆಂದು ನನ್ನ ಭಾವನೆ. ತಪ್ಪುಮಾಡಿದವನನ್ನು ಸಹ ಸ್ವಲ್ಪ ವಿಶಾಲ ದೃಷ್ಟಿಯಿಂದ ನೋಡುವದು ಅಗತ್ಯವಾಗಿದೆ."

"ಕುಮಾರ, ನೀವು ಹೇಳುತ್ತಿರುವುದು ನಿಜವೆಂದು ಒಪ್ಪಿಕೊಳ್ಳುತ್ತೇನೆ; ಆದರೆ ಯಾಕೂಬಖಾನನಂಥ ದುರಾತ್ಮರು ಜೀವಿಸಿರುವುದು ಜನರ ದುಃಖ

ಗಳನ್ನು ಹೆಚ್ಚಿಸಲು ಮಾತ್ರನಾಗಿದೆಯೆಂದು ಹೇಳಬಹುದು. ಅವನಿಂದ ಒಂದೆರಡು ತಪ್ಪುಗಳಲ್ಲ ಘಟಿಸಿದುದು; ಆವನು ನೂರಾರು ತಪ್ಪುಗಳನ್ನು ಗೈದಿದ್ದಾನೆ. ಅಬಲೆಯರನ್ನು ಪಾಪದ ದಾರಿಯಲ್ಲಿ ಕೆಡುಹಿದ್ದಾನೆ. ಅವನ ಈ ಪಾಪಕೃತ್ಯಗಳಿಗೆ ವಿಘ್ನವನ್ನು ಮಾಡಿದವನು ನಾನು; ಅವನು ಆ ಸೇಡನ್ನು ನನ್ನ ಮೇಲೆ ತೋರಿಸಿದ್ದರೆ ನನಗೆ ರೋಷವಿರುತ್ತಿರಲಿಲ್ಲ; ಆದರೆ ನಿರಪರಾಧಿಯಾದ ನನ್ನ ತಂದೆಯ ಕಣ್ಣುಗಳನ್ನು ಕೀಳಿಸಿದ ಆ ಪೈಶಾಚಿಕ ಕೃತ್ಯವನ್ನು ನೆನೆಯುವಾಗ, ನನ್ನ ಮನವು ಕುದಿಯುತ್ತಲಿದೆ. ಈ ನನ್ನ ಖಡ್ಗದಿಂದಲೇ ಆ ಮರಾತ್ಮನ ಎದೆಯನ್ನು ಶೀಳಬೇಕೆಂದಿರುವೆ. ನನ್ನ ಈ ಕೃತ್ಯಕ್ಕೆ ನೀವು ಯಾರೂ ವಿಘ್ನವನ್ನುಂಟುಮಾಡಬಾರದು. ನೀವೆಲ್ಲರೂ ಒಂದು ಉನ್ನತ ಧ್ಯೇಯಸಾಧನೆಗಾಗಿ ಹೆಣಗುತ್ತಿದ್ದೀರಿ. ದೇವರು ನಿಮಗೆ ಜಯವನ್ನು ನೀಡಲಿ! ಆದರೆ ನಾನು ವೈರಿಯ ಮೇಲಿನ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ನಿಮ್ಮ ಪಂಗಡದಲ್ಲಿ ಸೇರಿರುವೆನು; ನನ್ನ ಸ್ವಧರ್ಮೀಯರನ್ನು ಕೊಲ್ಲಲು ಉದ್ಯುಕ್ತನಾಗಿರುವೆನು. ನನ್ನ ಈ ಬಯಕೆಯು ವ್ಯಾಗೀಯವಾದುದಾಗಿರಬಹುದು; ಆದರೆನಾನು ನಿರಪರಾಧಿಯೆಂಬುದನ್ನು ನನ್ನ ಅಂತರಂಗವನ್ನು ಬಲ್ಲವರು ತಿಳಿದಿರುವರು."

"ನೋಡು, ಹೇಮಚಂದ್ರ," ಕುಮಾರನು ತನ್ನ ಕಣ್ಣುಗಳನ್ನು ಹೇಮಚಂದ್ರನ ಕಡೆಗೆ ತಿರುಗಿಸಿದ. "ಮನುಷ್ಯಸ್ವಭಾವವು ಹೇಗಿದೆಯೆಂಬುದನ್ನು! ಉಸ್ಮಾನಖಾನರು ವಿವೇಕಶಾಲಿಗಳು; ಸುಸಂಸ್ಕೃತರು. ಆದರೂ ಅವರಿಗೆ ಬಂದೊದಗಿದ ಭೀಕರ ವಿಪತ್ತಿನಿಂದ ಪ್ರತಿಹಿಂಸೆಯು ಅವರ ಎದೆಯಲ್ಲಿ ಎಷ್ಟರ ಮಟ್ಟಿಗೆ ಪ್ರಬಲಿಸಿದೆಯೆಂಬುದನ್ನು ನೋಡು! ಯಾಕೂಬಖಾನನ ಮೇಲೆ ತಮಗಿರುವ ಸೇಡನ್ನು ತೀರಿಸಿಕೊಳ್ಳಲು ಅವರು ಹವಣಿಸುತ್ತಿದ್ದಾರೆ. ಇದು ಒಂದು ವ್ಯಕ್ತಿಗೆ ಸಂಬಂಧಿಸಿದ ಮಾತಲ್ಲ. ಪ್ರತಿಯೊಂದು ಸಮುದಾಯವೂ ತನಗೆ ತೊಂದರೆಕೊಟ್ಟ ಇನ್ನೊಂದು ಸಮುದಾಯದೊಡನೆ ಕಲಹಿಸಲು ಹವಣಿಸುತ್ತದೆ. ಈ ಪ್ರತೀಕಾರ ಬುದ್ಧಿಯು ಮನುಷ್ಯನಲ್ಲಿರುವ ಒಂದು ಸಹಜ ಗುಣವಾಗಿದೆ; ಆದರೆ ಅದನ್ನು ಉಪಯೋಗಿಸಬೇಕಾದುದೆಲ್ಲಿಯೆಂಬುದನ್ನು ಮನುಷ್ಯನು ತನ್ನ ವಿವೇಕಬಲದಿಂದ ನಿರ್ಧರಿಸಬೇಕಾಗಿದೆ."

ಸಂಜೆಯಾಗುತ್ತಾ ಬಂದಿತ್ತು. ಮೂವರೂ ಮಾತಾಡುತ್ತಾ ಕೋಟೆಯೊಳಗೆ ಗಮಿಸಿದರು.

——

# ೨೨ ಸತ್ವಪರೀಕ್ಷೆ.

ಹದಿನೈದು ದಿನಗಳ ವರೆಗೆ ಕಾದಾಟವು ಮುಂದೆವರಿದಿತು. ಜಯಲಕ್ಷ್ಮಿಯು ಯಾರ ಕೊರಳಿಗೂ ತನ್ನ ಕುಸುಮ ಮಾಲೆಯನ್ನು ತೊಡಿಸಲಿಲ್ಲ. ಹಿಂದಿನಂತೆಯೇ ಪಠಾಣರು ಕೋಟೆಗೆ ಮುತ್ತಿಗೆ ಹಾಕಿದ್ದರು. ಪ್ರತಿದಿನವೂ ವಿದ್ರೋಹಿಗಳು ಹೊರಗಿದ್ದ ಶತ್ರುಗಳನ್ನು ಎದುರಿಸುತ್ತಿದ್ದರು ಬೆಳಗಿನಿಂದ ಸಂಜೆಯ ತನಕ ಕದನವು ಜರಗುತ್ತಿದ್ದಿತು. ನರ ರಕ್ತದಿಂದ ನೆಲವು ತೊಯ್ದು ಹೋಗುತ್ತಿದ್ದಿತು. ಕೋಟೆಯನ್ನೇರಿ ವಶಪಡಿಸಿಕೊಳ್ಳುವುದು ಪಠಾಣರಿಗೆ ಸಾಧ್ಯವಾಗಲಿಲ್ಲ. ಕೋಟೆಯನ್ನು ಆಕ್ರಮಿಸಿದ್ದ ಶತ್ರುಗಳನ್ನು ಹಿಂದಕ್ಕಟ್ಟುವುದು ವಿದ್ರೋಹಿಗಳಿಗೆ ಸಾಧಿಸಲಿಲ್ಲ. ಆ ಎರಡೂ ಬಣಗಳ ಪರೀಕ್ಷೆಯು ಮಾತ್ರ ನಡೆಯುತ್ತಿದ್ದಿತು. ವಿದ್ರೋಹಿಗಳು ಆದಷ್ಟು ಬೇಗನೆ ಈ ಕದನವನ್ನು ಮುಗಿಸಬೇಕೆಂದಿದ್ದರು; ಏಕಂದರೆ ಪ್ರತಿದಿನವೂ ಅವರ ಸಂಖ್ಯೆಯು ಕಡಿಮೆಯಾಗುತ್ತಲಿದ್ದಿತು. ಒಳಗೆ ಶೇಖರಿಸಿದ್ದ ಆಹಾರ ಸಾಮಗ್ರಿಗಳು ತೀರುತ್ತಾ ಬಂದಿದ್ದವು. ಹೊರಗೆ ಪಠಾಣರ ಮುತ್ತಿಗೆಯು ಪ್ರಬಲವಾಗಿದ್ದುದರಿಂದ ಹೊಸದಾಗಿ ಸಾಮಗ್ರಿಗಳನ್ನು ಸಂಗ್ರಹಿಸಲು ಸಾಧ್ಯವಿರಲಿಲ್ಲ. ಈ ಕದನದ ಭವಿಷ್ಯವೇನೆಂಬ ಚಿಂತೆಯು ಪ್ರತಿಯೊಬ್ಬ ವಿದ್ರೋಹಿಯನ್ನು ಬಾಧಿಸಿತು. ಒಂದೊಂದು ದಿನವೂ ಕೆಲವು ಮಂದಿ ಬಲಾಢ್ಯ ವಿದ್ರೋಹಿಗಳ ನಿಧನಗಳೊಡನೆ ಸಮಾಪ್ತಿಯನ್ನು ಹೊಂದುತ್ತಿದ್ದಿತು. ನಿನ್ನೆ ದಿನ ರಾತ್ರಿ ನಕ್ಕು ನಲಿದು ಮಾತಾಡಿದವರು ಈ ದಿನ ಸಂಜೆಯಾಗುವ ಮುನ್ನ ನಿರ್ಜೀವ ಶವಗಳಾಗಿ ಪರಿಣಮಿಸುತ್ತಿದ್ದರು. ಹಲವು ಉತ್ತಮ ಜೀವಕುಸುಮಗಳು ಸಮರಾಗ್ನಿಯಲ್ಲಿ ಬೆಂದು ಬೂದಿಯಾಗುತ್ತಿದ್ದವು. ಪ್ರತಿಯೊಬ್ಬನ ವದನಮಂಡಲದಲ್ಲಿಯೂ ಅಶಾಂತತೆಯ ಕಾರ್ಮುಗಿಲು ಗೋಚರಿಸುತ್ತಿದ್ದಿತು. ಸಾಮಾನ್ಯ ದಂಡಾಳುಗಳು ಮಾತ್ರವಲ್ಲ; ವಿದ್ರೋಹಿಗಳ ನಾಯಕರೇ ನಿರಾಶಾಭಾವವನ್ನು ಸೂಚಿಸಲಾರಂಭಿಸಿದರು. ಹಿಂಜರಿಯಬೇಕೆಂಬ ಭೀರುತ್ವವು ಕೆಲವರಲ್ಲಿ ತಲೆದೋರದಿರಲಿಲ್ಲ. ಅಂತು ಒಂದು ಮಾತಿನಲ್ಲಿ ನುಡಿಯುವದಾದರೆ,' ಯುದ್ಧದ ಪ್ರಾರಂಭಘಟ್ಟದಲ್ಲಿದ್ದ ಉತ್ಸಾಹ-ಉನ್ಮೇಷಗಳು ವಿದ್ರೋಹಿಗಳಲ್ಲಿ ಈಗ ಇರಲಿಲ್ಲ. ಅವರು ಅತ್ಯುನ್ನತವಾದ ಒಂದು ಧ್ಯೇಯಸಾಧನೆಗೆ ಹೊರಟದ್ದರೆಂಬುದು ನಿಜ; ಆದರೆ ಅವರೆಲ್ಲರೂ ಸಾಮಾನ್ಯ ಮನುಷ್ಯರಾಗಿದ್ದರು. ಮನುಷ್ಯರಲ್ಲಿ ಗೋಚರಿಸತಕ್ಕ ಬಲಹೀನತೆಯಾಗಿದ್ದಿತು

ಅವರಲ್ಲಿ ತಲೆದೋರಿದ ನಿರಾಶಾವಾದಿತ್ವದ ಪ್ರೇರಕ ಶಕ್ತಿಯು!

ಆದರೆ ಈ ದುರಂತ ಚಿತ್ರಗಳು ಒಬ್ಬನನ್ನು ಮಾತ್ರ ಅಳುಕುವಂತೆ ಮಾಡಲಿಲ್ಲ. ಅವನು ಸದಾ ಪ್ರಸನ್ನನಾಗಿ, ಉತ್ಸಾಹವನ್ನು ಇತರರಲ್ಲಿ ತುಂಬಲು ಪ್ರಯತ್ನಿಸುತ್ತಿದ್ದನು. ಆ ಶಕ್ತಿಯು ಜ್ಞಾನಾನಂದನಾಗಿದ್ದನು. ಇತರರನ್ನು ಸ್ಪರ್ಶಿಸಿದ ನಿರಾಶಾವಾದಿತ್ವವು ಅವನನ್ನು ಸಮೀಪಿಸಲು ಶಕ್ತಿಯುಳ್ಳದ್ದಾಗಿರಲಿಲ್ಲ. ಇದಕ್ಕೆ ಕಾರಣವು ಅವನೊಬ್ಬ ಯಥಾರ್ಥ ಕರ್ಮಯೋಗಿಯಾಗಿದ್ದನು. ಕೇಡನ್ನು ಎದುರಿಸುವುದು ತನ್ನ ಧರ್ಮವೆಂದು ಅವನು ತಿಳಿದಿದ್ದನು. ಆತನು ಸೋಲು-ಗೆಲವುಗಳನ್ನು ಕುರಿತು ಚಿಂತಿಸುತ್ತಾ ದುಡಿಯುತ್ತಿರಲಿಲ್ಲ; ಅಳುಕದೆ ಬಂದೊದಗುತ್ತಿದ್ದ ಎಡರುಗಳಿಗೆ ಎದೆಯನ್ನು ಒಡ್ಡುತ್ತಿದ್ದನು.

ಒಂದು ದಿನ ಸಮರಾಂಗಣದಲ್ಲಿ ಜ್ಞಾನಾನಂದನ ಬಲಗೈಯಂತಿದ್ದ ಕುಮಾರ ಅಮರಸಿಂಹನೇ ಕದನದಲ್ಲಿ ವಿದ್ರೋಹಿಗಳಿಗೆ ಸೋಲಾಗಬಹುದೆಂಬ ಭೀತಿಯನ್ನು ಸೂಚಿಸಿದನು. ತನ್ನ ಮೆಚ್ಚಿಕೆಗೆ ಪಾತ್ರನಾದ ಶಿಷ್ಯನ ನುಡಿಗಳ ಶ್ರವಣದಿಂದ ಜ್ಞಾನಾನಂದನ ಮನಸ್ಸು ಅಳುಕಲಿಲ್ಲ. ಅವನ ತುಟಿಗಳ ಮೇಲೆ ಒಂದು ಮಂದಹಾಸವು ಮೂಡಿತು. ಕು ಮಾ ರ ನ ಕಡೆಗೆ ಅವನು ತನ್ನ ದೃಷ್ಟಿಯನ್ನು ಹೊರಳಿಸಿದ. "ಕುಮಾರ, ಈ ಬಲಹೀನತೆಯು ನಿನ್ನನ್ನೂ ಸ್ಪರ್ಶಿಸಿದುದನ್ನು ಕಂಡು ನಾನು ಆಶ್ಚರ್ಯಪಡುತ್ತೇನೆ. ನಮ್ಮ ಈ ಕೊರತೆಯನ್ನು ನಾವು ಹೋಗಲಾಡಿಸಿಕೊಳ್ಳದಿದ್ದರೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಾವು ವಿಜಯಗಳಾಗೆವು. ನಮ್ಮ ಸತ್ವ ಪರೀಕ್ಷೆಯ ಸುಮುಹೂರ್ತವು ಸನ್ನಿಹಿತವಾಗಿಲ್ಲ. ತ್ಯಾಗಮಾಡಲು ಹೊರಟವರು ಕದನದಲ್ಲಿ ಸೋಲಾಗುವುದೆಂಬುದನ್ನು ನೆನೆದು ಏಕೆ ಅಂಜಬೇಕು? ಸೋಲು-ಗೆಲವುಗಳನ್ನು ಚಿಂತಿಸುವುದು ನಮ್ಮ ಕೆಲಸವಲ್ಲ. ನಾಡದೇವಿಯ ಆರಾಧನೆಯಲ್ಲಿ ನಮ್ಮಲ್ಲಿರುವುದನೆಲ್ಲಾ ನಿವೇದಿಸುವುದು ನಮ್ಮ ಕರ್ತವ್ಯವಾಗಿದೆ. ನಾವು ಪ್ರತಿಯೊಂದು ಕೆಲಸವನ್ನೂ ಈ ಮನೋಭಾವನೆಯಿಂದಲೇ ಮಾಡಬೇಕಾಗಿದೆ. ಸೋಲು-ಗೆಲವುಗಳನ್ನು ತೀರ್ಮಾನಿಸುವ ಕೆಲಸ ವಿಧಿಯದು. ಈ ಮನೋಭಾವನೆಯಿಂದ ನಾವು ಕಾದಾಡುವದಾದರೆ, ನಾವು ಎದೆಗುಂದಬೇಕಾದುದಿಲ್ಲ. ಎಣ್ಣೆ ತೀರಿದ ದೀಪವು ನಂದಿ ಹೋಗುತ್ತದೆಂಬದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಆ ದೀಪವು ಉರಿಯುತ್ತಿರುವಾಗ, ಇತರರಿಗೆ ದಾರಿಯನ್ನು ತೋರಿಸುತ್ತದೆ. ಇದರಂತೆಯೇ ಮನುಷ್ಯನಾದರೂ ಉರಿಯುತ್ತಲಿರುವ ಒಂದು ದೀಪವಾಗಿರುತ್ತಾನೆ. ಈ ದೀಪ

ದಲ್ಲಿರುವ ಎಣ್ಣೆಯು ತೀರುವದು ಯಾವಾಗ? ಎಂಬ ನಿಶ್ಚಯವಿಲ್ಲ. ಆದುದರಿಂದ ದೀಪವು ಕೆಡುವ ಮುನ್ನ, ಅದನ್ನು ಒಂದು ಸತ್ಕಾರ್ಯದಲ್ಲಿ ವಿನಿಯೋಗಿಸ ಬೇಕಾಗಿದೆ. ನಿಮಗೆ ನಾನು ಹೇಳುವದಿಷ್ಟೆ."

ಜ್ಞಾನಾನಂದನ ಈ ಉಪದೇಶವು ಕುಮಾರನ ಎದೆಯಲ್ಲಿ ಅಮೃತ ಬಿಂದು ಗಳನ್ನು ಸಿಂಚಿಸಿತು. ಅವನಲ್ಲಿ ಅಳಿಸಿದ್ದ ಉತ್ಸಾಹವು ಮರಳಿ ತೋರತೊಡ ಗಿತು. ತಪ್ಪು ಮಾಡಿದವನಂತೆ ತನ್ನ ತಲೆಯನ್ನು ತಗ್ಗಿಸಿ ಅವನು ಹೇಳಿದ: "ಗುರುದೇವ ನನ್ನ ತಪ್ಪನ್ನು ಕ್ಷಮಿಸಿರಿ! ನನ್ನ ಬಲಹೀನತೆಯು ಈ ಸಂದೇಹ ತಾಳಲಿಕ್ಕೆ ನನ್ನನ್ನು ಪ್ರೇರಿಸಿತು."

"ಕುಮಾರ, ನೀನು ಮಾಡಿದುದು ತಪ್ಪಲ್ಲ. ನರಜೀವಿಯು ಅಪೂರ್ಣ. ಆದುದರಿಂದ ಬಲಹೀನತೆಯು ಅವನಲ್ಲಿ ಇದ್ದೇ ಇವೆ. ಈ ಬಲಹೀನತೆಯನ್ನು ನೀಗಲು ಅವನು ಯತ್ನಿಸುತ್ತಿದ್ದಾನೆ. ತನ್ನ ದಾರಿಯಲ್ಲಿ ಅವನು ಅನೇಕ ಸಲ ಎಡವಿ ಬೀಳಬಹುದು; ಆದರೆ ಈ ಪತನದಿಂದ ಅವನು ತನ್ನ ಲಕ್ಷ್ಯದಿಂದ ವಿಮುಖನಾಗಕೂಡದು. ಬಿದ್ದಲ್ಲಿಂದ ಪುನಃ ಮೇಲಕ್ಕೆದ್ದು, ಮುಗಿಲನ್ನು ಮುಟ್ಟುತ್ತಿರುವ ಆ ಗಿರಿಯ ಕಡೆಗೆ ಅವನು ತನ್ನ ಹೆಜ್ಜೆಗಳನ್ನಿಡಬೇಕು; ಮುಂದೆ ಸಾಗಬೇಕು. ಈ ಆಶಾವಾದಿತ್ವ, ಈ ಧ್ಯೇಯಕಾಂಕ್ಷೆಯು ಮಹತ್ತರವಾದುದು! ನಮ್ಮ ದಲದಲ್ಲಿ ಅನೇಕ ಮಂದಿ ಮಡಿದರು. ಆಹಾರ ಸಾಮಗ್ರಿಗಳ ಕೊರ ತೆಯು ಹೆಚ್ಚುತ್ತಿದೆ. ಈ ಕಾರಣಗಳಿಂದ ಸ್ವಾಧೀನತೆಯ ಗುರಿಯಿಂದ ವಿಮುಖ ರಾಗಲು ಭಾವಿಸುವದು ಮೂರ್ಖತನವಾಗಿದೆ; ಅವಿವೇಕವಾಗಿದೆ. ಈಗಿನ ಸೋಲು ನಮ್ಮಲ್ಲಿ ಬೇಕಷ್ಟು ತ್ಯಾಗಸನ್ನದ್ಧತೆಯಿಲ್ಲವೆಂಬುದರ ಹೆಗ್ಗುರುತಾ ಗಿದೆ ಈ ವರೆಗಿನ ಸಂಭವಗಳು ನಮ್ಮನ್ನು ಇನ್ನೂ ಹೆಚ್ಚಿನ ತ್ಯಾಗಗಳಿಗೆ ಪ್ರೇರಿಸಬೇಕು."

"ತ್ಯಾಗ!" ಎಂದುಸುರಿ ಕುಮಾರನು ಗುರುದೇವನ ಮೋರೆಯನ್ನು ನೋಡಿದನು.

"ಅಹುದು; ಅಂತ್ಯವಿಲ್ಲದ ತ್ಯಾಗ! ಆತ್ಮಾರ್ಪಣೆಯು ಮಾತ್ರವಾಗಿದೆ!" ಜ್ಞಾನಾನಂದನು ತನ್ನ ನುಡಿಗಳನ್ನು ಮುಂದುವರಿಸಿದ: "ನಾಡಮೋಚನೆ ಜರುಗಿಸುತ್ತಿರುವ ಮಹಾಯಜ್ಞದ ಪೂರ್ಣಾಹುತಿಯದು!" ಆ ಅಗ್ನಿಪರೀಕ್ಷೆಯ ಮೆಟ್ಟಲಿಗೆ ನಾವೀಗ ತಲುಪಿದ್ದೇವೆ. ಕುಮಾರ, ಪ್ರತಿಯೊಬ್ಬ ವಿದ್ರೋಹಿಯೂ ಈಗ ಕೊನೆಯ ಹೋರಾಟಕ್ಕೆ ಸಿದ್ಧರಾಗಬೇಕು. ನಾವು ಕೋಟೆಯ ಬಾಗಿಲು

ಗಳನ್ನು ತೆರೆದು ಎಲ್ಲರೂ ಒಂದಾಗಿ ಶತ್ರುಗಳ ಮೇಲೆ ಸಾಗಿ ಹೋಗಿ ನಮ್ಮ ಬಾಹುಗಳಲ್ಲಿ ಹರಿಯುತ್ತಿರುವ ಶೌರ್ಯವನ್ನು ಪ್ರದರ್ಶಿಸಬೇಕಾಗಿದೆ."

"ಈ ಪ್ರಯತ್ನವು ಅಯಶಸ್ವಿಯಾದರೆ?" ಕುಮಾರನು ಸಂದೇಹಾತ್ಮಕ ದೃಷ್ಟಿಯನ್ನು ಚಲ್ಲಿದನು.

"ಈ ಮೊದಲೇ ಹೇಳಿದ್ದೇನೆ ನಾನು. ಜಯವನ್ನು ಕಾಂಕ್ಷಿಸಿಯಲ್ಲ ನಾವು ಪ್ರಯತ್ನಿಸಬೇಕಾದುದೆಂದು- ಧ್ಯೇಯಸಾಧನೆಗಾಗಿ ಹೆಣಗಬೇಕು; ಆತ್ಮಾರ್ಪಣೆಗೆ ನಾವೆಲ್ಲರೂ ಮುಂದೆ ಬರಬೇಕು." ದೃಢನಿಶ್ಚಯದ ಸ್ವರದಲ್ಲಿ ಜ್ಞಾನಾನಂದನು ಹೇಳಿದನು.

ಕುಮಾರನು ಮಾತಾಡಲಿಲ್ಲ.

ಂ ಂ ಂ

ಸತ್ವಪರೀಕ್ಷೆಯ ದಿನವು ಬಂದಿತು. ಮೃತ್ಯುವಿನ ಗವಿಯೊಳಗೆ ನುಗ್ಗಲು ಪ್ರತಿಯೊಬ್ಬರೂ ಸಿದ್ಧರಾಗಬೇಕೆಂದು ಜ್ಞಾನಾನಂದನ ಸೂಚನೆ. ಅವನ ಈ ಸೂಚನೆಯನ್ನು ವಿದ್ರೋಹಿಗಳು ತುಸ ಅಂಜಿಕೆಯಿಂದಲೇ ಸ್ವೀಕರಿಸಿದರು. ಅವರೆಲ್ಲರ ಮುಖಗಳನ್ನು ಚಿಂತೆಯ ಕಾರ್ಮುಗಿಲು ಆವರಿಸಿತು. ಸಾವು! ತಾವು ಬಹು ನಚ್ಚಿನಿಂದ ದರ್ಶಿಸುತ್ತಿದ್ದ ಜಗತ್ತನ್ನು ಪರಿತ್ಯಜಿಸಿ ತೆರಳಬೇಕಾಗುವದು ಮುಂದೇನು? ಎಂಬಿತ್ಯಾದಿ ವಿವಿಧ ಚಿಂತೆಗಳು ಅವರನ್ನು ಬಾಧಿಸಿದವು; ಆದರೆ ಅದಲ್ಲದೆ ಬೇರೊಂದು ದಾರಿ ಇರಲಿಲ್ಲ. ಒಂದು ಆಡಳಿತವನ್ನು ಅಡಿಮೇಲು ಮಾಡಲು ಅವರು ಹೊರಟಿದ್ದರು. ಆ ದಾರಿಯಲ್ಲಿರುವ ಕೊನೆಯ ಮೆಟ್ಟಲು ಆತ್ಮಾರ್ಪಣೆಯಾಗಿದೆಯೆಂಬುದನ್ನು ಅವರು ತಿಳಿಯದಿರಲಿಲ್ಲ. ತಮ್ಮಿಂದ ಸಾಧ್ಯವಾಗಬಹುದಾದ ಎಲ್ಲ ತ್ಯಾಗಗಳಿಗೂ ಅವರು ತಮ್ಮ ಮನಸ್ಸನ್ನು ದೃಢಪಡಿಸಿಕೊಂಡಿದ್ದರು; ಆದರೆ ಮನುಷ್ಯ ಸ್ವಭಾವ! ಕೃತಿಯ ಸಂದರ್ಭವು ಬಂದೊದಗಿದಾಗ ಅವರ ಚಿತ್ತಗಳು ಅಳುಕದಿರಲಿಲ್ಲ; ಆದರೆ ಜ್ಞಾನಾನಂದನ ನುಡಿಯನ್ನು ಮೀರಲು ಅವರಿಗೆ ಶಕ್ತಿಯಿರಲಿಲ್ಲ. ಪ್ರತಿಯೊಬ್ಬ ವಿದ್ರೋಹಿಯ ಎದೆಯಲ್ಲಿಯೂ ಜ್ಞಾನಾನಂದನ ಬಿಂಬವು ಕಂಗೊಳಿಸುತ್ತಿದ್ದಿತು. ನಾಡಿಗೆ ಬಂದೊದಗಿದ ವಿಪತ್ತನ್ನು ಪರಿಹರಿಸಲು ಶಕ್ತನಾದ ಪುರುಷನು ಜ್ಞಾನಾನಂದನಾಗಿದ್ದನೆಂಬ ನಂಬಿಕೆಯು ವಿದ್ರೋಹಿಗಳಿಗಿದ್ದಿತು.

ಜ್ಞಾನಾನಂದನ ನಿರ್ದೇಶದಂತೆ ಕೋಟೆಯ ಕದಗಳನ್ನು ತೆರೆದು ವಿದ್ರೋಹಿಗಳು ರಣಾಂಗಣದಲ್ಲಿ ಪ್ರವೇಶಿಸಿದರು. ಇದುವರೆಗೆ ಜ್ಞಾನಾನಂದನು

ಕದನದಲ್ಲಿ ಪ್ರತ್ಯಕ್ಷವಾಗಿ ಭಾಗವನ್ನು ವಹಿಸಿರಲಿಲ್ಲ; ಆದರೆ ಈ ದಿನ ಅವನು ಸಮರಾಂಗಣಕ್ಕೆ ಬಂದನು. ತನ್ನ ಸಲಹೆಗಳನ್ನು ವಿದ್ರೋಹಿಗಳಿಗೆ ಕದನದಲ್ಲಿ ನೀಡುವುದಾಗಿದ್ದಿತು ಅವನು ಯುದ್ಧರಂಗಕ್ಕೆ ಬಂದುದರ ಪ್ರಧಾನ ಉದ್ದೇಶವು. ಇದು ಅಂತಿಮದ ಹೋರಾಟವೆಂಬುದನ್ನು ವಿದ್ರೋಹಿಗಳು ಬಲ್ಲವರಾಗಿದ್ದರು. ಅದರಿಂದ ಅವರು ದೇಹಪ್ರಜ್ಞೆಯಿಲ್ಲದೆ ಹೋರಾಡುತ್ತಿದ್ದರು. ಹೆಗಲಿಗೆ ಹೆಗಲು ಕೊಟ್ಟು ಮುಂದೆ ಸಾಗುತ್ತಿದ್ದರು. ಪಠಾಣರು ಶತ್ರುಗಳಲ್ಲಿ ಗೋಚರಿಸುತ್ತಿದ್ದ ಈ ಹೊಸ ಹುರುಪನ್ನು ನೋಡಿ ಆಶ್ಚರ್ಯಯುಕ್ತರಾದರು. ಎಂದಿಗಿಂತಲೂ ಹೆಚ್ಚಿನ ಆವೇಶದಿಂದ ವಿದ್ರೋಹಿಗಳು ಮುಂದೆ ಬರುತ್ತಿರುವದು ಅವರಿಗೆ ಗೋಚರವಾಯಿತು. ತಮ್ಮ ಕತ್ತಿಗಳನ್ನು ಒರೆಗಳಿಂದ ತೆಗೆದರು. ಬಿಲ್ಲುಗಳಿಗೆ ಹೆದೆಯನ್ನೇರಿಸಿದರು. ಬಾಣಪ್ರಯೋಗವನ್ನು ಆರಂಭಿಸಿದರು. ಭೀಕರ ಕಾಳಗಕ್ಕೆ ಆರಂಭವಾಯಿತು. ಅಶ್ವಗಳ ಹೇಷಾರವ, ಗಾಯಪಡೆದವರ ವೇದನೆಗಳು, ವೀರರ ಗರ್ಜನೆಗಳು ನಭೋವಲಯದಲ್ಲಿ ವ್ಯಾಪಿಸಿದವು.

ವಿದ್ರೋಹಿಗಳು ಬಹು ಧೀರತೆಯಿಂದ ಕಾದುತ್ತಿದ್ದರು. ಅವರ ಕಾರ್ಮುಖಗಳಿಂದ ಹೊರಡುತ್ತಿದ್ದ ಶರಗಳು ಶತ್ರುಪಕ್ಷದವರ ಎದೆಗಳನ್ನು ಭೇದಿಸುತ್ತಿದ್ದವು; ಆದರೆ ಪಠಾಣರು ವಿದ್ರೋಹಿಗಳನ್ನು ಮುಂದೆ ಸಾಗಲು ಬಿಡಲಿಲ್ಲ. ಅವರನ್ನು ತಡೆದು ನಿಲ್ಲಿಸುತ್ತಿದ್ದರು; ವಿದ್ರೋಹಿಗಳನ್ನು ಎದುರಿಸುತ್ತಿದ್ದರು. ಒಂದು ತಾಸಿನ ಸಮಯದ ತನಕ ಕಾಳಗವು ಜರುಗಿತು. ವಿದ್ರೋಹಿಗಳಿಗೆ ಮುಂದೆ ಸಾಗಲು ಸಾಧ್ಯವಾಗಲಿಲ್ಲ. ಪಠಾಣರು ಒಂದೊಂದು ಹೆಜ್ಜೆಗಳಂತೆ ಮುಂದೆ ಬರಲಾರಂಭಿಸಿದರು. ಅವರನ್ನು ತಡೆದು ನಿಲ್ಲಿಸುವದು ವಿದ್ರೋಹಿಗಳಿಗೆ ಅಶಕ್ಯವಾಗಿ ಪರಿಣಮಿಸಿತು.

ಈ ಸಂಭವಗಳನ್ನೆಲ್ಲಾ ಜ್ಞಾನಾನಂದನು ದರ್ಶಿಸಿದನು. ತನ್ನ ಕಡೆಯ ದಂಡಾಳುಗಳು ಹಿಮ್ಮೆಟ್ಟುತ್ತಿದ್ದುದನ್ನು ಈಕ್ಷಿಸಲು ಅವನ ಎದೆಯಲ್ಲಿ ಕೋಪಾನಲವು ಪ್ರಜ್ವಲಿಸಿತು. ಅವನು ಒಬ್ಬ ವಿದ್ರೋಹಿಯನ್ನು ಕುದುರೆಯ ಮೇಲಿನಿಂದ ದೂಡಿ ಆ ಹಯದ ಮೇಲೆ ಹತ್ತಿದನು. ಪಕ್ಕದಲ್ಲಿ ನಿಂತಿದ್ದ ಒಬ್ಬ ದಂಡಾಳು ಜ್ಞಾನಾನಂದನಿಗೆ ತನ್ನ ಕರವಾಳವನ್ನು ಸಮರ್ಪಿಸಿದನು. ಅವನು ಕೈಯಲ್ಲಿ ಹಿಡಿದಿದ್ದ ಖಡ್ಗವನ್ನು ಝಳಪಿಸುತ್ತಾ ಯುದ್ಧರಂಗದಲ್ಲಿ ಗರ್ಜಿಸಿದನು. ಅವನ ಗರ್ಜನೆಯು ಇತರ ವಿದ್ರೋಹಿಗಳ ಶ್ರವಣೇಂದ್ರಿಯಗಳಲ್ಲಿ ಪತಿಸಿತು. "ಪಠಾಣರನ್ನು ತಡೆದು ನಿಲ್ಲಿಸುವದು ನಿಮಗಾರಿಗೂ ಶಕ್ಯವಾಗದಿದ್ದರೆ; ಸಂನ್ಯಾಸಿ

ಯಾದ ನನ್ನನ್ನು ನೋಡಿರಿ! ಆತ್ಮನಿವೇದನೆ ಮಾಡಲು ನಿಮಗಾರಿಗೂ ವಿಶ್ವಾಸಲಿಲ್ಲ! ನನ್ನ ಆತ್ಮಾರ್ಪಣೆಯಿಂದ ತ್ಯಾಗ ಮತ್ತು ಧೈರ್ಯಗಳನ್ನು ನೀವು ಕಲಿಯಿರಿ!" ಹೀಗೆನ್ನುತ್ತಾ ಅವನು ತನ್ನ ಹಯವನ್ನು ಮುಂದಕ್ಕೆ ದೂಡಿದ. ಅವನನ್ನು ಹೊತ್ತುಕೊಂಡಿದ್ದ ಅಶ್ವವು ಪಠಾಣರ ದಂಡಿನ ಕಡೆಗೆ ಸಾಗಿತು.

ಜ್ಞಾನಾನಂದನಿಗೆ ಅಪಾಯ ಸಂಭವಿಸಬಹುದೆಂಬ ವಿಚಾರವು ಕುಮಾರ ಅಮರಸಿಂಹನಿಗೆ ಹೊಳೆದಿತು. ಅವನು ತನ್ನ ಕುದುರೆಯನ್ನು ಜ್ಞಾನಾನಂದನ ಬೆನ್ನ ಹಿಂದೆಯೇ ಓಡಿಸಿದ. ಹೇಮಚಂದ್ರನು "ಗುರುದೇವನ ಪ್ರಾಣವನ್ನು ಕಾಪಾಡಿರಿ!" ಎಂದು ವಿದ್ರೋಹಿಗಳಿಗೆ ಕೂಗಿ ಹೇಳಿದ. ವಿದ್ರೋಹಿಗಳು ತಾವು ಹಿಂಜರಿದುದರ ಬಗ್ಗೆ ಲಜ್ಜಿಸಿದರು; ತಾವು ತೋರಿಸಿದ ಬಲಹೀನತೆಯನ್ನು ನೆನೆದು ನೊಂದುಕೊಂಡರು. ಜ್ಞಾನಾನಂದನನ್ನು ರಕ್ಷಿಸಿಕೊಳ್ಳಲು ಅವರು ಪಠಾಣರ ದಂಡನ್ನು ಶೀಳುತ್ತಾ ಮುಂದೆ ಸಾಗಹತ್ತಿದರು. ವಿಜಯವನ್ನು ಸಂಪಾದಿಸಲು ಎರಡು ಬಣಗಳೂ ಬಹು ಘೋರವಾಗಿ ಹೆಣಗಿದವು. ಯೋಧರು ಗಾಯಗೊಂಡು ನೆಲದ ಮೇಲೆ ಪತಿಸಹತ್ತಿದರು. ಉಳಿದವರು ಬಿದ್ದವರನ್ನು ತುಳಿಯುತ್ತ ಮುಂದೆ ಸಾಗುತ್ತಿದ್ದರು.

ಯುದ್ಧಭೂಮಿಯಲ್ಲಿ ತಂಬೂರಿಯ ಮೃದುಸ್ವರವು ಕೇಳಿಸಿತು. ದಂಡಾಳುಗಳು ಆ ಕಡೆಗೆ ತಮ್ಮ ದೃಷ್ಟಿಯನ್ನು ಚಲ್ಲಿದರು. ತಂಬೂರಿಯನ್ನು ಮೀಟುತ್ತಾ ವನಿತೆಯೊಬ್ಬಳು ಯುದ್ಧರಂಗಕ್ಕೆ ಆಗಮಿಸುತ್ತಲಿದ್ದ ದೃಶ್ಯವು ಅವರಿಗೆ ಗೋಚರಿಸಿತು. ಅವಳು ಈ ಭಯಾನಕ ಪ್ರದೇಶಕ್ಕೆ ಬಂದುದೇಕೆಂಬುದು ಯಾರಿಗೂ ತಿಳಿಯದು.

ಅವಳ ಕಂಠದಿಂದ ಹರಿದು ಬರುತ್ತಿದ್ದ ಮಧುರ ಸಂಗೀತವನ್ನು ಕೇಳಲು, ಎರಡು ಬಣದವರೂ ಅದಕ್ಕೆ ಅಧೀನರಾಗಿ ಒಂದು ಕ್ಷಣದ ವರೆಗೆ ತಮ್ಮ ಕಾದಾಟವನ್ನು ನಿಲ್ಲಿಸಿದರು. ಅವಳು ಹಾಡುತ್ತಾ ಯುದ್ಧರಂಗದ ಬಳಿಗೆ ಬರುತ್ತಿದ್ದಳು. ಅವಳ ಬೆನ್ನಹಿಂದೆ ಒಂದು ದೊಡ್ಡ ಜನರ ಗುಂಪು ಇದ್ದಿತು. ಈ ಜನರ ಹಸ್ತಗಳಲ್ಲಿ ದೊಣ್ಣೆ, ಕೊಡಲಿ, ಬಿಲ್ಲು, ಕತ್ತಿ ಮೊದಲಾದ ಆಯುಧಗಳಿದ್ದವು. ಯುದ್ಧರಂಗಕ್ಕೆ ತಲುಪಲು, ಆ ಮಹಿಳೆಯು ತಾನು ಹಾಡುತ್ತಿದ್ದ ಗಾನವನ್ನು ನಿಲ್ಲಿಸಿ, ತನ್ನನ್ನು ಹಿಂಬಾಲಿಸಿ ಬಂದಿದ್ದ ಜನರ ಸಂಗಡ ಹೀಗೆ ಹೇಳಿದಳು: "ನೋಡಿರಿ! ಶತ್ರುಗಳನ್ನು ಎದುರಿಸಿರಿ! ರೂಪನಗರದ ಸ್ವಾತಂತ್ರ್ಯವನ್ನು ಕಾಪಾಡಿರಿ!"

ಈ ನುಡಿಗಳು ಅವಳ ತುಟಿಗಳಿಂದ ಹರಿದು ಬರಲು, ಅವಳ ಬೆನ್ನ ಹಿಂದೆಯಿದ್ದ ಜನತತಿಯು ಪಠಾಣ ದಂಡಾಳುಗಳ ಮೇಲೆ ಆಯುಧಪ್ರಯೋಗ ವನ್ನು ಮಾಡತೊಡಗಿತು. ಅನಿರೀಕ್ಷಿತ ರೀತಿಯಲ್ಲಿ ತಮಗೆ ಬಂದೊದಗಿದ ಈ ಸಹಾಯಕರು ಯಾರೆಂಬುದನ್ನು ತಿಳಿಯದೆ ವಿದ್ರೋಹಿಗಳು ಆಶ್ಚರ್ಯಚಕಿತ ರಾದರು. ಈ ಗುಂಪನ್ನು ಕರೆದುಕೊಂಡು ಬಂದ ಮಹಿಳೆಯು ಸ್ವಲ್ಪವೂ ಭಯ ವಿಲ್ಲದೆ. ಯುದ್ಧರಂಗದಲ್ಲಿ ಪ್ರವೇಶಿಸಿದಳು. ಅವಳು ಗಮಿಸಿದುದು ಜ್ಞಾನಾನಂದ ನಿದ್ದಲ್ಲಿಗೇ. ಅವಳು ಅವನಿದ್ದಲ್ಲಿಗೆ ತೆರಳಿ ಆತನನ್ನು ವಂದಿಸಿದಳು. ಸಂನ್ಯಾ ಸಿಯು ತನ್ನ ಹಯವನ್ನು ನಿಲ್ಲಿಸಿ ಒಂದು ಮೃದುಹಾಸವನ್ನು ಹೊರಚಲ್ಲಿದ. ಆ ಮೇಲೆ ಅವನು. ತನ್ನನ್ನು ವಂದಿಸಿದ ತರುಣಿಯನ್ನು ಹೀಗೆ ಪ್ರಶ್ನಿಸಿದ: "ತಂಗೀ, ನೀನಾರು? ನಮ್ಮ ಸಹಾಯಕ್ಕೆಂದು ನಾಕದಿಂದ ಇಳಿದು ಬಂದ ಸ್ವಾತಂತ್ರ್ಯಲಕ್ಷ್ಮಿಯೇನು!"

"ಮಹಾರಾಜ! ನಾನು ದೇವತೆಯಲ್ಲ; ಮಾನವಿಯೊಬ್ಬಳು. ಜನರು ನನ್ನನ್ನು ಭೈರವಿಯೆಂದು ಕರೆಯುತ್ತಾರೆ. ನಾಡಿನ ಸ್ವಾತಂತ್ರ್ಯಸಂಗ್ರಾಮ ದಲ್ಲಿ ತಮಗೆ ಸಹಾಯವನ್ನು ನೀಡಲು ನಾಡ ಜನರನ್ನು ಕರೆದು ತಂದಿದ್ದೇನೆ." ವಿನೀತಸ್ವರದಲ್ಲಿ ಭೈರವಿಯು-ನಮಗೆ ಈ ಮೊದಲೇ ಪರಿಚಿತಳಾದ-ಭೈರವಿ ಯು ನುಡಿದಳು.

"ತಂಗೀ, ನಿನ್ನ ಈ ಸಾಹಸವನ್ನು ನಾನು ಮನಸಾ ಅಭಿನಂದಿಸುತ್ತೇನೆ" ಜ್ಞಾನಾನಂದನು ಭೈರವಿಯನ್ನು ಹೊಗಳಿದನು.

"ಮಹಾರಾಜ, ತಾವು ನನ್ನನ್ನು ಅಭಿನಂದಿಸಬೇಕಾದ ಆವಶ್ಯಕತೆಯಿಲ್ಲ. ನಾನು ನನ್ನ ಕರ್ತವ್ಯವನ್ನು ಮಾಡುತ್ತಿರುತ್ತೇನೆ. ಮಹಾರಾಜ, ನನ್ನ ಆತ್ಮ ವನ್ನು ಈ ದಾರಿಯನ್ನು ಹಿಡಿಯಲು ಪ್ರೇರಿಸಿದ ಮಹಾನುಭಾವರು ತಾವು! ಸ್ವತಂತ್ರ ನಾಡನ್ನು ಸೃಜಿಸುವ ಭಗೀರಥ ಪ್ರಯತ್ನದಲ್ಲಿ ನಾನು ಸಲ್ಲಿಸಿದ ಅಳಿಲ ಸೇವೆಯಿದು."

"ಗಂಗೀ, ನೀನು ಧನ್ಯಳು!" ಹೀಗೆಂದ ಜ್ಞಾನಾನಂದ.

"ಮಹಾರಾಜ ತಮ್ಮಂಥ ಮಹಾತ್ಮರ ಕೃಪಾದೃಷ್ಟಿಯು ದೊರೆತುದು ದರಿಂದ ನನ್ನ ಬದುಕು ಪರಿಶುದ್ಧವಾಯಿತು!"

ಹೀಗೆ ಒಂದು ಹೊಸ ವಿಪತ್ತು ಬಂದೊದಗುವದೆಂದು ಪಠಾಣರು ನೆನ ಸಿರಲಿಲ್ಲ. ಭೈರವಿಯನ್ನು ಹಿಂಬಾಲಿಸಿ ಒಂದೆರಡು ಸಾವಿರ ಜನರು ಬಂದಿದ್ದರು.

ಹೊಸದಾಗಿ ಬಂದವರು ಪಠಾಣ ಸೇನೆಯ ಹಿಂಬದಿಯನ್ನು ಆಕ್ರಮಿಸಿದರು. ಪಠಾಣರ ಮುಂದುಗಡೆ ವಿದ್ರೋಹಿಗಳ ದಂಡಿದ್ದಿತು. ಬೋನಿನಲ್ಲಿ ಸಿಕ್ಕಿ ಬಿದ್ದ ಇಲಿಯ ಅವಸ್ಥೆಯಾಯಿತು ಪಠಾಣರಿಗೆ. ಅಲ್ಲಿಂದ ಪಾರಾಗಿ ಹೋಗಲು ಪಠಾಣಸೇನೆಗೆ ದಾರಿಯಿರಲಿಲ್ಲ. ಆ ದಿನದ ಕಾದಾಟದಲ್ಲಿ ವಿಜಯವನ್ನು ಹೊಂದಬೇಕೆಂಬ ಆಗ್ರಹದಿಂದ ಉನ್ಮತ್ತರಾದ ಅವರು ತಮ್ಮನ್ನು ತಾವೇ ಸಂರಕ್ಷಿಸಿಕೊಳ್ಳಲು ಮರೆತರು.

ಹೀಗೆ ಒಂದು ಹೊಸ ಸಹಾಯವು ಲಭ್ಯವಾದುದರಿಂದ ವಿದ್ರೋಹಿಗಳ ಉತ್ಸಾಹವು ವರ್ಧಿಸಿತು. ಅವರು ಹೆಚ್ಚು ಹುರುಪಿನಿಂದ ಪಠಾಣರ ಮೇಲೆ ಸಾಗಿ ಹೋಗತೊಡಗಿದರು. ರಣಾಂಗಣದಲ್ಲಿ ತಂಬೂರಿಯನ್ನು ಮೀಟುತ್ತಾ ನಿಂತಿದ್ದ ಭೈರವಿಯು ವಿದ್ರೋಹಿಗಳ ಕಣ್ಣುಗಳಿಗೆ ತಮ್ಮ ಸಹಾಯಕ್ಕಾಗಿ ಬಂದ ದುರ್ಗೆಯಂತೆ ಗೋಚರಿಸಿದಳು. ಅವಳು ತಂಬೂರಿಯನ್ನು ಮೀಟುತ್ತಾ ಹಾಡುತ್ತಿದ್ದಳು. ಆ ಮೃದು ಮಧುರ ಗಾನವು ವಿದ್ರೋಹಿಗಳಿಗೆ ನವೋನ್ಮೇಷವನ್ನು ಪ್ರದಾನಮಾಡಿತು. ಅವರ ಬಾಹುಗಳಲ್ಲಿ ಶೌರ್ಯಸಂಜೀವನವು ಪ್ರವಹಿಸತೊಡಗಿತು. ಕುಮಾರ ಅಮರಸಿಂಹನು ತನ್ನ ಕುದುರೆಯನ್ನು ಮುಂದಕ್ಕೆ ದೂಡುತ್ತಾ ವಿದ್ರೋಹಿಗಳನ್ನು ಉತ್ತೇಜನಗೊಳಿಸುತ್ತಿದ್ದನು. ಜ್ಞಾನಾನಂದನ ಮೂರ್ತಿಯು ಅವರಲ್ಲಿ ಹೊಸ ಧೈರ್ಯವನ್ನು ತುಂಬುತ್ತಿದ್ದಿತು. ಸ್ವಾಧೀನತೆಯನ್ನು ಮರಳಿ ಪಡೆಯಲು ವಿದ್ರೋಹಿಗಳು ಸಾಹಸದಿಂದ ಕಾದಿದರು.

ವಿದ್ರೋಹಿಗಳಲ್ಲಿ ನವೋನ್ಮೇಷವು ಹುಟ್ಟುತ್ತಿದ್ದರೆ, ಪಠಾಣರು ನಿರಾಸೆಯನ್ನು ಹೊಂದತೊಡಗಿದರು. ಹೊಸದಾಗಿ ಬಂದ ಜನರ ತಂಡವು ತನ್ನ ದಂಡನ್ನು ಮುತ್ತಿತೆಂಬ ಸುದ್ದಿಯು ಯಾಕೂಬಖಾನನಿಗೆ ತಿಳಿಯಲು ಅವನನ್ನು ಚಿಂತೆಯು ಆವರಿಸಿತು. ಈ ಕದನದಲ್ಲ ತನ್ನ ಪಕ್ಷಕ್ಕೆ ಸೋಲಾಗುವುದೆಂದು ಅವನು ನೆನೆದಿರಲಿಲ್ಲ; ಆದರೆ ಈಗ! ಮಾಡುವುದೇನು? ಪಠಾಣರ ದಂಡನ್ನು ನಾಲ್ಕು ಪಾರ್ಶ್ವಗಳಿಂದಲೂ ವಿದ್ರೋಹಿಗಳು ಆವರಿಸಿದ್ದರು. ಪಠಾಣರನ್ನು ಸದೆಬಡೆಯಲು ಬಂದ ಒಬ್ಬ ಯಕ್ಷಿಣಿಯಂತೆ ಭೈರವಿಯು ಸುಭೇದಾರನ ಕಣ್ಣುಗಳಿಗೆ ಗೋಚರಿಸಿದಳು. ವಿದ್ರೋಹಿಗಳಂತೆ ಧೈರ್ಯವನ್ನು ಅವಲಂಬಿಸಿ ಮುಂದೆ ಸಾಗುವುದು ಯಾಕೂಬಖಾನನಿಗೆ ಸಾಧ್ಯವಾಗಿರಲಿಲ್ಲ. ದುರಾಚಾರ ಪರಿಪೂರ್ಣವಾದ ಅವನ ಜೀವನವು ಅವನ ಪೌರುಷವನ್ನು ಶಿಥಿಲಗೊಳಿ

ಸಿತು. ಯಾರು ನೈತಿಕ ಮತ್ತು ಧಾರ್ಮಿಕ ಅಧಃಪತನವನ್ನು ಹೊಂದಿಲ್ಲವೋ, ಅವರಲ್ಲಿ ಮಾತ್ರ ಪೌರುಷವಿರುತ್ತದೆ; ಅಂಥವರಿಂದ ಮಾತ್ರ ದೃಢ ಚಿತ್ತವನ್ನು ಅವಲಂಬಿಸಿ ಮುಂದೆ ಸಾಗಲು ಸಾಧ್ಯವಾಗುತ್ತದೆ. ಅದಲ್ಲದೆ ದುರಾಚಾರಿಗಳಲ್ಲಿ ಪೌರುಷವಾಗಲೀ, ಧೈರ್ಯವಾಗಲೀ ಇರಲಾರವು. ಸುಭೇದಾರನಾದರೋ, ಎಲ್ಲಾ ದುರಾಚಾರಗಳ ಸಮುಚ್ಚಯವಾಗಿದ್ದನು. ಆದುದರಿಂದ ಪೌರುಷವು ಅವನಲ್ಲಿರಲಿಲ್ಲ. ಅವನ ಮನಸ್ಸು ದುರ್ಬಲವಾದುದಾಗಿದ್ದಿತು. ಆದರೂ ಅವನು ಹಿಂಜರಿಯಲಿಲ್ಲ. ಕುದುರೆಯ ಮೇಲೆ ಕುಳಿತು ತನ್ನ ಸೈನಿಕರನ್ನು ಉತ್ಸಾಹಪಡಿಸುತ್ತಿದ್ದನು.

ದಿವಾಕರನು ಅಸ್ತಾಚಲವನ್ನು ಸೇರಿದನು. ಆ ದಿನದ ಕಾಳಗವು ಮುಗಿಯಲಿಲ್ಲ. ಎರಡು ಪಕ್ಷದವರೂ ಗಂಭೀರವಾಗಿ ಹೆಣಗುತ್ತಲಿದ್ದರು. ಭೈರವಿಯ ತಂಬೂರಿಗಾನವು ಯುದ್ಧರಂಗದಲ್ಲಿ ಮೊಳಗುತ್ತಿದ್ದಿತು. ಪಠಾಣರ ಶಕ್ತಿಯು ಕ್ರಮೇಣ ಕುಂದುತ್ತಿದ್ದಿತು. ವಿದ್ರೋಹಿಗಳು ಪಠಾಣರ ಮೇಲೆ ಏರಿ ಹೋಗುತ್ತಿದ್ದರು. ಎಲ್ಲರಿಗಿಂತಲೂ ಮುಂದೆ ಕುಮಾರ ಅಮರಸಿಂಹನು ತನ್ನ ಕರವಾಳವನ್ನು ಝುಳಪಿಸುತ್ತಾ ಸಾಗುತ್ತಿದ್ದನು. ಅವನ ಬೆನ್ನಹಿಂದೆಯೇ ಉಸ್ಮಾನಖಾನನಿದ್ದನು. ಅವರಿಬ್ಬರನ್ನು ಅನುಸರಿಸಿದ್ದನು ಹೇಮಚಂದ್ರನು. ಈ ಸಂದರ್ಭದಲ್ಲಿ ಅನಿರೀಕ್ಷಿತವಾಗಿ ಅಮರಸಿಂಹನಿಗೆ ಒಂದು ವಿಪತ್ತು ಬಂದೊದಗಿತು. ಕುಮಾರನು ತನ್ನ ಅಶ್ವವನ್ನು ಮುಂದಕ್ಕೆ ದೂಡುತ್ತಿದ್ದಾಗ, ಒಬ್ಬ ಪಠಾಣದಂಡಾಳು ತನ್ನ ಕತ್ತಿಯನ್ನು ಬೀಸಿದನು. ಅಮರಸಿಂಹನು ತನ್ನ ಗುರಾಣಿಯಿಂದ ಆ ಖಡ್ಗಪ್ರಹಾರವನ್ನು ತಡೆಯಲು ಪ್ರಯತ್ನಿಸಿದ; ಆದರೆ ಆ ಕೆಲಸವು ಫಲಪ್ರದವಾಗಲಿಲ್ಲ. ಕತ್ತಿಯು ಅಮರಸಿಂಹನ ಎದೆಗೆ ತಗಲಿತು. ಅವನು ಕುದುರೆಯ ಮೇಲಿನಿಂದ ಕೆಳಕ್ಕೆ ಉರುಳಿದನು. ಉಸ್ಮಾನನು ಅವನನ್ನು ಹಿಡಿದು ಮೇಲಕ್ಕೆ ಎತ್ತಲು ಪ್ರಯತ್ನಿಸಿದ; ಆದರೆ ಪಠಾಣರು ಒಂದೇ ಸಮನೆ ಖಡ್ಗಪ್ರಯೋಗವನ್ನು ನಡೆಸುತ್ತಿದ್ದುದರಿಂದ ಆ ಉದ್ಯಮದಲ್ಲಿ ಉಸ್ಮಾನನು ಕೃತಕಾರ್ಯನಾಗಲಿಲ್ಲ. ಗಾಯಗೊಂಡ ಇನ್ನು ಅನೇಕ ಮಂದಿ ದಂಡಾಳುಗಳು ಕುಮಾರನ ಮೇಲೆ ಬಿದ್ದರು.

ಯಾಕೂಬಖಾನನಿಗೆ ಇರುಳಿನಲ್ಲಿ ಯಾರೋ ಒದರುತ್ತಿದ್ದ ಶಬ್ದವು ಕೇಳಿಸಿತು. ಆಗ ತಾನೇ ಉದಿಸಿದ್ದ ಚಂದ್ರನನ್ನು ಆ ಕಾರ್ಮುಗಿಲು ಆವರಿಸಿದ್ದುದರಿಂದ ಸಮರರಂಗದಲ್ಲಿ ನಡೆಯುತ್ತಿದ್ದುದು ಏನೆಲ್ಲಾ ಎಂಬುದು ವ್ಯಕ್ತ

ವಾಗಿ ಗೋಚರಿಸುತ್ತಿರಲಿಲ್ಲ. ಎಲ್ಲವೂ ಅವ್ಯಕ್ತ ಚಿತ್ರಗಳಾಗಿ ತೋರುತ್ತಿದ್ದವು. ಸುಭೇದಾರನು ತನ್ನ ಕುದುರೆಯ ಮೇಲಿಂದ ಇಳಿಯಲು ಯತ್ನಿಸಿ ಪ್ರಶ್ನಿಸಿದ: "ಏನದು?"

"ಸುಭೇದಾರ ಸಾಹೇಬ," ಆ ಧ್ವನಿಯು ಹತ್ತಿರದಿಂದ ಕೇಳಿ ಬಂದಿತು. "ತಮ್ಮ ಜೀವವನ್ನು ಸಂರಕ್ಷಿಸಿಕೊಳ್ಳಲು ನೋಡಿರಿ. ಸೈನಿಕರೆಲ್ಲಾ ಹಿಮ್ಮೆಟ್ಟುತ್ತಲಿದ್ದಾರೆ."

"ಯಾರದು?" ಸುಭೇದಾರನು ನುಡಿದ. "ದುರ್ಜಯಸಿಂಹನೇ?"

"ಅಹುದು ಸಾಹೇಬ," ಉತ್ತರವು ಬಂದಿತು; ಆದರೆ ಅವನು ತನ್ನ ಮಾತುಗಳನ್ನು ಮುಂದುವರಿಸಲಿಲ್ಲ. ಅಷ್ಟರಲ್ಲಿ ದುರ್ಜಯನು ಚೀರುತ್ತಾ ಭೂಮಿಯ ಮೇಲೆ ಪತಿಸಿದನು.

"ದುರ್ಜಯ, ಏನಾಯಿತು?" ಗಾಬರಿಯಿಂದ ಖಾನನು ಪ್ರಶ್ನಿಸಿದ.

"ಅಯ್ಯೋ! ಅವರು ನನ್ನನ್ನು ಕೊಂದರು!" ದುರ್ಜಯನು ಚೀರಿದನು. ವಿದ್ರೋಹಿಗಳು ಪ್ರಯೋಗಿಸಿದ ಒಂದು ಬಾಣವು ದುರ್ಜಯನ ಉದರದೊಳಗೆ ಪ್ರವೇಶಿಸಿದ್ದಿತು. ಅವನು ಚಿರುತ್ತಾ ನೆಲದ ಮೇಲೆ ಬಿದ್ದನು. ಯಾಕೂಬನು ತನ್ನ ಕಣ್ಣುಗಳಿಂದ ದುರ್ಜಯನ ಪತನವನ್ನು ನೋಡಿದನು.

ಯಾಕೂಬಖಾನನು ತನ್ನ ಹಯವನ್ನು ಬೇರೆ ಕಡೆಗೆ ತಿರುಗಿಸಿದ. ಅಷ್ಟರಲ್ಲಿ ಬೇರೊಂದು ವ್ಯಕ್ತಿಯು ಬಂದು ಸುಭೇದಾರನಿಗೆ ಅಡ್ಡ ನಿಂತಿತು. ಆ ವ್ಯಕ್ತಿಯು ಕ್ರೋಧಸಮ್ಮಿಶ್ರ ಸ್ವರದಲ್ಲಿ ಸುಭೇದಾರನನ್ನು ಹೀಗೆ ಪ್ರಶ್ನಿಸಿತು: "ಸುಭೇದಾರಸಾಹೇಬ, ನಿಮಗೆ ನನ್ನ ನೆನಪಿದೆಯೇ?"

"ಯಾರು ನೀನು?" ಎಂದನು ಸುಭೇದಾರನು.

"ನಾನಾರೆಂಬುದು ಬೇಗನೆ ತಿಳಿಯುವದು. ಮೃತ್ಯುವಿನ ಆಲಿಂಗನ ಮಾಡಿಕೊಳ್ಳಲು ಸಿದ್ಧರಾಗಿರಿ! ನನ್ನ ಸೇಡನ್ನು ತೀರಿಸಿಕೊಳ್ಳಲು ಬಂದಿದ್ದೇನೆ!"

"ಸೇಡು!" ಈ ಶಬ್ದವನ್ನು ಕೇಳಲು ಸುಭೇದಾರನ ದೇಹವು ಕಂಪಿಸಿತು.

"ಅಹುದು ಯಾಕೂಬಖಾನ; ನಿಮ್ಮ ಪೈಶಾಚಿಕ ಜೀವನವನ್ನು ಇಲ್ಲದಾಗಿಸಲು ನಾನು ಬದ್ಧಕಂಕಣನಾಗಿದ್ದೇನೆ. ನಿರಪರಾಧಿ ಮುದುಕನೊಬ್ಬನ ಕಣ್ಣುಗಳನ್ನು ಕೀಳಿಸಿದ ಆ ಮೃಗೀಯ ಕೃತ್ಯಕ್ಕೆ ಯೋಗ್ಯ ಪ್ರತೀಕಾರವನ್ನು ಮಾಡಲು ನಿಮ್ಮ ಮುಂದೆ ಬಂದು ನಿಂತಿದ್ದೇನೆ; ಆದರೆ ನಿಮ್ಮನ್ನು ಮೋಸದಿಂದ ಕೊಲ್ಲಲು ನಾನು ಬಯಸುವದಿಲ್ಲ. ನೀವು ನಿಮ್ಮ ಕತ್ತಿಯನ್ನು ಹಿರಿ

ಯಿರಿ. ಇಬ್ಬರೂ ಕಾದಾಡುವಾ. ಯಾರಲ್ಲಿ ಸತ್ಯ ಮತ್ತು ನ್ಯಾಯಗಳಿವೆಯೋ ಅವರು ನಮ್ಮಿಬ್ಬರಲ್ಲಿ ಜಯವನ್ನು ಹೊಂದುವರು." ಈ ಮಾತುಗಳು ಯಾಕೂಬಖಾನನನ್ನು ತಡೆದು ನಿಲ್ಲಿಸಿದ್ದ ವ್ಯಕ್ತಿಯ ತುಟಿಗಳಿಂದ ಉದುರಿದವು.

"ಹಾಗಾದರೆ ನೀನು ಉಸ್ಮಾನಖಾನ!" ಅನಂತರ ಯಾಕೂಬಖಾನನ ನಾಲಿಗೆಯಿಂದ ಮಾತುಗಳು ಹೊರಡಲಿಲ್ಲ.

"ಅಹುದು, ಈ ಮೊದಲು ನೀವು ಅರಸುತ್ತಲಿದ್ದ ಉಸ್ಮಾನಖಾನನೇ ನಾನಾಗಿದ್ದೇನೆ. ನನ್ನನ್ನು ದಂಡಿಸಬೇಕೆಂಬ ಆಗ್ರಹವು ನಿಮಗಿದೆಯಷ್ಟೆ? ನನ್ನನ್ನು ಒಮ್ಮೆ ದಂಡಿಸಿರಿ. ಯಾರಲ್ಲಿ ಸತ್ವವಿದೆಯೆಂಬುದನ್ನು ಇಲ್ಲಿ ಪರೀಕ್ಷಿಸುವಾ."

ಉಸ್ಮಾನನು ತನ್ನ ಕತ್ತಿಯನ್ನು ಹಿರಿದ. ತನ್ನ ಜೀವವನ್ನು ರಕ್ಷಿಸಿಕೊಳ್ಳಲು ಯಾಕೂಬನೂ ತನ್ನ ಖಡ್ಗವನ್ನು ಝಳಪಿಸಿದನು. ಇಬ್ಬರೂ ಕಾದಾಡಹತ್ತಿದರು. ಒಬ್ಬರು ಇನ್ನೊಬ್ಬರ ಎದೆಯನ್ನು ಶೀಳಿ, ಆ ಗೂಡಿನಲ್ಲಿ ಅಡಗಿದ್ದ ಪ್ರಾಣಪಕ್ಷಿಯನ್ನು ಗೂಡಿನಿಂದ ಬಿಡಿಸಲು ಯತ್ನಿಸಿದರು. ಇಬ್ಬರ ದೇಹಗಳಲ್ಲಿಯೂ ಗಾಯಗಳಾದವು. ನೆತ್ತರು ಹರಿಯತೊಡಗಿತು; ಆದರೆ ಆ ಪರಿವೆಯು ಅವರಿಗಿರಲಿಲ್ಲ. ವಿದ್ವೇಷವು ಇಬ್ಬರ ಎದೆಗಳಲ್ಲಿಯೂ ಕುದಿಯುತ್ತಲಿದ್ದಿತು. ಅವರಿಬ್ಬರ ಎದೆಗಳಲ್ಲಿಯೂ ಸಂಹಾರರುದ್ರನು ತಾಂಡವವಾಡುತ್ತಿದ್ದನು. ಉಸ್ಮಾನನ ಮನಃಶ್ಚಕ್ಷುಸ್ಸುಗಳ ಮುಂದೆ ಸುಭೇದಾರನ ಹಿಂಸೆಗೆ ಗುರಿಯಾದ ಅವನ ಪ್ರೀತಿಯ ತಂದೆಯು ಬಂದು ನಿಲ್ಲುತ್ತಿದ್ದನು. ಆಗ ಉಸ್ಮಾನನ ಎದೆಯಲ್ಲಿ ಉರಿಯುತ್ತಿದ್ದ ಪ್ರತೀಕಾರಾಗ್ನಿಯು ಇನ್ನಷ್ಟು ತೀವ್ರವಾಗಿ ಪ್ರಜ್ವಲಿಸುತ್ತಿದ್ದಿತು. ಆಗ ಅವನ ಕರದಲ್ಲಿದ್ದ ಕರವಾಳದ ಚಲನೆಯು ಇನ್ನಷ್ಟು ತೀವ್ರವಾಗುತ್ತಿದ್ದಿತು.

ಸುಭೇದಾರನು ಉಸ್ಮಾನನ ಖಡ್ಗಪ್ರಹಾರಗಳನ್ನು ಎದುರಿಸಲು ಶಕ್ತನಾಗಲಿಲ್ಲ. ಶತ್ರುವಿನ ಮೇಲೇರಿ ಹೋಗಿ ಅವನನ್ನು ಸೋಲಿಸುವ ಮಾತು ಹಾಗಿರಲಿ; ಶತ್ರುವಿನ ಖಡ್ಗಪ್ರಹಾರಗಳಿಂದ ತನ್ನ ದೇಹವನ್ನು ರಕ್ಷಿಸಿಕೊಳ್ಳುವುದು ಅವನಿಗೆ ಅಸಾಧ್ಯವಾಗಿ ಪರಿಣಮಿಸಿತು. ಅವನಿಗೆ ತನ್ನ ಬಾಹುಗಳಲ್ಲಿದ್ದ ಶೌರ್ಯವು ಬತ್ತಿಹೋದಂತೆ ಭಾಸವಾಯಿತು. ಮನುಷ್ಯನಲ್ಲಿ ನೈತಿಕ ಬಲವಿಲ್ಲದೆ ಹೋದರೆ ಕೊನೆಗೆ ಅಧಃಪತನವಲ್ಲದೆ ಇನ್ನಾವ ಗತಿಯೂ ಇಲ್ಲವೆಂಬ ವಸ್ತುಸ್ಥಿತಿಯು ಸುಭೇದಾರನಿಗೆ ಹೊಳೆದಿತು.

ಈ ಸಲ ಉಸ್ಮಾನನ ಖಡ್ಗಪ್ರಹಾರವನ್ನು ತಪ್ಪಿಸಿಕೊಳ್ಳಲು ಯಾಕೂಬನಿಗೆ ಸಾಧ್ಯವಾಗಲಿಲ್ಲ. ಆ ಪ್ರಹಾರವು ಬಂದು ಯಾಕೂಬನ ಭುಜಕ್ಕೆ ತಗಲಿತು. ಯಾಕೂಬನು ಕುದುರೆಯ ಮೇಲಿಂದ ಕೆಳಕ್ಕೆ ಉರುಳಿದನು. ಯಾಕೂಬನ ಜೀವನ ಯಾತ್ರೆಯನ್ನು ಸಮಾಪ್ತಿಗೊಳಿಸುವದಕ್ಕಾಗಿ ಉಸ್ಮಾನನು ತನ್ನ ಕತ್ತಿಯನ್ನು ಮೇಲೆಕ್ಕೆತ್ತಿದ. ಇನ್ನೇನು? ಆ ಕತ್ತಿಯು ಹೋಗಿ ನೆಲದಲ್ಲಿ ಬಿದ್ದಿದ್ದ ಯಾಕೂಬನ ಮಸ್ತಕವನ್ನು ಛೇದಿಸಬೇಕು; ಅಷ್ಟರಲ್ಲಿ ಯಾರೋ ಹಿಂದಿನಿಂದ ಬಂದು ಉಸ್ಮಾನನ ಹಸ್ತವನ್ನು ಭದ್ರವಾಗಿ ಹಿಡಿದರು. ಉಸ್ಮಾನನು ತನ್ನ ತಲೆಯನ್ನು ಮೇಲಕ್ಕೆತ್ತಿ ನೋಡಿದನು. ತನ್ನ ಕೈ ಹಿಡಿದುದು ಫಕೀರ ಹುಸ್ಸೇನನೆಂಬುದು ಉಸ್ಮಾನನಿಗೆ ತಿಳಿದಿತು. ಫಕೀರನ ಕೈ ಹಿಡಿದುಕೊಂಡು ಜ್ಞಾನಾನಂದನು ನಿಂತಿದ್ದನು. ಫಕೀರನ ತುಟಿಗಳ ಮೇಲೆ ಒಂದು ಮಂದಸ್ಮಿತವು ನರ್ತಿಸಿತು. ಅವನ ಕೊರಳಿಂದ ಈ ಮಾತುಗಳು ಹರಿದು ಬಂದವು: "ಮಗೂ, ನೀನೇನು ಮಾಡಲು ಹೊರಟಿರುವೆ?"

"ಸೇಡು!" ಎಂದು ಉಚ್ಚರಿಸಿದನು ಉಸ್ಮಾನನು.

"ಮಗೂ, ನಿನ್ನ ವಿವೇಕವೆಲ್ಲ ಎಲ್ಲಿ ಹೋಯಿತು? ಮನುಷ್ಯನಲ್ಲಿ ಅತ್ಯಾವಶ್ಯಕವಾಗಿ ಇರಬೇಕಾದುದು ದಯೆ ಮತ್ತು ಕ್ಷಮೆಗಳಾಗಿವೆ. ನಮ್ಮ ಶತ್ರುಗಳಿಗೆ ಸಹಾ ದಯೆಯನ್ನು ತೋರಿಸಲು ನಾವು ಸಿದ್ಧರಾಗಬೇಕು. ನಿಜ. ಸುಭೇದಾರನು ನಿನ್ನ ತಂದೆಯನ್ನು ಪೀಡಿಸಿದನು. ಈ ಕದನದ ಅನುಭವದಿಂದ ತಾನು ಈ ತನಕ ಮಾಡಿದುದೆಲ್ಲಾ ಅಬದ್ಧಗಳಾಗಿವೆಯೆಂಬ ತಿಳುವಳಿಕೆಯು ಸುಭೇದಾರನಿಗೆ ಉಂಟಾಗಿರಬಹುದು. ತನ್ನ ತಪ್ಪುಗಳನ್ನು ತಿಳಿದುಕೊಳ್ಳಲು ಶತ್ರುವಿಗೆ ಅವಕಾಶವನ್ನು ಕಲ್ಪಿಸಿಕೊಡುವದು ಅತ್ಯಗತ್ಯವಾಗಿದೆ."

"ಫಕೀರಸಾಹೇಬ," ಉಸ್ಮಾನನು ನುಡಿದನು: "ಈ ನರಹುಳುವಿಗೆ ಜೀವದಾನ ಮಾಡುವದರಿಂದ ಯಾವ ಪ್ರಯೋಜನವಿದೆ? ಅನೇಕ ಮಂದಿ ಸಾಧ್ವಿಯರ ಕಣ್ಣುಗಳಿಂದ ನೀರು ಹರಿಸಿದ, ಎಷ್ಟೋ ಮಂದಿ ಪ್ರಜೆಗಳನ್ನು ಪರಿಪರಿಯಲ್ಲಿ ಗೋಳಾಡಿಸಿದ ಈತ ಜೀವಿಸುವದೆಂದರೆ ಅದು ಭೂಮಿಗೊಂದು ಭಾರ; ಈ ಪಾಪಿಯನ್ನು ಯಾವ ರೀತಿಯಲ್ಲಿ ವಧಿಸಿದರೂ ಅದು ಅಧರ್ಮವಾಗದು."

"ಸತ್ಯಕ್ಕೆ ಜಯ ದೊರೆತಿದೆ." ಈ ಸಲ ಮಾತಾಡಿದವನು ಜ್ಞಾನಾನಂದನಾಗಿದ್ದನು: "ಯಾಕೂಬಖಾನನು ಹಲವು ರೀತಿಗಳಿಂದ ಜನರನ್ನು ಹಿಂಸಿಸಿ

ದ್ದಾನೆ; ಅನೇಕ ಮಂದಿ ಸಾಧ್ವಿಯರನ್ನು ಅಪಮಾನಕ್ಕೆ ಒಳಪಡಿಸಿದ್ದಾನೆ. ಆದರೆ ಸತ್ಯವು ಶಾಶ್ವತವಾದದ್ದು; ಯಾಕೂಬಖಾನನಂಥ ಸಾವಿರ ಮಂದಿ ಧರ್ಮವನ್ನು ಅಡಿಮೇಲು ಮಾಡಲು ಪ್ರಯತ್ನಿಸಿದರೂ, ಆ ಯತ್ನವು ಯಶಸ್ವಿಯಾಗದು. ಆಳುವವರು ನಮ್ಮ ಜನರನ್ನು ಹಿಂಸಿಸಿದರು; ಪೀಡಿಸಿದರು. ಈ ಪೀಡನೆಗಳು ನಿವಾರಣೆಯನ್ನು ಹೊಂದಬೇಕಾದರೆ, ಶಾಸನ ಪದ್ಧತಿಯಲ್ಲಿ ಒಂದು ಪರಿವರ್ತನೆಯುಂಟಾಗಬೇಕಲ್ಲದೆ, ಯಾಕೂಬಖಾನನ ಹತ್ಯೆಯಿಂದ ನಿವಾರಣೆಯುಂಟಾಗದು. ಆದುದರಿಂದ ಈತನ ಮೇಲೆ ನಮಗೆ ಯಾವ ವೈಯಕ್ತಿಕ ವಿದ್ವೇಷವೂ ಇರುವದಿಲ್ಲ. ನಾವು ವಿದ್ರೋಹವನ್ನು ಹೂಡಿರುವದು ಶಾಸನ ಪದ್ಧತಿಯನ್ನು ಅಡಿಮೇಲು ಮಾಡುವದಕ್ಕಾಗಿದೆ. ಈ ಪ್ರಯತ್ನದಲ್ಲಿ ನಾವು ತಕ್ಕಮಟ್ಟಿಗೆ ಯಶಸ್ವಿಗಳಾಗಿದ್ದೇವೆ. ಉಸ್ಮಾನಖಾನನೂ ನಮ್ಮ ಉದ್ದೇಶವನ್ನು ತಿಳಿದು ಜನಹಿತಕ್ಕಾಗಿ ಪ್ರಯತ್ನಿಸುತ್ತಿದ್ದಾನೆ. ಅವನ ಈ ಕೆಲಸವನ್ನು ನಾವು ಅಭಿನಂದಿಸುತ್ತೇವೆ. ಆದರೂ ನಾನು ಆತನಿಗೆ ಎರಡು ಮಾತುಗಳನು ಹೇಳಬಯಸುತ್ತೇನೆ. ಒಬ್ಬ ಮನುಷ್ಯನ ಅಜ್ಞಾನದಿಂದ ಹಲವು ದುರಿತಗಳು ಬಂದೊದಗಬಹುದು; ಆದರೆ ನಾವು ಆ ಮನುಷ್ಯನ ಮಾನಸಾಂತರಕ್ಕಾಗಿ ಪ್ರಯತ್ನಿಸಬೇಕಲ್ಲದೆ, ವೈಯಕ್ತಿಕ ಸೇಡನ್ನು ತೀರಿಸಲು ಹವಣಿಸಬಾರದು. ಈ ರೀತಿಯ ಪ್ರತೀಕಾರಗಳು ಮನುಷ್ಯನಲ್ಲಿರುವ ಮೃಗೀಯ ಬುದ್ಧಿಯ ಬೆಳವಣಿಗೆಗೆ ಅವಕಾಶವನ್ನು ಕಲ್ಪಿಸಿ ಕೊಡುತ್ತವೆ. ನಾವು ಅಕ್ರಮವನ್ನು ಜರುಗಿಸುವದಾದರೂ, ಅದು ಇತರರಿಂದ ಒಂದೊದಗಿದ ಕೇಡನ್ನು ನಿವಾರಿಸಲು ಅವಶ್ಯವಿರುವಷ್ಟು ಮಾತ್ರವಾಗಿರಬೇಕು. ಆ ಮೇರೆಯನ್ನು ಅತಿಕ್ರಮಿಸಿದರೆ ಅದು ಅನೀತಿಯಾಗುತ್ತದೆ."

"ನಿಜ, ಸ್ವಾಮೀಜಿಯವರು ಹೇಳಿದ ನುಡಿಗಳು ನಿಜವು. ಸ್ವಾತಂತ್ರ್ಯ ಭಾಸ್ಕರನ ಉದಯಕಾಲದಲ್ಲಿ ನಾವು ವೈಯಕ್ತಿಕ ವಿದ್ವೇಷದಿಂದ ಅಂಧರಾಗುವದು ಸರಿಯಲ್ಲ. ವಿದ್ವೇಷದ ಬದಲು ನಾವು ಸ್ನೇಹವನ್ನು ತೋರಿಸಬೇಕು; ಆದುದರಿಂದ ಉಸ್ಮಾನ, ನೀನು ಈ ಭೀಕರ ಹತ್ಯೆಯಲ್ಲಿ ಪ್ರವೇಶಿಸದಿರು." ಹೀಗೆ ಸಸ್ನೇಹಪೂರ್ಣವಾಣಿಯಲ್ಲಿ ಫಕೀರ ಹುಸ್ನೇನನು ನುಡಿದನು.

ಉಸ್ಮಾನನು ಆಲೋಚಿಸುತ್ತಾ ನಿಂತನು. ತುಸ ಸಮಯ ಕಳೆದ ಮೇಲೆ ನೆಲದ ಮೇಲೆ ಬಿದ್ದಿದ್ದ ಯಾಕೂಬಖಾನನನ್ನು ನೋಡುತ್ತಾ ಉಸ್ಮಾನನು ಹೀಗೆ ನುಡಿದನು: "ಯಾಕೂಬಖಾನ, ನಿಮ್ಮ ಪ್ರಾಣವನ್ನು ಹೀರಬೇ

ಕೆಂಬ ಭೀಕರ ಪ್ರತೀಕಾರದಿಂದ ನಾನು ಕುದಿಯುತ್ತಿದ್ದೆ; ಆದರೆ ನನಗೆ ಉಪದೇಶಗಳನ್ನು ನೀಡಿ ಬೆಳಕನ್ನು ತೋರಿಸುತ್ತಿರುವ ಫಕೀರಸಾಹೇಬರ ಮತ್ತು ಜನತೆಯ ಸೇವೆಗೆಂದು ತಮ್ಮ ಜೀವನವನ್ನೇ ಸಮರ್ಪಿಸಿದ ಸ್ವಾಮೀಜಿಯವರ ಹೇಳಿಕೆಯಂತೆ ನಿಮ್ಮ ಪ್ರಾಣವನ್ನು ಉಳಿಸಿದ್ದೇನೆ; ನಿಮ್ಮ ಅಸುವನ್ನು ಹೀರದೆ ಬಿಟ್ಟಿದ್ದೇನೆ. ಹೆಚ್ಚಿಗೆ ನುಡಿಯಲು ನನ್ನಿಂದಾಗದು. ದೇವರು ಇನ್ನು ಮೇಲಾದರೂ ನಿಮಗೆ ಸದ್ಬುದ್ಧಿಯನ್ನು ಕೊಡಲಿ!"

"ಉಸ್ಮಾನಖಾನ, ಉಚಿತ ಕೃತ್ಯವಿದು; ಶತ್ರುವಿಗೂ ಸ್ನೇಹವನ್ನು ತೋರಿಸುವದು, ವೈಯಕ್ತಿಕ ವಿದ್ವೇಷವನ್ನು ಮರೆತು ಉನ್ನತವಾದ ಧ್ಯೇಯದ ಕಡೆಗೆ ಗಮಿಸುವದು ಇವುಗಳು ಮಾನುಷ ಧರ್ಮವಾಗಿರುತ್ತವೆ. ಅವುಗಳನ್ನು ಪರಿತ್ಯಜಿಸಿದರೆ ಮನುಷ್ಯನು ಮೃಗಗಳ ಮೆಟ್ಟಿಲುಗಳಿಗೆ ಇಳಿಯುತ್ತಾನೆ." ಜ್ಞಾನಾನಂದನ ಗಂಭೀರವಾಣಿಯು ಹೊರಟಿತು.

ಫಕೀರನು ಶುಭ್ರವಾದ ಅಂಬರಾಂಗಣವನ್ನು ಈಕ್ಷಿಸುತ್ತಾ ಚಿಂತಾಮಗ್ನನಾದನು. ತಾರಾ ವನಿತೆಯರು ನಭೋಮಂಡಲದಲ್ಲಿ ನಿಂತು ಮಂದಸ್ಮಿತಗಳನ್ನು ಹೊರಚಲ್ಲುತ್ತಿದ್ದರು; ಸುಧಾಂಶುವು ನಗುತ್ತಲಿದ್ದನು. ವಾತಾವರಣವು ಪ್ರಶಾಂತವಾದುದಾಗಿದ್ದಿತು. ಸಮರಾಂಗಣದಲ್ಲಿ ಗಾಯಪಟ್ಟು ನರಳುತ್ತಿದ್ದ ಭಟರ ಆಕ್ರೋಶಗಳಲ್ಲದೆ ಇನ್ನಾವುದೂ ಅಲ್ಲಿನ ಶಾಂತತೆಯನ್ನು ಭಂಜಿಸುತ್ತಿರಲಿಲ್ಲ.

"ಬಾನು ತಿಳಿಯಾಗಿದೆ" ಎಂದು ಉಸುರಿದನು ಫಕೀರ ಹುಸ್ಸೇನನು.

"ಅದರಂತೆಯೇ ರೂಪನಗರದ ಅಂಬರವು ಈ ಸತ್ವಪರೀಕ್ಷೆಯ ಅನಂತರ ತಿಳಿಯಾಗಲಿ ಎಂಬುದೇ ನನ್ನ ಹಾರೈಕೆ." ಈ ನುಡಿಗಳು ಜ್ಞಾನಾನಂದನ ತುಟಿಗಳಿಂದ ಹೊರಬಿದ್ದವು.

"ಸ್ವಾಮೀಜೀ, ಸತ್ಯವಿದೆ ಜಗತ್ತಿನಲ್ಲಿ. ಕೊಳದ ನೀರು ಕದಡಿದರೂ ಕೊನೆಗೆ ಅದು ತಿಳಿಯಾಗುತ್ತದೆ. ಅದರಂತೆ ನಾಡು ಭೀಕರ ಅಶಾಂತತೆಯ ಬಿರುಗಾಳಿಯಿಂದ ತುಂಬಿದ್ದರೂ, ಕೊನೆಗೆ ಶಾಂತಿಯನ್ನು ಪಡೆಯದಿರಲಾರದು. ಆ ದಯಾಮಯನು ನಮ್ಮನ್ನು ಕರುಣಿಸಲಿ!"

"ಅಮರಸಿಂಹನೆಲ್ಲಿ? ಅವನಿಗೇನಾದರೂ ವಿಪತ್ತು ಸಂಭವಿಸಿರಬಹುದೆ?" ಚಿಂತಾಮಗ್ನನಾದ ಜ್ಞಾನಾನಂದನು ಉಸುರಿದನು.

"ಅಹುದು, ಅವನೆಲ್ಲಿರುವನೆಂದು ನಾವು ಅರಸಬೇಕಾಗಿದೆ."

"ಕುಮಾರನನ್ನು ಕಾಣದಿದ್ದರೆ ನನ್ನ ಮನಸಿಗೆ ಶಾಂತಿಯು ದೊರಕುವಂತಿಲ್ಲ. ಅವನಿಲ್ಲದಿದ್ದರೆ ನನ್ನ ಬಲಗೈ ಇಲ್ಲದಾದಂತೆಯೇ ಸರಿ." ಜ್ಞಾನಾನಂದನ ಮೋರೆಯ ಮೇಲೆ ಚಿಂತೆಯ ಮುಗಿಲುಗಳು ತೇಲಿದವು. ಅಗ್ನಿ ಪರೀಕ್ಷೆಯ ಘಟ್ಟದಲ್ಲಿ ಸಹಾ ಪ್ರಸನ್ನವಾಗಿದ್ದ ಅವನ ವದನಮಂಡಲದಲ್ಲಿ ಕ್ರೋಧದ ಕಾರಿರುಳು ಗೋಚರಿಸಿತು.

"ಅಮರನೆಲ್ಲಿರುವನೆಂದು ನಾವು ಅರಸೋಣ?'' ಉಸ್ಮಾನನು ಕೇಳಿದ.

"ಅಹುದು, ನಾವು ಆ ಕೆಲಸವನ್ನು ಜಾಗ್ರತೆಯಿಂದ ಮಾಡಬೇಕಾಗಿವೆ; ಇಲ್ಲದಿದ್ದರೆ ಒಂದು ಅಮೂಲ್ಯ ರತ್ನವು ನಷ್ಟವಾಗಿ ಹೋಗಬಹುದು." ಫಕೀರ ಹುಸ್ಸೇನನು ಅಂದನು.

ಆ ರಾತ್ರಿ ಆ ಮೂವರೂ ಕೂಡಿ ಕುಮಾರ ಅಮರಸಿಂಹನನ್ನು ಅರಸಲು ಯುದ್ಧರಂಗದಲ್ಲಿ ಸಂಚರಿಸಹತ್ತಿದರು.

——

## ೨೩ ಕಾಳಗವಾದ ಮೇಲೆ.

ಬೆಳದಿಂಗಳು ಚನ್ನಾಗಿ ಹರಡಿದ್ದಿತು. ತಾರೆಗಳು ಬಾನಿನಲ್ಲಿ ನಿಂತು ನಗುತ್ತಿದ್ದವು. ಸಮರಾಂಗಣದಲ್ಲಿ ಬಿದ್ದಿದ್ದ ನರದೇಹಗಳ ಮಧ್ಯದಲ್ಲಿ ಒಂದು ವ್ಯಕ್ತಿಯು ಏನನ್ನೋ ಹುಡುಕುತ್ತಿದ್ದಿತು. ಬಹು ಸಮಯದವರೆಗೆ ಆ ವ್ಯಕ್ತಿ ಹೀಗೆ ಅರಸುವ ಕೆಲಸದಲ್ಲಿ ನಿರತವಾಗಿದ್ದಿತು. ಆ ವ್ಯಕ್ತಿಗೆ ೨೧-೨೨ ವರುಷಗಳಷ್ಟು ಪ್ರಾಯವಿದ್ದಿರಬಹುದು. ಆ ವ್ಯಕ್ತಿಯ ಚೆಲು ಮೊಗವು ಬೆಳದಿಂಗಳಲ್ಲಿ ಮಿನುಗುತ್ತಿದ್ದಿತು; ಆದರೆ ಅದರಲ್ಲಿ ಪ್ರಸನ್ನತೆಯಿರಲಿಲ್ಲ. ಶೋಕದ ಚಿಹ್ನಗಳು ಆ ಲಲಾಟದ ಮೇಲೆ ಗೋಚರಿಸುತ್ತಿದ್ದವು. ಬಹು ಸಮಯ ತನಕ ಯುದ್ಧರಂಗದಲ್ಲಿ ಹೀಗೆ ಅಲೆದಾಡಿದ ಮೇಲೆ ಒಂದು ಬದಿಯಲ್ಲಿ ರಾಶಿಯಾಗಿ ಬಿದ್ದಿದ್ದ ನರದೇಹಗಳ ಮಧ್ಯದಲ್ಲಿದ್ದ ಒಂದು ಶರೀರವನ್ನು ತೆಗೆದು ನೋಡಿತು. ಆ ದೇಹವು ಪ್ರಜ್ಞಾಶೂನ್ಯವಾದುದಾಗಿದ್ದಿತು. ತರುಣನು ಆ ದೇಹದ ನಾಸಿಕ ರಂಧ್ರಗಳಲ್ಲಿ ತನ್ನ ಬೆರಳುಗಳನ್ನು ಮಡಗಿ ನೋಡಿದನು. ಉಸಿರಾಡಿಸುವುದು ಆ ದೇಹದಲ್ಲಿ ನಿಂತು ಹೋಗಿರಲಿಲ್ಲ. ಇದನ್ನು ತಿಳಿದುಕೊಂಡ ಮೇಲೆ ಆ ತರುಣನ ಮನಸ್ಸು ತುಸ ಸಂತಸವನ್ನು ಪಡೆದಿತು. ನೆಲದ ಮೇಲೆ ಕುಳಿತು ಆ ತರುಣನು ಪ್ರಜ್ಞೆಯಿಲ್ಲದೆ ಬಿದಿದ್ದ ದೇಹವನ್ನು ತನ್ನ ತೊಡೆಯ ಮೇಲೆ ಮಡಗಿಕೊಂಡನು.

ಬಿದ್ದಿದ್ದ ದೇಹದ ಮೋರೆಯನ್ನು ಆ ತರುಣನು ತಾನು ತಂದಿದ್ದ ಶೀತಲ ಜಲದಿಂದ ನೆನಸಿದನು. ಒಂದು ವಸ್ತ್ರವನ್ನು ಒದ್ದೆಮಾಡಿ, ಅದರಿಂದ ಪ್ರಜ್ಞೆಯಿಲ್ಲದೆ ಬಿದ್ದಿದ್ದ ಆ ವ್ಯಕ್ತಿಯ ಅಂಗಾಂಗಗಳನ್ನು ಉಜ್ಜಿದುದಾಯಿತು. ತರುಣನು ಆ ದೇಹವನ್ನು ತನ್ನ ತೊಡೆಗಳ ಮೇಲಿರಿಸಿಕೊಂಡು, ಮೋರೆಯನ್ನು ವೀಕ್ಷಿಸುತ್ತಾ ಕುಳಿತನು. ಆತನ ವದನಮಂಡಲದಲ್ಲಿ ಚಿಂತೆಯ ಕಾರ್ಮುಗಿಲುಗಳು ಸುಳಿದಾಡುತ್ತಿದ್ದವು.

ಕೆಲವು ನಿಮಿಷಗಳು ಗತಿಸಿದವು; ದೇಹಭಾನವಿಲ್ಲದೆ ತರುಣನ ತೊಡೆಯ ಮೇಲಿದ್ದ ವ್ಯಕ್ತಿಗೆ ಪ್ರಜ್ಞೆಯುಂಟಾಗತೊಡಗಿತು. ಅವಯವಗಳು ಚಲನೆಯನ್ನು ಹೊಂದಿದವು. ಶ್ವಾಸೋಚ್ಛ್ವಾಸಗಳ ಗತಿಯು ಕ್ರಮೀಕೃತವಾಯಿತು. ಆತನು ಮೆಲ್ಲನೆ ತನ್ನ ಕಣ್ಣುಗಳನ್ನು ಬಿಚ್ಚಿದನು; ತನ್ನ ಸುತ್ತಲಿನ ಪ್ರದೇಶವನ್ನು ನೋಡಿದನು; ಆದರೆ ಅವನು ತಾನಿರುವದೆಲ್ಲಿ? ಎಂಬುದನ್ನು ತಿಳಿಯಲಿಲ್ಲ. ಅವನ ದೇಹವು ಪ್ರಜ್ಞೆಯನ್ನು ಹೊಂದಿದ್ದರೂ ಮೆದುಳು ಇನ್ನೂ ತನ್ನ ಕೆಲಸವನ್ನು ಪ್ರಾರಂಭಿಸಿರಲಿಲ್ಲ. ಹಿಂದೆ ಜರುಗಿದ ಸಂಭವಗಳೆಲ್ಲ ಅವನ ಮನಶ್ಚಕ್ಷುಸ್ಸುಗಳ ಮುಂದೆ ಸುಳಿದು ಮತ್ತೆ ಪರಾಯವಾದವು. ಕತ್ತಿಗಳನ್ನು ಹಿಡಿದು ಹೋರಾಡುವ ದಂಡಾಳುಗಳು ಪ್ರತ್ಯಕ್ಷರಾದರು; ಒಬ್ಬರು ಇನ್ನೊಬ್ಬರ ಎದೆಗಳನ್ನು ಸೀಳುವ ಭಯಾನಕ ಚಿತ್ರಗಳು ಅವನ ಮನಸ್ಸಿನಲ್ಲಿ ಹೊಳೆದವು. ತಾನು ಶತ್ರುಗಳ ಸಂಗಡ ಹೋರಾಡಿದುದರ ಸ್ಮರಣೆಯು ಅವನ ಚಿತ್ತದಲ್ಲಿ ತೇಲಿತು; ಆದರೆ ಅವೆಲ್ಲವೂ ಅವ್ಯಕ್ತ ಚಿತ್ರಗಳು; ಒಂದು ನೋಟಕ್ಕೂ ಇನ್ನೊಂದಕ್ಕೂ ಬಂಧವಿಲ್ಲ. ಪ್ರಕ್ಷುಬ್ಧವಾದ ಕಡಲಿನಲ್ಲಿ ಎದ್ದೇಳತಕ್ಕ ತರಂಗಗಳಂತೆ ಅವನ ಗತಜೀವನದ ಸ್ಮರಣೆಗಳು ಅವನ ಮನೋದರ್ಪಣದಲ್ಲಿ ಮೂಡಿದವು; ಇನ್ನೊಂದು ಕ್ಷಣದಲ್ಲಿ ಅಳಿದವು. ತನಗೆ ಸ್ನೇಹ-ಮಮತೆಗಳ ಸಿಹಿನೀರನ್ನು ನೀಡಿ ಪರಿಪೋಷಿಸಿದ ಜನನಿಯು ತನ್ನನ್ನು ನೋಡಿ ಕಂಬನಿ ಕರೆಯುತ್ತಿರುವ ಚಿತ್ರವು ಅವನಿಗೆ ಗೋಚರವಾಯಿತು. ತನ್ನ ದರ್ಶನಕ್ಕಾಗಿ ಕಾತರಿಸುತ್ತಿರುವ ನಲ್ಲೆಯ ಪ್ರೇಮಾಲಾಪಗಳು ಅವನ ಕರ್ಣೇಂದ್ರಿಯಗಳಲ್ಲಿ ಪತಿಸಿದವು. ರೋಗಿಯ ತುಟಿಗಳಿಂದ ಅಸ್ಪಷ್ಟವಾದ ಒಂದು ಸ್ವರವು ಹೊರಟಿತು: "ಹೇಮಾ, ಮುದ್ದು ಹೇಮಾ, ನೀನು ನನ್ನ ಮೇಲೆ ಸಿಟ್ಟಾಗದಿರು."

ತರುಣನು ತನ್ನ ತೊಡೆಗಳ ಮೇಲೆ ಶಿರಸ್ಸನ್ನಿಟ್ಟಿದ್ದ ರೋಗಿಯನ್ನು ನೋಡಿದ. ಚಿತ್ತಸ್ವಾಧೀನವಿಲ್ಲದಿದ್ದುದರಿಂದ ಏನ್ನನ್ನೋ ನುಡಿಯುತ್ತಿದ್ದ.

ಅವನಾಡಿದ ಒಂದು ಮಾತು ಇನ್ನೊಂದಕ್ಕೆ ಸಂಬಂಧ ಉಳ್ಳದ್ದಾಗಿರಲಿಲ್ಲ. ರಂಗ ಸ್ಥಳದಲ್ಲಿ ನರ್ತಕಿಯು ಚೆಲ್ಲಿದ ಮಲ್ಲಿಗೆಯ ಮುಗುಳುಗಳಂತೆ ಒಂದು ಮಾತು ಇನ್ನೊಂದನ್ನು ಸ್ಪರ್ಶಿಸದೆ ದೂರವಾಗಿದ್ದವು; ಆದರೂ ಮಲ್ಲಿಗೆಯ ಹೂವಿನಂತೆ ಈ ಮಾತುಗಳು ರೋಗಿಯ ಗತಜೀವನದ ಕಂಪನ್ನು ಹೊರ ಸೂಸುತ್ತಿದ್ದವು. ತರುಣನು ರೋಗಿಯ ಮೋರೆಯನ್ನು ನೋಡಿದ; ಅವನ ಕಣ್ಣುಗಳಲ್ಲಿ ಕಂಬನಿಗಳು ತುಂಬಿದವು ತರುಣನು ಮೃದುವಾಗಿ ಒಂದು ಚುಂಬನ ಮುದ್ರೆಯನ್ನು ರೋಗಿಯ ಹಣೆಯ ಮೇಲೆ ಒತ್ತಿದ. ರೋಗಿಯಾದರೋ ತನ್ನ ಗತಜೀವನದ ಸ್ಮರಣೆಗಳ ಕಡಲಿನಲ್ಲಿ ತೇಲಾಡುತ್ತಿದ್ದ. ಅವನ ಮನಃಶ್ಚಕ್ಷುಸ್ಸುಗಳ ಮುಂದೆ ತನಗೆ ದಾರಿಯನ್ನು ತೋರಿಸಿ ನಾಡಸೇವೆಗೆ ಹಚ್ಚಿದ್ದ ಜ್ಞಾನಾನಂದನು ಪ್ರತ್ಯಕ್ಷನಾದ. ತಾನು ನಾಡಸೇವೆಯ ದೀಕ್ಷೆಯನ್ನು ಪಡೆದು ಮಡದಿ ಮತ್ತು ತಾಯಿ ಇವರನ್ನು ಪರಿತ್ಯಜಿಸಿ ಹೆಣಗಿದ ಚಿತ್ರಗಳು ಅವನ ಮುಂದೆ ಬಂದು ನಿಂತವು. ಹಸಿವು-ನೀರಡಿಕೆಗಳನ್ನು ಲೆಕ್ಕಿಸದೆ ಹೆಣಗಿದುದು, ಜನಜಾಗೃತಿಗಾಗಿ ಊರೂರು ಅಲೆದುದು, ರಾಜದುರ್ಗವು ವಿದ್ರೋಹಿಗಳ ಕರಗತವಾದುದು: ಈ ಎಲ್ಲಾ ದೃಶ್ಯಗಳು ಅವನ ಮನಃಶ್ಚಕ್ಷುಸ್ಸುಗಳ ಮುಂದೆ ಕುಣಿದಾಡಿದವು. ಒಮ್ಮೆ ಹೊಳೆದು ಮತ್ತೆ ಮಾಯವಾದವು. ರೋಗಿಯ ಸುಬೋಧ ಮನಸ್ಸು ಇನ್ನೂ ಜಾಗೃತಿಯನ್ನು ಪಡೆದಿರಲಿಲ್ಲ. ಅವನ ಉಪ ಬೋಧ ಮನಸ್ಸು ಮಾತ್ರ ಕೆಲಸಮಾಡುತ್ತಿದ್ದಿತು. ಈ ಉಪಬೋಧ ಮನಸ್ಸಿನಲ್ಲಿ ರೋಗಿಯ ಗತಜೀವನದ ಸಂಭವಗಳು ತೇಲುತ್ತಿದ್ದವು. ಸುಬೋಧ ಮನಸ್ಸು ಜಾಗೃತಿಯನ್ನು ಪಡೆಯದಿದ್ದುದರಿಂದ ತಾನಿರುವುದೆಲ್ಲಿ, ತನ್ನ ಅವಸ್ಥೆಯೇನು? ಎಂಬ ಸಂಗತಿಗಳ ತಿಳಿವು ಅವನಿಗಿರಲಿಲ್ಲ. ತಾನೊಂದು ಜೀವಿಯೆಂಬುದಲ್ಲವೆ ಅದಕ್ಕಿಂತ ಹೆಚ್ಚಾಗಿ ವ್ಯಕ್ತಿತ್ವದ ಬೋಧವು ಆಗ ಅವನಲ್ಲಿರಲಿಲ್ಲ.

ಕ್ರಮೇಣ ರೋಗಿಯ ಸುಬೋಧ ಮನಸ್ಸು ಜಾಗೃತಿಯನ್ನು ಪಡೆಯಿತು. ಅವನ ಚಿತ್ತವು ತನ್ನ ಸದ್ಯದ ಪರಿಸ್ಥಿತಿಯೇನೆಂಬುದನ್ನು ತಿಳಿದುಕೊಳ್ಳಲು ಪ್ರಯತ್ನಿಸಿತು. ಶರೀರವೆಲ್ಲ ನೋಯುತ್ತಿದ್ದಂತೆ ಅವನಿಗೆ ಭಾಸವಾಯಿತು. ಅವನು ಮೆಲ್ಲನೆ ತಲೆಯನ್ನು ಮೇಲಕ್ಕೆತ್ತಿ ಆ ತರುಣನ ಮೋರೆಯನ್ನು ನೋಡಿದನು. ಆ ಮೇಲೆ ಅವನು ತನ್ನ ದೃಷ್ಟಿಯನ್ನು ಬೇರೆ ಕಡೆಗೆ ತಿರುಗಿಸದೆ ಆ ತರುಣನನ್ನು ಹೀಗೆ ಪ್ರಶ್ನಿಸಿದನು: "ನೀನಾರು?"

"ನಾನು ಹೇಮಚಂದ್ರ!"

"ಈಗ ನಾವಿರುವುದೆಲ್ಲಿ?"

"ಸಂಗ್ರಾಮಭೂಮಿಯಲ್ಲಿ!"

ಸಂಗ್ರಾಮ ಭೂಮಿಯಲ್ಲೆಂದು ಹೇಮಚಂದ್ರನು ಉಸುರುತ್ತಲೆ ರೋಗಿಗೆ ತನ್ನ ಸ್ಥಿತಿಯನ್ನು ತಿಳಿದುಕೊಳ್ಳಲು ಹೆಚ್ಚು ಹೊತ್ತು ಬೇಕಾಗಿ ಬರಲಿಲ್ಲ. ಯುದ್ಧಭೂಮಿಯಲ್ಲಿ ಶತ್ರುಗಳನ್ನು ಭೇದಿಸುತ್ತಾ ಮುಂದೆ ಸಾಗುತ್ತಿದ್ದಾಗ, ಒಬ್ಬ ಪಠಾಣ ಸೈನಿಕನ ಕತ್ತಿಯು ತನ್ನ ಮೇಲೆ ಬಿದ್ದುದು ಅವನ ಸ್ಮೃತಿಪಥದಲ್ಲಿ ಪ್ರವೇಶಿಸಿತು; ತಾನು ತಲೆತಿರುಗಿದಂತಾಗಿ ನೆಲದಲ್ಲಿ ಬಿದ್ದುದು ನೆನಪಾಯಿತು. ಆ ಮೇಲೆ ಏನೆಲ್ಲಾ ನಡೆದಿತೆಂಬುದು ಅವನಿಗೆ ತಿಳಿಯದು. ಅವನು ಹೇಮಚಂದ್ರನ ಕೈಗಳೆರಡನ್ನೂ ಹಿಡಿದುಕೊಂಡು ಪ್ರಶ್ನಿಸಿದ: "ಸತ್ವಪರೀಕ್ಷೆಯು ಪೂರ್ಣವಾಯಿತೇ?"

"ಹೌಂ," ಎಂದು ಉತ್ತರ ಬಂದಿತು ವಿಚಾರಮಗ್ನ ಹೇಮಚಂದ್ರನಿಂದ.

"ಸ್ವಾತಂತ್ರ್ಯಯಜ್ಞದ ಪೂರ್ಣಾಹುತಿಯು ಜರುಗಿತೇ? ಯಾರು ವಿಜಯಿಗಳಾದರು? ನಾಡಸೇವೆಯ ಸೇವಕರನ್ನು ಜಯಲಕ್ಷ್ಮಿಯು ಪರಿತ್ಯಜಿಸಿದಳೇ?"

"ಇಲ್ಲ." ಹೇಮಚಂದ್ರನು ನುಡಿದ: "ಸತ್ಯವೇ ಜಯವನ್ನು ಹೊಂದಿತು. ನಮ್ಮ ನಾಡಿನಲ್ಲಿ ಸ್ವಾತಂತ್ರ್ಯಸೂರ್ಯನು ಉದಯವನ್ನು ಹೊಂದಿದನು ಕದನದಲ್ಲಿ ಪಠಾಣರು ಪರಾಜಯವನ್ನು ಹೊಂದಿದರು."

ರೋಗಿಯ ಎದೆಯಿಂದ ಒಂದು ದೀರ್ಘ ನಿಶ್ವಾಸವು ಹೊರಟಿತು; ಅವನ ಎದೆಯು ಹಗುರವಾಯಿತು; ಮನದಲ್ಲಿ ತುಂಬಿದ್ದ ಚಿಂತೆಯ ಕಾರುಳು ಹಿಂದಕ್ಕೆ ಸರಿದಿತು; ಮೋರೆಯು ಪ್ರಸನ್ನಭಾವವನ್ನು ಪಡೆಯಿತು. ಮೃದುಸ್ವರದಲ್ಲಿ ಅವನು ನುಡಿದ: "ನನ್ನ ಎದೆಯು ಹಗುರಾಯಿತು. ಸ್ವಾತಂತ್ರ್ಯಭಾಸ್ಕರನ ಉದಯವನ್ನು ನೋಡುವ ಭಾಗ್ಯವು ನನಗೆ ದೊರೆಕಿತು. ಇನ್ನು ಹರುಷದಿಂದ ಅಸುವನ್ನು ನೀಗುವೆನು."

"ಇಲ್ಲ, ನೀವೀಗ ಮಡಿಯಕೂಡದು. ಸ್ವಾತಂತ್ರ್ಯವನ್ನು ಮರಳಿ ಪಡೆದೆವು; ಆದರೆ ಅದನ್ನು ಸಂರಕ್ಷಿಸುವ ಭಾರವು ತಮ್ಮಂಥ ಧೀರಕೇಸರಿಗಳ ಹೆಗಲಮೇಲೆ ಬಿದ್ದಿದೆ. ಆದುದರಿಂದ ನಿಮ್ಮ ಪ್ರಾಣವು ಅಮೂಲ್ಯವಾದುದು." ಕಾತರದ ಸ್ವರದಲ್ಲಿ ಹೇಮಚಂದ್ರನು ಹೇಳಿದ.

ಹೇಮಚಂದ್ರನು ರೋಗಿಯನ್ನು ಎಬ್ಬಿಸಿ ಅವನ ತುಟಿಗಳಿಗೆ ನೀರು ತುಂಬಿದ ತಂಬಿಗೆಯನ್ನು ಹಿಡಿದ. ರೋಗಿಯ ಎಡಗೈಯು ಹೇಮಚಂದ್ರನ

ಕೊರಳನ್ನು ಸುತ್ತಿತು. ಎರಡು ಗುಟುಕು ನೀರು ಕುಡಿದಾದ ಮೇಲೆ ರೋಗಿಯು ಹೇಳಿದ: "ಹೇಮಚಂದ್ರ, ನಿನ್ನ ದೇಹವು ಬಹು ಕೋಮಲವಾಗಿದೆ."

ಹೇಮಚಂದ್ರನು ಮಾತಾಡಲಿಲ್ಲ.

ರೋಗಿಯು ತನ್ನ ನುಡಿಗಳನ್ನು ಮುಂದುವರಿಸಿದ: "ನಿನ್ನ ದೇಹ ಪ್ರಕೃತಿಯು ಗಂಡಸರಂತಿಲ್ಲ. ನೋಡು, ಒಂದು ಸಂದೇಹವು ನನ್ನಲ್ಲುದಿಸಿದೆ."

"ಏನದು?" ಹೇಮಚಂದ್ರನು ತನ್ನ ದೃಷ್ಟಿಯನ್ನು ಅವನ ಕಡೆಗೆ ಚಲ್ಲಿದ.

"ನೀನೊಬ್ಬ ಹೆಂಗಸು ಇರುವಿಯೆಂದು ನನ್ನ ಮನಸ್ಸು ನುಡಿಯುತ್ತಲಿದೆ. ಕಂಠಸ್ವರವನ್ನು ಎಲ್ಲಿಯೋ ಕೇಳಿದಂತಿದೆ."

"ನೀವು ಕನಸು ಕಂಡು ಮಾತಾಡುತ್ತಿರುವಿರಿ." ನಗುತ್ತಾ ಹೇಮ ಚಂದ್ರನು ಹೇಳಿದನು.

"ಇಲ್ಲ. ಹೇಮಚಂದ್ರ, ನನ್ನ ಮನಸ್ಸಿನಲ್ಲಿ ಹಾಗೆ ಹೊಳೆದಿತು." ರೋಗಿಯು ಹೇಮಚಂದ್ರನ ಭುಜವನ್ನು ಹಿಡಿದು ಎದ್ದು ಕುಳಿತುಕೊಳ್ಳಲು ಪ್ರಯತ್ನಿಸಿದ. ಆಗ ರೋಗಿಯ ಹಸ್ತವು ಹೇಮಚಂದ್ರನ ಮಸ್ತಕಕ್ಕೆ ತಗಲಿತು. ಹೇಮಚಂದ್ರನ ತಲೆಯನ್ನು ಆವರಿಸಿದ್ದ ಮುಂಡಾಸವು ಸಡಿಲಾಗಿದ್ದುದರಿಂದ ರೋಗಿಯ ಕರವು ಹೇಮಚಂದ್ರನ ಶಿರಸ್ಸನ್ನು ಸ್ಪರ್ಶಿಸಿದೊಡನೆಯೇ ಅದು ಬಿಚ್ಚಿಹೋಗಿ ಕೆಳಗುರುಳಿತು. ಹೇಮಚಂದ್ರನ ತಲೆಯ ಮೇಲೆ ಉದ್ದವಾದ ಕುಂತಳವಿರುವುದನ್ನು ರೋಗಿಯು ನೋಡಿದ. ಹೇಮಚಂದ್ರನ ಮೋರೆಯ ಮೇಲೆ ಪರಿಭ್ರಮ ಮತ್ತು ಲಜ್ಜೆಗಳು ಮೂಡಿದವು. ವಿಸ್ಮಯದಿಂದ ರೋಗಿಯು ಹೇಮಚಂದ್ರನ ಹೆಗಲಿನಿಂದ ತನ್ನ ಕೈಯನ್ನು ತೆಗೆದ. ಈ ಮಾತುಗಳು ಅವನ ತುಟಿಗಳಿಂದ ಉದುರಿದವು. "ನೀನಾರು?"

ಹೇಮಚಂದ್ರನು ಮಾತಾಡಲಿಲ್ಲ. ಅವನ ನೇತ್ರಗಳಲ್ಲಿ ಅಶ್ರುಕಣಗಳು ತುಂಬಿದವು. ಮುತ್ತಿನ ಮಣಿಗಳಂತಿದ್ದ. ಬಾಷ್ಪಕಣಗಳು ಅವನ ಸುಂದರ ಕಪೋಲಗಳನ್ನು ತೊಯ್ಸಿದವು. ಗದ್ಗದಸ್ವರದಲ್ಲಿ ಅವನು ಹೇಳಿದ: "ನೀವು ನನ್ನನ್ನು ಮರೆತಿರಾ?"

"ನೀನಾರು? ಹೇಮಾ!" ಆಶ್ಚರ್ಯದಿಂದ ನುಡಿದನು ರೋಗಿ.

"ಅಹುದು; ನಾನು ನಿಮ್ಮ ಹೇಮಳಿರುತ್ತೇನೆ."

"ಹೇಮಾ, ನೀನೀ ಭಯಂಕರ ಪ್ರದೇಶಕ್ಕೆ ಏಕೆ ಬಂದೆ?"

"ನಾಡದೇವಿಯ ಸೇವೆಯನ್ನು ಮಾಡಬೇಕೆಂಬ ಆಕಾಂಕ್ಷೆಯು ನನ್ನನ್ನು

ಈ ಕೆಲಸಕ್ಕೆ ಪ್ರೇರಿಸಿತು. ಅದಕ್ಕಾಗಿ ಗಂಡಸುವೇಷವನ್ನು ಧರಿಸಿದೆ; ನನ್ನ ಕೆರಿಯ ಸೇವೆಯನ್ನು ಸಲ್ಲಿಸಿದೆ. ಇದು ನಿಮ್ಮ ದೃಷ್ಟಿಯಲ್ಲಿ ಅಪರಾಧವೆನಿಸು ತ್ತಿದ್ದರೆ ನನ್ನನ್ನು ಕ್ಷಮಿಸಬೇಕು."

"ಮುದ್ದು ಹೇಮಾ," ರೋಗಿಯು ನುಡಿದ: "ಈ ಧೈರ್ಯಸಾಹಸಗಳು ನಿನ್ನಲ್ಲಿರುವವೆಂದು ನಾನು ಭಾವಿಸಿರಲಿಲ್ಲ. ನಾಡದೇವಿಯ ಸೇವೆಯಲ್ಲಿ ನೀನು ಭಾಗವಹಿಸಿದುದಕ್ಕೆ ನಾನು ಅಭಿನಂದಿಸುತ್ತೇನೆ."

ರೋಗಿಯು ಯಾರೆಂಬುದು ಓದುಗರಿಗೆ ತಿಳಿದಿರಬಹುದು. ಅವನು ಜ್ಞಾನಾನಂದನ ಬಲಗೈಯಂತಿದ್ದ ಕುಮಾರ ಅಮರಸಿಂಹನಾಗಿದ್ದನು. ಅಮರ ಸಿಂಹನುಗಾಯಪಡೆದು ಯುದ್ಧರಂಗದಲ್ಲಿ ಪತಿಸಿದ ವೃತ್ತಾಂತವನ್ನು ಓದುಗರು ಕಳೆದ ಪರಿಚ್ಛೇದದಲ್ಲಿ ತಿಳಿದುಕೊಂಡಿರಬಹುದು; ಆದರೆ ಆ ಭೀಕರ ಕಾಳಗದಲ್ಲಿ ವಿದ್ರೋಹಿಗಳು ಘೋರ ರೀತಿಯಲ್ಲಿ ಕಾದಾಡುತ್ತಿದ್ದುದರಿಂದ, ಅಮರಸಿಂಹನು ಗಾಯಪಡೆದು ಬಿದ್ದುದು ಯಾರ ಲಕ್ಷ್ಯಕ್ಕೂ ಬರಲಿಲ್ಲ ಅಮರಸಿಂಹನು ಅಪಾಯಕ್ಕೆ ಒಳಗಾಗಿರುವನೆಂಬುದನ್ನು ಎಲ್ಲರಿಗಿಂತಲೂ ಮೊದಲು ಅರಿತವನು ಹೇಮಚಂದ್ರನಾಗಿದ್ದನು. ಹೇಮಚಂದ್ರನು ಹಿಂದೆ ಹೇಳಿದಂತೆ ಅಮರಸಿಂ ಹನನ್ನು ಸಮರಾಂಗಣದಲ್ಲಿ ಹುಡುಕಿದನು. ಅವನಿಗೆ ಅಮರಸಿಂಹನು ಹೇಗೆ ದೊರೆಕಿದನೆಂಬುದೂ, ಹೇಮಚಂದ್ರನು ಅವನನ್ನು ಮೃತ್ಯುಮುಖದಿಂದ ಯಾವ ಪರಿಯಲ್ಲಿ ಶುಶ್ರೂಷಿಸಿ ರಕ್ಷಿಸಿದನೆಂಬುದೂ ನಮಗೆ ತಿಳಿದೇ ಇದೆ.

ಹೇಮಚಂದ್ರನು ಯಾರೆಂಬುದನ್ನು ಇಲ್ಲಿ ವಿವರಿಸಬೇಕಾಗಿಲ್ಲ. ಹೇಮ ಚಂದ್ರನು ಪುರುಷವೇಷವನ್ನು ಧರಿಸಿದ ಹೇಮಾವತಿಯಾಗಿದ್ದಳು. ಹೇಮಾ ವತಿಯು ಕುಮಾರ ಅಮರಸಿಂಹನ ಮಡದಿಯಿದ್ದಳೆಂಬ ಸಂಗತಿಯು ವಾಚ ಕರ ನೆನಪಿನಲ್ಲಿರಬಹುದು. ಮಡದಿಯು ಕುಮಾರನನ್ನು ಮೃತ್ಯುಮುಖದಿಂದ ರಕ್ಷಿಸಿದಳು. ಪತ್ನಿಯು ಜರುಗಿಸಿದ ಸಾಹಸಗಳನ್ನು ತಿಳಿಯಲು, ಅಮರಸಿಂ ಹನು ಅವಳ ಬಗ್ಗೆ ಅಭಿಮಾನವನ್ನು ತಾಳಿದನು. ಅವನು ತನ್ನ ಬಾಹುಗಳಿಂದ ಹೇಮಳನ್ನು ಅಪ್ಪಿಕೊಂಡು ಸ್ನೇಹಪೂರ್ಣವಾಣಿಯಲ್ಲಿ ಹೀಗೆ ಹೇಳಿದ: "ಹೇಮಾ, ನನ್ನ ಮನದ ರಾಣೀ, ನಿನ್ನ ಈ ಉಪಕಾರವನ್ನು ಯಾವ ರೀತಿ ಯಲ್ಲಿ ತೀರಿಸಲಿ? ನಿನ್ನ ಈ ಧೈರ್ಯ ಸಾಹಸಗಳನ್ನು ದರ್ಶಿಸುವಾಗ ನನ್ನ ಎದೆಯು ಹಿಗ್ಗುತ್ತಲಿದೆ ನಿಜವಾಗಿಯೂ ನೀನು ಒಬ್ಬ ವೀರ ಮಹಿಳೆ ಇರುವೆ."

"ನನಗೆ ದಾರಿಯನ್ನು ತೋರಿಸಿದವರು ನೀವು! ನೀವು ನನಗೆ ನಾಡ

ಸೇವೆಯ ಮಂತ್ರವನ್ನು ಉಪದೇಶಿಸಿದಿರಿ. ನಿಮ್ಮ ಈ ಹೊಗಳಿಕೆಗಳಿಗೆ ನಾನು ಪಾತ್ರಳಲ್ಲ. ಅವುಗಳೆಲ್ಲ ನಿಮಗೇ ಸಲ್ಲಬೇಕಾಗಿವೆ." ಹೇಮಳು ಹೀಗೆ ತನ್ನ ನಲ್ಲನ ಕಿವಿಗಳಲ್ಲಿ ಮಂತ್ರಿಸಿದಳು.

"ದೇವಿ, ನಿನ್ನ ಈ ನುಡಿಗಳು ನಿನ್ನ ಯೋಗ್ಯತೆಯನ್ನು ಸಾರುತ್ತವೆ. ನನಗೆ ಬೇಕಾದುದು ನಿನ್ನ ಕೃಪೆ; ಮತ್ತು ನಿನ್ನ ಪ್ರೇಮ." ಅವಳ ಕಣ್ಣುಗಳನ್ನು ನೋಡುತ್ತಾ ಕುಮಾರನು ಹೇಳಿದ.

ಹೇಮಳು ಮಾತಾಡಲಿಲ್ಲ ಎರಡೂ ಮೋರೆಗಳು ಒಂದುಗೂಡಿದವು. ಎರಡೂ ತುಟಿಗಳು ಒಂದುಸೇರಿದವು. ಎರಡೂ ಎದೆಗಳಲ್ಲಿ ಹರಿಯುತ್ತಲಿದ್ದ ಪ್ರೇಮವಾಹಿನಿಯು ಒಂದುಗೂಡಿತು. ನಲ್ಲ-ನಲ್ಲೆಯರು ಪ್ರೇಮಪೀಯೂಷವನ್ನು ಸವಿಯತೊಡಗಿದರು. ಅವರ ಎದೆಗಳಿಂದ ನಿಃಶಬ್ದವಾಗಿ ಹರಿದು ಬರುತ್ತಲಿದ್ದ ಪ್ರೇಮಗಾನವನ್ನು ಮಾರುತನು ದೂರದ ನಾಡುಗಳಿಗೆ ಒಯ್ಯುತಲಿದ್ದನು. ಹಿಮಾಂಶುವು ಗಗನಪಥದಲ್ಲಿ ನಿಂತು ಇಳೆಯಲ್ಲಿ ಜರುಗುತ್ತಿದ್ದ ಪ್ರೇಮನಾಟಕವನ್ನು ದರ್ಶಿಸುತ್ತಿದ್ದನು. ಅಲ್ಲಲ್ಲಿ ತೇಲುತ್ತಿದ್ದ ಮುಗಿಲು ಪರೆದೆಗಳ ಮರೆಯಲ್ಲಿ ತಾರಾವನಿತೆಯರು ಈ ದೃಶ್ಯವನ್ನು ಇಣಿಕಿನೋಡುತ್ತಿದ್ದರು.

"ಏನೋ ಸಪ್ಪಳವಾಗುತ್ತಿದೆ; ಯಾರೋ ಈ ಕಡೆಗೆ ಬರುವಹಾಗಿದೆ" ಈ ನುಡಿಗಳನ್ನಾಡಿದವಳು ಹೇಮಳಾಗಿದ್ದಳು. ಅವಳು ಅಮರಸಿಂಹನಿಂದ ಸ್ವಲ್ಪ ದೂರಕ್ಕೆ ಸರಿದು ನಿಂತಳು.

"ಯಾರಿರಬಹುದು?" ಎಂದು ಕುಮಾರನು ಪ್ರಶ್ನಿಸಿದ.

ಕಾಲು ಹೆಜ್ಜೆಗಳ ಸಪ್ಪಳವು ವ್ಯಕ್ತವಾಗಿ ಕೇಳಬರತೊಡಗಿತು. ಬರುತ್ತಿದ್ದವರು ಯಾರೆಂಬುದನ್ನು ತಿಳಿಯಲು ಉತ್ಸುಕನಾದ ಅಮರಸಿಂಹನು ಆ ಸದ್ದು ಕೇಳಿ ಬರುತ್ತಿದ್ದ ಸ್ಥಳದ ಕಡೆಗೆ ತನ್ನ ದೃಷ್ಟಿಯನ್ನು ಚಲ್ಲಿದನು. ಮೂರು ಮಂದಿ ಅವನಿದ್ದಲ್ಲಿಗೆ ಬರುತ್ತಿದ್ದುದು. ಆವನ ದೃಷ್ಟಿಯಲ್ಲಿ ಪತಿಸಿತು. ಅವರನ್ನು ಅವನು ಸೂಕ್ಷ್ಮವಾಗಿ ನೋಡಿದ. ಅವರು ಬೇರೆ ಯಾರೂ ಆಗಿರಲಿಲ್ಲ. ಜ್ಞಾನಾನಂದ, ಫಕೀರ ಹುಸ್ಸೇನ ಮತ್ತು ಉಸ್ಮಾನಖಾನ ಎಂಬವರೇ ಆ ಮೂರು ಮಂದಿಯಾಗಿದ್ದರು. ಅಮರಸಿಂಹನು ಜ್ಞಾನಾನಂದನ ಕಣ್ಣುಗಳಲ್ಲಿ ಬೀಳಲು ಆ ಸಂನ್ಯಾಸಿಯ ವದನದಾವರೆಯು ಅರಳಿತು. ಅವನು ಸ್ನೇಹದಿಂದ ಕುಮಾರನನ್ನು ಅಪ್ಪಿಕೊಂಡನು. ಕುಮಾರನ ಬೆನ್ನಮೇಲೆ ಅವನು ತನ್ನ ಕೈಯನ್ನು ಆಡಿಸುತ್ತಾ ಹೀಗೆ ಹೇಳಿದನು: "ಕುಮಾರ, ನಿನ್ನನ್ನು ಕಾಣದೆ

ನಾವು ಬಹು ಬೇಸರಪಟ್ಟೆವು; ನಿನಗೆ ಏನಾದರೂ ಅಪಾಯಸಂಭವಿಸಿರಬಹು ವೆಂಬ ಶಂಕೆಯಿಂದ ಭಯಪಟ್ಟೆವು."

"ನಿಜ, ನಾನು ಅಪಾಯಕ್ಕೊಳಗಾಗಿದ್ದೆ. ಹೇಮಳು ನನ್ನನ್ನು ಆ ಸಂಕಟದಿಂದ ಪಾರು ಮಾಡಿದಳು."

"ಹೇಮಳೆಂದರೆ ಯಾರು?" ಈ ಪ್ರಶ್ನೆಯು ಫಕೀರ ಹುಸ್ಸೇನನ ತುಟಿಗಳಿಂದ ಉದುರಿತು. ದೂರ ನಿಂತಿದ್ದ ಹೇಮಳ ಕಡೆಗೆ ಅಮರಸಿಂಹನು ತನ್ನ ಬೆರಳನ್ನು ತೋರಿಸಿದ. ಹೇಮಳು ಲಜ್ಜೆಯಿಂದ ತನ್ನ ಶಿರವನ್ನು ಬಾಗಿಸಿದಳು.

"ತಾಯೀ, ನೀನು ದುರ್ಗೆಯ ಅವತಾರದಂತಿದೆ. ನಾಡಸೇವೆಯಲ್ಲಿ ನೀನು ತೋರಿಸಿದ ಧೈರ್ಯ-ಸಾಹಸಗಳು ಅನುಪಮವಾದವುಗಳು. ನಮ್ಮ ಇಂದಿನ ವಿಜಯಕ್ಕೆ ಕಾರಣರು ನೀವೆಲ್ಲರೂ ಆಗಿರುತ್ತೀರಿ. ನೀನೂ ಭೈರವಿಯೂ ತೋರಿಸಿದ ಸಾಹಸಗಳನ್ನು ಎಂದಿಗೂ ಮರೆಯಲು ಸಾಧ್ಯವಿಲ್ಲ. ತಂಗೀ, ನಾನು ನಿನ್ನನ್ನು ಹೃತ್ಪೂರ್ವಕವಾಗಿ ವಂದಿಸುತ್ತೇನೆ."

"ಮಹಾರಾಜ, ವಂದಿಸಬೇಕಾದವರು ತಾವಲ್ಲ ನಾನಾಗಿರುತ್ತೇನೆ. ನನ್ನಂಥ ಪಾಮರಳ ಎದೆಯಲ್ಲಿ ನವಚೈತನ್ಯವನ್ನು ಊದಿದವರು ತಾವು. ತಾವು ರೂಪನಗರದ ಉಸಿರಿನಂತಿರುತ್ತೀರಿ. ಆದುದರಿಂದ ತಮ್ಮಂಥ ಮಹಾತ್ಮರನ್ನು ವಂದಿಸುವದು ನನ್ನ ಮೊದಲಿನ ಕರ್ತವ್ಯವಾಗಿದೆ." ಈ ಮಾತುಗಳು ಮುಗಿದೊಡನೆಯೇ ಹೇಮಾವತಿಯು ತನ್ನ ಮಸ್ತಕವನ್ನು ಜ್ಞಾನಾನಂದನ ಚರಣಗಳಲ್ಲಿ ಮಡಗಿದಳು. ಆ ಯೋಗಿವರ್ಯನು ಹೇಮಾವತಿಯನ್ನು ಹಿಡಿದೆತ್ತಿ ಹೀಗೆ ಆಶೀರ್ವದಿಸಿದ:"ತಂಗೀ, ನೀನು ಆರ್ಯಮಹಿಳೆಯರಿಗೆ ಆದರ್ಶಪ್ರಾಯಳಾಗಿರು."

"ಫಕೀರಸಾಹೇಬ, ಇಲ್ಲಿಗೇ ನಮ್ಮ ಕೆಲಸಗಳು ಮುಗಿದಿಲ್ಲ. ನಾವು ಮಾಡಬೇಕಾಗಿರುವ ಅನಂತೋದ್ಯಮಗಳ ಪ್ರಾರಂಭ ಘಟ್ಟವು ಇದಾಗಿದೆ. ಈ ವಿಜಯದಿಂದ ರೂಪನಗರದಲ್ಲಿ ಪಠಾಣರ ಆಳ್ವಿಕೆಯು ಅಳಿದಿತೆಂದು ಹೇಳಬಹುದು. ಇನ್ನು ಇಲ್ಲಿ ನಮ್ಮ ಅಧಿಕಾರವನ್ನು ಸ್ಥಿರಪಡಿಸಬೇಕಾಗಿದೆ. ನಮ್ಮದೇ ಆದ ಒಂದು ಆಡಳಿತವನ್ನು ನಾವಿಲ್ಲಿ ಸ್ಥಾಪಿಸಬೇಕು. ಈ ಕೆಲಸದಲ್ಲಿ ನಮಗೆ ಅಗತ್ಯವಾದ ನಿಮ್ಮ ಸಹಾಯ-ಸಲಹೆಗಳನ್ನು ನೀವು ನೀಡಬೇಕು. ನಾನು ಸ್ಥಾಪಿಸಲಿಚ್ಛಿಸುವದು ಒಂದು ಹಿಂದೂ ರಾಜ್ಯವನ್ನಲ್ಲ; ಸತ್ಯ-ನೀತಿಗಳ ಪಥದಲ್ಲಿ ಸಂಚರಿಸತಕ್ಕ ಪ್ರತಿಯೊಬ್ಬ ಮಾನವನಿಗೂ ಈ ರಾಜ್ಯದಲ್ಲಿ ಸಮಾವಕಾಶವಿರಬೇಕೆಂಬುದೇ ನನ್ನ ಆಕಾಂಕ್ಷೆ. ಕೆಲವರು ಇಸ್ಲಾಂ ಧರ್ಮವನ್ನು ಅಡಿಮೇಲು

ಮಾಡುವದಾಗಿದೆ ನನ್ನ ಈ ಪ್ರಯತ್ನಗಳ ಉದ್ದೇಶವೆಂದು ಭಾವಿಸಿರಬಹುದು: ಆದರೆ ವಾಸ್ತವಾಂಶವು ಅದಲ್ಲ; ಇಸ್ಲಾಂ ಧರ್ಮವನ್ನು ನಾನೂ ಪೂಜ್ಯದೃಷ್ಟಿಯಿಂದ ನೋಡುತ್ತಿದ್ದೇನೆ. ಪರಹಿಂಸೆಗೆ ಉದ್ಯುಕ್ತರಾಗದೆ ಇರುವ ಮುಸ್ಲೀಮರೊಡನೆ ನನಗೆ ಹಗೆತನವಿಲ್ಲ. ಸತ್ಯ-ನೀತಿಗಳ ತಳಹದಿಯಿಲ್ಲದಿರತಕ್ಕ ಆಡಳಿತವನ್ನು ನಿರ್ಮೂಲಗೊಳಿಸುವವೇ ನನ್ನ ಉದ್ದೇಶವು. ಈ ನನ್ನ ಉದ್ದೇಶವು ಈಗ ಸಫಲತೆಯನ್ನು ಹೊಂದಿದೆ. ನವಜನಾಂಗವನ್ನು ನಿರ್ಮಿಸುವ ಉದ್ಯಮದಲ್ಲಿ ಎಲ್ಲರೂ ನಮಗೆ ಸಹಾಯ-ಸಲಕರಣೆಗಳನ್ನು ನೀಡಬೇಕಾಗಿದೆ. ಆದುದರಿಂದ ಫಕೀರಸಾಹೇಬ, ನಾನು ತಮ್ಮ ಸಹಾಯವನ್ನು ಯಾಚಿಸುವೆನು.

"ಸ್ವಾಮೀಜೀ," ಫಕೀರನ ಮಧುರಸ್ವರವು ಹೊರಟಿತು: "ನನ್ನ ಇದುವರೆಗಿನ ವರ್ತನೆಗಳಿಂದ ನನ್ನ ನೀತಿಯೇನೆಂಬುದು ನಿಮಗೆ ವ್ಯಕ್ತವಾಗಿರಬಹುದು. ನಿಮ್ಮ ಸ್ವಾತಂತ್ರ್ಯಯುದ್ಧದಲ್ಲಿ ನಾನು ಪ್ರತ್ಯಕ್ಷ ಭಾಗವನ್ನು ವಹಿಸಲಿಲ್ಲವಾದರೂ ನಿಮ್ಮ ಪ್ರಯತ್ನಗಳಿಗೆ ನನ್ನ ಧಾರ್ಮಿಕ ಬೆಂಬಲವಿದ್ದಿತು. ಜನಹಿತವೆನಿಸಿದ ಯಾವ ಕೆಲಸದಲ್ಲಿಯೂ ನನ್ನ ಕೈಲಾದ ಸಹಾಯವನ್ನು ಮಾಡಲು ನಾನು ಸಿದ್ಧನಾಗಿರುತ್ತೇನೆ. ಸ್ವಾಮೀಜಿ, ನಿಮ್ಮ ಉದ್ದೇಶವು ನನಗೆ ಮಾನ್ಯವಿದೆ. ಈ ಎರಡು ಸಮುದಾಯಗಳು ಪರಸ್ಪರರು ಕಾದಾಡುತ್ತಿರುವದನ್ನು ನಿಲ್ಲಿಸಿ ಸೌಹಾರ್ದ ಮತ್ತು ಸ್ನೇಹಗಳಿಂದ ಪರಸ್ಪರರು ನೋಡುತ್ತಿರುವಂತೆ ಮಾಡಬೇಕೆಂಬದು ನನ್ನ ಜೀವನದ ಆಕಾಂಕ್ಷೆಯಾಗಿದೆ. ರೂಪನಗರದಲ್ಲಿ ರಾಮದೇವಾಲಯವನ್ನು ಅಧಿಕಾರಿಗಳು ನೆಲಸಮಮಾಡಲು ಹೊರಟಾಗ, ಇದೇ ಉದ್ದೇಶದಿಂದ ಅದನ್ನು ನಾನು ತಡೆದೆ. ಅಧಿಕಾರಿಗಳು ಮಾನಸಾಂತರವನ್ನು ಹೊಂದುವಂತೆ ಮಾಡಿ. ಆಡಳಿತದಲ್ಲಿಒಂದು ಪರಿವರ್ತನೆಯನ್ನುಂಟುಮಾಡಬೇಕೆಂಬುದು ನನ್ನ ಹಂಬಲವಾಗಿದ್ದಿತು; ಆದರೆ ಅಧಿಕಾರಿಗಳ ರಾಜನೀತಿಯು ನನ್ನನ್ನು ನಿರಾಶೆಗೊಳಿಸಿತು. ಈಗ ನೀವು ವಿಜಯಿಗಳಾಗಿರುತ್ತೀರಿ. ಎರಡು ಸಮುದಾಯಗಳ ಮಧ್ಯೆ ಸೌಹಾರ್ದಬಂಧವು ದೃಢವಾಗುವಂತೆ ಮಾಡತಕ್ಕ ಉದ್ಯಮವನ್ನು ನೀವು ಸ್ವೀಕರಿಸಬೇಕೆಂಬುದು ನನ್ನ ಸಲಹೆಯಾಗಿದೆ. ಈ ಉದ್ಯಮದಲ್ಲಿ ನನ್ನ ಕೈಲಾದ ಮಟ್ಟಿಗೆ ಪ್ರಯತ್ನಿಸಲು ನಾನು ಸಿದ್ಧನಿರುವೆನು."

"ಸೌಹಾರ್ದ ಮತ್ತು ಸ್ನೇಹಗಳು ಪರಸ್ಪರ ಹೆಚ್ಚುವಂತೆ ಮಾಡುವುದು ಅಗತ್ಯವಿದೆ. ಹಾಗಾದರೆ ಮಾತ್ರ ಈ ವರ್ಗವಿದ್ವೇಷದ ಬೆಂಕಿಯು ಆಳಿಯಬಹುದು. ಈ ಹೋರಾಟದಿಂದ ದಂಡಾಳುಗಳು ಬಳಲಿದ್ದಾರೆ; ಎಲ್ಲರ ಶಕ್ತಿ

ಗಳೂ ಕುಂದಿವೆ; ಆದರೆ ನಾವು ಮಾಡಬೇಕಾದ ಕೆಲಸಗಳು ಹಿಮಾಲಯ ದಂತೆ ಗಂಭೀರವಾದವುಗಳಾಗಿವೆ. ಆಡಳಿತವನ್ನು ಸುವ್ಯವಸ್ಥಿತವಾಗುವಂತೆ ಮಾಡಬೇಕು. ಕ್ಷಾಮದಿಂದ ನೊಂದ ಜನರ ಸಂಕಟಗಳನ್ನು ನಿವಾರಿಸಬೇಕು. ದೇಶದಲ್ಲಿ ಹರಡಿರುವ ವಿದ್ವೇಷದ ಬೆಂಕಿಯನ್ನು ನಂದಿಸಬೇಕು. ಕುಮಾರ, ಇದುವರೆಗೆ ನಾವು ಮಾಡಿದಕ್ಕಿಂತಲೂ ಮಿಗಿಲಾದ ಸಾಹಸಗಳನ್ನು ಇನ್ನು ನಾವು ನೆರವೇರಿಸಬೇಕಾಗಿವೆ. ಕಾಳಗದಲ್ಲಿ ನಮ್ಮ ಎಲ್ಲ ಬುದ್ಧಿವಂತಿಕೆಯನ್ನು ವಿನಿಯೋಗಿಸಬೇಕಾಗಿದ್ದಂತೆ, ದೇಶದಲ್ಲಿ ಜನರಕ್ಷೇಮವು ಹೆಚ್ಚುವಂತೆ ಮಾಡು ವುದರಲ್ಲಿ ನಮ್ಮ ಸಾಮರ್ಥ್ಯ-ಸತ್ವಗಳನ್ನು ಪ್ರದರ್ಶಿಸಬೇಕಾಗಿದೆ. ಒಂದು ದಿನದಷ್ಟು ವಿಲಂಬವಾದರೆ ಈಕೆಲಸಗಳು ಅಷ್ಟಷ್ಟೇ ಪ್ರಯಾಸದವಾಗಬಹುದು."

"ಗುರುದೇವ, ನನಗೆ ದಾರಿಯನ್ನು ತೋರಿಸಿದವರು ನೀವು; ಇನ್ನು ಮುಂದೆ ಯಾವ ಪಥದಲ್ಲಿ ಸಾಗಬೇಕೆಂದು ತಾವು ಹೇಳುವಿರೋ ಅದನ್ನು ಅನು ಸರಿಸಲು ನಾನು ಸಿದ್ಧನಿರುತ್ತೇನೆ. ನಾನು ಈ ಆಯುಷ್ಯವನ್ನು ನಾಡಸೇವೆ ಗಾಗಿ ನಿವೇದಿಸಿದ್ದೇನೆ. ನಾನೊಬ್ಬ ದಂಡಾಳು; ನನ್ನ ನಾಯಕರು ನೀವು. ನೀವು ಹೇಳಿದ ದಾರಿಯಲ್ಲಿ ಹೆಜ್ಜೆಗಳನ್ನಿಡುವುದು ನನ್ನ ಕರ್ತವ್ಯ."

"ಕುಮಾರ, ನೀನು ನನ್ನ ನುಡಿಯನ್ನು ಅನುಸರಿಸುವೆಯೆಂಬ ನಂಬಿ ಕೆಯು ನನಗಿದೆ: ಆದರೆ ನಾವು ಇನ್ನು ಮುಂದೆ ಮಾಡಬೇಕಾದ ಕೆಲಸಗಳು ಎಷ್ಟು ಮಹತ್ತರವಾದವುಗಳೆಂಬುದನ್ನು ಮಾತ್ರ ನಾನು ಸೂಚಿಸಿದೆ. ಪ್ರತಿ ಯೊಬ್ಬರೂ ಈ ಹೊರೆಯನ್ನು ಹೊರಲು ಸಿದ್ಧರಿರಬೇಕು. ತಂಗೀ, ಹೇಮಾ ವತಿ, ಇದುವರೆಗೆ ನೀನು ಮಾಡಿದ ನಾಡಸೇವೆಯು ಅನುಪಮವಾದುದು; ಆದರೆ ನಿನ್ನ ಕೆಲಸಗಳು ಇಲ್ಲಿಗೇ ಮುಗಿದಿಲ್ಲ. ನೀನು ಮಾಡಬೇಕಾದ ಕೆಲಸ ಗಳು ಅನೇಕವಿವೆ. ನಮ್ಮ ದೇಶವು ಕ್ಷೇಮ-ಸಂತೃಪ್ತಿಗಳಿಂದ ತುಂಬಬೇಕಾದರೆ, ನಮ್ಮ ನಾಡಿನ ಮಹಿಳೆಯರು ವಿದ್ಯಾವತಿಯರಾಗಿರಬೇಕು. ಅವರಲ್ಲಿ ಹರಡಿರುವ ಅಜ್ಞಾತೆಯನ್ನು ನಿವಾರಿಸಬೇಕು. ಮಹಿಳೆಯು ಅಜ್ಞಳಾದ ದೇಶವು ಕೆಡುತ್ತದೆ; ಆದುದರಿಂದ ನಮ್ಮ ದೇಶದ ಪ್ರತಿಯೊಂದು ಗುಡಿಸಿಲಿಗೂ ಜ್ಞಾನದೀಪವನ್ನು ಒಯ್ಯುವ ಕೆಲಸ ನಿನ್ನದು. ಉಸ್ಮಾನಖಾನ, ನಿಮ್ಮ ಕೆಲಸವೂ ಅದರಂತೆಯೇ. ನಿಮ್ಮ ಕೆಲಸವು ಇಲ್ಲಿಗೇ ಮುಗಿದಿಲ್ಲ. ನಿಷ್ಪಕ್ಷ ಬುದ್ಧಿಯಿಂದ ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನೀವು ಭಾಗವನ್ನು ವಹಿ ಸಿದಿರಿ. ಇನ್ನು ಮುಂದೆಯೂ ಸ್ವತಂತ್ರ ರೂಪನಗರದ ಸಂರಕ್ಷಣೆಯ ಜವಾ

ಬ್ದಾರಿಕೆಯನ್ನು ನೀವೇ ಹೊರಬೇಕಾಗಿ ಬರುತ್ತದೆ. ಎರಡು ಸಮುದಾಯಗಳು ಪರಸ್ಪರ ಮೈತ್ರಿಯಿಂದ ಇರಬೇಕಾದರೆ, ನಿಮ್ಮಂಥವರು ದೇಶದ ಆಡಳಿತ ಸರಿಪಡಿಸಲು ಮುಂದೆ ಬರಬೇಕು.”

ಉಸ್ಮಾನನು ಫಕೀರನ ಮೋರೆಯನ್ನು ನೋಡಿದನು. ಉಸ್ಮಾನನ ಆ ನೋಟದಿಂದ ಫಕೀರನು ಉಸ್ಮಾನನ ಮನಸ್ಸಿನಲ್ಲಿರುವದೇನೆಂಬುದನ್ನು ಗ್ರಹಿಸಿದ. ಒಂದು ಮೃದುಹಾಸವನ್ನು ಹೊರಚೆಲ್ಲಿ ಫಕೀರನು ಹೀಗೆ ಹೇಳಿದ: “ಉಸ್ಮಾನ, ನಾನು ಈ ಮೊದಲೇ ನಿನಗೆ ಹೇಳಿದ್ದೇನೆ. ನಾವು ಈ ದೇಶದಲ್ಲಿ ಕ್ಷೇಮದಿಂದ ಜೀವಿಸಬೇಕಾದರೆ, ಇಲ್ಲಿ ನಾವು ಅಭ್ಯುನ್ನತಿಯನ್ನು ಹೊಂದಬೇಕಾದರೆ ಇಲ್ಲಿನ ನಿವಾಸಿಗಳೊಡನೆ ಮೈತ್ರಿಯಿಂದಿರದೆ ಬೇರೆ ಗತ್ಯಂತರವಿಲ್ಲ. ಅವರ ಸುಖದುಃಖಗಳಲ್ಲಿ ನಾವು ಪಾಲುಗಾರರಾಗಬೇಕು. ನಾವೆಲ್ಲರೂ ಒಡಹುಟ್ಟಿದವರೆಂದು ಭಾವಿಸಬೇಕು. ಈ ಸೌಹಾರ್ದಬಂಧವು ದೃಢವಾಗಬೇಕಾದರೆ, ಸ್ವಾಮೀಜಿಯವರು ನುಡಿದಂತೆ ದೇಶದ ಶಾಸನಚಕ್ರವನ್ನು ಸರಿಪಡಿಸುವದರಲ್ಲಿ ನಾವು ಉದ್ಯಮಿಸಬೇಕಾಗಿವೆ. ಸತ್ಯ ಮತ್ತು ನ್ಯಾಯಾನುಕೃತವಾದ ಆಡಳಿತಕ್ಕೆ ನಮ್ಮ ಬೆಂಬಲವನ್ನು ನೀಡುವದು ನಮ್ಮ ಕರ್ತವ್ಯ. ಆದುದರಿಂದ ಹೊಸ ಆಡಳಿತದಲ್ಲಿ ಉದ್ಯೋಗವನ್ನು ಸ್ವೀಕರಿಸಲು ನೀನು ಹಿಂದು ಮುಂದೆ ನೋಡಬೇಕಾಗಿಲ್ಲ. ಹಾಗೆ ವರ್ತಿಸುವದು ಇಸ್ಲಾಂ ಧರ್ಮಕ್ಕೆ ವಿರೋಧವೂ ಅಲ್ಲ.”

ಫಕೀರನ ಈ ಮಾತುಗಳು ಉಸ್ಮಾನನ ಸಂದೇಹವನ್ನು ಹೋಗಲಾಡಿಸಿದವು. ತನ್ನ ಭವಿಷ್ಯಜೀವನವನ್ನು ಕುರಿತು ಫಕೀರನ ಉಪದೇಶಗಳು ಒಂದು ವ್ಯಕ್ತವಾದ ದಾರಿಯನ್ನು ಉಸ್ಮಾನನಿಗೆ ತೋರಿಸಿದವು.

ಜ್ಞಾನಾನಂದನು ಹೇಳಿದ. “ರಾತ್ರಿ ಬಹಳವಾಯಿತು; ಇನ್ನು ಕೋಟೆಯೊಳಗೆ ಹೋಗುವಾ.”

ಇತರರು ಅದಕ್ಕೆ ಒಪ್ಪಿದರು. ಎಲ್ಲರೂ ನಡೆದು ಕೋಟೆಯೊಳಗೆ ಪ್ರವೇಶಿಸಿದರು. ಸುಧಾಂಶುವು ಮಾತ್ರ ಗಗನಪಥದಲ್ಲಿ ನಿಂತು ಯುದ್ಧರಂಗವನ್ನು ನೋಡುತ್ತಿದ್ದ.



## ೨೪ ಉದಯ.

ರಾಜದುರ್ಗವನ್ನು ವಿದ್ರೋಹಿಗಳಿಂದ ಮರಳಿ ಪಡೆಯಲು ತೆರಳಿದ್ದ ಸುಭೇದಾರ ಯಾಕೂಬಖಾನನು ರೂಪನಗರಕ್ಕೆ ಹಿಂದಿರುಗಿ ಬರಲಿಲ್ಲ. ಯಾಕೂಬಖಾನನ ಬದಲು ರೂಪನಗರಕ್ಕೆ ಆಗಮಿಸಿದವರು ವಿದ್ರೋಹಿಗಳಾಗಿದ್ದರು. ರೂಪನಗರದ ಹೆಚ್ಚಿನ ಸೇನಾವಿಧಾನವು ರಾಜದುರ್ಗದ ಕದನದಲ್ಲಿ ಪತನವನ್ನು ಹೊಂದಿದುದರಿಂದ ವಿದ್ರೋಹಿಗಳನ್ನೆದುರಿಸಲು ರೂಪನಗರದಲ್ಲಿ ಹೆಚ್ಚುಮಂದಿ ಪಠಾಣ ದಂಡಾಳುಗಳಿರಲಿಲ್ಲ. ವಿದ್ರೋಹಿಗಳು ರೂಪನಗರದಲ್ಲಿದ್ದ ಪಠಾಣ ದಂಡಿನೊಡನೆ ಕೆಲವುತಾಸುಗಳ ತನಕ ಹೋರಾಡಲು, ಪಠಾಣರ ದಂಡು ಪರಾಜಯವನ್ನು ಹೊಂದಿ ಹಿಮ್ಮೆಟ್ಟಿತು. ಪುರನಿವಾಸಿಗಳು ವಿದ್ರೋಹಿಗಳ ಪ್ರವೇಶನವನ್ನು ತಡೆಯಲಿಲ್ಲ. ವಿಜಯಿಗಳಾದ ವಿದ್ರೋಹಿಗಳು ನಗರ ಪ್ರವೇಶವನ್ನು ಮಾಡಿದರು.

ಪುರನಿವಾನಿಸಿಗಳು ವಿದ್ರೋಹಿಗಳ ಉದ್ದೇಶವೇನೆಂಬುದನ್ನು ಬಲ್ಲವರಾಗಿದ್ದುದರಿಂದ, ಅವರನ್ನು ಆಹ್ಲಾದಪೂರ್ವಕ ಸ್ವಾಗತಿಸಿದರು. ವಿದ್ರೋಹಿಗಳು ಅಧಿಕಾರಾರೂಢರಾದರೆ, ತಾವು ಇದುವರೆಗೆ ಅನುಭವಿಸುತ್ತಲಿದ್ದ ಸಂಕಟಗಳು ನಿವಾರಣೆಯನ್ನು ಹೊಂದಿ, ಊರಲ್ಲಿ ಸುವ್ಯವಸ್ಥಿತವಾದ ಆಡಳಿತವು ಸಂಸ್ಥಾಪಿತವಾಗುವುದೆಂಬ ವಿಶ್ವಾಸವು ಜನರಿಗಿದ್ದಿತು. ಆದುದರಿಂದಲೇ ಅವರು ವಿದ್ರೋಹಿಗಳಿಗೆ ಆದರಪೂರ್ವಕವಾದ ಸ್ವಾಗತವನ್ನು ನೀಡಿದರು.

ವಿದ್ರೋಹಿಗಳು ರೂಪನಗರವನ್ನು ವಶಪಡಿಸಿಕೊಂಡರು. ದೇಶದಲ್ಲಿ ಸುವ್ಯವಸ್ಥಿತವಾದ ಆಡಳಿತವನ್ನು ಪ್ರಾರಂಭಿಸುವುದು ವಿದ್ರೋಹಿಗಳ ಪ್ರಥಮ ಕರ್ತವ್ಯವಾಗಿದ್ದಿತು. ಅವರು ಆ ಉದ್ಯಮದಲ್ಲಿ ತಮ್ಮ ಶಕ್ತಿಯನ್ನು ವಿನಿಯೋಗಿಸತೊಡಗಿದರು. ವಿದ್ರೋಹಿಗಳು ನೆರವೇರಿಸುವ ಅನೇಕ ಕೆಲಸಗಳಿದ್ದವು; ಆದರೆ ಬೊಕ್ಕಸದಲ್ಲಿ ಹಣವಿರಲಿಲ್ಲ; ಹಣವಿಲ್ಲದಿದ್ದರೆ ಯಾವ ಕೆಲಸವೂ ಜರಗದು. ಯಾಕೂಬಖಾನನ ದುಷ್ಪ್ರಭುತ್ವದಿಂದ ಭಂಡಾರವೆಲ್ಲ ಬರಿದಾಗಿ ಹೋಗಿದ್ದಿತು. ಕರವನ್ನು ಕೊಡುವ ಚೈತನ್ಯವು ಪ್ರಜೆಗಳಲ್ಲಿರಲಿಲ್ಲ. ಈ ಪರಿಸ್ಥಿತಿಯಲ್ಲಿ ಮುಂದೇನು ಮಾಡಬೇಕೆಂಬದು ವಿದ್ರೋಹಿಗಳಿಗೆ ಮಹತ್ವದ ಸಮಸ್ಯೆಯಾಗಿ ಪರಿಣಮಿಸಿತು. ಹೊಸ ಆಡಳಿತವು ತಮ್ಮ ತೊಂದರೆಗಳನ್ನು ನಿವಾರಿಸುವವೆಂಬುದು ಜನರ ಆಕಾಂಕ್ಷೆಯಾಗಿದ್ದಿತು; ಆದರೆ ಜನರ ಸಂಕಟನಿವಾರಣಕ್ಕೆ ಅಗತ್ಯವೆನಿಸಿದ ಧನವು ವಿದ್ರೋಹಿಗಳಲ್ಲಿರಲಿಲ್ಲ. ಪ್ರಜೆಗಳ ಬೆಂಬಲವಿಲ್ಲದೆ

ಹೋದರೆ ತಮ್ಮ ಆಡಳಿತವು ಸುವ್ಯವಸ್ಥಿತವಾಗುವುದು ದುಸ್ತರವೆಂಬದನ್ನು ಅವರು ಅರಿತಿದ್ದರು. ಇದಲ್ಲದೆ ದಿಲ್ಲಿಯಲ್ಲಿ ಪಠಾಣರು ಪ್ರಬಲವಾಗಿಯೇ ಇದ್ದರು. ಮೇವಾಡವನ್ನು ವಶಪಡಿಸಿಕೊಂಡೊಡನೆಯೇ ಅಲ್ಲಾವುದ್ದೀನನು ತಾವು ಕಳೆದುಕೊಂಡ ರೂಪನಗರದ ಕಡೆಗೆ ತಿರುಗುವುದು ನಿರ್ವಿವಾದವೆಂಬುದನ್ನು ವಿದ್ರೋಹಿಗಳು ಬಲ್ಲವರಾಗಿದ್ದರು. ಅವರು ಕದನದಲ್ಲಿ ವಿಜಯಿಗಳಾಗಿ ನಾಡನ್ನು ಸಂಪಾದಿಸಿದ್ದರು; ಆದರೆ ರಾಜಶಾಸನ ಚಕ್ರದ ಚಲನೆಯನ್ನು ಸರಿಪಡಿಸಲು ಕಾಳಗಕ್ಕಿಂತ ಹೆಚ್ಚು ಬುದ್ಧಿವಂತಿಕೆಯೂ ಕೌಶಲ್ಯವೂ ಬೇಕೆಂಬುದು ಅವರಿಗೀಗ ಹೊಳೆದಿತು.

ಆದರೂ ವಿದ್ರೋಹಿಗಳು ಎದೆಗುಂದಲಿಲ್ಲ. ನಿವಾರಣೆಗಿರುವ ದಾರಿಯನ್ನು ಜ್ಞಾನಾನಂದನ ತೀಕ್ಷ್ಣಬುದ್ಧಿಯು ಚಿಂತಿಸುತ್ತಿದ್ದಿತು. ಒಂದು ಉಪಾಯವು ಅವನ ಬುದ್ಧಿಗೆ ಹೊಳೆಯಿತು. ಅವನು ತನ್ನ ಅನುಯಾಯಿಗಳಿಗೆ ಈ ಸೂಚನೆಯನ್ನು ನೀಡಿದ. ಹಿಂದಿನ ದುಷ್ಪ್ರಭುತ್ವದಿಂದ ದೇಶದ ಆರ್ಥಿಕ ಸ್ಥಿತಿಯು ಶೋಚನೀಯವಾಗಿದ್ದರೂ ರೂಪನಗರದಲ್ಲಿ ಕೆಲವು ಮಂದಿ ಧನಿಕರಿದ್ದರು. ಸಂಪತ್ತುಳ್ಳ ಹಲವು ಕುಟುಂಬಗಳಿದ್ದವು. ದೇಶಕ್ಕೆ ಆಪತ್ತು ಬಂದೊದಗಿದ ಈ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ನಾಡನ್ನು ಸಂರಕ್ಷಿಸುವದು ಪ್ರತಿಯೊಬ್ಬನ ಕರ್ತವ್ಯವು. ಆದುದರಿಂದ ಧನಿಕರು, ಪ್ರಭುಗಳು, ಸಿರಿಯುಳ್ಳವರು ಇವರೆಲ್ಲಾ ತಮ್ಮ ಸಂಪತ್ತಿನಲ್ಲಿ ಒಂದು ಪಾಲನ್ನು ಆಳುವವರಿಗೆ ಕೊಟ್ಟು ನಾಡಿನ ಪುನರುಜ್ಜೀವನ ಉದ್ಯಮಕ್ಕೆ ಸಹಾಯವನ್ನು ಮಾಡಬೇಕೆಂಬುದು ಜ್ಞಾನಾನಂದನ ಸೂಚನೆಯಾಗಿದ್ದಿತು. ಆಳುವವರು ತಮಗೆ ಧನಸಹಾಯಮಾಡಬೇಕೆಂದು ಅಭ್ಯರ್ಥಿಸುವದರಿಂದ ಅವಶ್ಯವಿರುವಷ್ಟು ಹಣವು ಸಿಗುವಂತಿರಲಿಲ್ಲ. ಏಕೆಂದರೆ ಪ್ರತಿಯೊಬ್ಬನಿಗೂ ದ್ರವ್ಯದಾಸೆಯಿದ್ದಿತು. ಧನಿಕರು ಹೀಗೆ ಆಲೋಚಿಸಿದರು: ತಮ್ಮ ಸಂಪತ್ತಿನಲ್ಲಿ ಒಂದು ಪಾಲನ್ನು ವಿದ್ರೋಹಿಗಳಿಗೆ ಏಕೆ ಕೊಡಬೇಕೆಂದು? ಅವರು ನಾಡಿನ ಹಿತಕ್ಕಿಂತ ಹೆಚ್ಚಾಗಿ ತಮ್ಮ ಸ್ವಂತ ಹಿತದ ಕಡೆಗೆ ಹೆಚ್ಚು ದೃಷ್ಟಿಯನ್ನಿಟ್ಟಿದ್ದರು. ಕ್ಷಾಮಕಾಲದಲ್ಲಿ ಜನಸಾಮಾನ್ಯರು ಅನುಭವಿಸಿದ ಸಂಕಟಗಳನ್ನು ಸಿರಿವಂತರು ಅನುಭವಿಸಿರಲಿಲ್ಲ. ಆದುದರಿಂದ ಅವರು ಸ್ವಾತಂತ್ರ್ಯದ ಬೆಲೆಯನ್ನು ತಿಳಿಯಲಿಲ್ಲ. ಯಾಕೂಬಖಾನನ ಆಳ್ವಿಕೆಯಲ್ಲಿ ಅವನು ಹೇಳಿದಷ್ಟು ತೆರಿಗೆಯನ್ನು ಅವರು ಸರಿಯಾಗಿ ಸಲ್ಲಿಸುತ್ತಿದ್ದುದರಿಂದ ಹೆಚ್ಚಿಗೆ ಪೀಡನೆಗಳಿಗೆ ಅವರು ಒಳಗಾಗಲಿಲ್ಲ. ಇದರಿಂದ ಪಠಾಣರ ಶಾಸನಕ್ಕೂ

ವಿದ್ರೋಹಿಗಳ ಶಾಸನಕ್ಕೂ ಇರುವ ಅಂತರವನ್ನು ಅವರು ತಿಳಿಯಲಿಲ್ಲ. ಆದುದರಿಂದ ಅವರು ವಿದ್ರೋಹಿಗಳಿಗೆ ಸಹಾಯ ಮಾಡಲು ಹಿಂದು ಮುಂದೆ ನೋಡತೊಡಗಿದರು. ನ್ಯಾಯವಾಗಿ ಸಲ್ಲಬೇಕಾಗಿದ್ದ ತೆರಿಗೆಯನ್ನಲ್ಲದೆ ಹೆಚ್ಚಿಗೆ ಹಣ ಕೊಡಲು ಸಾಧ್ಯವಿಲ್ಲವೆಂದು ಅವರು ನುಡಿಯಲು ಹಿಂಜರಿಯಲಿಲ್ಲ. ಅದರಿಂದ ತಮಗೆ ಧನಸಹಾಯ ಮಾಡಬೇಕೆಂದು ಜ್ಞಾನಾನಂದನು ಹೊರಡಿಸಿದ್ದ ಅಭ್ಯರ್ಥನೆಯು ಫಲಪ್ರದವಾಗಲಿಲ್ಲ.

ಜ್ಞಾನಾನಂದನು ತನ್ನ ಪ್ರಾರ್ಥನೆಯನ್ನು ಧನಿಕರು ನಿರಾಕರಿಸಿದುದನ್ನು ಈಕ್ಷಿಸಿ ಎದೆಗುಂದಲಿಲ್ಲ. ಒಂದು ಕೆಲಸವು ಸರಿಯಾದುದೆಂಬುದು ಅವನ ದೃಷ್ಟಿಗೆ ತೋರಿದರೆ ಹಿಮಾಚಲದಂಥ ಪ್ರತಿಬಂಧಗಳು ಅಡ್ಡನಿಂತಿದ್ದರೂ ಅವುಗಳನ್ನು ಎದುರಿಸಿ ತನ್ನ ಹಟವನ್ನು ಸಾಧಿಸುವ ಅದ್ಭುತ ಎದೆಗಾರಿಕೆಯು ಜ್ಞಾನಾನಂದನಲ್ಲಿದ್ದಿತು. ಈ ಮನೋದಾರ್ಢ್ಯವು ಅವನ ಜೀವನವು ವಿಜಯಪ್ರದವಾಗಲು ಪ್ರಧಾನಕಾರಣವಾಗಿದ್ದಿತು. ವಿದ್ರೋಹಿಗಳ ನಾಯಕಸ್ಥಾನವನ್ನು ಇತರರು ಕೈಗೊಂಡಿದ್ದರೆ, ಅವರು ತಾವು ಇದಿರಿಸಬೇಕಾಗಿ ಬಂದ ಭಯಂಕರ ವಿಪತ್ತುಗಳನ್ನು ನೋಡಿ ನಿರಾಶೆಯಿಂದ ಹಿಮ್ಮೆಟ್ಟುತ್ತಿದ್ದರು; ಆದರೆ ಜ್ಞಾನಾನಂದನು ಈ ವಿಪತ್ತುಗಳಿಗೆಲ್ಲಾ ತನ್ನ ಎದೆಯನ್ನೊಡ್ಡಿ ಹೇಗೆ ಮುಂದಕ್ಕೆ ಸಾಗಿದನೆಂಬುದು ನಮಗೆಲ್ಲರಿಗೂ ತಿಳಿದ ಸಂಗತಿಯಾಗಿದೆ. ಆಡಳಿತವನ್ನು ಸುವ್ಯವಸ್ಥಿತವಾಗಿ ಮಾಡುವ ಉದ್ಯಮದಲ್ಲಿಯೂ ಜ್ಞಾನಾನಂದನ ಆ ಮನೋದಾರ್ಢ್ಯವು ಪ್ರತ್ಯಕ್ಷವಾಯಿತು. ಶ್ರೀಮಂತರು ವಿದ್ರೋಹಿಗಳಿಗೆ ದ್ರವ್ಯ ಸಹಾಯಮಾಡಲು ನಿರಾಕರಿಸಿದುದನ್ನು ನೋಡಿ, ಜ್ಞಾನಾನಂದನು ಹೀಗೆ ಹೇಳಿದನು: "ತಾವಾಗಿ ನಾಡಿನ ಪುನರುಜ್ಜೀವನ ಕೆಲಸದಲ್ಲಿ ದ್ರವ್ಯಸಹಾಯವನ್ನು ಮಾಡಲು ಅವರು ಒಪ್ಪದಿದ್ದರೆ, ಅವರ ಸಂಪತ್ತಿನಲ್ಲಿ ಒಂದು ಭಾಗವನ್ನು ಬಲಾತ್ಕಾರದಿಂದ ಕಸಿದುಕೊಳ್ಳಬೇಕಾಗುತ್ತದೆ."

ಶ್ರೀಮಂತರ ಸಂಪತ್ತುಗಳನ್ನು ಬಲಾತ್ಕಾರದಿಂದ ಕಸಿದುಕೊಳ್ಳುವ ವಿಷಯದಲ್ಲಿ ವಿದ್ರೋಹಿಗಳ ನಡುವೆ ಭಿನ್ನಾಭಿಪ್ರಾಯಗಳಿದ್ದವು. ಅನೇಕರು ಜ್ಞಾನಾನಂದನ ಈ ಸೂಚನೆಯನ್ನು ಒಪ್ಪಲಿಲ್ಲ. ಈ ಹಂಚಿಕೆಯು ಪಠಾಣರು ಈ ಮುನ್ನ ನಡೆಸುತ್ತಿದ್ದ ಕೊಳ್ಳೆ-ಸುಲಿಗೆಗಳಿಗೆ ಸಮವಾಗಿದೆ ಎಂದೂ, ಅಧರ್ಮವೆಂದೂ ಅವರು ಹೇಳಿದರು ಇನ್ನು ಕೆಲವರು ಈ ಹಂಚಿಕೆಯು ದರೋಡೆಗೆ ಸರಿಯಾದುದೆಂದು ಅಭಿಪ್ರಾಯಪಟ್ಟರು; ಆದರೆ ಜ್ಞಾನಾನಂದನು ಈ

ಭಿನ್ನಾಭಿಪ್ರಾಯಗಳನ್ನು ಲೆಕ್ಕಿಸಲಿಲ್ಲ. ತನ್ನ ಹಂಚಿಕೆಯು ಸರಿಯಾದುದೆಂಬ ದೃಢ ವಿಶ್ವಾಸವು ಅವನಿಗಿದ್ದಿತು. ಅವನು ತನ್ನ ಹಂಚಿಕೆಯನ್ನು ಕುರಿತು ಸಂದೇಹವನ್ನು ವ್ಯಕ್ತಪಡಿಸಿದ ಅನುಯಾಯಿಗಳ ಸಂಗಡ ಹೀಗೆ ಹೇಳಿದ: "ನೀವೆಲ್ಲರೂ ಧರ್ಮಾಧರ್ಮಗಳ ಸ್ವರೂಪವನ್ನು ಬಲ್ಲ ಜ್ಞಾನಿಗಳಂತೆ ನಟಿಸುತ್ತಿದ್ದೀರಿ; ಆದರೆ ಈಗ ನೀವು ಭಾವಿಸುತ್ತಿರುವದು ಧರ್ಮವಲ್ಲ. ಕಾಲ ದೇಶಗಳ ಪರಿಸ್ಥಿತಿಗನುಸಾರವಾಗಿ ಧರ್ಮದ ಬಾಹ್ಯಸ್ವರೂಪವು ಬದಲಾಗುತ್ತಲಿದೆ. ಅನಿವಾರ್ಯ, ವಿಭಿನ್ನ ಪರಿಸ್ಥಿತಿಗಳು ಬಂದೊದಗುವಾಗ ಧರ್ಮನೀತಿಯೂ ಸಹ ತನ್ನ ಸ್ವರೂಪವನ್ನು ಬದಲುಮಾಡಬೇಕಾಗಿ ಬರುತ್ತದೆ. ಧರ್ಮವೆಂದರೇನು? ಒಂದು ಸಂಪ್ರದಾಯಕ್ಕೆ ಶರಣು ಹೋಗಿ, ಅದರ ಆಚಾರ ಪರಂಪರೆಗಳನ್ನು ಕಣ್ಮುಚ್ಚಿ ಅನುಸರಿಸುವದಲ್ಲ; ಮನುಷ್ಯನಲ್ಲಿ ಬೇರೂರಿದ ವಿಶ್ವಾಸಗಳಲ್ಲಿ ಧರ್ಮವೆಂಬುದು ತನ್ನ ಅಭ್ಯುದಯಕ್ಕಾಗಿ ಮಾನವಜೀವಿಯು ನೆರವೇರಿಸಬೇಕಾದ ಉದ್ಯಮಗಳ ಸಮುಚ್ಚಯ ಭಾವವಾಗಿದೆ. ಯಾವುದು ಮನುಷ್ಯನನ್ನು ಉನ್ನತಿಯ ಶಿಖರಕ್ಕೆ ಕರೆದೊಯ್ಯುವದೋ ಅದು ಅವನ ಧರ್ಮವು. ಯಾವದು ಅವನನ್ನು ಅಧಃಪತನದ ರಸಾತಳಕ್ಕೆ ದೂಡುವದೋ ಅದು ಅಧರ್ಮವು. ಆದುದರಿಂದ ಮನುಷ್ಯನು ತನ್ನ ಅಭ್ಯುನ್ನತಿಯ ದಾರಿಯನ್ನು ತಿಳಿದು, ಆ ಪಥದಲ್ಲಿ ಅವನು ಮುಂದೆ ಸಾಗಬೇಕಾಗಿದೆ. ಈ ಚಿಂತನೆ ಮತ್ತು ಆಚರಣೆಗಳಾಗಿವೆ ನಿಜವಾದ ಧರ್ಮವು. ಒಂದು ವ್ಯಕ್ತಿಯು ಆಚರಿಸಬೇಕಾದ ಧರ್ಮದಂತೆಯೇ ಪ್ರತಿಯೊಂದು ಸಮಾಜಕ್ಕೂ ಪ್ರತಿಯೊಂದು ಜನಾಂಗಕ್ಕೂ ಅವುಗಳು ಆಚರಿಸಬೇಕಾಗಿರುವ ಕೆಲವು ಧರ್ಮಗಳಿರುತ್ತವೆ. ಆಯಾ ಸಮಾಜವನ್ನು ರಾಷ್ಟ್ರವನ್ನು ಉನ್ನತಿಯ ದಾರಿಯಲ್ಲಿ ಒಯ್ಯುತಕ್ಕ ಆಚರಣೆಗಳೆಲ್ಲ ಧರ್ಮಕ್ಕೆ ಸೇರಿದವುಗಳಾಗಿರುತ್ತವೆ. ರಾಷ್ಟ್ರದ ನೈತಿಕ, ಆಧ್ಯಾತ್ಮಿಕ ಮತ್ತು ಭೌತಿಕ ಜೀವನವನ್ನು ಮಲಿನಪಡಿಸತಕ್ಕ ಕೆಲಸಗಳು ಅಧರ್ಮಗಳಾಗಿರುತ್ತವೆ. ಈಗ ನಾವು ರೂಪನಗರದ ಶಾಸನಚಕ್ರವನ್ನು ವಶಪಡಿಸಿಕೊಂಡಿರುತ್ತೇವೆ; ಆದರೆ ನಮ್ಮ ಕೆಲಸವು ಇನ್ನೂ ಪೂರ್ತಿಯಾಗಿರುವುದಿಲ್ಲ. ಈಗ ಸಂಸ್ಥಾಪಿತವಾದ ಆಡಳಿತವನ್ನು ದೃಢಪಡಿಸಿ, ಪ್ರಜೆಗಳ ಕ್ಷೇಮವನ್ನು ಹೆಚ್ಚಿಸುವುದು ನಮ್ಮ ಕರ್ತವ್ಯವಾಗಿದೆ; ನಮ್ಮ ಧರ್ಮವಾಗಿದೆ. ಈ ಉದ್ಯಮದಲ್ಲಿ ನಾವು ಉದಾಸೀನತೆಯನ್ನು ತೋರಿಸಿದರೆ, ಅದು ಅಧರ್ಮವಾಗುವುದು; ಏಕೆಂದರೆ ನಮ್ಮ ಔದಾಸೀನ್ಯದಿಂದ ಜನರಲ್ಲಿ ಅಶಾಂತತೆ ಮತ್ತು ಅಸಂತೃಪ್ತಿಗಳು ಹೆಚ್ಚುವುವು. ಇವು

ಗಳಿಗೆ ಕಾರಣಭೂತರು ನಾವಾಗುತ್ತೇವೆ. ಒಂದು ನಾಡಿನ ಜನರ ಸಂಕಟ ಗಳಿಗೆ ನಾವು ಹೊಣೆಗಾರರಾಗುವವರಿಂದ ನಾವು ಆ ಪಾಪಕ್ಕೆ ಗುರಿಯಾಗುತ್ತೇವೆ. ಇಂದಿನ ಪರಿಸ್ಥಿತಿಯಲ್ಲಿ ಜನರ ಸಂಕಟಗಳನ್ನು ನಿವಾರಿಸುವದು ನಮ್ಮ ಧರ್ಮ ವಾಗಿದೆ. ಈ ಕಾರ್ಯಸಾಧನೆಯ ಬಗ್ಗೆ ನಾವು ಏನು ಮಾಡಿದರೂ ಅದು ಅಧರ್ಮವಾಗದು; ಅನ್ಯಾಯವಾಗದು. ಈಗ ನಾಡಿನ ಉದ್ಧಾರವಾಗಬೇಕಾ ದರೆ, ಧನವು ಅತ್ಯಾವಶ್ಯಕ. ಬೊಕ್ಕಸವು ಬರಿದಾಗಿದೆ; ನಮ್ಮಲ್ಲಿ ಕಾಸಿಲ್ಲ. ಮಾಡುವುವೇನು? ಈ ಸಿರಿವಂತರು ಹೇರಳ ಸಂಪತ್ತನ್ನು ಕೂಡಿ ಹಾಕಿದ್ದಾರೆ. ನಾಡಿನ ಅಭ್ಯುದಯಕ್ಕಾಗಿ ತಮ್ಮ ಸಂಪತ್ತಿನಲ್ಲಿ ಒಂದು ಪಾಲನ್ನು ದಾನಮಾಡು ವದು ಅವರ ಕರ್ತವ್ಯವಲ್ಲವೇ? ಈ ವಿಷಮ ಘಟ್ಟದಲ್ಲಿ ಅವರು ಮಾಡಬೇಕಾ ಗಿರುವ ಕರ್ತವ್ಯವನ್ನು ನಾನು ಸೂಚಿಸಿದೆನು. ಆ ವಿವೇಕವು ಅವರಲ್ಲಿ ಉದಿಸ ಲಿಲ್ಲ. ನಾವಂತು ಒಂದು ನಾಡಿನ ಜನರ ಪಾಲನೆಯ ಹೊರೆಯನ್ನು ಹೊತ್ತಿ ದ್ದೇವೆ. ಈ ಕೆಲಸವನ್ನು ಯಾವ ಪರಿಯಿಂದಲಾದರೂ ನಾವು ನೆರವೇರಿಸಬೇ ಕಾಗಿದೆ. ಧನಿಕರು ತಮ್ಮ ಸಂಪತ್ತಿನ ಒಂದು ಪಾಲನ್ನು ತಾವಾಗಿ ಕೊಡಲು ಒಪ್ಪದಿದ್ದರೆ, ಅವರ ಸಿರಿಯ ಒಂದು ಪಾಲನ್ನು ಬಲಾತ್ಕಾರದಿಂದ ಕಸಿದು ಕೊಳ್ಳುವದು ಅಧರ್ಮವಾಗದು. ನಮ್ಮ ನಾಡಿನ ಉನ್ನತಿಯು ಈ ದ್ರವ್ಯ ವನ್ನು ಅವಲಂಬಿಸಿದೆ. ಈ ಕೆಲಸವನ್ನು ಪಠಾಣರ ಕೊಳ್ಳೆ-ಸುಲಿಗೆಗಳಿಗೆ ಸಾಮ್ಯಪಡಿಸುತ್ತಿರುವುದನ್ನು ನೋಡಿ ನನಗೆ ಆಶ್ಚರ್ಯವಾಗುತ್ತದೆ. ಪಠಾಣರು ತಮ್ಮ ಸ್ವಾರ್ಥವನ್ನು ಸಾಧಿಸುವುದಕ್ಕಾಗಿ ಕೊಳ್ಳೆ-ಸುಲಿಗೆಗಳನ್ನು ನಡೆಸಿದರು. ಅನೇಕ ಮಂದಿಯನ್ನು ಸಂಕಟಗಳ ಕಡಲಿನಲ್ಲಿ ದೂಡಿ, ಒಬ್ಬಬ್ಬರು ಸುಖಪಡು ತ್ತಲಿದ್ದರು; ಆದರೆ ನಾವು ಇನ್ನೊಬ್ಬರ ದ್ರವ್ಯವನ್ನು ವಶಪಡಿಸಿಕೊಳ್ಳಲು ಹೊರಟಿರುವುದು ಸ್ವಂತದ ಸುಖ-ಭೋಗಗಳ ಲಾಲಸೆಯಿಂದಲ್ಲ; ಪ್ರಜಾತತಿಯ ಮಃಖನಿವಾರಣೆಗಾಗಿ ಆಗಿದೆ. ಅನೇಕ ಮಂದಿಯ ಸುಖಸಂತೃಪ್ತಿಗಾಗಿ ಕೆಲವು ಜನರ ಸಂಪತ್ತಿನಲ್ಲಿ ಒಂದು ಭಾಗವನ್ನು ತೆಗೆದುಕೊಳ್ಳಲು ಹೊರಟಿರು ವೆವು. ಇದಾಗಿದೆ ಪಠಾಣರಿಗೂ ನಮಗೂ ಇರುವ ಅಂತರವು. ಈ ಅಂತರ ವನ್ನು ಬಲ್ಲವರು ನಮ್ಮ ಕೃತ್ಯವನ್ನು ಅಧರ್ಮವೆಂದು ನುಡಿಯಲಾರರು. ಒಂದು ಕೊಳದಲ್ಲಿ ನೀರು ಕಟ್ಟಿ ನಿಂತಿದೆ. ಆ ನೀರನ್ನು ಉಪಯೋಗಿಸಿ ಹತ್ತಿ ರದ ಹೊಲದಲ್ಲಿ ಬೇಸಾಯ ಮಾಡಿದರೆ ಅದು ಅಧರ್ಮವಾಗುವುದೆಂತು? ಅದರಂತೆಯೇ ಕೆಲವರಲ್ಲಿ ಕಟ್ಟಿ ನಿಂತಿರುವ ದ್ರವ್ಯವನ್ನು ಬಹು ಮಂದಿಯ

ಕ್ಷೇಮಕ್ಕಾಗಿ ವಿನಿಯೋಗಿಸಬೇಕಾಗಿದೆ."

ಜ್ಞಾನಾನಂದನ ಈ ಉಪದೇಶವು ಸಯುಕ್ತಿಕವಾದುದೆಂದು ವಿದ್ರೋಹಿಗಳು ಒಪ್ಪಿಕೊಳ್ಳಬೇಕಾಯಿತು. ದೀರ್ಘ ಆಲೋಚನೆ ಮಾಡಲು ಜ್ಞಾನಾನಂದನು ನುಡಿದುದು ಸತ್ಯವೆಂದು ಅವರಿಗೆ ಹೊಳೆದಿತು. ಕೆಲವರು ಬಗೆದಿದ್ದರು ಪಠಾಣರ ಆಳ್ವಿಕೆಯು ಬದಲು ಹಿಂದೂ ಆಡಳಿವು ಸಂಸ್ಥಾಪಿತವಾದರೆ ತಮ್ಮ ದುಃಖಗಳೆಲ್ಲ ನೀಗುವುವೆಂದು; ಆದರೆ ಜನರು ಅನುಭವಿಸುತ್ತಿದ್ದ ದುರಂತಗಳು ಕಡಿಮೆಯಾಗಿರಲಿಲ್ಲ; ಜನರಲ್ಲಿ ಸುಖ-ಸಂತೃಪ್ತಿಗಳು ಪಸರಿಸಿರಲಿಲ್ಲ. ಆದುದರಿಂದ ಅವರಿಗೆ ಒಂದು ಸಂಗತಿಯು ವ್ಯಕ್ತವಾಯಿತು. ಆಡಳಿತದ ಬಣ್ಣವು ಬದಲಾಯಿಸಿದರೆ ಸಾಲದು; ಆಳುವ ರೀತಿಯಲ್ಲಿಯೂ ಒಂದು ಪರಿವರ್ತನೆಯಾಗಬೇಕೆಂದು. ಜನರಲ್ಲಿ ಸುಖಶಾಂತಿಗಳು ಹರಡಬೇಕಾದರೆ ತಾವು ನಡೆಸುವ ಇನ್ನೂ ಅನೇಕ ಕೆಲಸಗಳಿವೆಯೆಂಬುದು ಅವರಿಗೆ ಹೊಳೆದಿತು. ಬೊಕ್ಕಸದಲ್ಲಿ ದ್ರವ್ಯವಿಲ್ಲದಿದ್ದ ಈ ಬಿಕ್ಕಟ್ಟಿನಲ್ಲಿ ನಾಡಿನ ಸ್ಥಿತಿಯನ್ನು ಉತ್ತಮಗೊಳಿಸಬೇಕಾದರೆ, ಜ್ಞಾನಾನಂದನು ಸೂಚಿಸಿದ ಮಾರ್ಗವಲ್ಲದೆ ಇತರ ದಾರಿಗಳಿಲ್ಲ. ಇದಲ್ಲದೆ ಪಠಾಣರ ದಾಳಿಯ ಭೀತಿಯು ಅವರನ್ನು ಬಿಟ್ಟುತೊಡಗಿರಲಿಲ್ಲ. ದಿಲ್ಲಿಯಲ್ಲಿ ಪಠಾಣರ ಆಳ್ವಿಕೆಯು ಪ್ರಬಲವಾಗಿದ್ದಿತು. ಅವರು ಯಾವಾಗ ರೂಪನಗರದ ಮೇಲೆ ಸಾಗಿಬರುವರೆಂಬುದನ್ನು ಹೇಳಲಾಗುವಂತಿಲ್ಲ. ಮುಂಬರುವ ಹೋರಾಟಕ್ಕೆ ವಿದ್ರೋಹಿಗಳು ತಮ್ಮ ಬಲವನ್ನು ದೃಢಪಡಿಸಿಕೊಳ್ಳಬೇಕಾಗಿದ್ದಿತು. ಹೀಗೆ ಅನೇಕ ಕೆಲಸಗಳಿದ್ದವು. ಈ ಕೆಲಸಗಳು ದ್ರವ್ಯವಿಲ್ಲದೆ ನಡೆಯುವಂತಿರಲಿಲ್ಲ. ಆದುದರಿಂದ ವಿದ್ರೋಹಿಗಳು ತಮ್ಮ ಸಂದೇಹವು ಸಂಪೂರ್ಣವಾಗಿ ನಿವಾರಣೆಯನ್ನು ಹೊಂದದಿದ್ದರೂ, ಜ್ಞಾನಾನಂದನ ಸೂಚನೆಯನ್ನು ಸ್ವೀಕರಿಸಿದರು.

ಸ್ವಮನಸ್ಸಿನಿಂದ ದ್ರವ್ಯವನ್ನು ಕೊಡಲೊಪ್ಪದ ಧನಿಕರ ಮೇಲೆ ವಿದ್ರೋಹಿಗಳು ತಮ್ಮ ಅಧಿಕಾರವನ್ನು ಉಪಯೋಗಿಸಿದರು. ವಿದ್ರೋಹಿಗಳ ಈ ವರ್ತನೆಯು ಸುಲಿಗೆಗೆ ಸಮಾನವಾದುದೆಂದು ಸಿರಿವಂತರು ನುಡಿಯದಿರಲಿಲ್ಲ. ಪಠಾಣರ ಆಡಳಿತಕ್ಕೂ, ಈ ಹೊಸ ಆಡಳಿತಕ್ಕೂ ಯಾವ ವ್ಯತ್ಯಾಸವೂ ಇಲ್ಲವೆಂದು ಅವರು ಸಾರಿದರು. ಧನಿಕರ ಈ ನಿಂದೆಗೆ ವಿದ್ರೋಹಿಗಳ ಪ್ರತ್ಯುತ್ತರವು ಇದಾಗಿದ್ದಿತು: "ನಿಜ. ನಾವು ಸುಲಿಗೆ ಮಾಡುವೆವೆಂಬುದನ್ನು ಒಪ್ಪಿಕೊಳ್ಳುತ್ತೇವೆ; ಆದರೆ ನಮ್ಮ ಸುಖಭೋಗಗಳನ್ನು ಹೆಚ್ಚಿಸಿಕೊಳ್ಳಲು ನಾವು

ಸುಲಿಗೆ ನಡೆಸುತ್ತಲಿಲ್ಲ; ನಾಡಿನ ಜನರ ಸಂಕಟಗಳನ್ನು ನಿವಾರಿಸಲು ನಾವು ಸುಲಿಗೆಯನ್ನು ನಡೆಸುತ್ತಿದ್ದೇವೆ. ಪಠಾಣರಿಗೂ ನಮಗೂ ಇರುವ ಈ ಅಂತರ ವನ್ನು ನೀವು ತಿಳಿದುಕೊಂಡರೆ ಸಾಕು. ನಾಡಿಗೆ ಬಿಕ್ಕಟ್ಟು ಬಂದೊದಗಿದ ಪರಿಸ್ಥಿತಿಯಲ್ಲಿ ದ್ರವ್ಯಸಹಾಯವನ್ನು ಮಾಡುವುದು ನಿಮ್ಮ ಕರ್ತವ್ಯ ವಾಗಿದೆ. ಅದನ್ನು ನೀವು ಮಾಡದಿದ್ದರೆ ಬಲಪ್ರಯೋಗದಿಂದ ನಿಮ್ಮ ಧನದಲ್ಲಿ ಒಂದು ಪಾಲನ್ನು ತೆಗೆದುಕೊಳ್ಳದೆ ನಮಗೆ ಬೇರೆ ಗತ್ಯಂತರವಿಲ್ಲ."

ಧನಸಂಗ್ರಹದ ಬಗ್ಗೆ ವಿದ್ರೋಹಿಗಳು ಅವಲಂಬಿಸಿದ ಈ ನವೀನ ರೀತಿಯು ಹೆಚ್ಚು ಫಲಪ್ರದವಾಯಿತು. ತಾವು ಕೊಡಲು ಒಪ್ಪದಿದ್ದರೆ, ವಿದ್ರೋಹಿಗಳು ಬಲಾತ್ಕಾರದಿಂದ ಕಸಿದುಕೊಳ್ಳುವರೆಂಬುದನ್ನು ಧನಿಕರು ತಿಳಿಯಲು, ಅವರು ಅಧಿಕಾರಿಗಳ ಕೋಪದೃಷ್ಟಿಗೆ ಬೀಳಲಿಕ್ಕೆ ಇಷ್ಟಪಡಲಿಲ್ಲ. ಅವರು ತಮ್ಮ ದ್ರವ್ಯ ದಲ್ಲಿ ಒಂದು ಪಾಲನ್ನು ವಿದ್ರೋಹಿಗಳಿಗೆ ತಾವಾಗಿ ಕೊಡಹತ್ತಿದರು. ಸ್ವಂತ ಮನಸ್ಸಿನಿಂದ ದ್ರವ್ಯ ಸಹಾಯವನ್ನು ಮಾಡಿದವರನ್ನು ಪೀಡಿಸುವ ಗೋಜಿಗೆ ವಿದ್ರೋಹಿಗಳು ಹೋಗಲಿಲ್ಲ. ಅಂತು ಜ್ಞಾನಾನಂದನ ಹಂಚಿಕೆಯು ಫಲಪ್ರದ ವಾಯಿತು. ಬೊಕ್ಕಸದಲ್ಲಿ ಧನವು ತುಂಬತೊಡಗಿತು. ಪ್ರಜೆಗಳ ಕಷ್ಟಗಳನ್ನು ಪರಿಹರಿಸಲು ಸಾಧ್ಯವಾಯಿತು.

ಈ ಸಂದರ್ಭದಲ್ಲಿ ಹಳ್ಳಿಗಳಲ್ಲಿ ಅಲೆದು ಒಬ್ಬಳು ಜನಜಾಗೃತಿಯನ್ನುಂಟು ಮಾಡುತ್ತಿದ್ದಳು; ರೂಪನಗರದಲ್ಲಿ ಸ್ವಾತಂತ್ರ್ಯಭಾಸ್ಕರನು ಉದಯವನ್ನು ಹೊಂದಿದನೆಂಬ ಸಂದೇಶವನ್ನು ಸಾರುತ್ತಿದ್ದಳು. ಅವಳ ಕೈಯಲ್ಲಿದ್ದ ತಂಬೂರಿಯು ಸವಿಗಾನವನ್ನು ನುಡಿಸುತ್ತಿದ್ದಿತು. ಜನರು ಆ ಗಾನಸುಧೆಯಿಂದ ಸಂತೃಪ್ತರಾಗುತ್ತಿದ್ದರು. ಅವಳು ನಮಗೆ ಚಿರಪರಿಚಿತಳಾದ ಭೈರವಿಯಾಗಿದ್ದಳು.

ಭೈರವಿಯು ತಲುಪದ ಎಡೆಯು ರೂಪನಗರದಲ್ಲಿರಲಿಲ್ಲ. ಸಿರಿವಂತರ ಗೇಹಗಳಿಗೆ ಹೋಗುತ್ತಿದ್ದಳು; ದೀನದರಿದ್ರರ ಗುಡಿಸಿಲುಗಳಿಗೂ ತೆರಳುತ್ತಿದ್ದಳು. ಶ್ರೀಮಂತನಲ್ಲಿ ನಾಡಸೇವೆಗೆ ದ್ರವ್ಯದಾನವನ್ನು ಮಾಡೆಂದು ಯಾಚಿಸುತ್ತಿದ್ದಳು. ದೀನರಿಗೆ ತನ್ನ ಸವಿಮಾತುಗಳಿಂದ ಸಂತಸವನ್ನು ನೀಡುತ್ತಿದ್ದಳು. ಉಳ್ಳವರಿಗೂ, ಇಲ್ಲದವರಿಗೂ ನಡುವೆ ಇರುವ ಅಂತರವನ್ನು ದಾಟಲಿರುವ ಸೇತುವೆಯಂತಿದ್ದಳು ಭೈರವಿಯು. ಅವಳ ತಂಬೂರಿಯು ತಲುಪದ ಸ್ಥಳ ವಿಲ್ಲ. ಅವಳ ಗಾನವು ಧ್ವನಿಗೊಳ್ಳದ ಊರಿಲ್ಲ.

ಭೈರವಿಯು ತೆರಳಿದಳು ಒಬ್ಬ ಸಿರಿವಂತನ ಸದನಕ್ಕೆ. ಅವಳ ಕರದಲ್ಲಿದ್ದ

ತಂಬೂರಿಯು ಮಿಡಿದಿತು. ಅವಳ ಕಂಠದಿಂದ ಗಾನವಾಹಿನಿಯು ಉಕ್ಕಿ ಹರಿದಿತು. ಅವಳ ಮೃದುಮಧುರ ಸಂಗೀತವನ್ನು ಕೇಳಿ ಧನಿಕನು ಸಂತುಷ್ಟನಾದ. ಅವಳೊಬ್ಬ ಯಾಚಕಿಯಿರಬಹುದೆಂದು ಭಾವಿಸಿ ಕೆಲವು ಕಾಸುಗಳನ್ನು ನೀಡಿದ; ಆದರೆ ಅವಳು ಧನಿಕನು ನೀಡಿದ ಕಾಸುಗಳನ್ನು ಸ್ವೀಕರಿಸವೆ ಹೀಗೆ ನುಡಿದಳು: "ಉದರವನ್ನು ತುಂಬಲು ಭಿಕ್ಷೆಯನ್ನು ಬೇಡತಕ್ಕ ಯಾಚಕಿಯು ನಾನಲ್ಲ."

"ಹಾಗಾದರೆ ನೀನಾರು? ನಿನಗೆ ಬೇಕಾದುದೇನು?" ವಿಸ್ಮಯದಿಂದ ಶ್ರೀಮಂತನು ಪ್ರಶ್ನಿಸಿದನು.

"ಅಣ್ಣಾ, ನಾಡಿನ ಸ್ವಾತಂತ್ರ್ಯವನ್ನು ಕಾಪಾಡುವದರಲ್ಲಿ, ದೀನ-ದರಿದ್ರರ ಗೋಳನ್ನು ಪರಿಹರಿಸುವ ಕೆಲಸದಲ್ಲಿ ನೀನು ನಿನ್ನ ಕರ್ತವ್ಯವನ್ನು ಮಾಡಬೇಕು. ನೋಡು, ಜ್ಞಾನಾನಂದನು ತನ್ನ ಅತುಲ ಸಾಹಸಗಳಿಂದ ನಾಡಿನ ಸ್ವಾತಂತ್ರ್ಯವನ್ನು ಗಳಿಸಿರುತ್ತಾನೆ. ಅವನ ಪ್ರಯತ್ನವು ಯಶಸ್ವಿಯಾಗಬೇಕಾದರೆ, ನಾಡಿನ ಸೇವೆಗೆ ನೀವೆಲ್ಲರೂ ಮುಂದೆ ಬರಬೇಕು. ಅಣ್ಣಾ, ದೇವರು ನಿನಗೆ ಸಂಪತ್ತು ದಯಪಾಲಿಸಿರುತ್ತಾನೆ. ಅದನ್ನು ಜನಹಿತಕ್ಕಾಗಿ ವಿನಿಯೋಗಿಸು. ಲೋಕದಲ್ಲಿ ಜನಸೇವೆಗಿಂತ ಮಹತ್ತರವಾದುದು ಬೇರೊಂದಿಲ್ಲ."

"ಆದರೆ ಜ್ಞಾನಾನಂದನು ಸುಲಿಗೆಯ ಧೋರಣೆಯನ್ನು ಅವಲಂಬಿಸಿರುತ್ತಾನೆ ಈಗ ಪಠಾಣರ ಬದಲು ಹಿಂದುಗಳು ಸುಲಿಗೆಯನ್ನು ಜರುಗಿಸುತ್ತಿದ್ದಾರೆ ಅಷ್ಟೆ. ಧನಿಕರಿಗೆ ಪೀಡನೆಯನ್ನು ನೀಡಲು ಹೊರಟಿರುವ ಒಂದು ಪುಂಡರ ಹಿಂಡಿಗೆ ಸಹಾಯಮಾಡಲು ನನ್ನಿಂದಾಗದು. ಬೇಕಾದರೆ ನಿನಗೆ ಒಂದೆರಡು ಹೊನ್ನುಗಳನ್ನು ಹೆಚ್ಚಿಗೆ ಕೊಡುತ್ತೇನೆ."

"ಅಣ್ಣಾ, ಈ ಮೊದಲು ನಾನು ನುಡಿಯಲಿಲ್ಲವೇ?" ಧನಿಕನ ಮಾತುಗಳನ್ನು ಆಲಿಸಿದ ಭೈರವಿಯು ನುಡಿದಳು: "ಈ ಒಂದು ಹೊಟ್ಟೆಯನು ತುಂಬಲೋಸುಗವಲ್ಲ ನಾನು ಬೇಡುತ್ತಿರುವದು. ಅನೇಕ ಮಂದಿ ಹೆಣಗಿ ಸಂಪಾದಿಸಿದ ಸ್ವಾಧೀನತೆಯನ್ನು ಕಾಪಾಡಲೋಸುಗ ನಾನು ಬೇಡುತ್ತಿದ್ದೇನೆ; ಭಿಕ್ಷುಕಳಂತೆ ಅಲೆಯುತ್ತಿದ್ದೇನೆ ನಿನ್ನಂಥ ಪುಣ್ಯಶಾಲಿಗಳು ಸ್ವಂತ ಇಷ್ಟದಿಂದ ನಾಡನ್ನು ಉದ್ಧರಿಸಲು ಮುಂದೆ ಬಾರದಿರುವಾಗ ಜ್ಞಾನಾನಂದನು ಧನಿಕರು ತಮ್ಮ ಸಂಪತ್ತಿನಲ್ಲಿ ಒಂದ ಪಾಲನ್ನು ಕೊಡಬೇಕೆಂದು ನಿರ್ಬಂಧಿಸ ಬೇಕಾಗಿ ಬಂದಿತು. ಅದಲ್ಲದೆ ಬೇರೆ ಉಪಾಯವಿರಲಿಲ್ಲ. ನೋಡು, ಬರಗಾಲ; ಜನರು

ಅನ್ನವಿಲ್ಲದೆ ನರಳುತ್ತಿದ್ದಾರೆ; ದಾರಿದ್ರ್ಯದ ಸಂಕೋಲೆಗೆ ಸಿಲುಕಿ ಗೋಳಿಡುತ್ತಿದ್ದಾರೆ. ಈ ನಿರ್ಗತಿಕರನ್ನು, ಈ ದರಿದ್ರ ನಾರಾಯಣರನ್ನು ಪರಿಪಾಲಿಸುವದು ನಮ್ಮ ಕರ್ತವ್ಯವಲ್ಲವೇ? ನಾವೆಲ್ಲರೂ ನರಪ್ರಾಣಿಗಳಿರುತ್ತೇವೆ. ಒಬ್ಬರ ದುಃಖವನ್ನು ನೋಡಿ ಇನ್ನೊಬ್ಬರು ಸಹಾಯ ಮಾಡಬೇಕಾದುದು ನಮ್ಮ ಧರ್ಮ. ಇದುವರೆಗೆ ಅನ್ಯರ ಆಡಳಿತದ ಕಿಚ್ಚಿನಲ್ಲಿ ನಾವು ಬೆಯ್ಯುತ್ತಿದ್ದೆವು. ಈ ವಿಪತ್ತುಗಳನ್ನು ದೂರಗೊಳಿಸಲು ಶಕ್ತನಾದ ಒಬ್ಬ ಮನುಷ್ಯನು ನಮಗೆ ದೊರೆತನು. ಅವನು ನಮಗೆ ಸ್ವಾತಂತ್ರ್ಯವನ್ನು ಗಳಿಸಿಕೊಟ್ಟನು. ಕತ್ತಲೆಯಲ್ಲಿ ಬಿದ್ದವರಿಗೆ ದಾರಿತೋರಿಸಿದನು. ಬಲಹೀನವಾಗಿದ್ದ ಎದೆಗಳಲ್ಲಿ ಹೊಸ ಉಸಿರನ್ನು ತುಂಬಿದನು. ಈಗ ನಮ್ಮ ನಾಡಿನಲ್ಲಿ ಸುಖ ಸಂತೃಪ್ತಿಗಳನ್ನು ಹರಡಲು ಆ ಮಹಾತ್ಮನು ಹೊರಟಿದ್ದಾನೆ. ಅವನ ಈ ಪ್ರಯತ್ನಕ್ಕೆ ನಾವೆಲ್ಲರೂ ಬೆಂಬಲವನ್ನು ನೀಡಬೇಕಾದುದು ಅತ್ಯಾವಶ್ಯಕ. ಅವನ ಕೃತ್ಯಗಳಲ್ಲಿ ನಾವು ಪೂರ್ಣ ವಿಶ್ವಾಸವನ್ನು ಇಡಬೇಕಾಗಿದೆ. ಇದುವರೆಗೆ ಸರಿಯಾದ ದಾರಿಯಲ್ಲಿ ನಮ್ಮನ್ನು ಮುಂದೆ ಒಯ್ಯುವವನು ಈಗ ನಮ್ಮನ್ನು ಹೊಂಡದಲ್ಲಿ ಕೆಡುಹಲಾರ. ನಮ್ಮ ನಾಡಿನ ಭವಿಷ್ಯವು ಆ ಪುಣ್ಯಾಜೀವಿಯನ್ನು ಅವಲಂಬಿಸಿ ನಿಂತಿದೆ. ಆದುದರಿಂದ ಆತನ ಕಾರ್ಯಸಾಧನೆಗಳಲ್ಲಿ ನಾವು ನೆರವಾಗಬೇಕು. ನೀನು ತಿಳಿದು ನೋಡು, ಒಂದು ಮಹತ್ಕಾರ್ಯ ಸಾಧನೆಗೆ ಹೊರಟವನು ನಿಷ್ಠುರವಾದ ಒಂದು ಧೋರಣೆಯನ್ನು ಅನುಸರಿಸಬೇಕಾಗಿ ಬರುತ್ತದೆ. ಇಂದಿನ ನಾಡಿನ ಸ್ಥಿತಿಯನ್ನು ಅಭಿವೃದ್ಧಿಗೊಳಿಸಬೇಕಾದರೆ ಧನವಿಲ್ಲದೆ ಆಗದು. ನಿನ್ನಂಥ ಸಿರಿವಂತರು ಒಲ್ಲೆನೆಂದು ಹೇಳಿದರೆ, ತನ್ನ ಕಾರ್ಯವನ್ನು ಸಾಧಿಸಲು ನಿರ್ಬಂಧವಲ್ಲದೆ ಬೇರೆ ಯಾವ ದಾರಿಯು ಅವನಿಗೆ ಉಳಿದಿದೆ?"

"ಅಣ್ಣಾ, ನಾನು ಹೇಳುವದನ್ನು ಕೇಳು. ನಿನಗೂ ಹೃದಯವಿದೆ; ಆತ್ಮವಿದೆ; ಆಲೋಚಿಸಲು ಬುದ್ಧಿಯಿದೆ. ಸುತ್ತಲೂ ಕೂಳಿಲ್ಲದೆ ಕ್ರಂದಿಸುತ್ತಲಿರುವ ದೀನದರಿದ್ರರ ಪರಿಸ್ಥಿತಿಯನ್ನು ಒಮ್ಮೆ ಚಿಂತಿಸು."

ಈ ದಾಟಿಯಲ್ಲಾಗಿದ್ದಿತು ಭೈರವಿಯ ಮಾತುಗಳು. ಮೋಹಕವಾದ ಸ್ವರ; ನುಡಿಗಳಲ್ಲಿ ಉಕ್ಕಿ ಬರುತ್ತಿದ್ದ ಕರುಣೆ; ನಿಃಸ್ವಾರ್ಥತೆಯನ್ನು ಸೂಚಿಸತಕ್ಕ ಆ ಸುಂದರ ನೇತ್ರಗಳು ಇವುಗಳು ಯಾರನ್ನೂ ಆಕರ್ಷಿಸದೆ; ಇರಲಾರವು. ಅವಳ ನುಡಿಗಳನ್ನು ಕೇಳಿದೊಡನೆಯೇ ಆಕೆಯು ಒಬ್ಬ ಸಾಮಾನ್ಯ ಭಿಕ್ಷುಕಿಯಲ್ಲವೆಂಬುದು ಶ್ರೀಮಂತನಿಗೆ ಹೊಳೆದಿತು. ಅವಳ ಪ್ರತಿಯೊಂದು ನುಡಿಯು

ಅವಳು ಸುಸಂಸ್ಕಾರವನ್ನು ಪಡೆದ ಮಹಿಳೆಯಿರುವಳೆಂಬುದನ್ನು ಸೂಚಿಸುತ್ತಿದ್ದಿತು. ಪ್ರತಿಯೊಂದು ನುಡಿಯೂ ಕೇಳುವವನ ಎದೆಯನ್ನು ಕರಗಿಸಲು ಪರ್ಯಾಪ್ತವಾದುದಾಗಿದ್ದಿತು. ಭೈರವಿಯ ನುಡಿಗಳನ್ನು ಕೇಳಿದ ಸಿರಿವಂತನು ಆಲೋಚಿಸತೊಡಗಿದನು. ತನ್ನ ಸುತ್ತುಮುತ್ತಲಿನ ಪ್ರದೇಶಗಳ ಸ್ಥಿತಿಗತಿಗಳನ್ನು ನೆನೆದನು. ದಾರಿದ್ರ್ಯ, ಅಜ್ಞತೆ, ರೋಗಗಳಿಂದ ಬಳಲುತ್ತಿದ್ದ ಪಾಮರರು ಅವನ ಮನಶ್ಚಕ್ಷುಸ್ಸುಗಳ ಮುಂದೆ ಬಂದು ನಿಂತರು. ಚಿತ್ರಗಳಂತೆ ಅವರು ಅವನ ಚಿತ್ತದಲ್ಲಿ ತೇಲಿ ಮತ್ತೆ ಮಾಯವಾದರು. ತನ್ನಲ್ಲಿ ಧನವಿದೆ: ಧಾನ್ಯವಿದೆ; ಆದರೆ ತನ್ನ ಸೋದರರಾದ ಇತರ ಮಾನವ ಜೀವಿಗಳು ಹೊಟ್ಟೆಗಳನ್ನು ತುಂಬಿಸಿಕೊಳ್ಳಲು ಕೂಳಿಲ್ಲದೆ ನರಳುತ್ತಿರುವವು. ಅವರ ದುಃಖಗಳನ್ನು ಕಡಿಮೆಮಾಡಲು ಯತ್ನಿಸಬೇಕಾದುದು ನಿನ್ನ ಕರ್ತವ್ಯವಲ್ಲವೆ? ಎಂದು ಶ್ರೀಮಂತನ ಅಂತರಾತ್ಮನು ನುಡಿದನು. ಇದುವರೆಗೆ ಇರುಳು ಕವಿದಿದ್ದ ಅವನ ಚಿತ್ತದಲ್ಲಿ ಒಂದು ಜ್ಯೋತಿಯು ಬೆಳಗಿತು. ದೃಷ್ಟಿಯು ವಿಶಾಲವಾಯಿತು ಅವನು ನಮ್ರಸ್ವರದಲ್ಲಿ ನುಡಿದನು: "ಅಕ್ಕಾ ನನ್ನ ಕೈಲಾದುದನ್ನು ಮಾಡುತ್ತೇನೆ. ಇದುವರೆಗೆ ನಾನು ಕುರುಡನಾಗಿದ್ದೆನು. ನಿನ್ನ ನುಡಿಗಳು ನನ್ನ ಕಣ್ಣುಗಳಿಗೆ ಅಂಜನವನ್ನು ಹಾಕಿದವು."

"ಅಣ್ಣಾ," ಎಳೆನಗೆಯೊಂದು ಭೈರವಿಯ ತುಟಿಗಳ ಮೇಲೆ ತಾಂಡವವಾಡಿತು. "ನೀನು ನನಗೆ ಯಾವ ಭಿಕ್ಷೆಯನ್ನೂ ನೀಡಬೇಕಾಗಿಲ್ಲ. ನಾಡಸೇವೆಗೆ ನೀನರ್ಪಿಸಲಿಚ್ಛಿಸುವ ದ್ರವ್ಯವನ್ನು ಜ್ಞಾನಾನಂದನಿಗೆ ನಿವೇದಿಸು."

"ನನಗೇನೂ ಬೇಡ; ನಿನ್ನ ದ್ರವ್ಯವನ್ನು ಜ್ಞಾನಾನಂದನಿಗೆ ನಿವೇದಿಸು." ಈ ಮಾತುಗಳು ಧನಿಕನ ಹೃದಯವನ್ನು ಸ್ಪರ್ಶಿಸಿದವು. ಅವನಿಗೂ ಆಲೋಚಿಸುವ ಶಕ್ತಿಯಿದ್ದಿತು. ಆತ ಚಿಂತಿಸಲಾರಂಭಿಸಿದ. ತಂಬೂರಿಯನ್ನು ಕೈಯಲ್ಲಿ ಹಿಡಿದು ಹಾಡಿ ಸಂಚರಿಸುತ್ತಿರುವ ಒಬ್ಬ ಹೆಂಗಸಿನಲ್ಲಿ ಗೋಚರಿಸತಕ್ಕ ಧೈರ್ಯ. ತ್ಯಾಗ, ಪರಹಿತಚಿಂತನೆ ಇವುಗಳು ಅವನ ಎದೆಯಲ್ಲಿ ಆಳಕ್ಕೆ ಪ್ರವೇಶಿಸಿದವು. ಅನೇಕ ಮಂದಿಯನ್ನು ಅವನು ದರ್ಶಿಸಿದ್ದ; ಆದರೆ "ನನಗೇನೂ ಬೇಕಾಗಿಲ್ಲ; ನಿನ್ನಲ್ಲಿರುವುದನ್ನು ನಾಡಸೇವೆಗೆ ನಿವೇದಿಸು." ಎಂದು ನಿಃಸ್ವಾರ್ಥಬುದ್ಧಿಯಿಂದ ನುಡಿಯತಕ್ಕ ಮನುಷ್ಯರನ್ನು ಅವನು ಇದುವರೆಗೆ ಈಕ್ಷಿಸಿರಲಿಲ್ಲ. ಅವನ ಅಂತರಾತ್ಮನಿಂದ ಧ್ವನಿಯು ಹರಿದು ಬಂದಿತು. ತಾನು ಒಬ್ಬ ಅಪರಾಧಿ, ಸ್ವಾರ್ಥಿ, ಲೋಭಿ. ಈ ಬೋಧವು ಅವನ ಎದೆಯಲ್ಲಿ ಜನಿಸಿತು. "ಒಬ್ಬ ಯಾಚಕಿಯು

ಸಹ ನಾಡಿನ ಸಲ್ವೆಗಾಗಿ ಪ್ರಯತ್ನಿಸುತ್ತಿದ್ದಾಳೆ; ಆದರೆ ನೀನು? ಹಣದರಾಶಿಯ ಮೇಲೆ ಕುಳಿತಿರುವ ನೀನು! ನಾಡದೇವಿಗೆ ಯಾವುದನ್ನು ನಿವೇದಿಸಿರುವೆ?" ಎಂದು ಅವನ ಅಂತರಾತ್ಮನು ಪ್ರಶ್ನಿಸಿದನು. ಅವನ ಮನದಲ್ಲಿ ಪಶ್ಚಾತ್ತಾಪವು ಮೂಡಿತು. ಜ್ಞಾನಾನಂದನ ದಿವ್ಯಮೂರ್ತಿಯು ಅವನ ಮನಶ್ಚಕ್ಷುಸ್ಸಿನ ಮುಂದೆ ನಿಂತಿತು. ಆ ಭವ್ಯಮೂರ್ತಿಯ ಮುಂದೆ ತನ್ನ ತಲೆಯನ್ನು ತಗ್ಗಿಸಿದ. ಅವನು ಭೈರವಿಯ ಮುಂದೆ ತನ್ನ ತಲೆಯನ್ನು ಬಾಗಿಸಿ ಹೀಗೆ ನುಡಿದ: "ತಾಯೀ, ನೀನು ನುಡಿದುದು ನಿಜ; ನಾನೊಬ್ಬ ಲೋಭಿ. ನಾಡಿನ ಸ್ವಾತಂತ್ರ್ಯಸಾಧನೆಯಲ್ಲಿ ನಿಮ್ಮೆಲ್ಲರ ಕೂಡ ಹೆಣಗುವದು ನನ್ನ ಕರ್ತವ್ಯ. ನನ್ನಲ್ಲಿರುವ ಧನವನ್ನು ನಾಡದೇವಿಯನ್ನು ಭಾಗ್ಯಸಂಪನ್ನಳನ್ನಾಗಿ ಮಾಡಲು ವಿನಿಯೋಗಿಸಬೇಕಾಗಿದ್ದಿತು; ಆದರೆ ನನ್ನ ಬುದ್ಧಿಯನ್ನು ಮಂಕು ಕವಿದಿದ್ದಿತು. ನನ್ನ ಕಣ್ಣುಗಳು ಕುರುಡಾಗಿದ್ದವು. ತಿಳಿಯಬೇಕಾದುದನ್ನು ನಾನು ತಿಳಿಯಲಿಲ್ಲ; ನೋಡಬೇಕಾದುದನ್ನು ನೋಡಲಿಲ್ಲ. ಈಗ ನೀನು ನನ್ನ ಕಣ್ಣುಗಳಿಗೆ ಅಂಜನವನ್ನು ಹಾಕಿದೆ. ನನ್ನ ಬುದ್ಧಿಯನ್ನು ಆವರಿಸಿದ್ದ ಕತ್ತಲೆಯನ್ನು ಹಿಂದಕ್ಕೆ ದೂಡಿದೆ. ತಾಯೀ, ನಿನ್ನ ನುಡಿಗಳನ್ನು ನೆರವೇರಿಸುವೆ; ನನ್ನ ಧನವನ್ನು ನಾಡಿನ ಹಿತಕ್ಕೆಂದು ಜ್ಞಾನಾನಂದನಿಗೆ ನಿವೇದಿಸುವೆ."

"ಅಣ್ಣಾ, ನಿನ್ನ ಮನವನ್ನು ಆವರಿಸಿದ್ದ ಇರುಳು ಹಿಂದಕ್ಕೆ ಸರಿದುದನ್ನು ಕಂಡು ನನಗೆ ಸಂತಸವಾಯಿತು. ನೀನು ಜನರ ಹಿತವನ್ನು ಚಿಂತಿಸು. ದೇವರು ನಿನಗೆ ಒಳ್ಳೆಯದನ್ನು ಮಾಡಲಿ!"

ಈ ನುಡಿಗಳನ್ನಾಡಿ ಭೈರವಿಯು ಹೊರಟು ಹೋದಳು. ಅವಳು ತನ್ನ ಚೆಲುವು ಮಾತುಗಳಿಂದ ಧನಿಕರ ಕಲ್ಲೆದೆಗಳನ್ನು ಕರಗುವಂತೆ ಮಾಡುತ್ತಿದ್ದಳು. ಅವರು ಮಾಡಬೇಕಾದುದೇನೆಂಬವನ್ನು ಅವರಿಗೆ ಅರುಹುತ್ತಿದ್ದಳು; ಆದರೆ ಅವಳ ನುಡಿಗಳಲ್ಲಿ ನಿರ್ಬಂಧವಿರಲಿಲ್ಲ. ಅಧಿಕಾರ ದರ್ಪವಿರಲಿಲ್ಲ; ಆದರೂ ಭೈರವಿಯ ನುಡಿಗಳು ಶ್ರೀಮಂತರಲ್ಲಿ ಮಾನಸಾಂತರವನ್ನುಂಟು ಮಾಡುತ್ತಿದ್ದವು. ಅವಳ ನುಡಿಗಳಲ್ಲಿ ಉಕ್ಕಿ ಹರಿಯುತ್ತಿದ್ದ ಪವಿತ್ರ ಸ್ನೇಹವು ಧನಿಕರ ಮನಸ್ಸುಗಳನ್ನು ಅಂಟಿದ್ದ ಸ್ವಾರ್ಥತೆಯ ಕೊಳೆಯನ್ನು ಹೋಗಲಾಡಿಸುತ್ತಿದ್ದಿತು. ಜ್ಞಾನಾನಂದನ ಅಭ್ಯರ್ಥನೆಯನ್ನು ಮೊದಲು ನಿರಾಕರಿಸಿದ್ದ ಧನಿಕರು ಈಗ ಸ್ವಂತ ಮನಸ್ಸಿನಿಂದ ದ್ರವ್ಯ ಸಹಾಯಮಾಡಲು ಹೊರಟ ಪರಿಣಾಮವಾಗಿ ಜ್ಞಾನಾನಂದನಿಗೆ ಅವರನ್ನು ಬಲಾತ್ಕರಿಸಬೇಕಾಗಿ ಬರಲಿಲ್ಲ.

ಮೊದಲು ತನ್ನ ಪ್ರಾರ್ಥನೆಯನ್ನು ನಿರಾಕರಿಸಿದವರು ಈಗ ತಾವಾಗಿಯೇ ದ್ರವ್ಯಸಹಾಯ ಮಾಡ ಬಂದು ತನ್ನ ಯೋಜನೆಯನ್ನು ಸಾಂಗಗೊಳಿಸಲು ಹೊರಟಿರುವದನ್ನು ನೋಡಿ ಜ್ಞಾನಾನಂದನಿಗೆ ಆಶ್ಚರ್ಯವಾಯಿತು. ಅವರ ಖ್ಲುಂಟಾದ ಮಾರ್ಪಿಗೆ ಕಾರಣವೇನೆಂದು ಅವನು ಸಿರಿವಂತರನ್ನು ಪ್ರಶ್ನಿಸದಿರ ಲಿಲ್ಲ. ಅವರು ಆತನಿಗೆ ವಂದಿಸಿ, ಹೀಗೆ ಹೇಳಿದರು: "ಸ್ವಾಮೀಜಿ, ನಮ್ಮ ತಪ್ಪು ಗಳು ನಮಗೆ ಹೊಳೆದವು. ಭೈರವಿಯೆಂಬ ಒಬ್ಬ ಹೆಂಗಸು ಬಂದು ನಮ್ಮನ್ನು ಆವರಿಸಿದ್ದ ಅಜ್ಞಾತೆಯನ್ನು ತನ್ನ ಮಾತುಗಳಿಂದ ಹೊಡೆದೋಡಿಸಿದಳು. ಇದು ವರೆಗೆ ತಿಳುವಳಿಕೆಯಿಲ್ಲದೆ ನಾವು ಮಾಡಿದ ತಪ್ಪುಗಳನ್ನು ಕ್ಷಮಿಸಿರಿ."

ಜ್ಞಾನಾನಂದನು ತನ್ನ ಕರ್ತವ್ಯಗಳನ್ನು ನೆರವೇರಿಸುವದರಲ್ಲಿ ಕಠೋರ ನಾಗಿದ್ದಂತೆಯೇ, ತಮ್ಮ ತಪ್ಪುಗಳನ್ನು ತಿಳಿದುಕೊಂಡು ಪರಿತಪಿಸುತ್ತಿರುವ ವರಿಗೆ ಸಹಾನುಭೂತಿಯನ್ನು ತೋರಿಸುವದರಲ್ಲಿ ಉದಾರ ಮನಸ್ಕನಾಗಿದ್ದನು. ಆದುದರಿಂದ ಶ್ರೀಮಂತರ ನುಡಿಗಳನ್ನು ಕೇಳುತ್ತಲೆ ಅವನು ಹೀಗೆ ಹೇಳಿದ: "ಒಳ್ಳೆಯದು. ನಿಮ್ಮ ತಪ್ಪುಗಳು ನಿಮಗೆ ಹೊಳೆದುದು ಸಂತೋಷ. ಇದ ರಿಂದ ನಮ್ಮ ಶಕ್ತಿಯನ್ನು ದುರ್ವ್ಯಯಗೊಳಿಸಬೇಕಾದ ಸಂದರ್ಭವು ನಿವಾರಣೆ ಯಾಯಿತು; ಆದರೆ ಒಂದು ಸಂಗತಿಯನ್ನು ಮಾತ್ರ ನೀವು ನೆನಪಿನಲ್ಲಿಡ ಬೇಕು. ಒಂದು ಕೆಲಸವು ನ್ಯಾಯವಾದುದೆಂದೂ ಜನಹಿತ ಚಿಂತನೆಯ ದೃಷ್ಟಿ ಯಲ್ಲಿ ಆವಶ್ಯವಾದುದೆಂದೂ ನನಗೆ ಹೊಳೆದರೆ, ಹಿಮಾಲಯದಂಥ ವಿಘ್ನಗಳು ನನಗಿದಿರಾಗಿದ್ದರೂ ನಾನು ಹಿಂಜರಿಯುವವನಲ್ಲ. ನಿಮ್ಮ ಸಂಕುಚಿತ ಬುದ್ಧಿ ಯನ್ನು ಹೊಡೆದೋಡಿಸಿ, ನಿಮ್ಮ ಮನಸ್ಸುಗಳಲ್ಲಿ ಜ್ಞಾನದೀಪಗಳನ್ನು ಹೊತ್ತಿಸಿದ ಭೈರವಿಯು ಅಭಿನಂದನೆಗೆ ಯೋಗ್ಯಳು."

ಭೈರವಿ, ಈ ಹೆಸರು ಜ್ಞಾನಾನಂದನ ಎದೆಯನ್ನು ಅರಳುವಂತೆ ಮಾ ಡಿತು. ಆವಳ ಪರಿಚಯವು ಅವನಿಗಿಲ್ಲದಿರಲಿಲ್ಲ. ತನ್ನ ಇದು ವರೆಗಿನ ಜೀವನದಲ್ಲಿ ಒಮ್ಮೆ ಮಾತ್ರ ಅವನು ಅವಳನ್ನು ದರ್ಶಿಸಿದ್ದನು. ಅದು ರಾಜದುರ್ಗದ ಯುದ್ಧರಂಗದಲ್ಲಾಗಿದ್ದಿತು. ವಿದ್ರೋಹಿಗಳಿಗೆ ಸೋಲಾಗುವ ಆ ಭಯಂಕರ ಪ್ರಸಂಗವು ಬಂದೊದಗಿದಾಗ, ಹಳ್ಳಿಗಾಡಿನ ಜನರನ್ನು ಸಂಗ್ರಹಿಸಿ, ತನ್ನ ತಂ ಬೂರಿಯನ್ನು ಮಿಾಟುತ್ತಾ ಅವಳು ಯುದ್ಧರಂಗಕ್ಕೆ ಬಂದು ನಿಂತ ಚಿತ್ರವು ಜ್ಞಾನಾನಂದನ ಮನಶ್ಚಕ್ಷುಸ್ಸುಗಳಲ್ಲಿ ನರ್ತಿಸಿತು. ಅವಳ ತಂಬೂರಿಗಾನದಿಂದ ಹುರಿದುಂಬಿದ ಗ್ರಾಮೀಣರು ಕಾದಾಡಿದ ಚಿತ್ರವು ಜ್ಞಾನಾನಂದನ ಕಣ್ಣುಗಳ

ಮುಂದೆ ತಾಂಡವವಾಡಿತು. ಭೈರವಿ, ಯುದ್ಧರಂಗದಲ್ಲಿ ಅಂಬಿಕೆಯಂತೆ ನಿಂತಿದ್ದ ಭೈರವಿ ಅವಳನ್ನು ವಿಸ್ಮರಿಸಲಾಗಲಿಲ್ಲ. ಅವಳಾರು? ಯಾಚಕಿಯಂತೆ ಊರೂರು ಅಲೆಯುವದು, ಸ್ವಾಧೀನ ಜೀವನದ ಸಂದೇಶವನ್ನು ಜನತೆಗೆ ಅರುಹುತ್ತಿದ್ದ ಭೈರವಿಯು ರೂಪನಗರದ ಉದ್ಧಾರಕ್ಕಾಗಿ ಬಂದ ದೇವತೆಯಲ್ಲದೆ ಇನ್ನಾರು? ಶ್ರೀಮಂತರನ್ನು ತನ್ನ ಕಾರ್ಯಸಾಧನೆಗೆಳೆಯಲು ತಾನು ಅಸಮರ್ಥನಾಗಿ ಬಲಪ್ರಯೋಗವನ್ನು ನಡೆಸಬೇಕಾಗಿ ಬಂದಾಗ, ತನಗೆ ಬಗ್ಗದಿದ್ದ ಶ್ರೀಮಂತರನ್ನು ತನ್ನ ಸವಿನುಡಿಗಳಿಂದ ಆಕರ್ಷಿಸಿ, ಅವರಲ್ಲಿ ಪರಿವರ್ತನೆಯನ್ನುಂಟುಮಾಡಿದ ಭೈರವಿಯ ಪ್ರಯತ್ನಗಳ ಮುಂದೆ ತನ್ನ ಭಗೀರಥ ಯತ್ನಗಳೆಲ್ಲ ತುಚ್ಛವಾದವುಗಳೆಂದು ಜ್ಞಾನಾನಂದನು ಭಾವಿಸಿದನು. ಅವನ ಹೃದಯದಿಂದ ಈ ಪ್ರಾರ್ಥನೆಯು ಹೊರಟಿತು: "ದೇವ! ನಮ್ಮ ನಾಡಿನ ಎಲ್ಲ ಮಹಿಳೆಯರನ್ನೂ ಭೈರವಿಯಂತೆ ವಿವೇಕಶಾಲಿನಿಗಳನ್ನಾಗಿ ಮಾಡು!"

ಈ ಪರಿವರ್ತನೆಯ ಕಾಲಘಟ್ಟದಲ್ಲಿ ವಿದ್ರೋಹಿಗಳು ಜನರ ದಾರಿದ್ರ್ಯ ನಿವಾರಣೆಗೆ ಹೇಗೆ ಹೆಣಗಿದರು? ನೊಂದವರ ಸಂಕಟಗಳನ್ನು ಯಾವ ರೀತಿಯಲ್ಲಿ ಪರಿಹರಿಸಿದರು? ಈ ಸಂಗತಿಗಳನ್ನು ಇಲ್ಲಿ ವಿವರಿಸುವದು ಅಸಾಧ್ಯವಾಗಿದೆ. ಒಂದು ಶಾಸನಚಕ್ರವನ್ನು ಚೂರ್ಣೀಕರಿಸುವದರಲ್ಲಿ ಅವರು ತಮ್ಮ ಅದ್ಭುತ ಸಾಮರ್ಥ್ಯವನ್ನು ತೋರಿಸಿದಂತೆ, ಒಂದು ಹೊಸ ನಾಡನ್ನು ರಚಿಸುವದರಲ್ಲಿ ಅವರು ತಮ್ಮ ಅನುಪಮ ಕೌಶಲ್ಯವನ್ನು ಪ್ರದರ್ಶಿಸಿದರೆಂದು ಇಲ್ಲಿ ಹೇಳಿದರೆ ಸಾಕಾಗಿವೆ. ಅವರ ಸ್ಥಿರೋತ್ಸಾಹ, ಕರ್ಮಕುಶಲತೆ, ನಿಃಸ್ವಾರ್ಥತೆ ಇವುಗಳಿಂದ ರೂಪನಗರವು ನವಜೀವನವನ್ನು ಪಡೆದಿತು. ನಾಡದೇವಿಯ ಕಳೆಗುಂದಿದ ವದನದಾವರೆಯು ಪುನಃ ಪೂರ್ಣ ವಿಕಾಸವನ್ನು ಹೊಂದಿತು. ಸುಖ, ಶಾಂತಿ, ಸಂತೃಪ್ತಿಗಳು ನಾಡಿನಲ್ಲಿ ಹರಡತೊಡಗಿದವು.

ಈ ಸಂದರ್ಭದಲ್ಲಿ ೬೦ ವರುಷದ ಮುದುಕ ಫಕೀರ ಹುಸ್ನೇನನು ಜರುಗಿಸಿದ ಪ್ರಯತ್ನಗಳನ್ನು ವಿಸ್ಮರಿಸಲು ಸಾಧ್ಯವಿಲ್ಲ. ಅತಿ ವೃದ್ಧಾಪ್ಯ, ಅನಾರೋಗ್ಯ ಇವುಗಳಿಂದ ಫಕೀರ ಹುಸ್ನೇನನ ದೇಹವು ಬಲಗುಂದಿದ್ದರೂ, ನಾಡನ್ನು ಪುನರ್ರಚಿಸುವ ಮಹಾಪ್ರಯತ್ನದಲ್ಲಿ ಆತ ತನ್ನ ಪಾಲನ್ನು ಬಹು ಅಚ್ಚುಕಟ್ಟುತನದಿಂದ ನಿರ್ವಹಿಸಿದನು. ಅವನ ಜೀವನದ ಆಕಾಂಕ್ಷೆಯು ಎರಡೂ ಸಮುದಾಯಗಳ ನಡುವೆ ಹರಡಿದ್ದ ವಿದ್ವೇಷದ ಬೆಂಕಿಯನ್ನು ನಂದಿಸಿ, ಪರಸ್ಪರ ಸ್ನೇಹ-ಸೌಹಾರ್ದಗಳನ್ನು ನೆಲಸುವಂತೆ ಮಾಡುವುದಾಗಿದ್ದಿತು. ಈ

ಪವಿತ್ರೋದ್ದೇಶ ಸಾಧನೆಗೆಂದು ಅವನು ತನ್ನ ದೇಹದ ಅನಾರೋಗ್ಯ ಪರಿಸ್ಥಿತಿಯನ್ನು ಲೆಕ್ಕಿಸದೆ ಮುಂದೆ ಬಂದನು. ಅವನ ಸ್ವಧರ್ಮೀಯರಾದ ಪಠಾಣರ ಆಳ್ವಿಕೆಯಲ್ಲಿ ಅಧಿಕಾರಿಗಳ ದುಷ್ಪ್ರವೃತ್ತಿಯ ಮೂಲಕ ಈ ಕೆಲಸವು ಸಾಧಿಸಿರಲಿಲ್ಲ. ಅವರ ದಬ್ಬಾಳಿಕೆಯು ಎರಡು ಪಕ್ಷಗಳ ನಡುವಿನ ಅಂತರವನ್ನು ಹೆಚ್ಚಿಸಿತ್ತು. ಆಳುವವರು ಈ ಅನ್ಯಾಯದಾಳ್ವಿಕೆಗೆ ಧರ್ಮದ ಬಣ್ಣವನ್ನು ಬಳಿದುದರಿಂದ, ಸರಳ ಮನಸ್ಕರಾದ ಹಲವು ಮಂದಿ ಪಠಾಣರಲ್ಲಿ ಹಿಂದುಗಳನ್ನು ಪೀಡಿಸುವದು ಒಂದು ಪುಣ್ಯಕೆಲಸವೆಂಬ ಭಾವನೆಯು ಬೇರೂರಿತು. ಆಳುವವರು ಪಠಾಣರಾಗಿದ್ದುದರಿಂದ, ದಬ್ಬಾಳಿಕೆಗೂ ಪೀಡನೆಗಳಿಗೂ ಗುರಿಯಾದ ಹಿಂದುಗಳಲ್ಲಿ ಇಸ್ಲಾಂ ಧರ್ಮದ ಬಗ್ಗೆ ಸಂಶಯವೂ, ವಿದ್ವೇಷವೂ ಉದ್ಭೂತವಾದುದರಲ್ಲಿ ಕೌತುಕವಿಲ್ಲ; ಆದರೆ ಈಗ ಸ್ಥಿತಿಗತಿಗಳು ಬದಲಾಯಿಸಿದ್ದುವು. ಸತ್ಯ ಮತ್ತು ನ್ಯಾಯಗಳನ್ನು ತಮ್ಮ ಶಾಸನ ನೀತಿಯ ತಳಹದಿಯಾಗಿ ಸ್ವೀಕರಿಸಿದ ಒಂದು ಪಂಗಡದವರು ಈಗ ಅಧಿಕಾರಾರೂಢರಾಗಿದ್ದರು. ಅವರು ಧರ್ಮದ ಹೆಸರನ್ನು ಹೇಳಿ ಯಾರನ್ನೂ ಹಿಂಸೆಗೆ ಗುರಿಮಾಡಲಿಲ್ಲ; ಆದರೆ ಹಿಂದಣ ಅಧಿಕಾರಸ್ಥರು ಜನರ ಎದೆಗಳಲ್ಲಿ ತುಂಬಿದ್ದ ವಿಷವು ಮಾತ್ರ ನಿವಾರಣೆಯನ್ನು ಹೊಂದಲಿಲ್ಲ. ಎರಡು ಸಮುದಾಯದವರೂ ಪರಸ್ಪರ ಸಂಶಯಾತ್ಮ ದೃಷ್ಟಿಗಳಲ್ಲಿ ಈಕ್ಷಿಸುತ್ತಿದ್ದರು. ಹೊಸದಾಗಿ ರಾಜಶಾಸನವನ್ನು ಕೈಕೊಂಡವರು ವಿಧರ್ಮೀಯರಾದ ಹಿಂದುಗಳಾಗಿದ್ದುದರಿಂದ, ತಮ್ಮ ಧಾರ್ಮಿಕ ಆಚರಣೆಗಳಿಗೆ ವಿಘ್ನವು ಬಂದೊದಗಬಹುದೆಂಬ ಸಂಶಯವು ಪಠಾಣರಲ್ಲಿ ಜನಿಸಿತು. ಆದುದರಿಂದ ಎರಡೂ ಸಮುದಾಯಗಳ ನಡುವಿನ ಅಂತರವು ಕಡಿಮೆಯಾಗುವಂತಿರಲಿಲ್ಲ. ಧರ್ಮದ ಹೆಸರಿನಲ್ಲಿ ನೆತ್ತರಿನ ಹೊಳೆಯು ಹರಿಯುವ ಪ್ರಸಂಗಗಳು ಬಹು ದೂರದಲ್ಲಿಲ್ಲವೆಂಬುದನ್ನು ಜನತೆಯ ನಾಡಿಗಳಲ್ಲಿ ಕುದಿಯುತ್ತಿದ್ದ ವಿದ್ವೇಷಾಗ್ನಿಯು ಸೂಚಿಸುತ್ತಿದ್ದಿತು. ಈ ಅನರ್ಥವನ್ನು ನಿವಾರಿಸುವದು, ಎರಡೂ ಬಣಗಳ ನಡುವಿನ ಅಂತರವನ್ನು ಹೋಗಲಾಡಿಸುವದು ತನ್ನ ಕರ್ತವ್ಯವೆಂದು ಫಕೀರನು ಭಾವಿಸಿದನು. ಈ ಸೌಹಾರ್ದವು ಜನರಲ್ಲಿ ಉದಿಸದೆ ಹೋದರೆ, ರೂಪನಗರದ ಜನಜೀವನದ ಅಂತರಿಕ್ಷವನ್ನು ಮುಗಿಲುಗಳಾವರಿಸಿ ಬೆಳಕಿಲ್ಲದಂತಾಗುವದೆಂದು ಆ ವೃದ್ಧನು ಅರಿತಿದ್ದನು. ಆದುದರಿಂದ ಈ ಮಹತ್ಕಾರ್ಯ ಸಾಧನೆಗೆ ಅವನು ತನ್ನ ವೃದ್ಧಾಪ್ಯವನ್ನು ಲೆಕ್ಕಿಸದೆ ಹೆಣಗಿದನು.

ಈ ಸೌಹಾರ್ದಬಂಧವನ್ನು ದೃಢಪಡಿಸಲು ಫಕೀರ ಹುಸ್ಸೇನನೇ ಯೋ

ಗ್ಯನಾಗಿದ್ದನು. ರೂಪನಗರದಲ್ಲಿ ಎಲ್ಲ ಜನರ ಸ್ನೇಹ-ವಿಶ್ವಾಸಗಳಿಗೆ ಪಾತ್ರನಾದವನು ಫಕೀರ ಹುಸೇನನಾಗಿದ್ದನೆಂದು ಹಿಂದೆ ಪ್ರಸ್ತಾಪಿಸಿದುದು ವಾಚಕರ ನೆನಪಿನಲ್ಲಿರಬಹುದು. ಅವನನ್ನು ಹಿಂದುಗಳು ಗೌರವಿಸುತ್ತಿದ್ದರು; ಅದರಂತೆಯೇ ಮುಸಲ್ಮಾನರೂ ಅವನನ್ನು ಬಹುಮಾನಿಸುತ್ತಿದ್ದರು. ಈ ಎರಡೂ ಸಮುದಾಯಗಳನ್ನು ಒಂದುಗೂಡಿಸಬೇಕಾದರೆ, ಈ ಎರಡೂ ಸಮುದಾಯಗಳ ಸ್ನೇಹವಿಶ್ವಾಸಗಳಿಗೆ ಪಾತ್ರೀಭವಿಸಿದ ವ್ಯಕ್ತಿಯೇ ಪ್ರಯತ್ನಿಸುವುದು ಅತ್ಯಾವಶ್ಯಕ. ಆ ಯೋಗ್ಯತೆಯು ಫಕೀರ ಹುಸ್ಸೇನನಿಗಿದ್ದಿತು. ಆದುದರಿಂದ ಅವನ ಪ್ರಯತ್ನವು ವಿಜಯಪ್ರದವಾಗುವುದೆಂಬ ನಂಬಿಕೆಯು ಎಲ್ಲರಿಗೂ ಇದ್ದಿತು.

ಫಕೀರ ಹುಸ್ಸೇನನು ಮೊದಲು ತಮ್ಮ ಸ್ವಧರ್ಮೀಯರ ಬಳಿಗೆ ತೆರಳಿದನು. ಅವನು ಧರ್ಮನಿಷ್ಠನೂ, ಶಾಸ್ತ್ರಜ್ಞನೂ ಆಗಿದ್ದುದರಿಂದ ಅವರು ಅವನನ್ನು ವಿನಯದಿಂದ ಸ್ವಾಗತಿಸಿ ಸತ್ಕರಿಸಿದರು. ಅವರ ಸತ್ಕಾರಗಳನ್ನು ಸ್ವೀಕರಿಸುತ್ತಾ ಫಕೀರ ಹುಸ್ಸೇನನು ಹೇಳಿದ:"ಮಕ್ಕಳೇ, ನೀವು ಇದುವರೆಗೆ ಹಿಂದುಗಳೊಡನೆ ವರ್ತಿಸುತ್ತಿದ್ದ ರೀತಿಯನ್ನು ಸಂಪೂರ್ಣವಾಗಿ ಬದಲಾಯಿಸಬೇಕು. ಹಾಗಾದರೆ ಮಾತ್ರ ನಮಗೆ ಈ ದೇಶದಲ್ಲಿ ಅಭ್ಯುನ್ನತಿಗೆ ಹಾದಿಯಿದೆ."

"ಅಂದರೆ ಫಕೀರಸಾಹೇಬ, ನಾವು ಅವರೊಡನೆ ಹೇಗೆ ವರ್ತಿಸಬೇಕು? ಕಾಫರರ ಅಸ್ತಿತ್ವವನ್ನು ಧ್ವಂಸಗೊಳಿಸಬೇಕಲ್ಲವೇ?" ತಿಳಿಗೇಡಿಯಾದ ಪಠಾಣನೊಬ್ಬನು ಪ್ರಶ್ನಿಸಿದನು.

"ಮಗೂ, ದುಡುಕಬೇಡ; ನಾನು ಹೇಳುವುದನ್ನು ಕೇಳು." ಶಾಂತಸ್ವರದಲ್ಲಿ ಫಕೀರನು ಹೇಳಿದ. "ಹಿಂದುಗಳಿಗೆ ಕೇಡನ್ನು ಬಗೆಯಬೇಕೆಂದು ನಾನು ಹೇಳಲಾರೆ ಅದರಂತೆಯೇ ಅವರು ಸ್ಥಾಪಿಸಿದ ರಾಜ್ಯವನ್ನು ನಾಶ ಮಾಡಬೇಕೆಂದೂ ನಾನು ಹೇಳುವುದಿಲ್ಲ. ನೀವು ಹಿಂದುಗಳನ್ನು ಪ್ರೀತಿಸಲು ಕಲಿಯಬೇಕಾಗಿದೆ. ಅದಾಗಿದೆ ನಾನು ಹೇಳುತ್ತಿರುವುದು."

"ಹಿಂದುಗಳನ್ನೇ! ವಿಗ್ರಹಾರಾಧಕರನ್ನೇ!" ಈ ಸ್ವರಗಳು ಏಕಕಾಲದಲ್ಲಿ ಜನರ ಕಂಠಗಳಿಂದ ಹೊರಸೂಸಿದವು.

"ಅಹುದು; ಅವರು ನಮ್ಮಂತೆಯೇ ಮನುಷ್ಯರಾಗಿರುತ್ತಾರೆ. ಅವರನ್ನು ನಾವು ಏಕೆ ಪ್ರೀತಿಸಬಾರದು? ಅವರೊಡನೆ ನಾವು ಏಕೆ ಸ್ನೇಹದಿಂದ ವರ್ತಿಸಬಾರದು?"

"ಆದರೆ ಅವರು ನಮ್ಮ ಧರ್ಮವನ್ನು ಅನುಸರಿಸುತ್ತಿಲ್ಲ; ನಮ್ಮ

ಶಾಸ್ತ್ರಗಳು ನಿಷೇಧಿಸಿದ ವಿಗ್ರಹಾರಾಧನೆಯನ್ನು ಅವರು ಮಾಡುತ್ತಿದ್ದಾರೆ."

"ಧರ್ಮವೇನೆಂಬುದನ್ನು ನೀವು ಇನ್ನೂ ತಿಳಿದಿಲ್ಲ. ಒಬ್ಬನು ಆಚರಿಸಿದಂತೆಯೇ ಇನ್ನೊಬ್ಬನು ಆಚರಿಸಬೇಕೆಂದು ಹೇಳುವದು ಧರ್ಮವಲ್ಲ. ಅದು ಹಟಮಾರಿತನ ಮಾತ್ರವಾಗಿವೆ. ಒಂದು ಸ್ಥಳವನ್ನು ಸೇರಲು ಅನೇಕ ದಾರಿಗಳಿವೆ. ಅವರವರಿಗೆ ಹಿತವೆನಿಸಿದ ದಾರಿಗಳನ್ನು ಹಿಡಿದು ಅವರವರು ತೆರಳಲಿ! ಎಲ್ಲರೂ ಒಂದೇ ದಾರಿಯಲ್ಲಿ ಗಮಿಸಬೇಕೆಂಬು ಹೇಳುವುದು ಮರುಳತನ. ಲೋಕದ ಜನರಲ್ಲಿ ವಿಭಿನ್ನರುಚಿಗಳೇ ಇರುವುವು. ಅವರವರ ಅಭಿರುಚಿಗಳಿಗನುಸಾರವಾಗಿ ಅವರವರು ಪ್ರಯತ್ನಿಸುತ್ತಾರೆ. ಈ ಗತಿಯನ್ನು ತಡೆಯುವುದು ಅವಿವೇಕವಾಗಿದೆ. ಜನರು ತಮ್ಮ ಆಚರಣಗಳಲ್ಲಿ ಸತ್ಯ ಮತ್ತು ನ್ಯಾಯಗಳನ್ನು ಬಿಟ್ಟು ವರ್ತಿಸುತ್ತಾರೆಯೋ, ಅಲ್ಲ ಪಾಪದ ದಾರಿಯನ್ನು ಹಿಡಿಯುತ್ತಾರೆಯೋ ಎಂಬುದನ್ನು ನೋಡುವುದು ಅಗತ್ಯ. ಯಾವನು ಸತ್ಯ ಮತ್ತು ನ್ಯಾಯಗಳನ್ನು ಅವಲಂಬಿಸುತ್ತಾನೆಯೋ, ಯಾವ ಮತಾವಲಂಬಿಯಾಗಿದ್ದರೂ ಅವನು ಧರ್ಮಿಷ್ಠನಾಗಿರುತ್ತಾನೆ. ಅವನೇ ದೈವಪಿಶ್ವಾಸಿ. ಯಾರು ಸದಾಚಾರ ಪೂರ್ಣರಾಗಿರುವರೋ, ಅವರೇ ಸರ್ವಶಕ್ತನ ಪಕ್ಕದಲ್ಲಿರುವರು. ದುರಾಚಾರಿಗಳು ಪಾಪಿಷ್ಠರು; ಧರ್ಮಘಾತಕರು. ಈ ತತ್ವವನ್ನು ತಿಳಿದು ವರ್ತಿಸಬೇಕಾದುದು ಅಗತ್ಯವಾಗಿವೆ. ಇಸ್ಲಾಂ ಧರ್ಮಾವಲಂಬಿಗಳಾದ ತಾಯಿ-ತಂದೆಗಳ ಹೊಟ್ಟೆಯಲ್ಲಿ ಹುಟ್ಟಿದ ಮಾತ್ರದಿಂದ ಒಬ್ಬನು ಇಸ್ಲಾಂ ಧರ್ಮಾವಲಂಬಿಯಾಗುವುದಿಲ್ಲ. ಪರಿಶುದ್ಧ ಖುರಾಣದ ನುಡಿಗಳನ್ನು ಯಾರು ಮಾನಿಸುವರೋ, ಅವರೇ ನಿಜವಾದ ಇಸ್ಲಾಮ್‌ಧರ್ಮದ ಅನುಯಾಯಿಗಳು. ಯಾರಲ್ಲಿ ಸತ್ಯ ಮತ್ತು ಸದಾಚಾರಗಳಿರುವುವೋ ಅವರೆಲ್ಲರೂ ನಮ್ಮ ಬಂಧುಗಳು. ಆದುದರಿಂದ ನಾನು ನಿಮ್ಮ ಒಳ್ಳೆಯದಕ್ಕಾಗಿ ಹೇಳುತ್ತಿದ್ದೇನೆ. ಹಿಂದುಗಳನ್ನು ನಮ್ಮ ಬಂಧುಗಳೆಂದು ತಿಳಿಯಬೇಕಾದುದು ಅಗತ್ಯ; ನಮ್ಮ ಜೀವನವು ಸುಖಕರವಾಗಬೇಕಾದರೆ, ಅದು ಅನಿವಾರ್ಯ. ನಮ್ಮ ದರ್ಪದಿಂದ ಇಂದು ಒಂದುವೇಳೆ ನಾವು ಅವರನ್ನು ನಮ್ಮ ದಾಸರನ್ನಾಗಿ ಮಾಡಿರಬಹುದು; ಆದರೆ ಎಲ್ಲಾ ಕಾಲಗಳಲ್ಲಿಯೂ, ಎಲ್ಲರ ಮೇಲೆಯೂ ದಬ್ಬಾಳಿಕೆಯನ್ನು ನಡೆಸಲು ಸಾಧ್ಯವಾಗದು. ಯುಕ್ತಾಯುಕ್ತ ವಿವೇಚನೆಯಿಲ್ಲದೆ ಅವರನ್ನು ನಾವು ಹಿಂಸಿಸುವುದು ಇಸ್ಲಾಂ ಧರ್ಮಕ್ಕೆ ಕಳಂಕವನ್ನು ತಂದೊಡ್ಡತಕ್ಕ ಒಂದು ಕೆಲಸವಾಗಿದೆ. ಇಸ್ಲಾಂಧರ್ಮದ ಮಹತ್ವವು ಜಗತ್ತಿಗೆ ತಿಳಿಯಬೇಕಾದರೆ, ಪರಿಶುದ್ಧ

ಪೈಗಂಬರರ ಕೀರ್ತಿಯು ವಿಶ್ವದಲ್ಲಿ ಪಸರಿಸಬೇಕಾದರೆ, ನಾವು ಸತ್ಯನಿಷ್ಠರೂ, ಸದಾಚಾರಿಗಳೂ, ಸಹನಾತ್ಮಕ ಬುದ್ಧಿಯುಳ್ಳವರೂ ಆಗಿರಬೇಕಾದುದು ಅತ್ಯಾವಶ್ಯಕವಾಗಿದೆ. ಒಂದು ಧರ್ಮದ ಕಟ್ಟಳೆ ಉತ್ಕೃಷ್ಟವಾಗಿರಬಹುದು; ಆದರೆ ಅವುಗಳು ಗ್ರಂಥಗಳಲ್ಲಿ ಮಾತ್ರ ಏರುವದರಿಂದ ಆ ಧರ್ಮದ ಮಹಾತ್ಮ್ಯೆಯು ಹೆಚ್ಚದು. ಆ ಧರ್ಮದ ಮಹಾತ್ಮ್ಯೆಯು ಅಡಗಿರುವದು, ಆ ತತ್ವಗಳನ್ನು ಆಚರಣೆಯಲ್ಲಿ ತರಬೇಕಾಗಿವೆ; ಆದರೆ ಇದುವರೆಗೆ ನಾವು ಹಿಂದುಸ್ತಾನದಲ್ಲಿ ಆಚರಿಸಿದ ಕೃತ್ಯಗಳು ನಮ್ಮ ಧರ್ಮಕ್ಕೆ ಕೀರ್ತಿಯ ಕಳಸವನ್ನು ಹಚ್ಚತಕ್ಕವುಗಳಲ್ಲ. ಇವುಗಳಿಂದ ನಮ್ಮಲ್ಲಿರುವ ಮನುಷ್ಯತ್ವದ ಮೇಲೆ ಕಪ್ಪು ಕವಿದಿದೆ. ನಾವು ನಮ್ಮ ಧರ್ಮವನ್ನು ಪೋಷಿಸಬೇಕಾದರೆ ಈ ವರೆಗೆ ಆಚರಿಸಿದ ಹೀನ ಕೃತ್ಯಗಳನ್ನು ಪರಿತ್ಯಜಿಸಬೇಕಾಗಿವೆ. ಧರ್ಮದ ಕೀರ್ತಿಯು ನೆಲಸಿರುವದು ಹಿಂಸೆಯಲ್ಲಲ್ಲ; ಪರಪೀಡನೆಯಲ್ಲಲ್ಲ; ಅದಿರುವದು ಸ್ನೇಹದಲ್ಲಾಗಿದೆ; ಪ್ರೇಮದಲ್ಲಾಗಿವೆ. ನೊಂದವರ ದುಃಖಗಳನ್ನು ಪರಿಹರಿಸುವದು, ಇತರರೊಡನೆ ಸೌಹಾರ್ದದಲ್ಲಿ ವರ್ತಿಸುವದು, ಸತ್ಯಪಥದಲ್ಲಿ ಸಂಚರಿಸುವದು ಇವುಗಳೆಲ್ಲಾ ಆಗಿವೆ ಧರ್ಮಾಚರಣೆಗಳು. ಪರಿಶುದ್ಧ ಸ್ವರೂಪನಾದ ಖುದಾನ ಬಳಿಗೆ ತೆರಳಬೇಕಾದರೆ, ನಮ್ಮ ಅಂತರಂಗವನ್ನು ಶುಚಿಗೊಳಿಸಬೇಕಾಗಿದೆ. ಸ್ಫಟಿಕದಂತೆ ಹೃದಯವು ಸ್ವಚ್ಛವಾಗಿರದಿದ್ದರೆ ಅಲ್ಲಿ ಬಿಸಿಲು ಬೀಳದು. ಆದುದರಿಂದ ನಾನು ಅನ್ನುವದನ್ನು ಲಾಲಿಸಿರಿ. ನಿಮ್ಮ ಎದೆಗಳಲ್ಲಿ ಬೇರೂರಿರುವ ವರ್ಗವಿದ್ವೇಷವನ್ನು ದೂರ ಒಗೆಯಿರಿ, ಮನುಷ್ಯರಾಗಿರಿ; ಮಾನವರಂತೆ ಜೀವಿಸಲು ಯತ್ನಿಸಿರಿ!"

ತನ್ನ ಜನರಿಗೆ ಫಕೀರ ಹುಸ್ಸೇನನು ನೀಡಿದ ಸಂದೇಶವು ಇದಾಗಿದ್ದಿತು. ಅವನು ವಿದ್ವೇಷದ ಬದಲು ಸ್ನೇಹವನ್ನು ತೋರಿಸಬೇಕೆಂದು ಜನರಿಗೆ ಉಪದೇಶಿಸಿದ. ಪ್ರೇಮದಿಂದ ಎದೆಗಳನ್ನು ತುಂಬಬೇಕೆಂದು ಉಸುರಿದ. ಅವನ ವಾಕ್ಯಗಳು ಸರಿಯಲ್ಲವೆಂದು ಹೇಳಲು ಯಾರಿಗೂ ಸಾಧ್ಯವಿರಲಿಲ್ಲ. ಅವನ ಸ್ನೇಹಪೂರ್ಣ ನುಡಿಗಳು ಅವರನ್ನು ಆಲೋಚಿಸಲು ಪ್ರೇರಿಸಿದವು. ಫಕೀರ ಸಾಹೇಬನು ತೋರಿಸಿದ ಹಾದಿಯಲ್ಲಿ ಅವರ ಬುದ್ಧಿಯು ಹರಿದಾಡಿತು. ಅವರು ತಮ್ಮ ಅಂತರಂಗಗಳನ್ನು ಬಿಚ್ಚಿ ಆತ್ಮಪರಿಶೋಧನೆಯನ್ನು ನಡೆಸಿದರು. ತಮ್ಮ ಎದೆಗಳಲ್ಲಿ ಅಡಗಿದ್ದ ತಮ್ಮ ಹೀನಕೃತ್ಯಗಳ ಪ್ರತಿಬಿಂಬಗಳನ್ನು ಅವರು ನೋಡಿದರು. ಅವರಿಗೆ ಹೊಳೆದಿತು ಮನುಷ್ಯನಿನ್ನೂ ತನ್ನ ಮರ್ಕಟಬುದ್ಧಿಯನ್ನು ಪರಿತ್ಯಜಿಸಿ ಮನುಷ್ಯತ್ವವನ್ನು ಪಡೆದಿಲ್ಲವೆಂಬುದು! ಅವರು ಧರ್ಮದ ಹೆಸರಿ

ನಲ್ಲಿ ಬೇರೆಯುವರನ್ನು ಸುಲಿದಿದ್ದರು; ಬಲಾತ್ಕಾರದಿಂದ ಇತರರನ್ನು ಸ್ವಧರ್ಮಕ್ಕೆ ಸೇರಿಸಿದ್ದರು. ಸ್ನೇಹವನ್ನು ತೋರಿಸಿ ಇನ್ನೊಬ್ಬನ ಅಂತಃಕರಣವನ್ನು ನಿರ್ಮಲಗೊಳಿಸುವದರ ಬದಲು, ಅನ್ಯನನ್ನು ತನ್ನ ಮೃಗೀಯ ಬಲದಿಂದ ಮರ್ದಿಸಿ, ಪೈಶಾಚಿಕತೆಯ ಬಲೆಗೆ ಅವರು ಸಿಲುಕಿದ್ದರು. ತಾವು ಜರುಗಿಸಿದ ಕರಾಳ ಕೃತ್ಯಗಳ ಕೃಷ್ಣವರ್ಣವು ಅವರ ನೇತ್ರಗಳಲ್ಲಿ ಪತಿಸಿತು. ತಾವು ಮನುಷ್ಯರಾಗಿದ್ದರೂ, ತಮಗೂ ವನದಲ್ಲಿ ಜೀವಿಸುತ್ತಿರುವ ಹಿಂಸ್ರ ಜಂತುಗಳಿಗೂ ಹೆಚ್ಚಿನ ಅಂತರವಿಲ್ಲವೆಂಬುದು ಅವರಿಗೆ ಹೊಳೆದಿತು. ಫಕೀರನ ಪ್ರಯತ್ನಗಳ ಫಲವಾಗಿ ತಮ್ಮ ತಪ್ಪುಗಳ ಅರಿವು ಅವರಿಗುಂಟಾಯಿತು.

ಅಂತು ಫಕೀರನ ಸಂದೇಶವನ್ನು ಜನರು ಲಾಲಿಸಿದರು; ಸ್ನೇಹ-ಸೌಹಾರ್ದಗಳನ್ನು ಅವರು ಬೆಳಿಸತೊಡಗಿದರು; ಆದರೆ ಫಕೀರನ ಕೆಲಸವು ಅಲ್ಲಿಗೇ ಪೂರೈಸಲಿಲ್ಲ. ತನ್ನ ಜನರ ಕಣ್ಣುಗಳಿಗೆ ಅವನು ಅಂಜನ ಹಾಕಿದ ಮೇಲೆ ಅವನು ಹಿಂದುಗಳನ್ನು ಸಮೀಪಿಸಿದ. ಅವರ ಎದೆಗಳಲ್ಲಿ ತುಂಬಿದ್ದ ವಿದ್ವೇಷದ ಭೀಕರ ಜ್ವಾಲೆಯನ್ನು ನಂದಿಸುವದು ಅವನ ಕೆಲಸವಾಗಿತ್ತು. ಅವನು ಹಿಂದುಗಳನ್ನು ಸಮೀಪಿಸಿ ಹೀಗೆ ಹೇಳಿದ: "ಅಣ್ಣ-ತಮ್ಮಂದಿರಾ, ಹಿಂದೆ ನಾವು ನಿಮಗೆ ನೂರಾರು ಕೆಡುಕುಗಳನ್ನು ಬಗೆದಿರಬಹುದು; ಪರಿಪರಿಯಿಂದ ಪೀಡಿಸಿರಬಹುದು; ಆದರೆ ಈಗ ನಾನು ನಿಮ್ಮನ್ನು ಬೇಡಿಕೊಳ್ಳುತ್ತೇನೆ. ಕಳೆದು ಹೋದ ಆ ದುರಂತ ಸಂಭವಗಳನ್ನೆಲ್ಲಾ ಮರೆತು ಬಿಡಿರಿ; ನಾವು ಮಾಡಿದ ಅಪರಾಧಗಳನ್ನೆಲ್ಲಾ ಕ್ಷಮಿಸಿರಿ. ಸ್ವಾತಂತ್ರ್ಯ ಭಾಸ್ಕರನು ಉದಯವನ್ನು ಹೊಂದಿರುವ ಈ ಮಂಗಳ ಮುಹೂರ್ತದಲ್ಲಿ ಆ ಹಳೆಯ ಕೊಳೆಗಳಿಂದ ನಮ್ಮ ಹೃದಯಗಳನ್ನು ಹೊಲಸು ಮಾಡುವದು ಸರಿಯಲ್ಲ. ಆದುದರಿಂದ ಕಳೆದು ಹೋದ ಆ ದುಃಸ್ವಪ್ನಗಳನ್ನೆಲ್ಲಾ ಮರೆತು ಬಿಡುವಾ. ನಾವಿಬ್ಬರೂ ಮನುಷ್ಯರಿರುತ್ತೇವೆ; ಪರಸ್ಪರ ಸ್ನೇಹ-ವಿಶ್ವಾಸಗಳಿಂದ ಒಂದು ತಾಯಿಯ ಮಕ್ಕಳಂತೆ ಜೀವಿಸುವದು ಅಗತ್ಯವಾಗಿದೆ. ಈ ಸಹೋದರ ಭಾವವು ನಮ್ಮ ಹೃದಯಗಳಲ್ಲಿ ಬೆಳೆಯದಿದ್ದರೆ, ನಮಗೆ ಅಭ್ಯುನ್ನತಿಯಿಲ್ಲ; ಈ ಕೆಸರ ಕೂಪವನ್ನು ಪರಿತ್ಯಜಿಸಿ ಮೇಲಕ್ಕೇಳುವಂತಿಲ್ಲ. ಆದುದರಿಂದ ಬನ್ನಿ; ಒಂದುಗೂಡುವಾ! ಒಬ್ಬ ಜನನಿಯ ಮಕ್ಕಳಂದದಿ ಜೀವಿಸುವಾ!"

ಹೃದಯವನ್ನು ಕರಗಿಸತಕ್ಕ ಈ ನುಡಿಗಳ ಹಿಂದುಗಳು ಮನಗಳನ್ನು ಕರಗುವಂತೆ ಮಾಡಿದವು. ಅವರು ತಮ್ಮ ಹೃದಯ ಕಪಾಟಗಳನ್ನು ಬಿಚ್ಚಿ

ವರು; ವಿಶಾಲ ದೃಷ್ಟಿಕೋನದಿಂದ ಇಳೆಯನ್ನು ಈಕ್ಷಿಸಿದರು. ಅರವತ್ತು ವರುಷದ ಮುದುಕ ಪ್ರತಿಯೊಬ್ಬನ ಬಳಿಗೂ ತೆರಳಿ, ಐಕ್ಯಮತ್ಯವನ್ನು ಸ್ಥಾಪಿಸಲು ಜರುಗಿಸುತ್ತಿದ್ದ ಪ್ರಯತ್ನಗಳು ಯಾರ ಮನಗಳನ್ನೂ ಸೆಳೆಯದೆ ಇರಲಾರವು; ಅವು ಎಲ್ಲರ ಅಂತರಂಗಗಳಲ್ಲಿಯೂ ಪರಿವರ್ತನೆಯನ್ನುಂಟುಮಾಡಿದವು.

ಅಂತು ಪುನರ್ರಚನೆಯು ಭರದಿಂದ ಸಾಗಿತು. ಫಕೀರ ಹುಸ್ಸೇನನ ಅವಿಶ್ರಾಂತ ಪ್ರಯತ್ನಗಳ ಫಲವಾಗಿ ರೂಪನಗರದಲ್ಲಿ ವರ್ಗವಿದ್ವೇಷವು ಅಳಿದಿತು. ಎರಡು ಸಮುದಾಯದವರೂ ಪರಸ್ಪರ ಪ್ರೀತಿ-ವಿಶ್ವಾಸಗಳಿಂದ ಜೀವಿಸತೊಡಗಿದರು. ಜ್ಞಾನಾನಂದನ ಪರಿಶ್ರಮಗಳಿಂದ ಜನರ ದಾರಿದ್ರ್ಯವು ಪರಿಹಾರವಾಯಿತು; ಕ್ಷಾಮಕಾಲದಲ್ಲಿ ನೋವನ್ನು ಅನುಭವಿಸಿದ ದೀನದರಿದ್ರರ ದುಃಖವು ಶಮನವಾಯಿತು. ಸುಖ-ಶಾಂತಿಗಳು ನಾಡಿನಲ್ಲಿ ನಲಿಯತೊಡಗಿದವು. ಭೈರವಿಯು ಶ್ರೀಮಂತರನ್ನು ನಾಡಸೇವೆಗೆ ಹಚ್ಚಿದಳು. ಅವರ ಹೃದಯಗಳಲ್ಲಿ ತ್ಯಾಗ ಮಾಡಬೇಕೆಂಬ ಆಗ್ರಹವು ಅಂಕುರವನ್ನು ಹೊಂದುವಂತೆ ಮಾಡಿದಳು; ಅವರ ಎದೆಗಳಲ್ಲಿ ಜ್ಞಾನದೀಪಗಳನ್ನು ಉರಿಸಿದಳು.

ಪ್ರತಿಯೊಬ್ಬನೂ ದುಡಿಯುತ್ತಿದ್ದನು. ನಾಡಿನ ಆಡಳಿತವನ್ನು ಪುನರ್ರಚಿಸುವ ಉದ್ಯಮದಲ್ಲಿ ಪ್ರತಿಯೊಬ್ಬನು ತನ್ನ ಪಾಲನ್ನು ನೆರವೇರಿಸುತ್ತಿದ್ದನು. ಅಮರಸಿಂಹ, ಉಸ್ಮಾನ, ಭೈರವಿ, ಹೇಮಾವತಿ ಮೊದಲಾದ ಗಂಡಸು-ಹೆಂಗಸರು ಹೊಸ ನಾಡನ್ನು ನಿರ್ಮಿಸುವ ಕೆಲಸದಲ್ಲಿ ಮುಂದೆ ಬಂದಿದ್ದರು.

ಉದಯವಾಯಿತು; ಸ್ವಾಧೀನ ಜೀವನದ ಚಿತ್ರಭಾನುವು ಪ್ರಾಚ್ಯ ದಿಶೆಯಲ್ಲಿ ಉದಯವನ್ನು ಹೊಂದಿದನು. ಉದಯ ಭಾಸ್ಕರನ ಹೊಂಬಣ್ಣದ ಕಿರಣಗಳು ರೂಪನಗರದ ಅಂತರಿಕ್ಷದಲ್ಲಿ ಪಸರಿಸಿದವು.

---

## ೨೫ ಮುಂದಿನ ಕಾರ್ಯಾಲೋಚನೆ.

ಆ ದಿನ ಎಲ್ಲರೂ ಅಮರಸಿಂಹನ ವಸತಿಯಲ್ಲಿ ನೆರೆದಿದ್ದರು. ಫಕೀರ ಹುಸ್ಸೇನ, ಜ್ಞಾನಾನಂದ, ಉಸ್ಮಾನ ಎಂಬಿತ್ಯಾದಿ ಪ್ರಮುಖರೆಲ್ಲರೂ ಅಲ್ಲಿ ಸೇರಿದ್ದರು. ರೂಪನಗರದ ಮುಂದಿನ ಆಡಳಿತವು ಯಾವ ರೀತಿಯಲ್ಲಿರಬೇಕೆಂಬುದು ಅಲ್ಲಿ ನೆರೆದವರ ಆಲೋಚನೆಯ ವಿಷಯವಾಗಿದ್ದಿತು. ಮುಂದಿನ ಶಾಸನ ರೀತಿಯನ್ನು ಯಾವ ರೀತಿಯಲ್ಲಿ ರೂಪೀಕರಿಸಬೇಕೆಂಬುದು ಜ್ಞಾನಾನಂದನ ಚಿಂತನೆಗೆ

ಪಾತ್ರೀಭವಿಸಿದ ಒಂದು ವಿಷಯವಾಗಿದ್ದಿತು. ಅವನಾದರೋ ಒಬ್ಬ ಅಧ್ಯಾತ್ಮಿಕ ಸಾಧಕನಾಗಿದ್ದುದರಿಂದ, ಆದಷ್ಟು ಬೇಗನೆ ಆಡಳಿತವನ್ನು ಕ್ರಮಪಡಿಸಿ, ರಾಜಕಾರಣದ ರಂಗದಿಂದ ಆದಷ್ಟು ಬೇಗನೆ ವಿಶ್ರಾಂತಿಯನ್ನು ಪಡೆದು, ತನ್ನ ಸಾಧನೆಗಳನ್ನು ಮುಂದುವರಿಸಬೇಕೆಂಬುದು ಅವನ ಬಯಕೆಯಾಗಿದ್ದಿತು. ಅವನು ಸಂಕಲ್ಪಿಸಿದ್ದ ಕಾರ್ಯಗಳೆಲ್ಲ ನೆರವೇರಿದ್ದವು. ಅವನು ಕಂಡ ಕನಸುಗಳೆಲ್ಲ ನಿಜವಾಗಿ ಪರಿಣಮಿಸಿದ್ದವು. ಇನ್ನು ಹೆಚ್ಚು ಕಾಲ ತಾನು ನಗರದಲ್ಲಿ ವಾಸ ಮಾಡುವದು ಅವನಿಗೆ ಅವಶ್ಯಕವೆಂದು ತೋರಲಿಲ್ಲ. ಆದುದರಿಂದ ಆಡಳಿತವನ್ನು ರೂಪನಗರದ ಅಭ್ಯುನ್ನತಿಗಾಗಿ ಹೆಣಗಿದವರಿಗೆ ಒಪ್ಪಿಸಿ, ತನ್ನ ಆಶ್ರಮಕ್ಕೆ ಹಿಂದಿರುಗಬೇಕೆಂದು ಅವನು ನಿರ್ಧರಿಸಿದನು. ಮುಂದಿನ ಶಾಸನ ರೂಪವು ಹೇಗಿರಬೇಕೆಂಬುದನ್ನು ನಿಶ್ಚಯಿಸಲು ಜ್ಞಾನಾನಂದನ ನಿರ್ದೇಶವಂತೆ ಸ್ವಾತಂತ್ರ್ಯಸಾಧಕರು ಕುಮಾರ ಅಮರಸಿಂಹನ ವಸತಿಯಲ್ಲಿ ಸೇರಿದ್ದರು.

ಆ ಜನರ ಗುಂಪಿನಲ್ಲಿ ಜ್ಞಾನಾನಂದನು ಎದ್ದುನಿಂತು ಹೀಗೆ ಹೇಳಿದನು: "ನಾನು ಬಯಸಿದ್ದ ಕೆಲಸಗಳು ನೆರವೇರಿದವು. ಯಾಮಿನಿಯಲ್ಲಿ ನರಳುತ್ತಿದ್ದ ಈ ನಾಡಿನಲ್ಲಿ ಸ್ವಾತಂತ್ರ್ಯ ಭಾಸ್ಕರನು ಉದಯವನ್ನು ಹೊಂದಿದನು. ಅಶಾಂತತೆ-ಗಲಭೆಗಳಿಂದ ಕೂಡಿದ್ದ ನಾಡು ಈಗ ಸುಖ ಶಾಂತಿ ಸಂತೃಪ್ತಿಗಳ ನಿಕೇತನವಾಗಿ ಪರಿಣಮಿಸಿದೆ. ನಾನಾದರೋ ಒಬ್ಬ ಸಂನ್ಯಾಸಿ; ಶಾಸನಚಕ್ರದ ಭಾರವನ್ನು ಹೊರಲು ನನ್ನಿಂದ ಸಾಧ್ಯವಾಗುವಂತಿಲ್ಲ. ಆದುದರಿಂದ ಇನ್ನು ಮುಂದಿನ ಆಡಳಿತದ ರೂಪವು ಹೇಗಿರಬೇಕೆಂಬುದನ್ನು ನಿರ್ಧರಿಸಿ, ನೀವು ಅದರಂತೆ ಆಡಳಿತವನ್ನು ಪ್ರಾರಂಭಿಸುವದು ವಿಹಿತವಾಗಿದೆ."

"ಸ್ವಾಮೀಜಿ," ಫಕೀರನ ಮೃದುಸ್ವರವು ಹೊರಟಿತು. "ಜನರ ಕಷ್ಟನಷ್ಟಗಳನ್ನು ಈಕ್ಷಿಸಿ, ನಾಡಿನ ಅಭ್ಯುನ್ನತಿಗಾಗಿ ಹೆಣಗಿದವರು ತಾವು. ತಮ್ಮ ನಿರಂತರ ಪರಿಶ್ರಮಗಳ ಮೂಲಕ ರೂಪನಗರವು ಈ ಸುಪ್ರಭಾತವನ್ನು ಕಂಡಿತು. ಈಗ ಜನ್ಮವೆತ್ತಿರುವ ಸ್ವಾಧೀನ ಜೀವನದ ಹಸುಗೂಸನ್ನು ಸಂರಕ್ಷಿಸಿ, ದೊಡ್ಡದು ಮಾಡುವ ಹೊರೆಯನ್ನು ತಾವೇ ಹೊರುವದೊಳ್ಳೆಯದು, ಎಂದು ನನಗೆ ತೋರುತ್ತದೆ. ಈ ಸಂದರ್ಭದಲ್ಲಿ ತಾವು ಈ ಕಾರ್ಯರಂಗದಿಂದ ವಿಶ್ರಾಂತಿಯನ್ನು ಪಡೆಯಲಿಚ್ಛಿಸುವದು ನನಗೆ ವಿಹಿತವೆಂದು ತೋರುವದಿಲ್ಲ."

"ಫಕೀರ ಸಾಹೇಬ, ಅಧಿಕಾರದ ಹಂಬಲವಿಲ್ಲದ ಒಬ್ಬ ಸಂನ್ಯಾಸಿಯು ನಾನು. ಜನರು ಅನುಭವಿಸುತ್ತಿದ್ದ ದುರಿತಗಳು ನನ್ನನ್ನು ಈ ದಾರಿಯನ್ನು

ಹಿಡಿಯಲು ಪ್ರೇರಿಸಿದವು. ಈಗ ಆ ಕಾಳರಾತ್ರಿಯು ಕಳೆದಿದೆ; ಜನರಲ್ಲಿ ಐಕ್ಯ ಮತ್ಯವು ಬೆಳೆದಿದೆ; ನಮ್ಮ ತರುಣರಲ್ಲಿ ಸ್ವಾತಂತ್ರ್ಯಬೋಧವು ಉದಿಸಿದೆ. ನಾಡಿನ ಸ್ವಾತಂತ್ರ್ಯವನ್ನು ಪರಿಪಾಲಿಸುವ ಚೈತನ್ಯವು ನಮ್ಮ ಜನರಲ್ಲಿದೆ ಯೆಂಬ ನಿಶ್ವಾಸವು ನನಗಿದೆ. ನಾಡನ್ನು ಸಂರಕ್ಷಿಸುವ ಹೊರೆಯನ್ನು ತರುಣ ರಿಗೆ ಒಪ್ಪಿಸುವದೊಳ್ಳೆಯದು. ವಿಷಮುಘಟ್ಟವು ನಿವಾರಣೆಯಾಯಿತು. ಇನ್ನು ಅಧಿಕಾರವನ್ನು ನಾನು ನನ್ನ ಕರಗಳಲ್ಲಿ ಹಿಡಿದುಕೊಳ್ಳುವದು ಸರಿಯಲ್ಲ; ಪಾರ ಮಾರ್ಥಿಕ ಸಾಧನೆಗಳಲ್ಲಿ ನನ್ನ ಶೇಷಾಯುಷ್ಯವನ್ನು ವಿನಿಯೋಗಿಸಬೇಕೆಂದಿ ರುವೆ. ನಿಜ. ನಾಡಿನ ಅಭ್ಯುದಯಕ್ಕಾಗಿ ಹೆಣಗುವದು ಪ್ರತಿಯೊಬ್ಬನ ಕರ್ತವ್ಯ. ಆ ಕರ್ತವ್ಯವನ್ನು ನಾನು ನೆರವೇರಿಸಿದೆನು. ಇನ್ನು ನನ್ನ ಆತ್ಮೋನ್ನತಿಗಾಗಿ ಯತ್ನಿಸಬೇಕಾದುದು ನನ್ನ ಕರ್ತವ್ಯವಲ್ಲವೇ? ನಾಡಿನ ಹಿತದ ದೃಷ್ಟಿಯಿಂದ ಅನೇಕರನ್ನು ಹಿಂಸಿಸಬೇಕಾಗಿ ಬಂದಿತು; ಅನೇಕರನ್ನು ಪೀಡಿಸಬೇಕಾಯಿತು. ಜನರ ನೆತ್ತರಿನಿಂದ ನನ್ನ ಕರಗಳನ್ನು ಮಲಿನಪಡಿಸಿಕೊಳ್ಳಲು ನಾನು ಹಿಂಜ ರಿಯಲಿಲ್ಲ. ಅನೇಕರ ಅಪ್ರೀತಿಯನ್ನು ನಾನು ಅರ್ಜಿಸಿದೆನು. ಈ ಎಲ್ಲ ಕಲಂ ಕಗಳನ್ನು ಹೋಗಲಾಡಿಸಲು,-ನನ್ನ ಆತ್ಮಕ್ಕೆ ಮೆತ್ತಿಕೊಂಡಿರುವ ಕೊಳೆಯನ್ನು ತೊಳೆಯಲು,-ನನಗೊಂದು ಸಂದರ್ಭವನ್ನು ಒದಗಿಸಿಕೊಡುವದು ನಿಮ್ಮೆಲ್ಲರ ಕರ್ತವ್ಯವಾಗಿದೆ. ರೂಪನಗರವು ಪುನಃ ಬಿಕ್ಕಟ್ಟಿಗೊಳಗಾಗುವುದೆಂದು ಹೆದರ ಬೇಕಾಗಿಲ್ಲ. ಜನರಲ್ಲಿ ತಿಳುವಳಿಕೆಯು ಬೆಳೆದಿದೆ; ಅವರು ಪುನಃ ಕೆಸರಿನ ಕೂಪ ದಲ್ಲಿ ಧುಮುಕಲಾರರು. ಸರಿಯಾದ ಹಾದಿಯಲ್ಲಿ ನಾಡನ್ನು ಮುಂದಕ್ಕೊಯ್ಯಲು ಕುಮಾರ ಅಮರಸಿಂಹನಿದ್ದಾನೆ; ಉಸ್ಮಾನಖಾನನಿದ್ದಾನೆ. ಎಲ್ಲರಲ್ಲಿಯೂ ವಿವೇ ಕದ ನಂದಾದೀಪವನ್ನುರಿಸಲು ಫಕೀರಸಾಹೇಬ, ತಾವಿರುತ್ತೀರಿ. ಇನ್ನು ನಾ ನಿಲ್ಲಿ ನಿಲ್ಲಬೇಕಾದ ಆವಶ್ಯಕತೆಯಿಲ್ಲ. ನನ್ನ ಪಾರಮಾರ್ಥಿಕ ಸಾಧನೆಗಳನ್ನು ಮುಂದುವರಿಸಲೋಸುಗ ನನ್ನನ್ನು ಕಳುಹಿಸಿ ಕೊಡಬೇಕೆಂದು ವಿನಂತಿಗಳು. ನಾಡಿಗೆ ನನ್ನ ನೆರವು ಆವಶ್ಯಕವಾಗಿ ಬಂದಾಗ, ನಾನು ತಮಗೆಲ್ಲರಿಗೂ ಬೆಂಬ ಲವಾಗಿ ನಿಲ್ಲಲು ಸಿದ್ಧನಿರುತೇನೆ."

ಜ್ಞಾನಾನಂದನ ಈ ನುಡಿಗಳು ಪ್ರತಿಯೊಬ್ಬರ ಹೃದಯಗಳನ್ನೂ. ಸ್ಪರ್ಶಿಸಿದವು. ಜ್ಞಾನಾನಂದನು ಅಧಿಕಾರದ ಹಂಬಲವಿರುವ ಮನುಷ್ಯನೆಂದೂ ನಾಡಿನ ಆಡಳಿತವನ್ನು ತನ್ನ ಅಧೀನಪಡಿಸಿಕೊಳ್ಳಲು ಹೆಣಗುತ್ತಿರುವನೆಂದೂ ಅನೇಕರು ಭಾವಿಸಿದ್ದರು. ಇದು ವರೆಗೆ ಅವನು ಅವಲಂಬಿಸಿದ್ದ ನಿರ್ದಾಕ್ಷಿಣ್ಯ

ವಾದ ಘೋರಣೆಯು ಜನರಲ್ಲಿ ಈ ವಿಚಾರವುದಿಸುವಂತೆ ಮಾಡಿದ್ದಿತು. ಇನ್ನು ಮುಂದೆಯೂ ರೂಪನಗರದ ಅಧಿಕಾರಸೂತ್ರವನ್ನು ತನ್ನ ಕರಗಳಲ್ಲಿ ಜ್ಞಾನಾ ನಂದನು ಪಿಡಿವನೆಂದು ಅವರ ಭಾವನೆಯಾಗಿದ್ದಿತು; ಆದರೆ ಜ್ಞಾನಾನಂ ದನ ನುಡಿಗಳು ಅವರನ್ನು ಎಚ್ಚರಿಸಿದವು. ಅಧಿಕಾರಕ್ಕಾಗಲೀ, ಪದವಿಗಾಗಲೀ ಕಾಂಕ್ಷೆಯಿಲ್ಲದ ಒಬ್ಬ ನಿಷ್ಕಾಮುಕರ್ಮಿಯು ಆತನೆಂಬ ಸತ್ಯವನ್ನು ಅವರಿಗೆ ಪ್ರತ್ಯಕ್ಷಗೊಳಿಸಿದವು. ಅವನು ಈ ಜಗತ್ತಿನ ವ್ಯಾಮೋಹಗಳಿಗೆ ಸಿಲುಕದೆ ಒಂದು ಉನ್ನತಸ್ಥಾನಕ್ಕೆ ತಲುಪಿರುವನೆಂಬದು ಅವರಿಗೆ ಹೊಳೆದಿತು. ರೂಪನಗರದಲ್ಲಿ ನವಚೇತನವನ್ನುಂಟು ಮಾಡಿದವನು ಅವನು; ಸ್ವಾತಂತ್ರ್ಯ ಸಾಧನೆಗಿರುವ ಹೆದ್ದಾರಿಯನ್ನು ತೋರಿಸಿದವನು ಅವನು; ನಾಡಿನಲ್ಲಿ ಪಸರಿಸಿದ ಅಶಾಂತತೆ ಯನ್ನು ನಿವಾರಿಸಲು ಅಧಿಕಾರವನ್ನು ನಿರ್ದಾಕ್ಷಿಣ್ಯವಾಗಿ ಉಪಯೋಗಿಸಿದ ವನು ಅವನು! ಅವನ ನುಡಿಯನ್ನು ಮೀರಿ ಒಬ್ಬನೂ ನಡೆಯುವಂತಿರಲಿಲ್ಲ; ಆದರೆ ಅವನಿಗೆ ಅಧಿಕಾರವಾಗಲೀ, ಪದವಿಯಾಗಲೀ ಬೇಡವು. ತಾನು ಸಂಪಾ ದಿಸಿದ ಸ್ವಾತಂತ್ರ್ಯವನ್ನು ಜನರ ಕರಗಳಲ್ಲಿರಿಸಿ ಒಬ್ಬ ಭಿಕಾರಿಯಂತೆ ಜೀವಿ ಸಲು ಹೊರಟಿದ್ದಾನೆ; ಏಕಾಂತವಾದ ಒಂದೆಡೆಗೆ ಗಮಿಸಿ ಅಧ್ಯಾತ್ಮಿಕ ಸಾಧನೆ ಗಳಲ್ಲಿ ನಿರತವಾಗಲು ನಿಶ್ಚಯಿಸಿದ್ದಾನೆ. ಈ ತ್ಯಾಗಬುದ್ಧಿಯು, ಈ ನಿರ್ಮೋ ಹವು ಜನರ ಹೃದಯಗಳನ್ನು ಸ್ಪರ್ಶಿಸಿತು. ಅವನ ಈ ನಿರ್ಧಾರವು ಅವನು ಎಷ್ಟು ಮಹತ್ತರವಾದ ಯೋಗ್ಯತೆಯುಳ್ಳವನೆಂಬುದನ್ನು ವ್ಯಕ್ತಗೊಳಿಸಿತು. ಅವನ ನುಡಿಗಳನ್ನು ಕೇಳುತ್ತಲೆ ಎಲ್ಲರೂ ಮೂಕರಂತೆ ಕುಳಿತರು. ಅವರಿಗೆ ಏನು ನುಡಿಯಬೇಕೆಂಬುದು ತಿಳಿಯಲಿಲ್ಲ. ಅವನ ಈ ನಿಶ್ಚಯವು ಅವರನ್ನು ಬೆರಗು ಮಾಡಿತು ಇಷ್ಟು ಉತ್ತಮ ನಾಯಕನು ರಾಜ್ಯಭಾರದ ಸಾರಥ್ಯ ವನ್ನು ಪರಿತ್ಯಜಿಸಲು ಹೊರಟಿರುವದನ್ನು ದರ್ಶಿಸಿ, ಅವರು ತಮ್ಮ ಮನಸ್ಸು ಗಳಲ್ಲಿ ಪರಿತಪಿಸದಿರಲಿಲ್ಲ.

ಅಲ್ಲಿ ವ್ಯಾಪಿಸಿದ್ದ ಶಾಂತತೆಯನ್ನು ಫಕೀರ ಹುಸ್ಸೇನನ ನುಡಿಗಳು ಭಂಜಿ ಸಿದವು. ಅವನು ಹೇಳಿದ: "ಸ್ವಾಮೀಜಿ, ತಮ್ಮ ಈ ನಿರ್ಧಾರವು ತಾವು ಪ್ರಾಪಂ ಚಿಕ ವ್ಯಾಮೋಹಗಳಿಗಿಂತ ಮೇಲೆ ನಿಂತಿರುವಿರಿ ಎಂಬುದನ್ನು ಪ್ರತ್ಯಕ್ಷಗೊಳಿ ಸುತ್ತದೆ; ಆದರೆ ನಾಡಿಗೆ ತಮ್ಮ ಬೆಂಬಲವು ಅತ್ಯಾವಶ್ಯಕವಾಗಿದೆ. ರೂಪನಗರ ರದ ಅಂತರಿಕ್ಷದಲ್ಲಿ ಮುಗಿಲುಗಳು ಮುಸುಕಿದಾಗ ಮುಂದಿನ ದಾರಿಯನ್ನು ತೋರಿಸಲು ತಾವೊಬ್ಬರಲ್ಲದೆ ಅನ್ಯರಿಲ್ಲ. ಮನುಷ್ಯನು ಅವನ ಆತ್ಮೋನ್ನತಿ

ಗಾಗಿ ಹೆಣಗುವದು ಅತ್ಯಾವಶ್ಯಕವಾಗಿದೆ. ಆದುದರಿಂದ ತಮ್ಮ ಈಗಿನ ನಿಶ್ಚಯವನ್ನು ನಾನು ತಪ್ಪೆಂದು ಹೇಳಲಾರೆ; ಆದರೆ ರೂಪನಗರಕ್ಕೆ ಇನ್ನು ಮುಂದೆಯೂ ವಿಷಮಾವಸ್ಥೆಗಳು ಬಂದೊದಗಿದರೆ, (ಕಾರುಣ್ಯನಿಧಿಯ ಕೃಪೆಯಿಂದ ಅವು ಬರದಿರಲಿ!) ತಾವು ಈ ನಾಡನ್ನು ರಕ್ಷಿಸಲು ಮುಂದೆ ಬರುವಿರೆಂದು ನಾನು ಭಾವಿಸುತ್ತೇನೆ."

"ಫಕೀರ ಸಾಹೇಬ, ನನ್ನ ಹೆಗಲ ಮೇಲೆ ಹೊಗಳಿಕೆಗಳ ಹೊರೆಯನ್ನು ಹೊರಿಸಬೇಡಿರಿ. ನಾನು ನನ್ನ ಕರ್ತವ್ಯವನ್ನು ಮಾಡಿರುತ್ತೇನೆ. ಅದಕ್ಕಾಗಿ ಯಾರೂ ನನ್ನನ್ನು ಅಭಿನಂದಿಸಬೇಕಾಗಿಲ್ಲ. ರೂಪನಗರದ ಸಂಕಟಗಳನ್ನು ಪರಿಹರಿಸಲು ನಾನು ಸಿದ್ಧನಿರುತ್ತೇನೆ. ನೀವು ಇನ್ನು ಮುಂದಿನ ಆಡಳಿತವು ಯಾವ ಪರಿಯಲ್ಲಿರಬೇಕೆಂಬುವನ್ನು ನಿರ್ಧರಿಸುವದೊಳ್ಳಿಯದು. ಸ್ವಾತಂತ್ರ್ಯ ಸಂಪಾದನೆಗಾಗಿ ಪರಿಶ್ರಮಿಸಿದ ನೀವೆಲ್ಲರೂ ಆ ಕೆಲಸ ಮಾಡಬೇಕಾಗಿದೆ. ನಿಮಗಿಂತ ಹೆಚ್ಚು ಯೋಗ್ಯ ರೀತಿಯಲ್ಲಿ ಆ ಕೆಲಸವನ್ನು ಇನ್ನಾರೂ ಮಾಡಲಾರರು."

"ಸ್ವಾಮೀಜಿಯುವರು ಹೊರಟಿದ್ದಾರೆ; ನಮ್ಮ ಮುಂದಿನ ಆಡಳಿತವು ಯಾವ ಪರಿಯಲ್ಲಿರಬೇಕೆಂದು ನಾವೀಗ ನಿರ್ಧರಿಸಬೇಕಾಗಿದೆ. ಆದುದರಿಂದ ಸ್ವಾತಂತ್ರ್ಯಸಾಧನೆಯ ಬಗ್ಗೆ ಹೆಣಗಿದವರು ಅದನ್ನು ಆಲೋಚಿಸಬೇಕಾಗಿದೆ." ಎಂದು ಫಕೀರ ಹುಸ್ಸೇನನು ಹೇಳಿದನು.

"ಕುಮಾರ ಅಮರಸಿಂಹರು ಇದುವರೆಗೆ ಸ್ವಾಮೀಜಿಯುವರ ಬಲಗೈಯಂತೆ ನಿಂತು ಎಲ್ಲಾ ಕೆಲಸಗಳನ್ನೂ ಉಚಿತರೀತಿಯಲ್ಲಿ ನೆರವೇರಿಸಿದರು. ಸ್ವಾಮೀಜಿಯುವರು ಆಡಳಿತದ ಕೆಲಸಗಳಿಂದ ನಿವೃತ್ತರಾಗುವ ಸಂದರ್ಭದಲ್ಲಿ ಅಮರಸಿಂಹರು ಶಾಸನ ಸೂತ್ರಗಳನ್ನು ಕೈಯಲ್ಲಿ ಹಿಡಿವುದು ಉಚಿತವಾಗಿದೆ." ಈ ನುಡಿಗಳನ್ನು ಆಡಿದವನು ಉಸ್ಮಾನ ಖಾನನಾಗಿದ್ದನು.

ಉಸ್ಮಾನನ ಮಾತುಗಳನ್ನು ಕೇಳಿದೊಡನೆಯೇ ಇತರರೆಲ್ಲರೂ ಏಕಸ್ವರದಲ್ಲಿ ಹೀಗೆ ಹೇಳಿದರು. "ನಿಜ, ನಿಜ! ರೂಪನಗರದ ಶಾಸನಸೂತ್ರವನ್ನು ಕುಮಾರನು ವಹಿಸಬೇಕು. ಅವನಷ್ಟು ಉತ್ತಮ ರೀತಿಯಿಂದ ಇನ್ನಾರೂ ಆ ಕೆಲಸವನ್ನು ನೆರವೇರಿಸಲಾರರು. ಕುಮಾರನೇ ನಮ್ಮ ಮುಂದಾಳಾಗಲು ಯೋಗ್ಯನು!"

"ಕುಮಾರನು ರೂಪನಗರದ ಶಾಸನ ರಥದ ಸಾರಥಿಯಾಗಲು ಯೋಗ್ಯ ಪುರುಷನೆಂಬುದು ಜನರ ಈ ಏಕಾಭಿಪ್ರಾಯದಿಂದ ವ್ಯಕ್ತವಾಗುತ್ತದೆ. ನಿಜ

ವಾಗಿಯೂ ಈ ಕೆಲಸವನ್ನು ನೆರವೇರಿಸಲು ಇತರರೆಲ್ಲರಿಗಿಂತಲೂ ಹೆಚ್ಚಾಗಿ ಅವನೇ ಯೋಗ್ಯನು. ಇದುವರೆಗಿನ ಸಾಧನೆಗಳಲ್ಲಿ ಅವನು ಗಣ್ಯಭಾವವನ್ನು ವಹಿಸಿದನು. ರಾಜಕಾರಣದಲ್ಲಿ ಸ್ವಾಮೀಜಿಯವರಿಂದ ಶಿಕ್ಷಣವನ್ನು ಪಡೆದು ಅರಿತುಕೊಂಡಿತವನವನು. ಅವನ ನೇತೃತ್ವದಲ್ಲಿ ಶಾಸನ ರಥವು ಸರಿಯಾದ ದಾರಿಯಲ್ಲಿ ಮುಂದೆಸಾಗಬಲ್ಲದು." ಈ ಮಾತುಗಳು ಫಕೀರನ ತುಟಿಗಳಿಂದ ಹೊರಟವು.

"ಜನರ ಈ ಏಕಾಭಿಪ್ರಾಯವು" ಜ್ಞಾನಾನಂದನ ತುಟಿಗಳ ಮೇಲೆ ಮಂದಸ್ಮಿತವೊಂದು ನರ್ತಿಸಿತು. "ತಮ್ಮ ನಾಡನ್ನು ಪರಿಪಾಲಿಸಲು ಶಕ್ತನಾರೆಂಬುದನ್ನು ತಿಳಿಯುವ ಚೈತನ್ಯವು ಜನರಲ್ಲಿದೆಯೆಂಬುದನ್ನು ಸೂಚಿಸುತ್ತದೆ. ಕುಮಾರನು ಆಡಳಿತವನ್ನು ವಹಿಸುವದಾದರೆ, ರೂಪನಗರವು ಸುಖ-ಶಾಂತಿಗಳಿಂದ ಪರಿಪೂರ್ಣವಾಗುವದೆಂದು ನನ್ನ ನಂಬಿಕೆ. ಕುಮಾರ, ರೂಪನಗರದ ಆಡಳಿತದ ಭಾರವನ್ನು ನೀನು ಹೊರಬೇಕಾಗಿದೆ. ಇದುವರೆಗಿನ ನಮ್ಮ ಭಗೀರಥ ಪ್ರಯತ್ನಗಳಲ್ಲಿ ನೀನು ಅಸಾಮಾನ್ಯ ದಕ್ಷತೆಯನ್ನು ತೋರಿಸಿದೆ. ನಮ್ಮ ಈ ಸರೋಗಮನಕ್ಕೆ ನಿನ್ನ ದಕ್ಷತೆಯು ಒಂದು ಪ್ರಧಾನ ಕಾರಣವಾಗಿದೆಯೆಂದು ಹೇಳಿದರೆ ತಪ್ಪಾಗದು. ನಿನ್ನ ಈ ಜಾಣ್ಮೆಯನ್ನು ಜನರು ಅರಿತಿದ್ದಾರೆ. ಆದುದರಿಂದಲೇ ಶಾಸನಸೂತ್ರಗಳನ್ನು ನಿನ್ನ ಕರಗಳಲ್ಲಿ ಒಪ್ಪಿಸಬೇಕೆಂದು ಅವರು ಹೇಳುತ್ತಿದ್ದಾರೆ."

ಇದುವರೆಗೆ ಮೌನವನ್ನು ಅವಲಂಬಿಸಿ ಕುಳಿತಿದ್ದ ಕುಮಾರ ಅಮರಸಿಂಹನು ಎದ್ದು ನಿಂತನು. ವಿನಯ ಮತ್ತು ಸೌಮ್ಯತೆಗಳಿಂದ ಪರಿಪೂರ್ಣವಾದ ಸ್ವರದಲ್ಲಿ ಅವನು ಹೀಗೆ ಹೇಳಿದ: "ಇದುವರೆಗೆ ನಮ್ಮೆಲ್ಲರನ್ನು ಕರೆದೊಯ್ದ ಗುರುದೇವನು ಶಾಸನ ಕೆಲಸಗಳಿಂದ ನಿವೃತ್ತರಾಗಲಿರುವರು. ಅವರು ನಮ್ಮನ್ನೆಲ್ಲ ಅಗಲಿ ಪಾರಮಾರ್ಥಿಕ ಸಾದನೆಗಳನ್ನು ಮುಂದುವರಿಸಲು ವಿಜನವಾದ ಪ್ರದೇಶಕ್ಕೆ ತೆರಳಲಿರುವರು ಎಂಬ ಸಂಗತಿಯು ನನ್ನಲ್ಲಿ ಅಪಾರ ವೇದನೆಯನ್ನುಂಟು ಮಾಡಿದೆ. ಅವರು ನಮ್ಮ ನಾಡಿಗೆ ಸಲ್ಲಿಸಿದ ಸೇವೆಯು ಅಪಾರವಾದುದು; ರೂಪನಗರವು ಇಂದಿನ ಈ ಅಭಿನವ ಸ್ವರೂಪವನ್ನು ಅವರ ಅವಿಶ್ರಾಂತ ಪರಿಶ್ರಮಗಳ ಮೂಲಕ ತಳೆದಿದೆಯೆಂದು ಹೇಳಿದರೆ ತಪ್ಪಾಗದು. ಇನ್ನು ನೀವೆಲ್ಲರೂ ಶಾಸನ ಚಕ್ರವನ್ನು ನನ್ನ ಕೈಗೆ ಒಪ್ಪಿಸಲು ಹೊರಟಿದ್ದೀರಿ. ನಿಮ್ಮೆಲ್ಲರ ಬೆಂಬಲದಿಂದ ಅದನ್ನು ನಾನು ಸರಿಯಾದ ರೀತಿಯಲ್ಲಿ ಉಪಯೋಗಿ

ಸುವೆನು. ಇದರಲ್ಲಿ ನಾನು ನಿಮಿತ್ತಮಾತ್ರದವನೆಂದೂ, ನಾಡಿನ ಅಭ್ಯುದಯವಾಗಬೇಕಾದರೆ ನಿಮ್ಮೆಲ್ಲರ ಸಹಾಯ ಸಲಕರಣೆಗಳು ಅತ್ಯಾವಶ್ಯಕವೆಂದೂ ನಾನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಫಕೀರಸಾಹೇಬರು ಸದಾ ಅವರ ಅಮೂಲ್ಯವಾದ ಉಪದೇಶಗಳನ್ನು ನೀಡುತ್ತಿರಬೇಕೆಂಬುದು ನನ್ನ ಕೋರಿಕೆ. ಭಗವಂತನ ಕೃಪೆಯಿಂದ ರೂಪನಗರದ ಸೌಭಾಗ್ಯವು ವರ್ಧಿಸಲಿ!"

ಜನರು ಸಂತೋಷದಿಂದ ಕರತಾಡನವನ್ನು ಮಾಡಿದರು. ಜ್ಞಾನಾನಂದನು ತಮ್ಮನ್ನು ಅಗಲಿ ಹೋಗಲಿರುವನೆಂದು ಅವರಿಗೆ ದುಃಖವುಂಟಾದರೂ, ಕುಮಾರ ಅಮರಸಿಂಹನು ತಮ್ಮ ನಾಯಕಸ್ಥಾನವನ್ನು ವಹಿಸಿರುವನೆಂಬದನ್ನು ತಿಳಿದು ಹರ್ಷಭರಿತರಾದರು. ಒಂದು ಮಾತಿನಲ್ಲಿ ಹೇಳುವುದಾದರೆ, ಕುಮಾರ ಅಮರಸಿಂಹನು ಹೊಸ ಹುಟ್ಟನ್ನು ಪಡೆದ ನಾಡಿನ ಅರಸನಾದನೆಂದು ಹೇಳಬಹುದು. ಅಮರಸಿಂಹನ ಆಗ್ರಹದಂತೆ ಮತ್ತು ಫಕೀರ ಹುಸ್ನೇನನ ಉಪದೇಶದಂತೆ ಉಸ್ಮಾನಖಾನನು ರೂಪನಗರದ ಆಡಳಿತದಲ್ಲಿ ಸೈನ್ಯಾಧ್ಯಕ್ಷ ಪದವಿಯನ್ನು ಸ್ವೀಕರಿಸಲು ಒಪ್ಪಿದನು. ಉಸ್ಮಾನನು ಉದ್ಯೋಗವನ್ನು ಸ್ವೀಕರಿಸುವದರಿಂದ ಎರಡು ಸಮುದಾಯಗಳ ನಡುವೆ ಮೈತ್ರಿಯನ್ನು ದೃಢಪಡಿಸಲು ಸಾಧ್ಯವಾಗುವದೆಂದು ಅಮರಸಿಂಹನ ನಂಬಿಕೆಯಾಗಿದ್ದಿತು. ಉಸ್ಮಾನನ ಧೈರ್ಯ, ಪರೋಪಕಾರ ಬುದ್ಧಿ ಇವುಗಳು ಪ್ರತಿಯೊಬ್ಬರ ಪ್ರಶಂಸನೆಗೆ ಪಾತ್ರವಾಗಿದ್ದವು. ಜ್ಞಾನಾನಂದನು ಸಹ ಉಸ್ಮಾನನ ಸ್ವಭಾವವನ್ನು ಮೆಚ್ಚಿದ್ದನು. ಅವನು ಸ್ನೇಹಪೂರ್ಣ ಸ್ವರವಲ್ಲಿ ಹೀಗೆ ಹೇಳಿದನು: "ತರುಣರಾದ ನೀವಿಬ್ಬರೂ ಎರಡು ಸಮುದಾಯಗಳ ಉತ್ಕೃಷ್ಟ ರತ್ನಗಳಂತಿದ್ದೀರಿ. ಎರಡು ವರ್ಗಗಳ ನಡುವಿನ ಅಂತರವು ನಿಮ್ಮಿಬ್ಬರ ಈ ಅನ್ಯೋನ್ಯ ಸಹಕರಣೆಗಳಿಂದ ನೀಗುವುದೆಂದು ನಾನು ಭಾವಿಸುತ್ತೇನೆ. ಹಿಂದೆಯೇ ನಾನು ಹೇಳಿದ್ದೇನೆ, ನಮ್ಮ ಉದ್ದೇಶವು ಒಂದು ಪ್ರತ್ಯೇಕ ಸಮುದಾಯದ ಹಿತಸಾಧನೆ ಮಾತ್ರವಾಗಿರಕೂಡದು. ಪ್ರತಿಯೊಬ್ಬರೂ ನಾಡದೇವಿಯ ಮಕ್ಕಳಾಗಿರುತ್ತಾರೆ. ಒಬ್ಬನು ತನ್ನ ಸಮುದಾಯದವರನ್ನು ಮಾತ್ರ ಪ್ರೀತಿಸಿ ಇನ್ನೊಂದು ವರ್ಗದವರೊಡನೆ ವಿದ್ವೇಷವನ್ನು ಬೆಳಿಸುವದೆಂದರೆ, ಒಬ್ಬ ತಾಯಿಯ ಮಕ್ಕಳು ಪರಸ್ಪರ ಕಲಹಿಸಿದಂತಾಗುತ್ತದೆ. ಪ್ರತಿಯೊಬ್ಬರೂ ನಾಡದೇವಿಯ ಪುತ್ರರಿರುವದರಿಂದ ನಾವೆಲ್ಲರೂ ಸೋದರರಾಗಿರುತ್ತೇವೆ. ಪ್ರತಿಯೊಬ್ಬನ ಉದ್ದೇಶವೂ ಈ ಕುಟುಂಬದ ಹಿತಸಾಧನೆಯಾಗಿರಬೇಕು. ಯಾವ ವರ್ಗಕ್ಕೇ ಸೇರಿರಲಿ, ಯಾವ

ದೇವರನ್ನೇ ಪೂಜಿಸಲಿ, ಯಾವ ಮತವನ್ನೇ ನಂಬಲಿ ಎಲ್ಲರೂ ರೂಪನಗರದ ಪ್ರಜೆಗಳಿರುವದರಿಂದ, ಅವರೆಲ್ಲರೂ ಒಂದು ಕುಟುಂಬಕ್ಕೆ ಸೇರಿದವರಿರುತ್ತಾರೆ. ಒಂದು ವರ್ಗದವರು ಇನ್ನೊಂದು ವರ್ಗದವರನ್ನು ಪೀಡಿಸುವದೆಂದರೆ ಅದು ಸ್ವಂತ ಸೋದರರನ್ನು ಪೀಡಿಸಿದಂತಾಗುವದು. ಈ ಹಿಂಸೆಯನ್ನು ದರ್ಶಿಸಿ ನಾಡದೇವಿಯು ಸಂತಸವನ್ನು ತಾಳಲಾರಳು. ಅವಳು ನಮ್ಮನ್ನು ಅನುಗ್ರಹಿಸ ಲಾರಳು. ಆದುದರಿಂದ ಪ್ರತಿಯೊಬ್ಬನ ಉದ್ದೇಶವು ನಾಡಿನ ಹಿತಸಾಧನೆಯಾ ಗಿರಬೇಕು. ರೂಪನಗರದ ಭವಿಷ್ಯವು ನಿಮ್ಮ ಕೈಗಳಲ್ಲಿದೆ. ನಾಡದೇವಿಯನ್ನು ಇದುವರೆಗೆ ಬಂಧಿಸಿದ್ದ ಸಂಕೋಲೆಗಳನ್ನು ಬಹು ಸಾಹಸದಿಂದ ಹರಿದೊಗೆ ವೆವು. ಇನ್ನು ಸರಿಯಾಗಿ ಚಿಂತಿಸಿ ನಾಡಿನ ಅಭಿವೃದ್ಧಿಗಾಗಿ ಹೆಣಗಲು ಹಿಂಜ ರಿಯದಿರಿ. ಜನಸೇವೆಯೇ ನಿಮ್ಮ ಗುರಿಯಾಗಲಿ. ನಿಜ. ಜನರು ನಿಮ್ಮಿಬ್ಬರನ್ನು ಅರಸನನ್ನಾಗಿಯೂ, ಸೈನ್ಯಾಧ್ಯಕ್ಷನನ್ನಾಗಿಯೂ ಆರಿಸಿದ್ದಾರೆ. ಶಾಸನ ಸೂತ್ರ ಗಳನ್ನು ನಿಮ್ಮ ಕೈಗಳಿಗೆ ಒಪ್ಪಿಸಿದ್ದಾರೆ. ನೀವು ಯಾವಾಗಲೂ ಭಾವಿಸಬೇ ಕಾದುದೇನಂದರೆ, ನೀವು ಜನರ ಸೇವಕರಾಗಿರುತ್ತೀರೆಂದು. ಜನರ ದುಃಖ ಪರಿ ಹಾರವೇ ನಿಮ್ಮ ಜೀವನದ ಧ್ಯೇಯವಾಗಿರಬೇಕು. ಅದರಂತೆಯೇ ದುಷ್ಟ ರನ್ನೂ ಕುಹಕಿಗಳನ್ನೂ ದಂಡಿಸಲು ಎಂದಿಗೂ ಹಿಂಜರಿಯಬೇಡಿರಿ. ನಾಡಿನ ಹಿತಕ್ಕೆ ಕಂಟಕರಾಗಿರುವವರನ್ನು ನಿವಾರಿಸಲು ಬಹು ಉಗ್ರವಾದ ಧೋರಣೆ ಯನ್ನು ಕೈಗೊಳ್ಳಲು ಹಿಂಜರಿಯಲಾಗದು. ಏಕೆಂದರೆ, ಜನದ್ರೋಹಿಗಳನ್ನು ದಂಡಿಸದಿದ್ದರೆ, ಶಾಸನ ವ್ಯವಸ್ಥೆಯ ತಳಹದಿಯು ಸಡಿಲವಾಗಬಹುದು; ನಾ ಡಿನ ಜನರು ಸಂಕಟಗಳಿಗೀಡಾಗಬಹುದು. ಸಜ್ಜನರ ಹಿಂಸೆಯಾಗದಂತೆ ಪ್ರತ್ಯೇಕ ಎಚ್ಚರಿಕೆಯನ್ನು ತೆಗೆದುಕೊಳ್ಳಬೇಕು. ಅವರ ಉಸುರಿನ ಶಾಪವು ಎಂಥ ಬಲಾಢ್ಯನನ್ನೂ ನಿರ್ನಾಮಗೊಳಿಸಲು ಶಕ್ತಿಯುಳ್ಳದ್ದಾಗಿದೆ. ಪ್ರತಿಯೊ ಬ್ಬನ ಧಾರ್ಮಿಕ ಆಚಾರ ವಿಚಾರಗಳಿಗೆ ವಿಘ್ನವು ಬಂದೊದಗದಂತೆ ನೋಡ ಬೇಕಾಗಿದೆ. ಪ್ರತಿಯೊಬ್ಬನು ಅವನ ಇಷ್ಟಾನುಸಾರ ವರ್ತಿಸುವದರಲ್ಲಿ ಪ್ರತಿ ಬಂಧಗಳನ್ನು ತಂದೊಡ್ಡಲಾಗದು; ಆದರೆ ವ್ಯಕ್ತಿಯ ಉದ್ಯಮಗಳು ನಾಡಿನ ಅಭ್ಯುನ್ನತಿಗೆ ಮಾರಕವಾದವುಗಳೆಂದು ತೋರಿದರೆ ಅವುಗಳನ್ನು ತಡೆಯ ಬೇಕಾಗಿದೆ. ನಿಮ್ಮ ಪ್ರಯತ್ನಗಳಿಂದ ನಾಡಿನ ಸೌಭಾಗ್ಯವು ಬೆಳಗಲಿ!"

ಜ್ಞಾನಾನಂದನು ತನ್ನ ಉಪದೇಶವನ್ನು ಮುಗಿಸಿದನು. ಪ್ರತಿಯೊಬ್ಬ ನೂ ಅವನ ನುಡಿಗಳನ್ನು ಕಿವಿಗೊಟ್ಟು ಕೇಳಿದನು. ಅವನ ನುಡಿಗಳು ಜನ

ರಗೆ ಮುಂದಿನ ಪಥವನ್ನು ತೋರಿದವೆಂದು ಇಲ್ಲಿ ಪ್ರತ್ಯೇಕ ಹೇಳಬೇಕಾಗಿಲ್ಲ. ರೂಪನಗರದ ಶಾಸನದಲ್ಲಿ ಕುಮಾರ ಅಮರಸಿಂಹನು ಅನುಸರಿಸಬೇಕಾದ ಧೋರಣೆಯೇನೆಂಬುದನ್ನು ಜ್ಞಾನಾನಂದನು ತನ್ನ ಉಪದೇಶಗಳ ಮೂಲಕ ಸೂಚಿಸಿದನು.

ತಂಬೂರಿಯ ಗಾನವೊಂದು ಕೇಳಿ ಬಂದಿತು. ಎಲ್ಲರೂ ಮೌನವನ್ನು ಅವಲಂಬಿಸಿ, ಆ ಗಾನವನ್ನು ಆಶ್ರಾವಿಸಿದರು. ಗಾನವು ಸನಿಯದಿಂದ ಕೇಳಿ ಬರತೊಡಗಿತು. ಇಷ್ಟು ಮೋಹಕವಾದ ಗಾನವನ್ನು ಹಾಡತಕ್ಕವರು ಯಾರೆಂದು ಅವರು ಆಶ್ಚರ್ಯಭರಿತರಾದರು. ಜ್ಞಾನಾನಂದನಿಗೆ ಅವರು ಯಾರೆಂಬುದು ಹೊಳೆಯದಿರಲಿಲ್ಲ. ತಂಬೂರಿಯಿಂದ ಗಾನವನ್ನು ನುಡಿಸುತ್ತಿದ್ದವಳು ಭೈರವಿಯಾಗಿದ್ದಳೆಂದು ಅ ವ ನು ಅರಿತಿದ್ದನು. ಒಂದೆರಡು ನಿಮಿಷಗಳು ಕಳೆದವು; ಭೈರವಿಯ ಚೆಲುವ ರೂಪವು ಅವರ ಮುಂದೆ ಪ್ರತ್ಯಕ್ಷವಾಯಿತು. ಅವಳು ಹಾಡನ್ನು ನಿಲ್ಲಿಸಿದಳು. ಜನರು ಅವಳ ಕಡೆಗೆ ತಮ್ಮ ದೃಷ್ಟಿಯನ್ನು ಹೊರಳಿಸಿದರು. ಅವಳ ವದನಮಂಡಲದಲ್ಲಿ ಹೊಳೆಯುತ್ತಿದ್ದ ಅಪೂರ್ವ ಶೋಭೆಯು ಅವರ ಕಣ್ಣುಗಳಲ್ಲಿ ಪತಿಸಿತು.

"ತಂಗೀ," ಜ್ಞಾನಾನಂದನ ಮೃದುಲಸ್ವರವು ಹೊರಟಿತು. ಭೈರವಿಯು ಜ್ಞಾನಾನಂದನ ಚರಣಗಳಿಗೆ ವಂದಿಸಿ ಒಂದು ಭಾಗಕ್ಕೆ ಸರಿದು ನಿಂತಳು. ಲಜ್ಜೆಯಿಂದ ಅವಳ ಕಣ್ಣುಗಳು ನೆಲವನ್ನು ನೋಡಿದವು. ಜ್ಞಾನಾನಂದನು ಹೇಳಿದ: "ತಾಯೀ, ನೀನಲ್ಲ ನನಗೆ ವಂದಿಸಬೇಕಾದುದು; ನೀನು ರೂಪನಗರದ ಭಾಗ್ಯದೇವತೆಯಂತಿರುವೆ. ನಿನ್ನ ಬೆಂಬಲವು ವಿದ್ರೋಹಿಗಳಿಗೆ ದೊರಕದಿದ್ದರೆ ಅಭಿನವ ರೂಪನಗರವು ಜನಿಸುತ್ತಿರಲಿಲ್ಲ. ನಾಡಿಗೆ ನೀನು ಸಲ್ಲಿಸಿದ ಸೇವೆಯನ್ನು ವಿಸ್ಮರಿಸಲು ನಮ್ಮಿಂದ ಸಾಧ್ಯವಾಗದು. ಈ ಹೊಸ ನಾಡು ನಿನ್ನ ಕೂಸು; ಒಬ್ಬ ತಾಯಿಯಂತೆ ನೀನು ಇದನ್ನು ಪೋಷಿಸಿ ಪರಿಪಾಲಿಸು."

"ಸ್ವಾಮೀಜಿ," ಭೈರವಿಯ ಮೃದುಮಧುರ ಕಂಠನಾದವು ವಾಯುವಿನಲ್ಲಿ ಬೆರೆತಿತು. "ಈ ಹೊಗಳಿಕೆಗೆ ನಾನು ಯೋಗ್ಯಳಲ್ಲ. ನಾನು ಪಾಮರಳು; ನನ್ನ ಎದೆಯಲ್ಲಿ ಸ್ವಾತಂತ್ರ್ಯದ ದೀಪವನ್ನು ಉರಿಸಿದವರು ತಾವು. ಸ್ವಾತಂತ್ರ್ಯ ಸಾಧನೆಗಾಗಿ ತಾವು ಜರುಗಿಸಿದ ಮಹಾಯಜ್ಞದಲ್ಲಿ ನಾನು ಅಳಿಲಸೇವೆಯನ್ನು ಸಲ್ಲಿಸಿದೆ. ನನ್ನ ಪತಿದೇವನಿಂದ ರಾಜ್ಯಕ್ಕೆ ಸಂಭವಿಸಿದ ಸಂಕಟಗಳನ್ನು ನಿವಾರಿಸಲು ಹೊರಟೆ. ನನ್ನ ಜೀವಿತೇಶ್ವರನ ಪಾಪಾಚರಣೆಗಳ ಕೊಳೆಯನ್ನು ತೊಳೆ

ಯಲುದ್ಯಮಿಸಿದೆ. ತಮ್ಮಂಥ ಮಹಾನುಭಾವರು ಈ ದೀನಳನ್ನು ಹೀಗೆ ಪ್ರಶಂಸಿಸುವದು ಸರಿಯಲ್ಲ."

"ತಾಯೀ, ನೀನಾರು?" ಫಕೀರನು ಪ್ರಶ್ನಿಸಿದ.

"ಒಬ್ಬ ಹತಭಾಗ್ಯಳು!" ಗದ್ಗದ ಸ್ವರದಲ್ಲಿ ಭೈರವಿಯು ಹೇಳಿದಳು: "ನನ್ನ ಪತಿದೇವನು ರೂಪನಗರದ ಅಭ್ಯುದಯಕ್ಕೆ ವಿಘ್ನವಾಗಿ ನಿಂತ- ಜನರ ಪೀಡನೆಗಳಿಗೆ ಕಾರಣಪುರುಷನಾದ. ಪತಿಯನ್ನು ಉತ್ತಮಪದವಾರಿಗೆ ತರುವದು ಸತಿಯ ಕರ್ತವ್ಯವಾಗಿರುವದರಿಂದ ನಾನು ನಾಡಸೇವೆಗೆ ಹೊರಟೆ. ನನ್ನ ಈ ಅಲ್ಪ ಸೇವೆಯನ್ನು ವಿಚಾರಿಸಿ, ನನ್ನ ಪತಿಯು ಆಚರಿಸಿದ ಹಿಮಾಲಯದಂಥ ತಪ್ಪುಗಳನ್ನು ಮಹಾಜನರು ಕ್ಷಮಿಸಬೇಕೆಂದು ನನ್ನ ಬಿನ್ನಹಗಳು."

"ಅಕ್ಕ, ಆತನಾರು?" ಈ ಪ್ರಶ್ನೆಯು ಅಮರಸಿಂಹನ ತುಟಿಗಳಿಂದ ಹೊರಟಿತು.

"ಯಾರೆಂದು ಹೇಳಲಿ?" ಅವರು ಸುಭೇದಾರ ಯಾಕೂಬಖಾನನ ಬಲಗೈಯ್ಯಂತಿದ್ದರು.

"ಯಾರು, ದುರ್ಜಯಸಿಂಹನೇ?" ಈ ಪ್ರಶ್ನೆಯನ್ನು ಹಾಕಿದವನು ಉಸ್ಮಾನಖಾನನಾಗಿದ್ದನು.

"ಅಹುದು."

"ನಿನ್ನ ಹೆಸರೇನು?"

"ನನ್ನ ಹೆಸರು ಭೈರವಿಯೆಂದಲ್ಲ. ಖಾನಸಾಹೇಬ, ತಾವೂ ಫಕೀರಸಾಹೇಬರೂ ಯಾಕೂಬಖಾನನ ಅಕ್ರಮಗಳಿಗೊಳಗಾಗಿದ್ದ ಹೇಮಳನ್ನು ರಕ್ಷಿಸಿಸುದರ ನೆನಪು ತಮಗಿರಬಹುದು. ಹೇಮಳು ಆಪತ್ತಿಗೊಳಗಾದ ಸೂಚನೆಯನ್ನು ತಮಗೆ ಕೊಟ್ಟವಳು ನಾನಿರುತ್ತೇನೆ. ನನ್ನ ಅವರೊಂದಿಗೆ ನಾನು ಹೇಳಿದ್ದೆ, ಅವರು ಈ ಅತ್ಯಾಚಾರಗಳಲ್ಲಿ ಭಾಗವನ್ನು ವಹಿಸುವದಾದರೆ ನಾನು ಅವರ ಗೃಹವನ್ನು ಪರಿತ್ಯಜಿಸುವೆನೆಂದು. ಈ ಎಲ್ಲಾ ಸಂಗತಿಗಳು ಹೇಮಳಿಗೆ ತಿಳಿದಿವೆ. ನಾವು ನಿಶ್ಚಯಿಸಿದಂತೆ ಅವಳು ಹೇಮಚಂದ್ರನೆಂಬ ಹೆಸರಿನಿಂದ ವಿದ್ರೋಹಿಗಳ ತಂಡದಲ್ಲಿ ಸೇರಿದಳು. ನಾನು ಭೈರವಿಯೆಂಬ ಹೆಸರನ್ನುತಳೆದು ತಂಬೂರಿಯನ್ನುಕೈಯಲ್ಲಿ ಹಿಡಿದು, ಜನಜಾಗೃತಿಗಾಗಿ ಹೆಣಗಿದೆನು. ಈ ನನ್ನ ಅಲ್ಪ ಪ್ರಯತ್ನದಿಂದ ನಾಡದೇವಿಯು ಸಂತುಷ್ಟಳಾಗಿದ್ದರೆ, ನಾನು ಧನ್ಯಳಾದೆನೆಂದು ಭಾವಿಸುತ್ತೇನೆ."

"ತಂಗೀ, ನಿನ್ನ ನಿಜವಾದ ಹೆಸರೇನು?" ಈ ಪ್ರಶ್ನೆಯು ಜ್ಞಾನಾನಂದ ನಿಂದ ಹೊರಟಿತು. "ನಿರುಪಮಾ."

ಮನೆಯೊಳಗಿನಿಂದ ಒಂದು ಸ್ವರವು ಕೇಳಿ ಬಂದಿತು. ಅದು ಹೇಮಳ ದಲ್ಲವೆ ಬೇರೆ ಯಾರದೂ ಆಗಿರಲಿಲ್ಲ. ಅವಳು ನುಡಿದಳು:"ಅಕ್ಕಾ, ನಿರುಪಮಾ, ಇತ್ತ ಕಡೆಗೆ ಬಾ! ನಿನ್ನನ್ನು ನೋಡದೆ ಎಷ್ಟೋ ದಿನಗಳಾದವು?"

ಈ ಸ್ವರವನ್ನು ಕೇಳುತ್ತಲೆ ನಿರುಪಮೆ ಅಥವಾ ಭೈರವಿಯು ಜ್ಞಾನಾ ನಂದನಿಗೆ ವಂದಿಸಿ ಒಳಮನೆಗೆ ತೆರಳಿದಳು. ತನ್ನ ತೋಳುಗಳನ್ನು ಚಾಚಿ ಹೇಮಳು ಅವಳನ್ನು ಆಲಿಂಗಿಸಿದಳು.

ಜ್ಞಾನಾನಂದನು ಆಲೋಚನಾಮಗ್ನನಾಗಿ ಹೇಳಿದ:"ಇದು ವಿಧಿಯ ವೈಚಿ ತ್ರ್ಯವಲ್ಲವೆ ಬೇರೆ ಏನು? ಪರಸ್ಪರ ವಿಭಿನ್ನಸ್ವಭಾವ ಸಂಸ್ಕಾರದವರನ್ನು ಒಂದು ಗೂಡಿಸಿದುದು ಜಗನ್ನಿಯಾಮಕನ ಲೀಲಾವಿನೋದದ ಒಂದು ಚಿತ್ರವೆಂದ ಲ್ಲದೆ ಬೇರೆ ಏನೆಂದು ಹೇಳಬೇಕು? ದುರ್ಜಯಸಿಂಹನಾದರೋ ಕುಹಕಿ; ಜನ ದ್ರೋಹಿ. ಅವನಿಂದ ಜನತೆಯು ಅನುಭವಿಸದ ಸಂಕಟಗಳಿಗೆ ಮೇರೆಯಿಲ್ಲ; ಆದರೆ ಅವನ ಸತಿಯು ಸಾಧ್ವಿ; ಅವಳು ನಾಡಿಗೆ ಸಲ್ಲಿಸಿದ ಅಪಾರ ಸೇವೆಯನ್ನು ನೆನೆದು ದುರ್ಜಯನ ಮಹದಪರಾಧಗಳನ್ನು ಮರೆತುಬಿಡೋಣ. ಅವಳ ಸಾಹಸ ಗಳ ಮುಂದೆ ನಮ್ಮವೆಲ್ಲವೂ ಕ್ಷುಲ್ಲಕವಾದವುಗಳು."

"ಅವಳು ರೂಪನಗರದ ಮಹಿಳೆಯರಿಗೆ ಆದರ್ಶಪ್ರಾಯಳಾಗಿರಲಿ." ಈ ಸ್ವರವು ಫಕೀರನ ಕಂಠದಿಂದ ಹೊರಟಿತು.

---

## ೨೬ ಎಳೆಗೂಡಿತು.

'ಸ್ವಾಮೀಜಿ, ಇದುವರೆಗೆ ಯಾರ ಸಂಗಡವೂ ನುಡಿಯದಿದ್ದ ಒಂದು ಲವ ವೃತ್ತಾಂತವನ್ನು ತಮಗೆ ಉಸುರಬೇಕೆಂದಿದ್ದೇನೆ.' ಈ ಮಾತು ಗಳನ್ನಾಡಿದವಳು ಕುಮಾರ ಅಮರಸಿಂಹನ ತಾಯಿಯಾಗಿದ್ದಳು.

"ತಾಯಿ, ಅದೇನು?" ಜಿಜ್ಞಾಸೆಭರಿತನಾದ ಜ್ಞಾನಾನಂದನು ಕೇಳಿದ.

"ಅದು ಕುಮಾರ ಅಮರಸಿಂಹನಿಗೆ ಸಂಬಂಧಿಸಿದುದಾಗಿದೆ." ಮುದು ಕಿಯು ನುಡಿದಳು: "ಅವನು ನನ್ನ ಮಗನಲ್ಲ."

"ಹಾಗಾದರೆ ಇವನು ಇನ್ನಾರು?"

"ಅದೊಂದು ದೀರ್ಘ ವೃತ್ತಾಂತ; ಇದುವರೆಗೆ ನಾನು ನೆನಸುತಲಿದ್ದ ಕನಸು ನಿಜವಾಗಿ ಪರಿಣಮಿಸಿರುವದರಿಂದ, ಇದುವರೆಗೂ ನಾನು ಅಡಗಿಸಿಟ್ಟಿದ್ದ ಆ ರಹಸ್ಯವನ್ನು ಉಸುರಬೇಕೆಂದಿದ್ದೇನೆ. ಇವನು ಸಾಮಾನ್ಯ ಕುಟುಂಬಕ್ಕೆ ಸೇರಿದವನಲ್ಲ; ರಾಜಕುಟುಂಬದವನು."

"ರಾಜವಂಶಕ್ಕೋ?"

"ಅಹುದು, ಸ್ವಾಮಿಜೀ. ಆ ಕತೆಯು ಬಹು ಉದ್ದವಾಗಿದೆ; ಆದರೆ ಅದು ಕುಮಾರನಿಗೆ ಸಂಬಂಧಿಸಿದುದಾಗಿರುವದರಿಂದ ಅದನ್ನು ತಾವು ಕೇಳುವಿರೆಂದು ನನ್ನ ನಂಬಿಕೆ."

"ಹೇಳಿರಿ ತಾಯೀ, ನಾನು ಸಂತೋಷದಿಂದ ಕೇಳುವೆನು."

"ಅಹುದು; ಕುಮಾರ ಅಮರಸಿಂಹನು ರಾಜವಂಶಕ್ಕೆ ಸೇರಿದವನಾಗಿರುತ್ತಾನೆ. ಹಿಂದೆ ರೂಪನಗರವನ್ನು ವಿಜಯಸಿಂಹ ಮಹಾರಾಜರು ಆಳುತ್ತಿದ್ದರೆಂಬದೂ, ಅವರನ್ನು ಪಠಾಣರು ಯುದ್ಧದಲ್ಲಿ ಸೋಲಿಸಿ ನಾಡನ್ನು ವಶಪಡಿಸಿಕೊಂಡರೆಂಬುದೂ ತಮಗೆ ತಿಳಿದ ಸಂಗತಿಗಳಾಗಿವೆ. ಅಮರಸಿಂಹನು ವಿಜಯಸಿಂಹ ಮಹಾರಾಜರ ಮತ್ತು ಸುನಂದಾದೇವಿಯ ಕುಮಾರನಿರುತ್ತಾನೆ."

"ಆದರೆ ಅರಮನೆಯಿಂದ ಪಾರಾದ ಮಹಾರಾಣಿಯನ್ನೂ ಕುಮಾರನನ್ನೂ ಪಠಾಣರು ಕಂಡುಹಿಡಿದು ವಧಿಸಿದರೆಂಬ ವದಂತಿಯು ಆ ಕಾಲದಲ್ಲಿ ಹರಡಿದ್ದಿತಷ್ಟೆ?" ಜ್ಞಾನಾನಂದನು ತನ್ನ ಸಂಶಯವನ್ನು ಹೊರಗೆಡಹಿದನು.

"ಆದರೆ ಆ ನುಡಿಯು ಸುಳ್ಳು." ವೃದ್ಧೆಯು ತನ್ನ ಕಥೆಯನ್ನು ಪ್ರಾರಂಭಿಸಿದಳು. "ರೂಪನಗರವು ಶತ್ರುಗಳಿಗೆ ವಶವಾಗುವುದೆಂಬುದನ್ನು ತಿಳಿಯಲು, ಮಹಾರಾಜರು ಸುನಂದಾದೇವಿಯನ್ನು ಕರೆದು ಹೀಗೆ ಹೇಳಿದರು: "ಕೆಲವು ಮಂದಿ ಭಟರೊಡನೆ ಕುಮಾರನನ್ನು ಕರೆದುಕೊಂಡು ಗುಪ್ತದ್ವಾರದಿಂದ ಪಾರಾಗಬೇಕೆಂದು; ಆದರೆ ಮಹಾರಾಣಿಯವರು ಪ್ರಾರಂಭದಲ್ಲಿ ಈ ಸೂಚನೆಯನ್ನು ಒಪ್ಪಲಿಲ್ಲ. ಪತಿಯನ್ನಗಲಿ ತೆರಳಲು ಅವರಿಗೆ ಮನಸ್ಸಿರಲಿಲ್ಲ. ಅದುದರಿಂದ ಸತಿಧರ್ಮದಂತೆ ಜೋಹಾರವನ್ನು ಅನುಷ್ಠಿಸುವೆವೆಂದು ಅವರು ಹಟಹಿಡಿದರು. ಆಗ ಮಹಾರಾಜರು ರಾಣಿಯನ್ನು ಎಚ್ಚರಿಸಿದರು. ಕುಮಾರನ ಪ್ರಾಣವನ್ನು ಕಾಪಾಡುವುದಕ್ಕಾಗಿ ಪ್ರಾಣದಿಂದುಳಿಯಬೇಕೆಂದು ಅವರು ರಾಣಿಯನ್ನು ಪ್ರಾರ್ಥಿಸಿದರು. ಕುಮಾರನಿಗೆ ಆಗ ಒಂದು ವರುಷ ಸಹ ಪ್ರಾಯವಾಗಿರಲಿಲ್ಲ; ಮೊಲೆಕುಡಿಯುವುದನ್ನು ನಿಲ್ಲಿಸಿರಲಿಲ್ಲ. ಕಂದನ ಮುದು

ಮೋರೆಯನ್ನು ಈಕ್ಷಿಸುವಾಗ, ತಾಯಿಯ ಎದೆಯು ಕರಗಿತು. ತಾಯಿಯ ಒಲವು ಅವರೆಡೆಯಲ್ಲಿ ಹರಿದಾಡಿತು. ಕೊನೆಗೆ ಅವರು ಮಹಾರಾಜರ ಸೂಚನೆಯನ್ನು ಸ್ವೀಕರಿಸಿದರು."

ರಾತ್ರಿ ಎರಡನೆಯ ಯಾಮವು ಕಳೆದಿತು. ಆಗ ಮಹಾರಾಜರ ಸಂಬಿಗೆಯ ದಂಡಾಳಾಗಿದ್ದ ಅಜಯಸಿಂಹನು ಅರಮನೆಗೆ ಬಂದ. ಕೋಟೆಯಿಂದ ಪಾರಾಗಲು ಎಲ್ಲಾ ಸನ್ನದ್ಧತೆಗಳೂ ಆಗಿವೆಯೆಂದು ಅವನು ಉಸುರಿದ. ಮಹಾರಾಣಿಯವರು ಕೂಸಿನೊಡನೆ ಹೊರಟರು. ಹೊರಡುವ ಮುನ್ನ ತಮ್ಮ ಆಯುಷ್ಯದಲ್ಲಿ ಕೊನೆಯಬಾರಿ ತಮ್ಮ ಪತಿಯನ್ನು ಅಪ್ಪಿಕೊಂಡರು. ಆ ಚಿತ್ರವು ಈಗಲೂ ನನ್ನ ಕಣ್ಣುಗಳ ಮುಂದೆ ನರ್ತಿಸುತ್ತಿದೆ. ಮಹಾರಾಣಿಯವರ ನೇತ್ರಗಳಿಂದ ಅಶ್ರುಗಳು ಧಾರಾಪೂರ್ವಕವಾಗಿ ಪ್ರವಹಿಸುತಲಿದ್ದವು. ಶರೀರವು ಕಂಪಿಸುತ್ತಿದ್ದಿತು. ಅವರು ತಮ್ಮ ಪ್ರಿಯತಮನ ಎದೆಯ ಮೇಲೆ ಮಸ್ತಕವನ್ನಿಟ್ಟು ಅತ್ತರು. ಮಹಾರಾಜರ ನೇತ್ರಗಳಲ್ಲಿಯೂ ಬಾಷ್ಪಕಣಗಳು ತುಂಬದಿರಲಿಲ್ಲ. ಅವರು ರಾಣಿಯ ನೇತ್ರಗಳಿಂದ ಹರಿಯುತ್ತಿದ್ದ ಕಂಬನಿಗಳನ್ನು ತಮ್ಮ ಉತ್ತರೀಯದಿಂದ ಒರಿಸುತ್ತಾ ಹೇಳಿದರು: "ರಾಣೀ, ಮರುಗದಿರು; ವಿಧಿಯ ಆಜ್ಞೆಯನ್ನು ಮೀರಿ ನಡೆಯುವವರಾರು? ನೀನು ಕುಮಾರನನ್ನು ಪೋಷಿಸಿ ದೊಡ್ಡವನನ್ನಾಗಿ ಮಾಡು. ಸ್ವರ್ಗದಲ್ಲಿ ನಿಂತು ನಾನು ನಿನ್ನ ಕೆಲಸವನ್ನು ನೋಡುತ್ತಿರುತ್ತೇನೆ."

"ರಾಣಿಯು ಮಾತಾಡಲಿಲ್ಲ. ಅವರ ನಾಲಿಗೆಗೆ ಆಗ ಮಾತಾಡುವ ಶಕ್ತಿಯಿರಲಿಲ್ಲ. ಮಹಾರಾಜರು ಕಂದನ ಮುಖವನ್ನು ಕೊನೆಯ ಬಾರಿ ಚುಂಬಿಸಿದರು. ಮಹಾರಾಣಿಯು ಪತಿಗೆ ನಮಸ್ಕರಿಸಿ ಹೊರಟರು. ನಾನು ಅವರನ್ನು ಹಿಂಬಾಲಿಸಿದೆ; ಸಂಗಡ ಹದಿನೈದು-ಇಪ್ಪತ್ತು ಮಂದಿ ದಂಡಾಳುಗಳಿದ್ದರು. ಗುಪ್ತದ್ವಾರವನ್ನು ತೆರೆದು ಗುಹೆಯೊಳಗೆ ಪ್ರವೇಶಿಸಿದೆವು. ಕತ್ತಲೆ. ದಾರಿ ಕಾಣುತ್ತಿರಲಿಲ್ಲ. ಎಡವುತ್ತಾ ಬೀಳುತ್ತಾ ಮುಂದೆ ಸಾಗುತ್ತಿದ್ದೆವು. ಒಬ್ಬರ ಮುಖವು ಇನ್ನೊಬ್ಬರಿಗೆ ಕಾಣಿಸದು. ನಡೆದು ಅಭ್ಯಾಸವಿಲ್ಲದ ಮಹಾರಾಣಿಯು ಕಲ್ಲು ಮುಳ್ಳುಗಳನ್ನು ತುಳಿದು ಮುಂದೆ ಸಾಗುತ್ತಿದ್ದಳು. ಆಕೆಗೆ ದಣಿವಾಗಲು ಶಿಶುವನ್ನು ನನ್ನ ಕೈಗೆ ಕೊಟ್ಟಳು. ನಾನು ಶಿಶುವನ್ನು ಎತ್ತಿಕೊಂಡು ಅವರನ್ನು ಹಿಂಬಾಲಿಸಿದೆ. ಕತ್ತಲೆ. ಕಲ್ಲುಗಳ ಮೇಲೆ ಮುಗ್ಗರಿಸುತ್ತಾ ಮುಂದೆ ತೆರಳಿದೆವು. ಬಹು ದೂರ ಹೀಗೆ ಸಾಗಲು ರಾಣಿಗೆ ದಣಿವಾಯಿತು. ಮುಂದೆ

ಹೆಜ್ಜೆಗಳನ್ನಿಡಲು ಅವಳಿಗೆ ಸಾಧ್ಯವಾಗಲಿಲ್ಲ; ನೆಲದ ಮೇಲೆ ಆಸೀನಳಾದಳು. ದಾಹದಿಂದ ಅವಳ ಗಂಟಲು ಬತ್ತಿ ಹೋಗಿತ್ತು. ಅವಳು ನೆಲದ ಮೇಲೆ ಬಿದ್ದು "ಮಾಲಿನಿ, ನೀರು!" ಎಂದು ಹೇಳಿದಳು. ಆದರೆ ಆ ಗವಿದಾರಿಯಲ್ಲಿ ನೀರು ಸಿಕ್ಕುವದು ಪ್ರಯಾಸವಾಗಿದ್ದಿತು; ಆದರೂ ಮಾಡುವದೇನು? ಉಪಾಯ ವಿಲ್ಲ. ನೆಲದ ಮೇಲೆ ಕುಳಿತಿದ್ದ ರಾಣಿಯನ್ನು ನಾನು ಕೈಹಿಡಿದೆಬ್ಬಿಸಿದೆನು. ಪುನಃ ಮುಂದೆ ಮುಂದೆ ಹೆಜ್ಜೆಗಳನ್ನು ಹಾಕಿದೆವು. ಗವಿಯು ಅಂಧಕಾರ ಮಯವಾಗಿದ್ದುದರಿಂದ ಹಗಲೋ ರಾತ್ರಿಯೋ ಎಂಬುದನ್ನು ತಿಳಿಯಲಾಗ ಲಿಲ್ಲ. ಕೊನೆಗೆ ಗುಹೆಯ ಇನ್ನೊಂದು ಬಾಗಿಲಿಗೆ ಬಂದು ಸೇರಿದೆವು. ಅಜಯನು ಗುಹೆಯ ಬಾಗಿಲನ್ನು ಮುಚ್ಚಿದ್ದ ಬಂಡೆಗಲ್ಲನ್ನು ಹೊರಳಿಸಿದ. ಗುಹೆಯೊಳಗೆ ತುಸ ಬೆಳಕು ಗೋಚರಿಸಿತು. ಅಜಯನು ಹೇಳಿದ: "ನೀವೆಲ್ಲರೂ ಇಲ್ಲಿಯೇ ಇರ್ರಿ. ಹೊರಗೆ ಸಮೀಪದಲ್ಲಿ ಶತ್ರುಗಳಿರುವರೇನೆಂಬುದನ್ನು ನೋಡಿಬರುತ್ತೇನೆ."

"ಅಜಯ, ನೀರಡಿಕೆಯಿಂದ ನನ್ನ ಗಂಟಲು ಒಣಗಿ ಹೋಗಿದೆ. ಈ ದಾಹವನ್ನು ನಾನು ಸಹಿಸಲಾರೆ." ರಾಣಿಯು ನೆಲದ ಮೇಲೆ ಬಿದ್ದುಕೊಂಡು ಹೊರಳಿದಳು.

"ಮಹಾರಾಣಿಯವರು ಶಬ್ದ ಮಾಡಕೂಡದು. ಪಕ್ಕದಲ್ಲಿ ಶತ್ರುಗಳಿದ್ದರೆ ಅವರಿಗೆ ನಮ್ಮ ಸುಳಿವು ಹತ್ತಬಹುದು. ನೀವೆಲ್ಲರೂ ಇಲ್ಲಿಯೇ ಇರ್ರಿ. ಕುಡಿಯ ಲಿರುವ ನೀರನ್ನು ನಾನು ತರುತ್ತೇನೆ." ಅಜಯನು ಹೀಗೆ ಹೇಳಿ ಹೊರಕ್ಕೆ ತೆರ ಳಿದ. ಅವನು ಹೊರಗೆ ಹೋಗುವಾಗ ಗುಹೆಯ ಬಾಗಿಲನ್ನು ಬಂಡೆಗಲ್ಲಿನಿಂದ ಮುಚ್ಚಲು ಮರೆಯಲಿಲ್ಲ."

"ಅಜಯ, ಗವಿಯ ಬಾಗಿಲನ್ನು ಮುಚ್ಚಬೇಡ. ಶುದ್ಧ ವಾಯುವಾದರೂ ಒಳಗೆ ಬರಲಿ." ಎಂದಳು ರಾಣಿ.

"ಇಲ್ಲ ತಾಯಿ; ಶತ್ರುಗಳು ಪಕ್ಕದಲ್ಲಿರಬಹುದು."

"ಇದುವರೆಗೆ ನಿರ್ಭಯದಿಂದ ಜೀವಿಸಿದ್ದ ರಾಣಿಯು ಶತ್ರುಗಳಿಗೆ ಹೆದರಿ ಬೆಕ್ಕನ್ನು ಕಂಡ ಇಲಿಯಂತೆ ನಡುಗುತ್ತಾ ಒಂದು ಮೂಲೆಯಲ್ಲಿ ಅಡಗ ಬೇಕಾಗಿ ಬಂದಿತು. ಕಲ್ಲುಗಳನ್ನು ತುಳಿದು ಅವಳ ಕಾಲುಗಳು ಗಾಯವಾಗಿ ದ್ದವು. ಅವಳು ನನ್ನನ್ನು ಅಪ್ಪಿಕೊಂಡು ಹೀಗೆ ಹೇಳಿದಳು: "ಹೀಗೆ ಜೀವಿ ಸುವುದಕ್ಕಿಂತ ಸಾಯುವುದು ಮೇಲಲ್ಲವೇ? ಪಠಾಣರಿಗಂಜಿ ಗವಿಯಲ್ಲಿ ಜೀವಿ ಸುವುದಕ್ಕಿಂತ ಮಡಿಯುವುದೇ ಲೇಸೆಂದು ನನಗೆ ತೋರುತ್ತದೆ."

ರಾಣಿಯನ್ನು ಸಂತೈಸಲು ಪ್ರಯತ್ನಿಸುತ್ತಾ ನಾನು ಹೇಳಿದೆ: "ತಾಯಿ, ಮರುಗದಿರಿ. ನಿಮ್ಮ ಕಂದನ ಮೋರೆಯನ್ನು ನೋಡಿ, ನೀವು ಹತಾಶರಾದರೆ ಅವನನ್ನು ಸಾಕಿ ಸಲಹುವವರು ಯಾರು?"

"ಅಹುದು, ಈ ಕಂದನಿಗೆ ಬೇಕಾಗಿ ನಾನು ಜೀವಿಸಲುದ್ಯುಕ್ತಳಾಗಿದ್ದೇನೆ. ಇಲ್ಲದಿದ್ದರೆ ನನ್ನ ಭಾಗ್ಯಪ್ರದೀಪಕರ ಹೆಜ್ಜೆಗಳನ್ನು ಅನುಸರಿಸುತ್ತಿದ್ದೆ."

ಮಡಲಲ್ಲಿ ಮಲಗಿದ್ದ ಮಗುವು ನಮಗೆ ಬಂದೊದಗಿದ ಆಪತ್ತನ್ನು ತಿಳಿಯದು. ಒಂದು ವಿಸ್ಮಯದ ನೋಟವನ್ನು ಚೆಲ್ಲಿದ ಮೇಲೆ, ಅದು ತನ್ನ ಬಾಯನ್ನು ಬಿಚ್ಚಿ ಒಂದು ಪೂರ್ಣ ಹಾಸವನ್ನು ಹೊರಚೆಲ್ಲಿತು. ಕಂದನ ತುಟಿಗಳ ಮೇಲೆ ಮೂಡಿದ ಮೃದುಹಾಸವನ್ನು ಕಾಣುತ್ತಲೆ, ತಾಯಿಯಲ್ಲಿ ಉಕ್ಕಿ ಬರುತ್ತಿದ್ದ ಶೋಕಪ್ರವಾಹವು ತುಸ ಕಡಿಮೆಯಾಯಿತು. ರಾಣಿಯು ತನ್ನ ಕರಗಳಿಂದ ಶಿಶುವನ್ನು ಎತ್ತಿಕೊಂಡಳು. "ಕಂದಾ, ನಿನಗಾಗಿ ನಾನು ಬಾಳುತ್ತಿರುವೆನೆ"ಂದು ಅವಳು ನುಡಿದಳು. ಕಂದನನ್ನು ಎದೆಗಪ್ಪಿಕೊಂಡು, ಅವನ ಮೃದು ಕಪೋಲಗಳ ಮೇಲೆ ಚುಂಬಿಸಿದಳು. ಕಂದನ ಮೋರೆಯನ್ನು ಕಾಣಲು ಅವಳ ಶೋಕವು ತುಸ ಕಡಿಮೆಯಾಯಿತು. ಅವಳ ಎದೆಯಲ್ಲಿದ್ದ ಪುತ್ರವಾತ್ಸಲ್ಯವು ರಾಣಿಯ ಎದೆಯಲ್ಲಿ ಜೀವಿಸಲಿರುವ ಧೈರ್ಯವನ್ನುನೀಡಿತು.

"ಹೊರಗೆ ತೆರಳಿದ್ದ ಅಜಯನು ಹಿಂದಿರುಗಿ ಬಂದನು. ಅವನ ಕರದಲ್ಲಿದ್ದ ಪಾತ್ರೆಯಲ್ಲಿ ಶೀತೋದಕವಿದ್ದಿತು. ನೀರು ತುಂಬಿದ ಪಾತ್ರೆಯನ್ನು ರಾಣಿಯ ಕೈಗೆ ಅಜಯನು ನೀಡಿದನು. ಅವಳು ಜಲಪಾನದಿಂದ ತನ್ನ ಪಿಪಾಸೆಯನ್ನು ತಣಿಸಿಕೊಂಡಳು. ಆ ಮೇಲೆ ಆಕೆ ನೀರಿನ ಪಾತ್ರೆಯನ್ನು ನನ್ನ ಕೈಗೆ ಕೊಟ್ಟಳು. ನಾನಾದರೂ ಪಾತ್ರೆಯಲ್ಲಿ ಅವಶೇಷಿಸಿದ್ದ ನೀರಿನಿಂದ ನನ್ನ ನೀರಡಿಕೆಯನ್ನು ತಣಿಸಿಕೊಂಡೆ. ರಾಣಿಯು ತನ್ನ ಮುಂದೆ ನಿಂತಿದ್ದ ಅಜಯನನ್ನು ಈಕ್ಷಿಸುತ್ತಾ ಹೀಗೆ ನುಡಿದಳು: "ಅಜಯಾ, ಮುಂದೆಲ್ಲಿಗೆ ತೆರಳುವದು?"

"ಈ ಹಗಲನ್ನು ಇಲ್ಲಿಯೇ ಕಳೆಯಬೇಕಾಗುವದು. ಏಕೆಂದರೆ ಹಗಲು ಹೊತ್ತು ಸಂಚರಿಸುವದು ಅಪಾಯಕರ."

"ಕೈದಿಗಳಂತೆ ಈ ಕತ್ತಲೆಯ ಗವಿಯಲ್ಲಿ ದಿನವನ್ನೆಲ್ಲಾ ಕಳೆಯಬೇಕೆಂದು ಹೇಳುವೆಯಾ?"

"ತಾಯೀ, ಮರುಗಬೇಡಿ." ಅಜಯನು ನುಡಿದ: "ಪಠಾಣರ ಹಾವಳಿಯು ವಿಪರೀತವಾಗಿರುವದರಿಂದ, ಹಗಲು ಸಂಚರಿಸುವದು ಅಪಾಯಕರವಾ

ಗಿವೆ. ನೀವು ಖೇದಿಸಬೇಕಾಗಿಲ್ಲ. ನಮ್ಮ ಕಡೆಯ ಜನರು ವೇಷಚ್ಛನ್ನರಾಗಿ ಊರೊಳಗೆ ತೆರಳಿ ಆಹಾರ ಸಾಮಗ್ರಿಗಳನ್ನು ತೆಗೆದುಕೊಂಡು ಬರುವರು. ತಾಯೀ, ನೀವು ಹಚ್ಚಡವನ್ನು ಹಾಸಿ ಇಲ್ಲಿಯೇ ವಿಶ್ರಮಿಸಿಕೊಳ್ಳಿರಿ." ಅಜಯನು ನೆಲದ ಮೇಲೆ ಹಚ್ಚಡವನ್ನು ಹಾಸಿದನು. ರಾಣಿಯು ಅದರ ಮೇಲೆ ಉರುಳಿದಳು. ಮಗುವು ಮೂಲೆ ಕೂಡಿಮ ತಾಯಿಯ ಪಕ್ಕದಲ್ಲಿ ನಿದ್ರಿಸತೊಡಗಿತು. ಗುಹೆಯಲ್ಲಿ ಕಾವಲಿಗೆಂದು ಇಬ್ಬರು ದಂಡಾಳುಗಳನ್ನು ನಿಲ್ಲಿಸಿ, ಅಜಯನು ಊರೊಳಗೆ ತೆರಳಿದನು.

ರಾತ್ರಿಯ ಸಂಚಾರದಿಂದ ರಾಣಿಯು ದಣಿದಿದ್ದಳು. ಅವಳ ಶರೀರವು ಬರಿ ಕಂಗಾಲಾಗಿದ್ದಿತು. ಹಚ್ಚಡದ ಮೇಲೆ ಅವಳು ಪವಡಿಸಿದಳು. ನಿದ್ರಾಂಗನೆಯು ಅವಳಿಗೆ ತಿಳಿಯದಂತೆ ಬಂದು ಅವಳನ್ನು ಅಪ್ಪಿಕೊಂಡಳು. ನಾನು ಬಳಲಿದ್ದದರಿಂದ ತುಸ ಮಲಗಿ ನಿದ್ರಿಸಿದೆ. ಸಮಯವು ಗತಿಸಿತು. ಊರೊಳಗೆ ಹೋಗಿದ್ದ ದಂಡಾಳುಗಳೂ, ಅಜಯನೂ ಆಹಾರ ಸಾಮಗ್ರಿಗಳನ್ನು ತೆಗೆದುಕೊಂಡು ಬಂದರು. ಆ ದಿನವೆಲ್ಲ ನಮಗೆ ಆಹಾರವಿಲ್ಲದುದರಿಂದ, ನಮ್ಮ ಕ್ಷುದ್ಬಾಧೆಯು ವಿಪರೀತವಾಗಿತ್ತು. ಅಜಯನು ತೆಗೆದುಕೊಂಡು ಬಂದ ಆಹಾರ ಸಾಮಗ್ರಿಗಳಿಂದ ನಮ್ಮ ಹಸಿವೆಯನ್ನು ಆರಿಸಿದೆವು. ಸಂಜೆಯಾಗುವವರೆಗೆ ನಾವು ಆ ಗುಹೆಯಲ್ಲಿಯೇ ಸಮಯವನ್ನು ಕಳೆದೆವು."

"ಸಮಯವು ಯಾರನ್ನೂ ಕಾಯುವದಿಲ್ಲ. ಸಂಜೆಯಾಯಿತು; ದಿವಾಕರನು ಅಸ್ತಮಿಸಿದ. ಕತ್ತಲೆಯಾದ ಮೇಲೆ ಆಹಾರವನ್ನು ಹುಡುಕತಕ್ಕ ಕಾಡು ಮೃಗಗಳಂತೆ, ನಾವು ನಮ್ಮ ಗವಿಯಿಂದ ಹೊರಟೆವು. ಎಲ್ಲರಿಗಿಂತಲೂ ಮುಂದೆ ಅಜಯನಿದ್ದ; ಅವನ ಬೆನ್ನ ಹಿಂದೆ ನಾಲ್ಕಾರು ಮಂದಿ ಸೈನಿಕರು. ಆ ಮೇಲೆ ನಾವು; ಪುನಃ ನಮ್ಮ ಬೆನ್ನ ಹಿಂದೆ ಸೈನಿಕರು. ಶತ್ರುಗಳ ಭಯವು ವಿಶೇಷವಾಗಿದ್ದುದರಿಂದ, ಬಹು ಎಚ್ಚರಿಕೆಯಿಂದ ಸಂಚರಿಸಬೇಕಾಗಿದ್ದಿತು. ನಾವು ಕೋಟೆಯಿಂದ ಪಾರಾದೆವೆಂಬ ಸುಳಿವು ಅವರಿಗೆ ದೊರಕಿದರೆ, ನಮ್ಮನ್ನು ಹಿಡಿಯಲು ಭಗೀರಥ ಪ್ರಯತ್ನಗಳನ್ನು ನಡಿಸದೆ ಬಿಡರು, ಎಂಬ ನಂಬಿಕೆಯು ನಮಗಿದ್ದಿತು. ಆದುದರಿಂದ ಆ ರಾತ್ರಿಯಲ್ಲಿ ನಮ್ಮ ಪ್ರಾಣಗಳನ್ನು ಕೈಗಳಲ್ಲಿ ಹಿಡಿದುಕೊಂಡು ನಾವು ಸಂಚರಿಸಿದೆವು. ಕಾಡುಗಳು, ಊರುಗಳು ಇವುಗಳನ್ನೆಲ್ಲಾ ದಾಟಿ ಬಹು ದೂರ ನಡೆದೆವು. ಬೆಳಗಾಗುವ ಹೊತ್ತಿಗೆ ಒಂದು ಊರಿನ ಬಳಿಗೆ ನಾವು ಬಂದು ತಲುಪಿದೆವು. ಅಜಯನು ನಮ್ಮ ಬಳಿಯಲಿ ಇಬ್ಬರು ದಂಡಾ

ಳುಗಳನ್ನು ನಿಲ್ಲಿಸಿ, ಉಳಿದವರ ಕಿವಿಗಳಲ್ಲಿ ಏನನ್ನೋ ಹೇಳಿ ಕಳುಹಿಸಿದ. ಅವರನ್ನು ಕಳುಹಿದುದೆಲ್ಲಿಗೆ ಎಂದು ರಾಣಿಯು ಪ್ರಶ್ನಿಸದಿರಲಿಲ್ಲ. ಅದಕ್ಕೆ ಅಜಯನು ಈ ಉತ್ತರವನ್ನು ನೀಡಿದನು: "ತಾಯೀ, ನಮ್ಮ ಸಂಗಡ ಹೆಚ್ಚುಮಂದಿ ಇರುವದಾದರೆ, ನಮ್ಮ ಬಗ್ಗೆ ಜನರಲ್ಲಿ ಸ್ವಾಭಾವಿಕವಾಗಿ ವಿಸ್ಮಯವು ಹುಟ್ಟುತ್ತದೆ. ಹತ್ತಿಪ್ಪತ್ತು ಮಂದಿ ಜೊತೆ ಸೇರಿ ತೆರಳುವಾಗ, ಪಠಾಣರು ಸಂಶಯಗ್ರಸ್ತರಾಗುತ್ತಾರೆ. ಆದುದರಿಂದ ಇನ್ನು ಮುಂದಿನ ಹಾದಿಯಲ್ಲಿ ನಾವು ಒಂದು ಗುಂಪಾಗಿ ತೆರಳುವದು ಸರಿಯಲ್ಲ. ಎಲ್ಲರೂ ಚದರಿ ಹೋಗಬೇಕಾಗಿದೆ"

ಅಜಯನು ಜಾಣನಾಗಿದ್ದನು. ಮುಂದೆ ಬಂದೊದಗಬಹುದಾದ ವಿಪತ್ತನ್ನು ತಿಳಿದು ಈ ಆತ ಹಂಚಿಕೆಯನ್ನು ಮಾಡಿದ್ದನು. ರಾಣಿಗೂ ಅಜಯನ ಹಂಚಿಕೆಯು ಸಯುಕ್ತಿಕವಾಗಿ ತೋರಿತು. ಆದುದರಿಂದ ಅವಳು ಅಜಯನ ಮಾತಿಗೆ ಪ್ರತಿ ಹೇಳಲಿಲ್ಲ.

ಒಂದು ಊರಿನ ಸತ್ರದಲ್ಲಿ ಆಹಾರವನ್ನು ಭುಂಜಿಸಿ, ನಾವು ಪಯಣವನ್ನು ಮುಂದುವರಿಸಿದೆವು. ಜನರು ನಾವಾರೆಂದು ಪ್ರಶ್ನಿಸದಿರಲಿಲ್ಲ. ವೃಂದಾವನಕ್ಕೆ ತೀರ್ಥಾಟನೆಗಾಗಿ ಹೊರಟಿರುವ ಯಾತ್ರಿಕರೆಂದು ಅಜಯನು ನುಡಿದನು. ಮಹಾರಾಣಿಯ ವದನ ಮಂಡಲದಲ್ಲಿ ಕಂಗೊಳಿಸುತ್ತಿದ್ದ ರಾಜಕಳೆಯು ಜನರಲ್ಲಿ ಸಂಶಯವನ್ನು ಹುಟ್ಟಿಸಿತು. ಅವಳಾರೆಂಬುದನ್ನು ತಿಳಿಯಲು ಜನರು ಆಗ್ರಹಿಸಿದರು. ಅವರಿಗೆ ಅಜಯನು ಹೇಳುತ್ತಿದ್ದ ಸಮಾಧಾನವು ಇದಾಗಿದ್ದಿತು: "ಅವಳು ನನ್ನ ಸಹೋದರಿಯಿದ್ದಾಳೆ; ವೃಂದಾವನಕ್ಕೆ ಹೊರಟ ಯಾತ್ರಿಕರು ನಾವು." ಎಂದು ಮಾತ್ರವಲ್ಲ; ದಾರಿಯಲ್ಲಿ ಮಹಾರಾಣಿಯೊಡನೆ ಮಾತಾಡಬೇಕಾಗಿ ಬಂದಾಗ, ಅಜಯನು ಅವಳನ್ನು ಅಕ್ಕನೆಂದು ಸಂಬೋಧಿಸುತ್ತಿದ್ದನು.

"ಎರಡು ದಿನಗಳ ಪಯಣದ ಅನಂತರ ದೂರದ ಒಂದು ಹಳ್ಳಿಯನ್ನು ನಾವು ಸೇರಿದೆವು. ಅಲ್ಲಿ ಅಜಯನು ನಮ್ಮ ವಾಸಕ್ಕಾಗಿ ಒಂದು ಮನೆಯನ್ನು ಏರ್ಪಡಿಸಿದನು. ಯಾವದಾದರೂ ಒಂದು ಕಸಬು ಇಲ್ಲದಿದ್ದರೆ ಜನರು ಸಂಶಯ ಪಡಬಹುದಾದುದರಿಂದ, ಅಜಯನು ನಾವು ತಂದಿದ್ದ ರತ್ನಾಭರಣಗಳನ್ನು ವಿಕ್ರಯಿಸಿ ದೊರಕಿದ ಹಣದಿಂದ ವ್ಯಾಪಾರವನ್ನು ಪ್ರಾರಂಭಿಸಿದನು; ಮಹಾರಾಣಿಗೆ ಅನಿರೀಕ್ಷಿತವಾಗಿ ಆಪತ್ತು ಬಂದೊದಗಿರಲು, ಇಬ್ಬರು ಸೈನಿಕರು ಭೃತ್ಯರ ವೇಷವನ್ನು ಧರಿಸಿ ಯಾವಾಗಲೂ ಮನೆಯಲ್ಲಿಯೇ ಇರುತ್ತಿದ್ದರು. ಅಜಯನು ಬೇರೆ ಬೇರೆಯಾಗಿ ವಿಂಗಡಿಸಿ ಕಳುಹಿದ್ದ ದಂಡಾಳುಗಳು ಈ

ಮೊದಲೇ ಆ ಊರನ್ನು ಸೇರಿದ್ದರು. ಅವರು ಆ ಊರಲ್ಲಿ ಬೇರೆ ಬೇರೆ ಕಸಬು ಗಳನ್ನು ಅವಲಂಬಿಸಿ ಉಪಜೀವಿಸುತ್ತಿದ್ದರು. ಅಂತು ಆ ಊರಲ್ಲಿ ಕೆಲ ಕಾಲ ವನ್ನು ನಾವು ನೆಮ್ಮದಿಯಿಂದ ಕಳೆದೆವು.

ಕೆಲ ಕಾಲ ಗತಿಸಿತು. ರಾಜ್ಯವು ಪಠಾಣರಿಗೆ ಅಧೀನವಾಯಿತು; ಮಹಾ ರಾಣಿಯೂ, ಮಗುವೂ ಕೋಟೆಯೊಳಗಿಂದ ಪಾರಾದ ಸಂಗತಿಯು ಶತ್ರುಗಳಿಗೆ ತಿಳಿದಿತು. ಅವರಿಬ್ಬರೂ ಜೀವದಿಂದುಳಿದರೆ, ಒಂದು ವೇಳೆ ಜನರು ರಾಜ ಸಂತ ತಿಯ ಪಕ್ಷವನ್ನು ವಹಿಸಿ ಬಂಡಾಯುವನ್ನೆಬ್ಬಿಸಬಹುವೆಂಬ ಭೀತಿಯು ಪಠಾಣ ರಿಗಿದ್ದಿತು ಆದುದರಿಂದ ಶತ್ರುಪಕ್ಷದ ಚಾರರು ನಮ್ಮ ಸುಳಿವನ್ನು ತಿಳಿಯಲು ನಾಡಿನಲ್ಲೆಲ್ಲಾ ಅಲೆಯತೊಡಗಿದರು. ಅವರು ನಾವು ವಾಸಿಸುತ್ತಿದ್ದ ಹಳ್ಳಿ ಗೂ ಬಾರದಿರಲಿಲ್ಲ. ಅವರು ಜನರಿಂದ ನಾವು ಆ ಊರಿಗೆ ಹೊಸದಾಗಿ ಬಂದ ವರೆಂಬುವನ್ನು ಅರಿತರು. ಆ ಊರಿಗೆ ನಾವು ಹೊಸಬರೆಂಬುವನ್ನು ತಿಳಿಯು ತ್ತಲೆ, ಗುಪ್ತಹೇರರಿಗೆ ಸಹಜವಾಗಿ ನಮ್ಮ ಮೇಲೆ ಸಂಶಯು ಹುಟ್ಟಿತು. ಅವರು ಆಗಾಗ ನಮ್ಮ ಮನೆಯ ಮುಂದೆ ಸುಳಿಯತೊಡಗಿದರು. ಆಗ ಪಠಾಣರ ಆಳ್ವಿ ಕೆಯು ಪ್ರಬಲವಾಗಿರದಿದ್ದುದರಿಂದ, ಒಮ್ಮೆಯೇ ನಮ್ಮನ್ನು ಪೀಡಿಸಲು ಅವ ರಿಗೆ ಧೈರ್ಯವಿರಲಿಲ್ಲ. ಆದುದರಿಂದ ಅವರು ನಮ್ಮ ಸ್ಥಿತಿಗತಿಗಳನ್ನು ಅರಿ ಯಲು ಹೊಂಚು ಹಾಕತೊಡಗಿದರು.

"ಲೋಕದಲ್ಲಿ ಮನುಷ್ಯನಿಗೆ ಧನದ ಮೇಲಿರುವ ಆಗ್ರಹವು ಅಪಾರವಾದು ದಾಗಿದೆ. ಇತರ ಯಾವ ರೀತಿಯಿಂದಲೂ ನಮ್ಮ ಗುಟ್ಟನ್ನು ತಿಳಿಯಲಾಗ ದಿರಲು, ಅವರು ನಮ್ಮ ಭೃತ್ಯರಲ್ಲಿ ಧನಮೋಹವನ್ನು ಹುಟ್ಟಿಸಿದರು. ಹೊನ್ನಿ ನಾಶೆಯಿಂದ ಒಬ್ಬ ಭೃತ್ಯನು ನಾವಾರೆಂಬ ರಹಸ್ಯವನ್ನು ಪಠಾಣರಿಗೆ ಉಸುರಿ ದನು. ಧನದ ಮೇಲಿನ ಆಶೆಯಿಂದ ತಾಯಿಗೆ ಸಮಾನಳಾದ ಮಹಾರಾಣಿಗೆ ದ್ರೋಹವನ್ನು ಬಗೆಯಲುದ್ಯುಕ್ತನಾದನು. ಅವನಿಗೆ ಹಣದಾಸೆಯನ್ನು ತೋ ರಿಸಿ ಶತ್ರುಗಳು ನಮ್ಮ ಸಂಗತಿಗಳನ್ನು ಅರಿತುಕೊಂಡರು."

"ರಾತ್ರಿ ನಾವೆಲ್ಲರೂ ನಿದ್ರಿಸುತ್ತಿದ್ದೆವು. ನಮಗೆ ತಿಳಿಯದಂತೆ ರಾತ್ರಿ ಹೊತ್ತುನಲವತ್ತೈವತ್ತು ಮಂದಿ ಪಠಾಣರು ಬಂದು, ನಮ್ಮ ಗೃಹವನ್ನುಆವರಿ ಸಿದರು. ಎಚ್ಚತ್ತು ನೋಡಿದಾಗ ನಾವು ಪಠಾಣರ ಬಲೆಯಲ್ಲಿ ಸಿಲುಕಿದ್ದೆವು. ಪಾರಾಗಲು ಯಾವ ಉಪಾಯವೂ ಇರಲಿಲ್ಲ. ಕುಮಾರನ ಭಾಗ್ಯದಿಂದ ನಮಗೆ ಬಂದೊದಗಿದ ಆಪತ್ತು ಊರಿನಲ್ಲಿ ಚದುರಿ ಇತರ ಕಡೆಗಳಲ್ಲಿ ವಾಸಿಸುತ್ತಿದ್ದ

ನಮ್ಮ ದಂಡಾಳುಗಳಿಗೆ ತಿಳಿಯಿತು. ಅವರು ಆಯುಧಧಾರಿಗಳಾಗಿ ನಮ್ಮನ್ನು ರಕ್ಷಿಸಲೋಸುಗ ಬಂದರು; ಆದರೆ ಮಾಡುವುದೇನು? ಹತ್ತು-ಹದಿನಾಲ್ಕು ಮಂದಿ ಜನರಿಂದ ನಲವತ್ತೈವತ್ತು ಮಂದಿಯುಳ್ಳಿರುವ ಪಠಾಣರ ಆಕ್ರಮಣ ವನ್ನು ತಡೆಯಲಾಗುವಂತಿಲ್ಲ. ನಾವು ಎಲ್ಲರೂ ಶತ್ರುಗಳಿಗೆ ಸೆರೆಯೋಗಬೇಕಾ ಗುವುದೆಂಬ ಭೀತಿಯು ನಮ್ಮನ್ನು ಆವರಿಸಿತು; ಆದರೆ ಅಜಯನು ಜಾಣನಾಗಿ ದ್ದನು. ತನ್ನ ಪ್ರಾಣವನ್ನು ನೀಡಿಯಾದರೂ ರಾಣಿಯನ್ನೂ, ಕುಮಾರ ನನ್ನೂ ರಕ್ಷಿಸಬೇಕೆಂಬ ದೃಢಸಂಕಲ್ಪವನ್ನು ಅವನು ಮಾಡಿದ್ದನು. ನಮ್ಮ ಕಡೆಯ ದಂಡಾಳುಗಳು ಮನೆಯ ಮುಂದೆ ಪಠಾಣರೊಡನೆ ಕಾದಾಡುತ್ತಿದ್ದಾಗ ಅವನು ಹಿತ್ತಲ ಗೋಡೆಗೆ ಕನ್ನ ಹಾಕಿದನು. ಅವನ ಈ ಉದ್ಯಮವು ಮನೆ ಯ ಮುಂದೆ ನೆರೆದಿದ್ದ ಪಠಾಣರಿಗೆ ತಿಳಿಯಲಿಲ್ಲ. ಗೋಡೆಗೆ ಕನ್ನ ಹಾಕಿಯಾದ ಮೇಲೆ ಅವನು ಮಹಾರಾಣಿಯ ಬಳಿಗೆ ಬಂದು ಹೇಳಿದನು. "ತಾಯಿ, ಈ ದ್ವಾರದ ಮೂಲಕ ಪಾರಾಗಬೇಕು. ನಾವಕಾಶ ಮಾಡಿದರೆ ಅನರ್ಥವಾಗ ಬಹುದು. ಈ ಭೃತ್ಯನೂ ಮಾಲಿನಿಯೂ ನಿಮ್ಮ ಸಂಗಡ ಬರುವರು."

"ಆದರೆ ನೀನು?" ರಾಣಿಯು ಪ್ರಶ್ನಿಸಿದಳು.

"ನನ್ನ ಬಗ್ಗೆ ನೀವು ಚಿಂತಿಸಬೇಡಿ; ರಾಜಕುಟುಂಬವನ್ನು ಸಲಹಲೋ ಸುಗ ನಾನು ಆತ್ಮಾರ್ಪಣವನ್ನು ಮಾಡತಕ್ಕವನಿದ್ದೇನೆ."

ರಾಣಿಯು ಇನ್ನೇನೋ ಹೇಳಬೇಕೆಂದಿದ್ದಳು; ಆದರೆ ಅದಕ್ಕೆ ಅಜ ಯನು ಬಿಡಲಿಲ್ಲ. ಅವನು ನಮ್ಮನ್ನು ಆದಷ್ಟು ಬೇಗನೆ ತೆರಳಬೇಕೆಂದು ನಿರ್ಬಂಧ ಪಡಿಸಿದ. ಕೈಗೆ ಸಿಕ್ಕಿದ ರತ್ನಾಭರಣಗಳನ್ನೂ, ಹಣ-ಕಾಸುಗಳನ್ನೂ ಗಂಟುಕಟ್ಟಿದುದಾಯಿತು. ಅಜಯನು ಕೊನೆಯ ಬಾರಿ ಮಹಾರಾಣಿಗೆ ವಂದಿ ಸಿದ. ಹಿತ್ತಲ ಗೋಡೆಯಲ್ಲಿ ಅಜಯನು ಮಾಡಿದ್ದ ಕಂಡಿಗಾಗಿ ದಾಟಿ ನಾವು ಮನೆಯ ಹೊರಗಡೆಗೆ ಬಂದೆವು. ನಮಗೆ ದಾರಿಯನ್ನು ತೋರಿಸಿ ಕೊಡಲು ಸಂಗಡ ಭೃತ್ಯನೊಬ್ಬನಿದ್ದ. ಅಜಯನೂ ಇತರ ದಂಡಾಳುಗಳೂ ಪಠಾಣ ರನ್ನು ಒಳಗೆ ಬರದಂತೆ ತಡೆದು ನಿಲ್ಲಿಸಿದರು. ಕೊನೆಗೆ ಅವರು ಆ ಕದನದಲ್ಲಿ ಪತನವನ್ನು ಹೊಂದಿದರು. ಒಬ್ಬನು ದ್ರವ್ಯದಾಶೆಯಿಂದ ಕುಮಾರನ ಜೀವ ವನ್ನು ಮಾರಲು ಹೊರಟನು; ಇತರ ಹದಿನಾಲ್ಕು ಮಂದಿ ಕುಮಾರನ ಪ್ರಾಣ ರಕ್ಷಣೆಗಾಗಿ ದೇಹವನ್ನು ವಿಸರ್ಜಿಸಿದರು!

ವಸತಿಯಿಂದ ಪಾರಾದ ನಮಗೆ ಸಂಗಡವಿದ್ದ ಭೃತ್ಯನು ದಾರಿಯನ್ನು

ತೋರಿಸಿದನು. ರಾತ್ರಿಯಲ್ಲಿ ಅಲೆದು ಬೆಳಗಾಗುವ ಹೊತ್ತಿಗೆ ಇನ್ನೊಂದು ಊರನ್ನು ಸೇರಿದೆವು. ಅಲ್ಲಿ ಒಂದು ಮನೆಮಾಡಿ, ಹೆಸರುಗಳನ್ನು ಬದಲಾಯಿಸಿ ವೇಷಚ್ಛನ್ನರಾಗಿ ಜೀವಿಸಿದೆವು."

"ಆ ಮೇಲೆ ನಿಮ್ಮನ್ನು ಹುಡುಕಲು ಪಠಾಣರು ಯತ್ನಿಸಲಿಲ್ಲವೇ?" ಜ್ಞಾನಾನಂದನು ಪ್ರಶ್ನಿಸಿದನು.

"ಇಲ್ಲ. ಬೇಗನೆ ಗೃಹವು ನಮ್ಮ ಅಧೀನವಾಗದಿರಲು, ಪಠಾಣರು ಆ ಮನೆಗೆ ಬೆಂಕಿಯನ್ನು ಹಚ್ಚಿದರೆಂಬ ವರ್ತಮಾನವು ಆ ಮೇಲೆ ನಮಗೆ ಲಭಿಸಿತು. ಬೆಂಕಿಗೆ ಸಿಲುಕಿ ನಾವೆಲ್ಲರೂ ಬೆಂದು ಹೋದೆವೆಂದು ಅವರು ಭಾವಿಸಿರಲಿಕ್ಕೆ ಸಾಕು."

"ಅನಂತರ ವಿಪತ್ತುಗಳು ಬಂದೊದಗಲಿಲ್ಲವೇ" ಈ ಪ್ರಶ್ನೆಯು ಜ್ಞಾನಾನಂದನ ತುಟಿಗಳಿಂದ ಹೊರಟಿತು.

"ಇಲ್ಲ; ಆದರೆ ರಾಣಿಯು ಅನಂತರ ಬಹು ಕಾಲ ಜೀವಿಸಲಿಲ್ಲ. ಪತಿಯ ವಿಯೋಗದಿಂದ ಅವಳ ಜೀವನವು ಬಹು ಶೋಕಮಯವಾಯಿತು. ಅರಮನೆಯ ಸುಖ-ಸಂಪತ್ತುಗಳ ಮಧ್ಯೆ ಹುಟ್ಟಿ ಬೆಳೆದಾಕೆಗೆ ಸಾಮಾನ್ಯ ಜನರ ಜೀವನವು ಅತ್ಯಂತ ಕ್ಲೇಶದಾಯಕವಾಗಿ ಪರಿಣಮಿಸಿದುದರಲ್ಲಿ ಆಶ್ಚರ್ಯವಿಲ್ಲ. ಅವಳಲ್ಲಿದ್ದ ಉತ್ಸಾಹವು ಕುಗ್ಗಿತು. ದೇಹವು ಕೃಶವಾಗುತ್ತಾ ಬಂದಿತು. ಕೊನೆಗೆ ರಾಣಿಯು ಹಾಸಿಗೆಯನ್ನು ಹಿಡಿದಳು. ನಾನು ನನ್ನ ಕೈಯಿಂದಾಗಬಹುದಾದ ಎಲ್ಲಾ ಉಪಚಾರಗಳನ್ನೂ ಮಾಡಿದೆ. ಅವಳ ಹಾಸಿಗೆಯ ಬಳಿಯಲ್ಲಿ ಕುಳಿತು ಶುಶ್ರೂಷಿಸಿದೆ. ಅವಳನ್ನು ಬಾಧಿಸಿದ್ದ ನಿರುತ್ಸಾಹವನ್ನು ಸವಿನುಡಿಗಳಿಂದ ಹೋಗಲಾಡಿಸಲು ಪ್ರಯತ್ನಿಸಿದೆ; ಆದರೆ ಅವಳನ್ನು ಬಾಧಿಸಿದ್ದ ಮನೋರೋಗವು ವಾಸಿಯಾಗಲಿಲ್ಲ. ಅದು ಕಾಹಿಲೆಗೆ ಕಾರಣವಾಯಿತು. ದಿನ ದಿನಕ್ಕೆ ಅವಳ ಶಕ್ತಿಯು ಕಂದುತ್ತಾ ಬಂದಿತು ಅವಳ ಆತ್ಮಪಕ್ಷಿಯು ಪರಲೋಕಕ್ಕೆ ತೆರಳಿದ ಮಹಾರಾಜರನ್ನು ಹಿಂಬಾಲಿಸಲು ಕಾತರಿಸುತ್ತಿದ್ದಿತು. ಕೊನೆಗೆ ಹಾಸಿಗೆಯನ್ನು ಬಿಟ್ಟು ಏಳಲು ಅವಳಿಗೆ ಸಾಧ್ಯವಾಗಲಿಲ್ಲ. ನನ್ನ ಆರೈಕೆಗಳೆಲ್ಲ ವಿಫಲವಾಗುವಂತೆ ತೋರಿದವು."

"ಒಂದು ದಿನ ಸಂಜೆಯ ಸಮಯ; ರಾಣಿಯು ಹಾಸಿಗೆಯಲ್ಲಿ ಪವಡಿಸಿದ್ದಳು. ಅವಳ ಶ್ವಾಸೋ-ಚ್ಛ್ವಾಸಗಳ ಗತಿಯು ಬಹಳ ನಿದಾನವಾಗಿದ್ದಿತು. ಸೊರಗಿದ ಮೋರೆಯಲ್ಲಿ ಶಾಂತಿಯುಕ್ತವಾದ ಎರಡು ಕಣ್ಣುಗಳು ಮಾತ್ರ

ಹೊಳೆಯುತ್ತಿದ್ದವು. ನಾಡೀ ಸ್ಪಂದನವು ಮಂದವಾಗ ಹತ್ತಿತು. ನಾನು ಹಾಸಿಗೆಯ ಪಕ್ಕದಲ್ಲಿ ಕುಳಿತಿದ್ದೆ. ರಾಣಿಯು ಕುಮಾರನನ್ನು ತನ್ನ ಸೊರಗಿದ ಕೈಗಳಲ್ಲಿ ಹಿಡಿದಿದ್ದಳು. ಆವಳು ಮೆಲ್ಲನೆ ತನ್ನ ಕಣ್ಣುಗಳನ್ನು ನನ್ನ ಕಡೆಗೆ ತಿರುಗಿಸಿ ಹೀಗೆ ಹೇಳಿದಳು. ಸ್ವರವು ಬಹು ಮೆಲ್ಲಗೆಯಾಗಿತ್ತು. "ತಂಗೀ, ಮಾಲಿನೀ!"

"ತಾಯೀ!" ಎಂದೆ.

"ಮಾಲಿನಿ, ಅವರು ಕರೆಯುತ್ತಾರೆ. ಅಲ್ಲಿಗೆ ತೆರಳಲು ಅವರ ಕರೆಯು ಬಂದಿದೆ. ತಂಗೀ,-ಈ ಕಂದನನ್ನು,-ಕುಮಾರನನ್ನು ನಿನ್ನ ವಶಕ್ಕೆ ಒಪ್ಪಿಸುತ್ತೇನೆ."

ನಾನು ಮಾತಾಡಲಿಲ್ಲ. ನನ್ನ ನೇತ್ರಗಳಿಂದ ಕಂಬನಿಗಳ ಪ್ರವಾಹವು ಹರಿದಿತು. ಸೀರೆಯ ಸೆರಗಿನಿಂದ ಕಣ್ಣುಗಳನ್ನು ಒರೆಸಿಕೊಂಡುದುದಾಯಿತು. ರಾಣಿಯು ತನ್ನ ನುಡಿಗಳನ್ನು ಮುಂದುವರಿಸಿದಳು: "ತಂಗೀ ಅಳಬೇಡ; ಇಂದಿಲ್ಲದಿದ್ದರೆ ನಾಳೆಯಾದರೂ, ಎಲ್ಲರೂ ಅಲ್ಲಿಗೇ ತೆರಳುತ್ತಾರೆ. ಶೋಕಪೂರ್ಣವಾದ ಈ ಜಗತ್ತಿನ ಪಾಶಗಳಿಂದ ಮೋಚನೆಯನ್ನು ಪಡೆಯುತ್ತಿರುವಾಗ ಶೋಕಿಸುವಿಯೇಕೆ? ನಿನ್ನನ್ನೂ, ಕುಮಾರನನ್ನೂ ತ್ಯಜಿಸಿ ಹೋಗಲು ನನಗೆ ಸಂಕಟವಾಗುವದ ; ಆದರೆ ಮಾಡುವುದೇನು? ಕುಮಾರನನ್ನು ನಿನಗೊಪ್ಪಿಸಿದ್ದೇನೆ. ಅವನು ನನ್ನ ಮಗನಲ್ಲ; ನಿನ್ನ ಕೂಸು!"

ಉಕ್ಕಿ ಬರುತ್ತಿದ್ದ ಶೋಕವನ್ನು ತಡೆಯಲೆತ್ನಿಸುತ್ತಾ ಗದ್ಗದಸ್ವರದಲ್ಲಿ ನಾನು ಹೇಳಿದೆ: "ತಾಯೀ, ನಿಮ್ಮ ಮಾತನ್ನು ನಾನು ನೆರವೇರಿಸುವೆ; ಕುಮಾರನನ್ನು ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಂತೆ ಪರಿಪೋಷಿಸುವೆ. ನನ್ನ ಮಾತನ್ನು ನಂಬಿರಿ.''

ಮಗುವಿನ ಹಣೆಯ ಮೇಲೆ ತಾಯಿ ಚುಂಬಿಸಿದಳು; ಮಗುವನ್ನು ಎತ್ತಿ ಎದೆಗಪ್ಪಿಕೊಂಡಳು; ತನ್ನ ಮೊಗವನ್ನು ಬಹು ಸಮಯದವರೆಗೆ ಕಂದನ ನೆತ್ತಿಯ ಮೇಲೆ ಮುಚ್ಚಿದಳು. ಆ ಮೇಲೆ ಕೂಸನ್ನು ನನ್ನ ಕೈಗೆ ಕೊಡಲು ಪ್ರಯತ್ನಿಸುತ್ತಾ ರಾಣಿಯು ಹೇಳಿದಳು: "ಕಂದಾ, ಇನ್ನು ಮಾಲಿನಿಯೇ ನಿನ್ನ ತಾಯಿ! ಅವಳ ಪೋಷಣೆಯಲ್ಲಿ ಬೆಳೆ. ನಿನ್ನನ್ನು ಮುದ್ದಾಡಿ ನಲಿವ ಭಾಗವನ್ನು ವಿಧಿಯು ಈ ದೀನಳಿಗೆ ದಯಪಾಲಿಸಲಿಲ್ಲ!"

ತಾಯಿಯ ಕರಗಳಿಂದ ಮಗುವನ್ನು ಸ್ವೀಕರಿಸಿದೆ. ಆತನನ್ನು ನನ್ನ ಎದೆಗಪ್ಪಿಕೊಂಡುದುದಾಯಿತು. ಎಣ್ಣೆ ತೀರಿದ ದೀಪವು ಕೆಡುವ ಮುನ್ನ ಒಮ್ಮೆ ಉಜ್ವಲವಾಗಿ ಪ್ರಜ್ವಲಿಸುವಂತೆ, ಒಂದು ತರದ ಕಾಂತಿಯು ರಾಣಿಯ ಮೊಗ

ದಲ್ಲಿ ಸುಳಿದಾಡಿತು. ಇನ್ನೊಂದು ಕ್ಷಣದಲ್ಲಿ ಕೈಕಾಲುಗಳು ತಣ್ಣಗಾಗುತ್ತಾ ಬಂದವು; ನುಡಿಗಳು ಅಸ್ಪಷ್ಟವಾದವು. ಹೃದಯ ಸ್ಪಂದನವು ನಿದಾನವಾಯಿತು ಅವಳ ಬಾಯಿಯಲ್ಲಿ ತುಲಸೀ ಜಲವನ್ನು ಎರೆದುದಾಯಿತು. ಶ್ವಾಸೋಚ್ಛ್ವಾಸಗಳು ನಿಂತವು; ರೆಪ್ಪೆಗಳು ಮುಚ್ಚಿದವು. ರಾಣಿಯ ಆತ್ಮ ಪಕ್ಷಿಯು ದೇಹ ಪಂಜರವನ್ನು ಭೇದಿಸಿ ಅತೀತಕ್ಕಿರುವನ್ನು ಮುಂದುವರಿಸಿತು. ಕುಮಾರನು ತಾಯಿಯನ್ನು ಕಳೆದುಕೊಂಡು ತಬ್ಬಲಿಯಾದನು.

"ಸ್ವಾಮೀಜಿ, ಇದಾಗಿದೆ ಕುಮಾರನ ಜನನಿಯ ದುಃಖಪೂರ್ಣವಾದ ಚರಿತ್ರೆಯು." ಮಾಲಿನಿಯು ತನ್ನ ವೃತ್ತಾಂತವನ್ನು ಮುಂದುವರಿಸಿದಳು: "ನಾನು ರಾಣಿಗೆ ಕೊಟ್ಟ ಮಾತನ್ನು ನೆರವೇರಿಸಿದೆ. ಅವಳ ದೇಹವನ್ನು ದಹಿಸಿದುದಾಯಿತು. ಕುಮಾರನನ್ನು ನನ್ನ ಪುತ್ರನಂತೆ ಪರಿಪೋಷಿಸುತ್ತಾ ಬಂದೆ. ಎರಡು ವರುಷ ಪ್ರಾಯದ ಬಾಲಕನಿರುವಾಗಲೇ ತನ್ನ ಜನನಿಯನ್ನು ಕಳೆದು ಕೊಂಡ ಕುಮಾರನು ನನ್ನನ್ನೇ ತನ್ನ ತಾಯಿಯೆಂದು ಭಾವಿಸತೊಡಗಿದನು. ಯಾರಾದರೂ ಕೇಳಿದರೆ ಅವನು ನನ್ನ ಮಗನೆಂದೇ ನಾನು ಹೇಳುತ್ತಿದ್ದೆ. ಕೆಲವು ಕಾಲ ಗತಿಸಲು, ಭೃತ್ಯನಾದ ರಾಮದಯಾಳುವಿನೊಡನೆ ರೂಪನಗರಕ್ಕೆ ಬಂದು ಇಲ್ಲಿ ನೆಲಸಿದೆ."

ಮಾಲಿನಿಯು ಹೀಗೆ ತನ್ನ ವೃತ್ತಾಂತವನ್ನು ಸಮಾಪ್ತಿಗೊಳಿಸಿದಳು. ಜ್ಞಾನಾನಂದನು ತುಸ ಆಲೋಚಿಸಿದ. ಆ ಮೇಲೆ ಅವನು ಹೀಗೆ ಹೇಳಿದನು: "ರೂಪನಗರದ ಭಾಗ್ಯವಿಧಾತನು ತನ್ನ ಕೃಪಾದೃಷ್ಟಿಯನ್ನು ಬೀರಿದ್ದಾನೆ. ಇಲ್ಲದಿದ್ದರೆ ಹಿಂದಣ ರಾಜವಂಶದವನಿಗೇ ಈಗಣ ಶಾಸನ ಚಕ್ರವು ಸಿಗುತ್ತಿರಲಿಲ್ಲ. ಕುಮಾರನಲ್ಲಿ ತೋರುತ್ತಿರುವ ಉತ್ಕೃಷ್ಟ ಗುಣಗಳು ಅವನೊಬ್ಬ ಉತ್ತಮ ಕುಲಸಂಭೂತನೆಂಬುದನ್ನು ಸೂಚಿಸುತ್ತಿರುವವು. ಅವನ ಆಡಳಿತದ ನೆರಳಿನಲ್ಲಿ ರೂಪನಗರದ ಸಿರಿಯು ಹೆಚ್ಚಲಿ!"

---

## ೨೭ ಕೊನೆ

ಅಮರಸಿಂಹನು ರೂಪನಗರದ ಅರಸನಾದನು. ಉಸ್ಮಾನನು ಸೈನ್ಯಾಧ್ಯಕ್ಷನ ಪದವಿಯನ್ನು ಸ್ವೀಕರಿಸಿ ಹೊಸ ಆಡಳಿತವನ್ನು ದೃಢಪಡಿಸುವದರಲ್ಲಿ ಉದ್ಯುಕ್ತನಾದನು. ಫಕೀರ ಹುಸ್ಸೇನನು ತನ್ನ ದಿವ್ಯೋಪದೇಶಗಳಿಂದ ಎರಡೂ ಸಮುದಾಯಗಳ ನಡುವೆ ಸೌಹಾರ್ದ ಬಂಧವನ್ನು ಸ್ಥಾಪಿಸಲು ತನ್ನ ಸಮಯ

ವನ್ನು ವಿನಿಯೋಗಿಸಿದನು. ಜನರಲ್ಲಿ ಸುಖ-ಸಂತೃಪ್ತಿಗಳು ನೆಲಿಸಿದವು. ಬಡತನದ ಯಾತನೆಗಳು ನೀಗಿದವು.

ಜ್ಞಾನಾನಂದನು ತನ್ನ ಅಧಿಕಾರವನ್ನು ತನ್ನ ಪ್ರೀತಿಯ ಶಿಷ್ಯನಿಗೆ ವಹಿಸಿ ಪಾರಮಾರ್ಥಿಕ ಸಾಧನೆಗೆ ಹೊರಟನು. ಅವನು ರೂಪನಗರವನ್ನು ಪರಿತ್ಯಜಿಸಿ ಹೊರಟಾಗ ಪ್ರತಿಯೊಬ್ಬರಿಗೂ ದುಃಖವಾಯಿತು. ಅವನ ತ್ಯಾಗ, ನಿರ್ಭೀತಿ, ಉದ್ಯಮಶೀಲತೆ, ನಿರ್ದಾಕ್ಷಿಣ್ಯವಾದ ಧೋರಣೆ ಇವುಗಳ ಫಲವಾಗಿದ್ದಿತು ಅಭಿನವ ರೂಪನಗರವು. ಅವನನ್ನು ಅಗಲುವಾಗ ಫಕೀರ ಹುಸ್ಸೇನನ ನೇತ್ರಗಳಿಂದ ಬಾಷ್ಪಬಿಂದುಗಳು ಉದುರಿದವು. ಈ ಎರಡೂ ಮಂದಿ ಮಹಾತ್ಮರ ನಡುವೆ ಇದ್ದ ಗೆಳೆತನವು ಅಷ್ಟು ದೃಢವಾದುದಾಗಿದ್ದಿತು. ತೆರಳುವ ಮುನ್ನ ಫಕೀರನು ಜ್ಞಾನಾನಂದನನ್ನು ಆಲಿಂಗಿಸಿದನು. ಫಕೀರನು ಮ್ಲಾನವದನನಾಗಿ ಹೀಗೆ ಹೇಳಿದನು: "ಸ್ವಾಮೀಜಿ, ಒಬ್ಬ ಸಹೋದರನನ್ನು ಬಿಟ್ಟು ಅಗಲುವಾಗ ಉಂಟಾಗುವ ವ್ಯಥೆಗಿಂತಲೂ ಮಿಗಿಲಾಗಿದೆ ತಮ್ಮನ್ನು ಬಿಟ್ಟು ಅಗಲುವಾಗ ನನಗುಂಟಾಗುವ ದುಃಖವು!"

ದೃಢ ಮನಸ್ಕನಾದ ಜ್ಞಾನಾನಂದನ ಕಣ್ಣುಗಳಲ್ಲೂ ಸಹ ಬಾಷ್ಪಕಣಗಳು ತುಂಬಿದವು. ಅವನು ಗದ್ಗದ ಸ್ವರದಲ್ಲಿ: "ಫಕೀರಸಾಹೇಬ, ತಮ್ಮನ್ನು ಅಗಲುವಾಗ ನನಗುಂಟಾಗುವ ವ್ಯಥೆಗೆ ಮೇರೆಯಿಲ್ಲ. ತಮ್ಮಂಥ ವಿಶಾಲಹೃದಯದ ಮನುಷ್ಯರನ್ನು ನನ್ನ ಜೀವಮಾನದಲ್ಲಿ ಕಂಡಿಲ್ಲ. ಸಹೋದರರಿಬ್ಬರ ನಡುವೆ ಇರುವ ವಾತ್ಸಲ್ಯಕ್ಕಿಂತಲೂ ಉತ್ಕೃಷ್ಟವಾದುದಾಗಿದೆ ನಮ್ಮಿಬ್ಬರ ಬಂಧನವು."

ಅವರಿಬ್ಬರ ಹೃದಯುಗಳಲ್ಲಿಯೂ ಸ್ನೇಹ-ಭಾವವು ಉಕ್ಕಿಬರುತ್ತಿದ್ದುದರಿಂದ ಮಾತಾಡಲು ಅವರಿಗೆ ಸಾಧ್ಯವಾಗಲಿಲ್ಲ. ಮೌನವಾಗಿದ್ದಿತು ಅವರ ಅಂತರಂಗದ ಭಾವಗಳನ್ನು ಪ್ರಕಟಿಸಲಿದ್ದ ಸ್ವರವು.

ಜ್ಞಾನಾನಂದನು ಅಮರಸಿಂಹನಿಗೂ, ತನ್ನ ಇತರ ಶಿಷ್ಯರಿಗೂ ದೀರ್ಘವಾದ ಉಪದೇಶಗಳನ್ನು ನೀಡಿದ. ಆ ಉಪದೇಶಗಳ ತಿರುಳು ಅವನು ಮಾಡಿದ ಹಿಂದಣ ಉಪದೇಶಗಳಲ್ಲಿ ಅಡಗಿರುವುದರಿಂದ ಆ ಉಪದೇಶವನ್ನು ಮತ್ತೆ ಇಲ್ಲಿ ಬರೆಯ ಬೇಕಾದ ಅವಶ್ಯಕತೆಯಿರುವುದಿಲ್ಲ. ಈ ಸಲದ ಉಪದೇಶದಲ್ಲಿಯೂ ನಾಡಸೇವೆಯ ಮೂಲಮಂತ್ರವು ಅಡಗಿದ್ದಿತು ಎಂದು ಇಲ್ಲಿ ಉಸುರಿದರೆ ಸಾಕಾಗಿದೆ. ಅವನು ನಿರುಪಮೆಯನ್ನು ಕುರಿತು ಹೀಗೆ ನುಡಿದನು: "ತಾಯೀ, ಸ್ವಾತಂತ್ರ್ಯಸಾಧನೆಯ ಕಾಲದಲ್ಲಿ ನೀನು ನಾಡಿಗೆ ಸಲ್ಲಿಸಿದ ಸೇವೆಯು ಅಪಾ

ರವಾದುದು. ಇನ್ನು ಮುಂದೆಯೂ ನಾಡಿನ ಮಹಿಳೆಯರಿಗೆ ನೀನು ಮಾರ್ಗ ದರ್ಶಕಳಾಗಿರು."

ನಿರುಪಮೆಯು ತನ್ನ ಮಸ್ತಕವನ್ನು ಜ್ಞಾನಾನಂದನ ಚರಣಗಳಲ್ಲಿ ಮಡಗಿದಳು. ಅವಳ ನೇತ್ರಗಳಿಂದ ಪ್ರವಹಿಸಿದ ಕಂಬನಿಗಳು ಜ್ಞಾನಾನಂದನ ಪಾದಗಳನ್ನು ತೋಯಿಸಿದವು. ಅವಳು ಗದ್ಗದ ಸ್ವರದಲ್ಲಿ ಹೀಗೆ ನುಡಿದಳು: "ನಾನು ಹತಭಾಗ್ಯಳು; ತಮ್ಮ ಕೃಪೆಯು ಮಾತ್ರವಾಗಿದೆ ನನಗೆ ಬೇಕಾದುದು. ನನ್ನ ಹೃದಯದಲ್ಲಿ ಬೆಳಕನ್ನು ಚಲ್ಲಿದವರು ತಾವಿರುತ್ತೀರಿ."

ನಿರುಪಮೆಯನ್ನು ಹಿಡಿದೆತ್ತಿ ಸ್ನೇಹಪೂರ್ಣಸ್ವರದಲ್ಲಿ ಜ್ಞಾನಾನಂದನು ಉಸುರಿದ, "ತಾಯೀ, ಅಳದಿರು; ನಿನ್ನ ಎದೆಯ ನೋವನ್ನು ನಾನು ಬಲ್ಲೆ. ದಯಾಮಯನು ನಿನ್ನ ವ್ಯಥೆಯನ್ನು ಪರಿಹರಿಸುವನು."

ಹೇಮಾವತಿಯು ಸಂನ್ಯಾಸಿಯ ಚರಣಗಳಿಗೆ ವಂದಿಸಿದಳು. ಜ್ಞಾನಾನಂದನು ಅವಳನ್ನು ಆಶೀರ್ವದಿಸಿದ. ಕೊನೆಗೆ ಅಮರಸಿಂಹನು ಗುರುದೇವನ ಚರಣಗಳಲ್ಲಿ ತನ್ನ ಪ್ರಣಾಮಗಳನ್ನು ಸಮರ್ಪಿಸಿದನು. ಸಂನ್ಯಾಸಿಯು ಅಮರ ಸಿಂಹನನ್ನು ಅಪ್ಪಿಕೊಂಡು ಕುಮಾರನ ನೆತ್ತಿಯನ್ನು ಚುಂಬಿಸಿದನು. "ಮಗೂ. ಉತ್ಸಾಹಶಾಲಿಯಾಗು. ರೂಪನಗರದ ಕ್ಷತ್ರಿಯರ ರಕ್ತವು ನಿನ್ನ ಧಮನಿಗಳಲ್ಲಿ ಪ್ರವಹಿಸುತ್ತಲಿದೆ ಆ ಪುಣ್ಯಾತ್ಮರು ತುಳಿದ ಹಾದಿಯನ್ನೇ ನೀನು ಅವಲಂಬಿಸು. ನಿನ್ನಲ್ಲಿ ಯಾವುದಾದರೂ ಸಂದೇಹವು ಹುಟ್ಟಿದಂತೆ ಅದನ್ನು ಪರಿಹರಿಸಲು ಫಕೀರ ಸಾಹೇಬರಿದ್ದಾರೆ. ನಿನಗೆ ಯಾವದಾದರೂ ಒಂದು ಕೆಲಸವು ವಿಷಮವೆಂದು ತೋರಿದರೆ ನನ್ನ ಬಳಿಗೆ ಬಾ."

ಎಲ್ಲರನ್ನೂ ಸಂತೈಸಿ ಜ್ಞಾನಾನಂದನು ತನ್ನ ಆಶ್ರಮಕ್ಕೆ ಹೊರಟನು. ಅಮರಸಿಂಹ, ಉಸ್ಮಾನ, ಫಕೀರ ಹುಸ್ಸೇನ ಮೊದಲಾದವರು ಬಹು ದೂರದ ವರೆಗೆ ಜ್ಞಾನಾನಂದನನ್ನು ಹಿಂಬಾಲಿಸಿದರು. ಕೊನೆಗೆ ಜ್ಞಾನಾನಂದನು ಅವರನ್ನೆಲ್ಲಾ ಸಂತೈಸಿ ಬೀಳ್ಕೊಂಡನು. ಅವರೆಲ್ಲರೂ ಅವನನ್ನು ಆಶ್ರಮಕ್ಕೆ ಕಳುಹಿಸಿದರು.

೦ ೦ ೦

ನಿರುಪಮೆಯು ಅಮರಸಿಂಹನ ವಸತಿಯಲ್ಲಿ ವಾಸ ಮಾಡುತ್ತಿದ್ದಳು. ಅವಳು ಹೇಮಳಿಗೆ ಒಬ್ಬ ಒಳ್ಳೆಯ ಗೆಳತಿಯಾಗಿದ್ದಳು. ಅವರ ಸ್ನೇಹವು ಅಕ್ಕ ತಂಗಿಯರ ನಡುವೆ ಇರುವ ಸ್ನೇಹಕ್ಕಿಂತ ಹೆಚ್ಚು ದೃಢವಾಗಿದ್ದಿತು. ಮುದುಕಿ

ಮಾಲಿನಿಯುಅವರಿಬ್ಬರಲೀಲೆಗಳನ್ನು ನೋಡಿಸಂತಸದಿಂದತನ್ನ ವೃದ್ಧಾಪ್ಯವನ್ನು ಕಳೆಯತೊಡಗಿದಳು. ನಿರುಪಮೆಯು ಹರುಷಮುಖಿಯಾಗಿದ್ದರೂ ಅವಳ ಮೆದುಳನ್ನು ಒಂದು ಹುಳು ಕೊರೆಯುತ್ತಿದ್ದಿತು. ಅದು ಅವಳ ಪತಿವಿಯೋಗ ದುಃಖವಾಗಿದ್ದಿತು. ರಾಜದುರ್ಗದ ಯುದ್ಧರಂಗದಲ್ಲಿ ಅವಳು ತನ್ನ ಪತಿಯನ್ನು ನೋಡಿದ್ದಳು; ಆದರೆ ಆ ಮೇಲೆ ಅವನ ಯಾವ ಸಂಗತಿಯೂ ತಿಳಿಯಲಿಲ್ಲ. ಅವನು ಯುದ್ಧರಂಗದಲ್ಲಿ ಮಡಿದಿರಬಹುದೆಂದು ನಿರುಪಮೆಯು ಭಾವಿಸಿದಳು. ಎಷ್ಟು ಹುಡುಕಿಸಿದರೂ ಸಮರಾಂಗಣದಲ್ಲಿ ದುರ್ಜಯನ ಶವವು ದೊರಕಲಿಲ್ಲ.

ಒಂದು ದಿನ ಅಮರಸಿಂಹನ ವಸತಿಯ ಮುಂದೆ: "ಭಿಕ್ಷೆಯನ್ನು ನೀಡೇ ತಾಯೀ!" ಎಂದು ಒಬ್ಬ ಭಿಕ್ಷುಕನು ಕೂಗುತ್ತಿದ್ದುದು ಮನೆಯೊಳಗಿದ್ದ ನಿರುಪಮೆಯ ಕರ್ಣೇಂದ್ರಿಯಗಳಲ್ಲಿ ಪತಿಸಿತು. ಹೊರಗೆ ಬಂದು ನಿಂತವರಾರೆಂದು ತಿಳಿಯಲು ನಿರುಪಮೆಯು ಮನೆಯೊಳಗಿಂದ ಹೊರಕ್ಕೆ ಬಂದಳು. ಮನೆಯ ಅಂಗಳದಲ್ಲಿ ಒಂದು ಕೈಯನ್ನು ಕಳೆದುಕೊಂಡ ಯಾಚಕನು ನಿಂತಿರುವದು ನಿರುಪಮೆಗೆ ಗೋಚರಿಸಿತು. ಅವನ ದೇಹವಾದರೋ ಅತ್ಯಂತ ಮಲಿನವಾದುದಾಗಿದ್ದಿತು. ತೊಡಿಗೆಗಳು ಬಹು ಹೊಲಸಾಗಿದ್ದವು. ಕಣ್ಣುಗಳು ಇಳಿಬಿದ್ದು ಕಾಂತಿಶೂನ್ಯವಾಗಿದ್ದವು. ಅವನನ್ನು ದರ್ಶಿಸಿದರೆ ಯಾರ ಹೃದಯದಲ್ಲಿಯೂ ಮರುಕ ಹುಟ್ಟದಿರಲಾರದು.

ನಿರುಪಮೆಯು ತನ್ನ ಕಣ್ಣುಗಳನ್ನಗಲಿಸಿ ಯಾಚಕನನ್ನು ನೋಡಿದಳು. ಯಾಚಕನಾದರೂ ಅವಳನ್ನು ಈಕ್ಷಿಸದಿರಲಿಲ್ಲ. ನಿರುಪಮೆಯನ್ನು ನೋಡಿದೊಡನೆಯೇ ಯಾಚಕನ ಕಣ್ಣುಗಳಿಂದ ಬಾಷ್ಪಬಿಂದುಗಳು ಹರಿಯತೊಡಗಿದವು. ಅವನ ದೇಹವು ಕಂಪಿಸಿತು. ಅವನು ಮಾತಾಡಲು ಪ್ರಯತ್ನಿಸಿದ; ಆದರೆ ಅವನ ಕಂಠದಿಂದ ಸ್ವರವು ಹೊರಡಲಿಲ್ಲ. ತನ್ನನ್ನು ಈಕ್ಷಿಸಿದೊಡನೆಯೇ ನೇತ್ರಗಳಿಂದ ಬಾಷ್ಪಸಲಿಲಗಳನ್ನು ಹೊರಚಲ್ಲಿದ ಯಾಚಕನ ಗುರುತು ಸಿಗದಿದ್ದರೂ, ಆ ಮೇಲೆ ಅವನಾರೆಂಬುದನ್ನು ನಿರುಪಮೆ ಹೆಚ್ಚು ಪ್ರಯಾಸವಿಲ್ಲದೆ ಅರಿತುಕೊಂಡಳು. ಅವಳ ಕಣ್ಣುಗಳಲ್ಲಿಯೂ ನೀರು ತುಂಬಿತು. ನಮ್ರಸ್ವರದಲ್ಲಿ ಅವಳು ನುಡಿದಳು: "ಒಳಗೆ ಬನ್ನಿ."

ಈ ನುಡಿಯನ್ನು ಅನುಸರಿಸಲು ಯಾಚಕನು ತುಸು ಹಿಂಜರಿದನು. ಅವನ ವದನಮಂಡಲದಲ್ಲಿ ಲಜ್ಜೆಯು ಕಳೆಗೊಂಡಿತು. ಅವನು ಕದಲದೆ ಆ ಸ್ಥಳದಲ್ಲಿಯೇ ನಿಂತನು. ಮನೆಯೊಳಗೆ ಬರಬೇಕೆಂದು ನಿರುಪಮೆಯು ಯಾಚಕ

ನನ್ನು ನಿರ್ಬಂಧಿಸಿದಳು. ಯಾಚಕನು ಅಳುಕುತ್ತಾ ಮನೆಯೊಳಗೆ ಪ್ರವೇಶಿಸಿದನು. ಮನೆಯೊಳಗೆ ಪ್ರವೇಶಿಸಿದೊಡನೆಯೇ ಯಾಚಕನು ನಿರುಪಮೆಯ ಚರಣ ತಲದಲ್ಲಿ ಶಿರಸ್ಸನ್ನಿಡಲು ಪ್ರಯತ್ನಿಸುತ್ತಾ ನುಡಿದನು: "ಕ್ಷಮಿಸು; ಈ ಪಾಪಿಯನ್ನು-ಮಹದಪರಾಧಿಯನ್ನು ಕ್ಷಮಿಸು!"

ತನ್ನ ಚರಣತಲದಲ್ಲಿ ಬೀಳಲೆತ್ನಿಸುತ್ತಿದ್ದ ಯಾಚಕನನ್ನು ನಿರುಪಮೆಯು ತಡೆದಳು. ಅಳುವ ಸ್ವರದಲ್ಲಿ ಅವಳು ಹೀಗೆ ನುಡಿದಳು. "ಕೂಡದು, ನೀವು ಎಷ್ಟು ತಪ್ಪುಗಳನ್ನು ಮಾಡಿದ್ದರೂ ನನಗೆ ಪೂಜ್ಯರಿರುತ್ತೀರಿ. ನೀವು ಯಾವಾಗಲೂ ನನಗೆ ವಂದನಾರ್ಹರು."

ನಿರುಪಮೆಯು ಯಾಚಕನಿಗೆ ವಂದಿಸಿದಳು; ಅವನು ಅವಳ ಗಂಡ ದುರ್ಜಯಸಿಂಹನಾಗಿದ್ದನು.

"ನಿರುಪಮಾ, ಅಂದು ನಿನ್ನ ನುಡಿಗಳು ನನಗೆ ವಿಷವಾಗಿ ತೋರಿದವು. ಅವುಗಳನ್ನು ನಾನು ಸ್ವೀಕರಿಸಿದ್ದರೆ ಈ ಪರಿಯ ಸಂಕಟಗಳನ್ನು ಅನುಭವಿಸಬೇಕಾಗುತ್ತಿದ್ದಿಲ್ಲ. ಆಗ ನಾನು ಕುರುಡನಾಗಿದ್ದೆ; ನಾನು ಮಾಡುತ್ತಿದ್ದೇನೆಂಬುದು ನನಗೇ ತಿಳಿಯದು. ನಿನ್ನ ಕೋಮಲ ಹೃದಯವನ್ನು ನೋಯಿಸಿದೆ. ಆರ್ಯ ಮಹಿಳೆಯರನ್ನು ಸುಭೇದಾರನಿಗೆ ಮಾರಲುದ್ಯುಕ್ತನಾದೆ. ನನ್ನ ನಾಡಿನ ಸಹೋದರರನ್ನು ಪರಿಪರಿಯಿಂದ ಹಿಂಸಿಸಿದೆ. ಈ ಪಾಪಾಚರಣೆಗಳಿಂದ ನನ್ನ ಆತ್ಮವು ಮಲಿನವಾಯಿತು; ಹೃದಯವು ಮರದ ಕೊರಡಿನಂತಾಯಿತು. ದುಃಖದಿಂದ ಅಂತ್ಯವಿಲ್ಲದ ಕೆಸರಿನ ಹೊಂಡದಲ್ಲಿ ನಾನೀಗ ನರಳುತ್ತಿದ್ದೇನೆ. ಆ ದಿನ ನಿನ್ನ ಮಾತುಗಳನ್ನು ಕೇಳಿದ್ದರೆ ಈ ಯಾತನೆಗಳನ್ನು ಅನುಭವಿಸ ಬೇಕಾಗುತ್ತಿರಲಿಲ್ಲ. ನಿರುಪಮಾ, ನನ್ನ ತಪ್ಪುಗಳನ್ನು ಕ್ಷಮಿಸು!"

"ಕಳೆದು ಹೋದುದನ್ನು ಚಿಂತಿಸಿ ಫಲವಿಲ್ಲ." ನಿರುಪಮೆಯು ಹೇಳಿದಳು "ನೀವು ಮಾಡಿದ ಅಪರಾಧಗಳಿಗೆ ದಂಡನೆಯಾಗಿ ಸಾಕಷ್ಟು ದುಃಖವನ್ನು ಅನುಭವಿಸಿರುವಿರಿ. ಈಗ ಪಶ್ಚಾತ್ತಾಪಾಗ್ನಿಯಿಂದ ನಿಮ್ಮ ಹೃದಯವು ಪರಿಶುದ್ಧತೆಯನ್ನು ಪಡೆದಿದೆ. ನಾಡು ನವಜನ್ಮವನ್ನು ಪಡೆದ ಈ ಶುಭ ಮುಹೂರ್ತದಲ್ಲಿ, ನೀವು ಸಹ ಹೊಸಹುಟ್ಟನ್ನು ಪಡೆಯಲು ಪ್ರಯತ್ನಿಸಿರಿ. ಕಳೆದುಹೋದ ಕಾಳ ರಾತ್ರಿಯನ್ನು ನೆನೆದು ಮನವನ್ನು ಕತ್ತಲೆಯಲ್ಲಿ ಕೆಡುಹುವುದು ಸರಿಯಲ್ಲ."

"ನಿರುಪಮಾ," ಗದ್ಗದ ಸ್ವರದಲ್ಲಿ ದುರ್ಜಯನು ಹೇಳಿದ: "ನೀನು ನನ್ನನ್ನು ಸ್ವೀಕರಿಸುವಿಯಾ? ನೀನು ನನಗೆ ಕರುಣೆಯನ್ನು ತೋರುವದಾದರೆ

ನಿನ್ನ ಮಾತುಗಳನ್ನು ಮೀರಿ ನಡೆಯೆನು. ಅಯ್ಯೋ! ನಾನು ಅನುಭವಿಸಿದ ಸಂಕಟಗಳು! ಯುದ್ಧರಂಗದಲ್ಲಿ ಶತ್ರುಗಳ ಆಯುಧಕ್ಕೆ ಬಲಿಯಾಗಿ ನನ್ನ ಕೈಯನ್ನು ಕಳೆದುಕೊಂಡೆ ಯುದ್ಧದ ಪರಿಣಾಮವು ನನ್ನ ಅಭಿಲಾಷೆಗೆ ವಿಪರೀತವಾದುದಾಗಿದ್ದಿತು. ವಿದ್ರೋಹಿಗಳು ವಿಜಯಿಗಳಾದರು. ಇನ್ನು ಅವರಿಗೆ ನನ್ನ ಗುರುತು ಸಿಕ್ಕಿದ್ದರೆ, ಅವರು ದಂಡಿಸುವರೆಂಬ ಭೀತಿಯು ನನ್ನಲ್ಲಿ ಹುಟ್ಟಿತು. ನಾನು ಜನರನ್ನು ಅನೇಕ ವಿಧಗಳಲ್ಲಿ ಹಿಂಸಿಸಿದ್ದುದರಿಂದ, ವಿದ್ರೋಹಿಗಳು ನನ್ನನ್ನು ಕ್ರೂರ ರೀತಿಯಲ್ಲಿ ದಂಡಿಸುವರೆಂಬ ಭೀತಿಯು ನನ್ನಲ್ಲಿದ್ದಿತು. ಆದುದರಿಂದ ವೇಷವನ್ನು ಮರೆಮಾಜಿ ನಡೆಯಲಾರಂಭಿಸಿದೆ. ನಾನು ವೇಷಚ್ಛನ್ನನಾಗಿ ರೂಪನಗರಕ್ಕೆ ಬಂದು ತಲುಪಿದಾಗ, ವಿದ್ರೋಹಿಗಳು ನನ್ನ ಮನೆಯನ್ನೂ ಸಂಪತ್ತನ್ನೂ ತಮ್ಮ ವಶಪಡಿಸಿಕೊಂಡಿದ್ದರು. ಕೊನೆಗೆ ಉಪಜೀವನದ ಬಗ್ಗೆ ಯಾಚಕವೃತ್ತಿಯನ್ನು ಅವಲಂಬಿಸಬೇಕಾಗಿ ಬಂದಿತು. ಇದಾಗಿದೆ ನನ್ನ ವೃತ್ತಾಂತವು! ನಾನಾರೆಂಬುದನ್ನು ಅಮರಸಿಂಹನು ತಿಳಿದರೆ, ಅವನು ನನ್ನನ್ನು ದಂಡಿಸದಿರುವನೇ? ನನ್ನಂಥ ಪಾಪಿಯ ಕೈ ಹಿಡಿದುದರಿಂದ ನೀನು ಅಪಾರ ಶೋಕವನ್ನು ಅನುಭವಿಸಬೇಕಾಗಿ ಬಂದಿತು."

ಈ ನುಡಿಗಳನ್ನು ಆಡುತ್ತಿದ್ದಾಗ ದುರ್ಜಯನ ನೇತ್ರಗಳಿಂದ ಒಂದೇ ಸವನೆ ಅಶ್ರುಕಣಗಳು ಉದುರುತ್ತಿದ್ದವು. ತನ್ನ ಗತಜೀವನದ ಬಗ್ಗೆ ಆತನಲ್ಲಿ ತೀವ್ರವಾದ ಪಶ್ಚಾತ್ತಾಪವು ಹುಟ್ಟಿದ್ದಿತು. ತನ್ನ ಈ ವರೆಗಿನ ವರ್ತನೆಗಳು ಸರಿಯಾದವುಗಳಲ್ಲ, ಎಂಬುದರ ಅರಿವು ಅವನ ಅಂತರಾತ್ಮನಿಗುಂಟಾಯಿತು. ಇದುವರೆಗೆ ಕುರುಡಾಗಿದ್ದ ಅವನ ಕಣ್ಣುಗಳಿಗೆ ದರ್ಶನಶಕ್ತಿಯು ಲಭ್ಯವಾಯಿತು. ತನ್ನ ಪತಿಯಲ್ಲಿ ದೃಗ್ಗೋಚರವಾದ ಈ ಪರಿವರ್ತನೆಯು ನಿರುಪಮೆಯ ಎದೆಯನ್ನು ಅರಳಿಸಿತು. ಕೆಸರಿನ ಕೂಪದಿಂದ ಎದ್ದು ತನ್ನ ನಲ್ಲನು ಮೇಲಕ್ಕೆ ಬಂದನಲ್ಲ! ಎಂಬುದೇ ಅವಳ ಹರುಷಕ್ಕಿರುವ ಕಾರಣವು. ಚಿಕ್ಕ ಮಗುವಿನಂತೆ ಅಳುತ್ತಿದ್ದ ದುರ್ಜಯನನ್ನು ಸಂತೈಸುತ್ತಾ ನಿರುಪಮೆಯು ಅಂದಳು:"ಇದುವರೆಗೆ ನೀವು ಅನುಭವಿಸಿದ ವ್ಯಥೆಗಳೇ ನಿಮ್ಮ ತಪ್ಪುಗಳಿಗೆ ಸಾಕಷ್ಟು ಶಿಕ್ಷೆಯಾಗಿದೆ. ಇನ್ನು ಹೆಚ್ಚು ಶೋಕದಿಂದ ಚಿತ್ತವನ್ನು ಕತ್ತಲೆಯ ಗವಿಯಲ್ಲಿ ದೂಡುವದು ಸರಿಯಲ್ಲ. ಅಮರಸಿಂಹನು ದಂಡಿಸುವನೆಂದು ನೀವು ಹೆದರಬೇಕಾಗಿಲ್ಲ. ನೀವು ಜನದ್ರೋಹದ ಕರ್ಮಗಳನ್ನು ಆಚರಿಸಿದ್ದರೂ ನಾನು ಸ್ವಲ್ಪ ಮಟ್ಟಿಗೆ ನಾಡಸೇವೆಯನ್ನು ಮಾಡಿರುತ್ತೇನೆ. ಈ ಸೇವೆಯನ್ನು

ಸ್ಮರಿಸಿ ನಿಮ್ಮ ತಪ್ಪುಗಳನ್ನು ಮನ್ನಿಸಬೇಕೆಂದು ನಾನು ಬೇಡುವೆ; ಅವನು ದಯಾರ್ದ್ರಹೃದಯಿ; ನಿಮ್ಮ ತಪ್ಪುಗಳನ್ನು ಮನ್ನಿಸದಿರಲಾರ. ರೂಪನಗರದ ಭಾಗ್ಯಾಕಾಶದಲ್ಲಿ ದಿವಾಕರನು ರಾಜಿಸುತ್ತಿರುವ ಮಂಗಳಪ್ರಭಾತದಲ್ಲಿ ನಾವು ನವಜನ್ಮವನ್ನು ಪಡೆಯೋಣ; ಹಿಂದಿನದೆಲ್ಲವನ್ನು ಮರೆತು, ಹೊಸ ನಾಡನ್ನು ರಚಿಸುವ ಪಾವನ ಕರ್ಮದಲ್ಲಿ ಉದ್ಯುಕ್ತರಾಗೋಣ!"

"ನಿರುಪಮಾ, ನೀನು ನನ್ನ ಭಾಗ್ಯದೇವತೆಯು! ಆ ದಿನ ನಿನ್ನ ನುಡಿಯನ್ನು ಅನುಸರಿಸಿದ್ದರೆ, ನನಗೆ ಈ ದುರ್ದೆಸೆಯು ಬರುತ್ತಿರಲಿಲ್ಲ. ಈಗಲಾದರೂ ನನ್ನ ಕೈಹಿಡಿದು ನನ್ನನ್ನು ಈ ಹೊಂಡದಿಂದ ಮೇಲಕ್ಕೆತ್ತು."

ಪ್ರೇಮಭರಿತಳಾಗಿ ನಲ್ಲನನ್ನು ತಬ್ಬಿಕೊಂಡಳು ನಿರುಪಮೆ. ಅವಳ ತುಟಿಗಳಿಂದ ಈ ಮಾತುಗಳು ಉದುರಿದವು. "ಹಳೆಯುದನ್ನೆಲ್ಲ ಮರೆಯುವಾ; ಹೊಸ ಲೋಕವನ್ನು ನೋಡುವಾ!"

"ಈ ಪಾಪಿಯು ನವ ಜನ್ಮವನ್ನು ಪಡೆಯುಬಲ್ಲನೇ?"

"ಹೃದಯದಲ್ಲುದಿಸಿದ ಪಶ್ಚಾತ್ತಾಪವು ಪಡೆಯಲಿರುವ ನವ ಜನ್ಮದ ಸೂಚನೆಯಾಗಿದೆ. ಅಧಿಕಾರಕಾಂಕ್ಷೆಯು ನಿಮ್ಮನ್ನು ಬಿಟ್ಟು ಹೋದುದನ್ನು ನೋಡಿ ನನಗೆ ಹರುಷವಾಯಿತು. ನಿಮ್ಮ ಎದೆಯಿಂದ ಪ್ರೇಮವಾಹಿನಿಯು ಹರಿಯಲಿ!"

ಮಡದಿಯ ತೋಳುಗಳ ಮೇಲೆ ತನ್ನ ಮಸ್ತಕವನ್ನಿಟ್ಟನು ದುರ್ಜಯನು. ಅವನ ತುಟಿಗಳಿಂದ ಈ ಮಾತುಗಳು ಹೊರಟವು:

"ನನಗೆ ಅಧಿಕಾರ ಬೇಡ; ಸಂಪತ್ತು ಬೇಡ; ನನಗೆ ಯಾವದೂ ಬೇಕಾಗಿಲ್ಲ. ನನ್ನ ಭಾಗ್ಯದೇವತೆಯಾದ ನಿನ್ನೆದೆಯಲ್ಲಿ ಒಂದು ಸ್ಥಾನವನ್ನು ಮಾತ್ರವಾಗಿದೆ ನಾನು ಆಗ್ರಹಿಸುತ್ತಿರುವುದು."

"ನನ್ನ ಎದೆಯಲ್ಲಿ ಯಾವಾಗಲೂ ನಿಮ್ಮ ಬಿಂಬವೇ ಕಂಗೊಳಿಸುತ್ತಲಿದೆ." ಮೃದು ನುಡಿಯಲ್ಲಿ ನಿರುಪಮೆಯು ಅಂದಳು.

ದುರ್ಜಯನು ಮಾತಾಡಲಿಲ್ಲ. ಆವನು ಇನಿಯಳ ಕೆಂದುಟಿಗಳ ಮೇಲೆ ಚುಂಬನ ಮುದ್ರೆಯನ್ನು ಒತ್ತಿದನು. ಆ ನಲ್ಲ-ನಲ್ಲೆಯರ ಎದೆಗಳಲ್ಲಿ ತುಂಬಿದ್ದ ಪ್ರೇಮಸಲಿಲವು ಒಂದುಗೂಡಿತು.

ಪಾಪಿ ದುರ್ಜಯನು ತನ್ನ ಸತಿಯ ಪ್ರಭಾವದಿಂದ ನವ ಜನ್ಮವನ್ನು ಪಡೆದನು.

———

— ಮುಗಿದುದು —